|| ಶ್ರೀ ||

# ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ ೩೩



ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

**(ಕನ್ನಡ ಅನುವಾದಸಹಿತ)**

**ಸಂಪುಟ ೪**

**ಅಧ್ಯಾಯ ೧೪೭–೨೨೧**


ಅನುವಾದಕ:

**ವಾಜಪೇಯಂ ಶ್ರೀರಂಗಾಚಾರ್**

ಸಾಹಿತ್ಯವಿದ್ವಾನ್, ಕನ್ನಡ ಪಂಡಿತ



ಮೈಸೂರು

ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್

೧೯೪೨

|| ಶ್ರೀ ||

## ಪೀಠಿಕೆ

ಮತ್ಸ್ಯಪುರಾಣದ ಪುಷ್ಪದಲ್ಲಿ ಮತ್ತೊಂದು ದಳ ಅರಳಿತು. ಕನ್ನಡಮಾತೆಗೆ ತನಿಗಂಪಿನ ಸೇವೆಯನ್ನು ಇನ್ನಷ್ಟು ಸಲ್ಲಿಸುವ ಪುಣ್ಯ ಇದಕ್ಕೆ ಒದಗಿತು.

ಇದು ನಾಲ್ಕನೆಯ ಸಂಪುಟ. ಇದರಲ್ಲಿ ತಾರಕಾಸುರೋಪಾಖ್ಯಾನ, ನರಸಿಂಹಾವತಾರದ ಕಥೆ, ಪಾದ್ಮಕಲ್ಪವೃತ್ತಾಂತ ಎಂಬ ಮೂರು ವಿಷಯಗಳು ವರ್ಣಿಸಲ್ಪಟ್ಟಿವೆ. ತಾರಕಾಸುರೋಪಾಖ್ಯಾನವು ಬಹಳ ವಿಸ್ತಾರವಾಗಿದೆ. ದೈವೀಶಕ್ತಿಗೂ ಆಸುರೀಶಕ್ತಿಗೂ ಆದಿಕಾಲದಿಂದ ಇರುವ ಹೋರಾಟವೇ ಇದರ ತಿರುಳು. "ಎಲ್ಲರನ್ನೂ ಅಡಗಿಸಬೇಕು, ಎಲ್ಲವೂ ನನ್ನದಾಗಬೇಕು, ನನಗೆ ಇದಿರೇ ಇರಬಾರದು" ಎಂಬ ಮದವೇ ತಾರಕಾಸುರನ ಜೀವನಾಡಿ. ಅವನು ಎಷ್ಟೋ ವರ್ಷಗಳಕಾಲ ಘೋರವಾಗಿ ತಪಸ್ಸುಮಾಡಿದನು. ಬ್ರಹ್ಮದೇವನು ಪ್ರಸನ್ನನಾಗಿ ಬೇಕಾದ ವರವಾವುದೆಂದು ಅವನನ್ನು ಕೇಳಿದಾಗ "ಯಾವ ಪ್ರಾಣಿಯೂ ನನ್ನನ್ನು ಕೊಲ್ಲಕೂಡದು ; ಎಂತಹ ತೇಜಸ್ವಿಯಾದ ಅಸ್ತ್ರವೇ ಆದರೂ ನನ್ನನ್ನು ಘಾತಿಸಬಾರದು" ಎಂದು ಕೇಳಿಕೊಂಡನು. ಅದಕ್ಕೆ ಬ್ರಹ್ಮನು "ಎಲೈ ದೈತ್ಯೇಂದ್ರಾ, ದೇಹವನ್ನೆತ್ತಿದ ಮೇಲೆ ಸಾವೇ ಕೂಡದೆಂಬುದು ಸಾಗದ ಮಾತು. ಹೆದರಿಕೆಗೆ ಅವಕಾಶವೇ ಇಲ್ಲದ ಯಾವುದಾದರೊಂದು ಕಾರಣದಿಂದ ಮರಣವನ್ನು ಕೇಳಿಕೋ" ಎಂದು ಹೇಳಿದನು. "ಹಾಗಾದರೆ ಏಳು ದಿನಗಳ ಮಗುವಿನಿಂದ ನನಗೆ ಸಾವು ಬರಲಿ" ಎಂದು ತಾರಕಾಸುರನು ಬೇಡಿದನು. ಅದರಂತೆ ಏಳುದಿನಗಳ ಮಗುವಾದ ಕುಮಾರಸ್ವಾಮಿಯೇ ಅವನಿಗೆ ಮೃತ್ಯುವಾದನು. ವಿಧಿಯೊಡನೆ ಹೋರಾಡಿ ಇದುವರೆಗೆ ಯಾವನೂ ಗೆದ್ದೂ ಬರಲಿಲ್ಲ. ಅದರ ಹಿಡಿತಕ್ಕೆ ಒಬ್ಬನೂ ಸಿಕ್ಕದೆ ಹೋಗಲಿಲ್ಲ.

ಪಾರ್ವತಿಯ ಚರಿತವು ಸೊಗಸಾದ ಒಂದು ಸಾಂಸಾರಿಕ ಚಿತ್ರ. ಹೆಣ್ಣುಹೆತ್ತ ತಂದೆತಾಯಿಗಳಿಗೆ ಒದಗುವ ಚಿಂತೆ, ಅವಳಿಗೆ ಅನುರೂಪನಾದ ವರನನ್ನು ಹೊಂದಿಸುವುದಕ್ಕಾಗಿ ಅವರು ಪಡುವ ಪ್ರಯಾಸ, ದಂಪತಿಗಳ ಸರಸವು ಎಷ್ಟೋ ವೇಳೆಗಳಲ್ಲಿ ವಿರಸವಾಗುವ ಬಗೆ ಮುಂತಾದ ಸಂಗತಿಗಳು ಹೃದಯಂಗಮವಾಗಿ ವರ್ಣಿತವಾಗಿವೆ.

ಹಿಮವಂತನ ಅರಮನೆಗೆ ನಾರದಮಹರ್ಷಿ ಬಂದಿದ್ದಾರೆ. ಮೇನಾದೇವಿ ಅವರಿಗೆ ಭಕ್ತಿಯಿಂದ ನಮಸ್ಕಾರಮಾಡಿ, ಇನ್ನೂ ಬಾಲೆಯಾದ ಪಾರ್ವತಿಯನ್ನು ಕರೆದು "ಮಗೂ ಪೂಜ್ಯರಾದ ಮಹರ್ಷಿಗಳಿಗೆ ನಮಸ್ಕರಿಸು. ಅನುರೂಪನಾದ ಪತಿಯನ್ನು ಪಡೆಯುವೆ" ಎಂದು ಹೇಳುವಳು. ಪಾರ್ವತಿಯು ಸಹಜವಾದ ಲಜ್ಜೆಯಿಂದ ಹಾಗೆಯೇ ಮಾಡುವಳು. ಮೇನಾದೇವಿಯ ಅಭಿಲಾಷೆಯನ್ನು ತಿಳಿದು ದೇವರ್ಷಿಯು ಪಾರ್ವತಿಯ ಅಂಗಲಕ್ಷಣಗಳನ್ನು ಪರೀಕ್ಷಿಸಿ "ಇವಳ ಪತಿ ಹುಟ್ಟಿಲ್ಲ" ಎಂದು ಸಾಭಿಪ್ರಾಯವಾಗಿ (ಜನ್ಮರಹಿತನಾದ ಪರಮೇಶ್ವರನೇ ಅವಳ ಪತಿಯಾಗುವನೆಂಬ ಅಭಿಪ್ರಾಯವನ್ನು ಸೂಚಿಸಿ) ಹಾಸ್ಯದೊಡನೆ ಹೇಳಿದರು. ಆ ಮಾತಿನ ಅರ್ಥವನ್ನು ತಿಳಿಯಲಾರದೆ ಹತ್ತಿರದಲ್ಲಿಯೇ ಕುಳಿತಿದ್ದ ಹಿಮವಂತನು ಗಾಬರಿಗೊಂಡು ಬೆಚ್ಚುಬಿದ್ದನು "ಕನ್ಯೆಗೆ ಒಳ್ಳೆಯ ಪತಿಯನ್ನು ಪಡೆಯುವ ಅದೃಷ್ಟವಿದ್ದರೆ ಮಾತ್ರ ಅವಳು ಹುಟ್ಟಿದ ಮತ್ತು ಹೊಕ್ಕ ವಂಶಗಳೆರಡಕ್ಕೂ ಇಹಪರಗಳಲ್ಲಿ ಸುಖವುಂಟು. ಸ್ತ್ರೀಯರಿಗೆ ಗುಣವಂತನಾದ ಪತಿ ಲಭಿಸುವುದು ಬಹು ವಿರಳ. ಗುಣರಹಿತನಾದವನು ಸಿಕ್ಕುವುದೂ ಕೂಡ ಕಷ್ಟವೇ. ಏಕೆಂದರೆ ಪುಣ್ಯವಿಲ್ಲದೆ ಕನ್ಯೆಗೆ ಪತಿಯು ಎಂದಿಗೂ ಲಭಿಸಲಾರನು" ಎಂದು ಕೊರಗುವನು. ನಾರದರು ವಾಸ್ತವಾಂಶವನ್ನು ತಿಳಿಸಿ ಅವನನ್ನು ಸಂತೈಸುವರು.

ಸಪ್ತರ್ಷಿಗಳು ಮೇನಾದೇವಿಯ ಬಳಿಗೆ ಬಂದು ಪಾರ್ವತಿಯನ್ನು ಪರಮೇಶ್ವರನಿಗೆ ಕನ್ಯಾದಾನಮಾಡಿಕೊಡಬೇಕೆಂದು ಪ್ರಾರ್ಥಿಸುವರು. ತಾಯಿಗೆ ಸಹಜವಾದ ಮೋಹದಿಂದ ಆಕೆ ಚಿಂತಿಸಿ, ಕುಸುಮಕೋಮಲೆಯಾದ ತನ್ನ ಮಗಳಿಗೆ ಪರಮೇಶ್ವರನು ಅನುರೂಪನಾದ ವರನಲ್ಲವೆಂದು ಭಾವಿಸುವಳು. "ಬಗೆಬಗೆಯಾಗಿ ತಪಸ್ಸುಮಾಡುತ್ತ ಭಯಂಕರ ರೂಪನಾಗಿರುವ ಮಹಾದೇವನನ್ನು ನನ್ನ ಮಗಳು ಹೇಗೆ ವರಿಸಿಯಾಳು ? ಈ ವಿಷಯದಲ್ಲಿ ಅವಳನ್ನೇ ಕೇಳಿ ಹೇಗೆ ಉಚಿತವೋ ಹಾಗೆ ಮಾಡಬಹುದು" ಎಂದು ಅವಳು ಮಹರ್ಷಿಗಳಿಗೆ ಉತ್ತರಕೊಡುವಳು. ಕೊನೆಗೆ ಅವರು ತಕ್ಕ ಸಮಾಧಾನಗಳನ್ನು ಹೇಳಿದ ತರುವಾಯ ತನ್ನ ಒಪ್ಪಿಗೆಯನ್ನು ನೀಡುವಳು.

ಪಾರ್ವತೀಪರಮೇಶ್ವರರ ವಿವಾಹವು ಸಕಲ ಸಂಭ್ರಮಗಳೊಡನೆ ನೆರವೇರಿತು. ಪಾರ್ವತಿ ಪತಿಗೃಹವನ್ನು ಸೇರಿ ಸಂತೋಷದಿಂದಿದ್ದಾಳೆ. ಒಂದು ದಿನ ದಂಪತಿಗಳು ವಿನೋದವಾದ ಮಾತುಕಥೆಗಳಲ್ಲಿ ತೊಡಗಿದ್ದಾರೆ. ಈಶ್ವರನ ಮೈಬಣ್ಣ ಬಿಳುಪು, ಪಾರ್ವತಿಯದು ಸ್ವಲ್ಪ ಕಪ್ಪು. "ಬೆಳ್ಳಗಿರುವ ನನ್ನ ಶರೀರದೊಡನೆ

ಕೂಡಿದ ನಿನ್ನ ಕೃಷ್ಣದೇಹವು ಗಂಧದ ಮರಕ್ಕೆ ಸುತ್ತಿಕೊಂಡ ಕಾಳಿಂಗಸರ್ಪದಂತೆ ಕಾಣುತ್ತದೆ" ಎಂದು ಈಶ್ವರನು ಹಾಸ್ಯಮಾಡುತ್ತಾನೆ. ಅಷ್ಟಕ್ಕೇ ದೇವಿಗೆ ಕೋಪ ಬಂದಿತು. "ನಾನು ಬಹುಕಾಲ ತಪಸ್ಸುಮಾಡಿ ನಿನ್ನನ್ನು ವರಿಸಬೇಕೆಂದು ಹಾರೈಸಿದೆನು. ಅದರ ಫಲವಾಗಿ ನನಗೆ ಈ ಅವಮಾನವು ಒದಗಿತು. ಜನರು ತಾವಾಗಿ ಮಾಡಿಕೊಂಡ ಬುದ್ಧಿದೋಷದಿಂದ ತಿರಸ್ಕಾರಕ್ಕೆ ಗುರಿಯಾಗುತ್ತಾರೆ" ಎಂದು ತನ್ನನ್ನು ಜರೆದುಕೊಂಡಳು. ಅಷ್ಟೇ ಅಲ್ಲ. "ನೀನು ದೋಷಾಕರ; ವಿಷಧರ. ನನ್ನನ್ನು ಕಾಳಿಯೆಂದು ಹೇಳಿದೆ. ನೀನು ಮಹಾಕಾಳನಲ್ಲವೇ?" ಎಂದು ಪರಮೇಶ್ವರನನ್ನು ನಿಂದಿಸಿ, ತಪಸ್ಸುಮಾಡಿ ತನ್ನ ಬಣ್ಣವನ್ನು ಮಾರ್ಪಡಿಸಿ ಕೊಳ್ಳುವುದಾಗಿ ಪ್ರತಿಜ್ಞೆಮಾಡಿ ಹೊರಟೇಹೋದಳು. ಮಹಾದೇವನು ಎಷ್ಟು ಸಮಾಧಾನ ಹೇಳಿದರೂ ಪ್ರಯೋಜನವಾಗಲಿಲ್ಲ. ಕೊನೆಗೆ ಅವಳು ಗೌರಿ ಯಾಗಿಯೇ (ಹೊಂಬಣ್ಣದವಳಾಗಿಯೇ) ಹಿಂದಿರುಗಿ ಬಂದಳು.

ನೃಸಿಂಹಾವತಾರದ ಕಥೆ ಈ ಪುರಾಣದಲ್ಲಿ ಬಹು ಸಂಗ್ರಹವಾಗಿ ಹೇಳಲ್ಪಟ್ಟಿದೆ. ಬ್ರಹ್ಮನ ವರದಿಂದ ಕೊಬ್ಬಿ ಜಗತ್ತನ್ನು ಬಾಧೆಗೊಳಿಸುತ್ತಿರುವ ಹಿರಣ್ಯಕಶಿಪುವನ್ನು ಅಡಗಿಸುವುದಕ್ಕಾಗಿ ವಿಷ್ಣು ನರಸಿಂಹ ರೂಪದಿಂದ ಅವನ ಆಸ್ಥಾನವನ್ನು ಪ್ರವೇಶಿ ಸುವನು. ಕೂಡಲೆ ದೈತ್ಯರಿಗೂ ನರಸಿಂಹನಿಗೂ ಘೋರವಾದ ಯುದ್ಧವು ನಡೆಯುವುದು. ಕೊನೆಗೆ ಹಿರಣ್ಯಕಶಿಪು ಆ ಮಾಯಾಸಿಂಹದಿಂದ ಹತನಾಗುವನು. ಇಷ್ಟೇ ಇಲ್ಲಿನ ಕಥೆ. ಪ್ರಹ್ಲಾದನ ಭಗವದ್ಭಕ್ತ್ಯತಿಶಯ, ಆವಿಷಯವಾಗಿ ಅವನಿಗೂ ಅವನ ತಂದೆಗೂ ಸಂವಾದ, ಭಕ್ತನ ವಾಕ್ಯಪರಿಪಾಲನೆಗಾಗಿ ಸ್ತಂಭದಲ್ಲಿ ನೃಸಿಂಹನ ಅವತಾರ ಈ ವಿಷಯಗಳಾವುವೂ ಇದರಲ್ಲಿ ಉಕ್ತವಾಗಿಲ್ಲ. ಆದರೆ ಹಿರಣ್ಯ ಕಶಿಪುವಿನ ಸಭೆಯೂ ಅವನ ಕೋಪಾಟೋಪದಿಂದ ನಡುಗಿದ ದೇಶ, ಬೆಟ್ಟ ಮತ್ತು ನದಿಗಳೂ ಅತಿದೀರ್ಘವಾಗಿ ವರ್ಣಿಸಲ್ಪಟ್ಟಿವೆ.

ಕೊನೆಯದಾದ ಪಾದ್ಮಕಲ್ಪ ವೃತ್ತಾಂತದಲ್ಲಿ ಸೃಷ್ಟಿಪ್ರಳಯಗಳು ವಿವರಿ ಸಲ್ಪಟ್ಟಿವೆ. "ಭಗವಂತನು ವಿಶ್ವರೂಪಿ. ಎಲ್ಲ ಜಗತ್ತುಗಳ ಒಳಗೂ ಹೊರಗೂ ಅವನು ವ್ಯಾಪಿಸಿದ್ದಾನೆ. ಎಲ್ಲಕ್ಕೂ ಅಳಿವುಂಟು. ಆದರೆ ಅವನೊಬ್ಬನು ಮಾತ್ರ ಶಾಶ್ವತ" ಎಂಬ ಉಪದೇಶವನ್ನು ಮಾರ್ಕಂಡೇಯ ವೃತ್ತಾಂತವು ತಿಳಿಸುತ್ತದೆ. "ಈಪ್ರಾಕೃತಿಕ ಪ್ರಪಂಚವೆಲ್ಲ ತ್ರಿಗುಣಾತ್ಮಕವಾದುದು. ರಜಸ್ತಮೋಗುಣಗಳು ತಲೆಯೆತ್ತಿಕೊಂಡು, ಎಲ್ಲೆಲ್ಲಿಯೂ ಆವರಿಸಿ ಸತ್ವಗುಣವನ್ನು ಅಡಗಿಸಬೇಕೆನ್ನುವುವು. ಅವುಗಳ ಆಕ್ರಮಣದಿಂದ ಪಾರಾಗಬೇಕಾದರೆ ಭಗವದ್ಭಕ್ತಿಯ ಮೂಲಕ ಸತ್ವ

ಗುಣವನ್ನು ಬೆಳಸಿಕೊಳ್ಳಬೇಕು " ಎಂಬ ತತ್ವವನ್ನು ಮಧುಕೈಟಭರ ವಧವು ಬೋಧಿಸುತ್ತದೆ.

ಅಗಾಧವಾದ ಸಂಸ್ಕೃತಸಾಹಿತ್ಯಸಾಗರದ ಗರ್ಭದಲ್ಲಿ ಅಡಗಿರುವ ಗ್ರಂಥ ರತ್ನಗಳ ದಿವ್ಯಜ್ಯೋತಿಯು ಕನ್ನಡಿಗರ ಅನುಭವಕ್ಕೆ ಬರುವಂತೆ ಆದುದು ಆಳುವ ಮಹಾಪ್ರಭುಗಳಾದ ಶ್ರೀಮಜ್ಜಯಚಾಮರಾಜೇಂದ್ರವೊಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರ ಔದಾರ್ಯದಿಂದ. ಕನ್ನಡ ಸಾಹಿತ್ಯದಲ್ಲಿ ಅವರಿಗಿರುವ ಅಭಿಮಾನದಿಂದ. ಪ್ರಜೆಗಳ ಮೇಲೆ ಅವರಿಗಿರುವ ವಾತ್ಸಲ್ಯಾತಿಶಯದಿಂದ. ದಯಾಮಯನಾದ ಭಗವಂತನ ಅನುಗ್ರಹದಿಂದ ಅವರ ಸುಖಸಂಪತ್ತುಗಳು ಬೆಳೆಯಲಿ. ಕೀರ್ತಿ ಬೆಳಗಲಿ.

ಸರ್ವಜಿತ್ಸಂವತ್ಸರ
ಆಶ್ವಯುಜ ಶುದ್ಧ ಪಾಡ್ಯ, ಬುಧವಾರ.
15-10-47.

**ವಾಜಪೇಯಂ ಶ್ರೀರಂಗಾಚಾರ್.**
ಅನುವಾದಕ.

## ವಿಷಯ ಸೂಚಿಕೆ

# ವಿಷಯ ಸೂಚಿಕೆ

## ವಿಷಯ ಸೂಚಿಕೆ

## ವಿಷಯ ಸೂಚಿಕೆ

|| ಶ್ರೀ ||

ಓಂ ತತ್ಸದ್ಬ್ರಹ್ಮಣೇ ನಮಃ

# ಶ್ರೀಮದ್ದ್ವೈಪಾಯನಮುನಿಪ್ರಣೀತಂ

# ಶ್ರೀಮತ್ಸ್ಯಮಹಾಪುರಾಣಂ

---

## ಅಥ ಷಟ್ಚತ್ವಾರಿಂಶದಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಕಥಂ ಮತ್ಸ್ಯೇನ ಕಥಿತಸ್ತಾರಕಸ್ಯ ವಧೋ ಮಹಾನ್ ।
ಕಸ್ಮಿನ್ ಕಾಲೇ ವಿನಿರ್ವೃತ್ತಾ ಕಥೇಯಂ ಸೂತನಂದನ || ೧ ||

ತ್ವನ್ಮುಖಕ್ಷೀರಸಿಂಧೂತ್ಥಾ ಕಥೇಯಮಮೃತಾತ್ಮಿಕಾ ।
ಕರ್ಣಾಭ್ಯಾಂ ಪಿಬತಾಂ ತೃಪ್ತಿರಸ್ಮಾಕಂ ನ ಪ್ರಜಾಯತೇ ।
ಇದಂ ಮುನೇ ಸಮಾಖ್ಯಾಹಿ ಮಹಾಬುದ್ಧೇ ಮನೋಗತಂ || ೨ ||

ಪೃಷ್ಟಸ್ತು ಮನುನಾ ದೇವೋ ಮತ್ಸ್ಯರೂಪೀ ಜನಾರ್ದನಃ ।
ಕಥಂ ಶರವಣೇ ಜಾತೋ ದೇವಃ ಷಡ್ವದನೋ ವಿಭೋ || ೩ ||

---

೧. ಋಷಿಗಳು ಹೇಳಿದರು.—ಓ ಸೂತಪುತ್ರಾ, ಮತ್ಸ್ಯರೂಪಿಯಾದ ಭಗವಂತನು ತಾರಕವಧದ ಮಹಾವೃತ್ತಾಂತವನ್ನು ಹೇಳಿದುದೆಂತು ? ಈ ಕಥೆಯು ನಡೆದ ಕಾಲವಾವುದು ?

೨. ಇದನ್ನು ಕಿವಿಗಳಿಂದ ಎಷ್ಟು ಪಾನಮಾಡಿದರೂ ನಮಗೆ ತೃಪ್ತಿ ಹುಟ್ಟುವುದಿಲ್ಲ. ಮಹಾಪ್ರಾಜ್ಞನಾದ ಎಲೈ ಮುನಿವರ್ಯಾ, ಇದನ್ನು ಕೇಳಬೇಕೆಂಬ ಅಭಿಲಾಷೆ ನಮಗಿದೆ. ವಿವರಿಸಿ ಹೇಳು.

೩. ಪ್ರಭೂ, ಜೊಂಡಿನ ಪೊದೆಯಲ್ಲಿ ಕುಮಾರಸ್ವಾಮಿಯು ಹುಟ್ಟಿದುದು ಹೇಗೆ ? ಎಂದು ಮತ್ಸ್ಯರೂಪಿಯಾದ ನಾರಾಯಣನನ್ನು ಮನುವು ಕೇಳಿದನು.

ಏತತ್ತು ವಚನಂ ಶ್ರುತ್ವಾ ಪಾರ್ಥಿವಸ್ಯಾಮಿತೌಜಸಃ ।
ಉವಾಚ ಭಗವಾನ್ ಪ್ರೀತೋ ಬ್ರಹ್ಮಸೂನುರ್ಮಹಾಮತಿಂ ॥ ೪ ॥

॥ ಮತ್ಸ್ಯ ಉವಾಚ ॥

ವಜ್ರಾಂಗೋ ನಾಮ ದೈತ್ಯೋಽಭೂತ್ತಸ್ಯ ಪುತ್ರಸ್ತು ತಾರಕಃ ।
ಸುರಾನುದ್ವಾಸಯಾಮಾಸ ಪುರೇಭ್ಯಃ ಸ ಮಹಾಬಲಃ ॥ ೫ ॥

ತತಸ್ತೇ ಬ್ರಹ್ಮಣೋಽಭ್ಯಾಶಂ ಜಗ್ಮುರ್ಭಯನಿಪೀಡಿತಾಃ ।
ಭೀತಾಂಶ್ಚ ತ್ರಿದಶಾನ್ ದೃಷ್ಟ್ವಾ ಬ್ರಹ್ಮಾ ತೇಷಾಮುವಾಚ ಹ ॥ ೬ ॥

ಸಂತ್ಯಜಧ್ವಂ ಭಯಂ ದೇವಾಃ ಶಂಕರಸ್ಯಾತ್ಮಜಃ ಶಿಶುಃ ।
ತುಹಿನಾಚಲದೌಹಿತ್ರಸ್ತಂ ಹನಿಷ್ಯತಿ ದಾನವಂ ॥ ೭ ॥

ತತಃ ಕಾಲೇ ತು ಕಸ್ಮಿಂಶ್ಚಿದ್ದೃಷ್ಟ್ವಾ ವೈ ಶೈಲಜಾಂ ಶಿವಃ ।
ಸ್ವರೇತೋ ವಹ್ನಿವದನೇ ವ್ಯಸೃಜತ್ಕಾರಣಾಂತರೇ ॥ ೮ ॥

---

೪. ಪರಾಕ್ರಮಶಾಲಿಯಾದ ಮನುಚಕ್ರವರ್ತಿಯು ಹೇಳಿದ ಈ ಮಾತನ್ನು ಕೇಳಿ, ಬ್ರಹ್ಮದೇವನ ಜನಕನಾದ ಭಗವಂತನು ಪ್ರೀತನಾಗಿ ಆ ಮಹಾಪ್ರಾಜ್ಞನಿಗಿಂತೆಂದನು.

೫. ಮತ್ಸ್ಯರೂಪನಾದ ಭಗವಂತನು ಹೇಳಿದನು.—ವಜ್ರಾಂಗನೆಂಬ ದೈತ್ಯನೊಬ್ಬನಿದ್ದನು. ಅವನ ಮಗನೇ ತಾರಕಾಸುರ. ಮಹಾಬಲಿಷ್ಠನಾದ ಅವನು ದೇವತೆಗಳನ್ನು ಅವರ ಪಟ್ಟಣಗಳಿಂದ ಓಡಿಸಿದನು.

೬. ಬಳಿಕ ಅವರು ಭಯಪೀಡಿತರಾಗಿ ಬ್ರಹ್ಮನ ಸಮೀಪಕ್ಕೆ ಹೋದರು. ಭೀತರಾದ ಆ ದೇವತೆಗಳನ್ನು ಕಂಡು ಅವನಿಂತೆಂದನು.

೭. "ಎಲೈ ದೇವತೆಗಳಿರಾ, ಭಯವನ್ನು ಬಿಡಿ. ಪರ್ವತರಾಜನಾದ ಹಿಮವಂತನ ಮಗಳ ಮಗನೂ, ಈಶ್ವರನ ಸುತನೂ ಆದ ಕುಮಾರಸ್ವಾಮಿಯು ಆ ದಾನವನನ್ನು ಸಂಹರಿಸುವನು."

೮. ಬಳಿಕ ಒಂದಾನೊಂದು ಸಮಯದಲ್ಲಿ ಶಿವನು ಪಾರ್ವತಿಯನ್ನು ಕಂಡು ಯಾವುದೋ ಕಾರಣಕ್ಕಾಗಿ ತನ್ನ ವೀರ್ಯವನ್ನು ಅಗ್ನಿಮುಖದಲ್ಲಿ ಬಿಟ್ಟನು.

ತತ್ಪ್ರಾಪ್ತಂ ವಹ್ನಿವದನೇ ರೇತೋ ದೇವಾನತರ್ಪಯತ್ ।
ವಿದಾರ್ಯ ಜಠರಾಣ್ಯೇಷಾಮಜೀರ್ಣಂ ನಿರ್ಗತಂ ಮುನೇ ॥ ೯ ॥

ಪತಿತಂ ತತ್ಸರಿದ್ವಾರಂ ತತಸ್ತು ಶರಕಾನನೇ ।
ತಸ್ಮಾತ್ತು ಸ ಸಮುದ್ಭೂತೋ ಗುಹೋ ದಿನಕರಪ್ರಭಃ ॥೧೦॥

ಸ ಸಪ್ತದಿವಸೋ ಬಾಲೋ ನಿಜಘ್ನೇ ತಾರಕಾಸುರಂ ।
ಏವಂ ಶ್ರುತ್ವಾ ತತೋ ವಾಕ್ಯಂ ತಮೂಚುರ್ಋಷಿಸತ್ತಮಾಃ ॥೧೧॥

॥ ಋಷಯ ಊಚುಃ ॥

ಅತ್ಯಾಶ್ಚರ್ಯವತೀ ರಮ್ಯಾ ಕಥೇಯಂ ಪಾಪನಾಶಿನೀ ।
ವಿಸ್ತರೇಣ ಹಿ ನೋ ಬ್ರೂಹಿ ಯಾಥಾತಥ್ಯೇನ ಶೃಣ್ವತಾಂ ॥೧೨॥

ವಜ್ರಾಂಗೋ ನಾಮ ದೈತ್ಯೇಂದ್ರಃ ಕಸ್ಯ ವಂಶೋದ್ಭವಃ ಪುರಾ ।
ಯಸ್ಯಾಭೂತ್ತಾರಕಃ ಪುತ್ರಃ ಸುರಪ್ರಮಥನೋ ಬಲೀ ॥೧೩॥

---

೯. ಅಗ್ನಿಯ ಮುಖದಲ್ಲಿ ಬಿದ್ದ ಆ ರೇತಸ್ಸು ದೇವತೆಗಳನ್ನು ಸೇರಿ ಅವರನ್ನು ತೃಪ್ತಿಪಡಿಸಿತು. ಆದರೆ ಅದು ಅಲ್ಲಿ ಜೀರ್ಣವಾಗದೆ ಅವರ ಹೊಟ್ಟೆಯನ್ನು ಸೀಳಿಕೊಂಡು ಹೊರಕ್ಕೆ ಬಂದಿತು.

೧೦. ಬಳಿಕ ಅದು ಗಂಗಾನದಿಯಲ್ಲಿ ಬಿದ್ದು ಜೊಂಡಿನ ಪೊದೆಯೊಳಕ್ಕೆ ಹೋಗಿ ಸೇರಿತು. ಅಲ್ಲಿಂದ ಸೂರ್ಯನಂತೆ ಪ್ರಕಾಶಿಸುತ್ತಿರುವ ಕುಮಾರಸ್ವಾಮಿಯು ಹುಟ್ಟಿದನು.

೧೧. ಆ ಬಾಲಕನು ಏಳು ದಿನದ ಮಗುವಾಗಿರುವಾಗ ತಾರಕಾಸುರನನ್ನು ಸಂಹರಿಸಿದನು". ಈ ಮಾತನ್ನು ಕೇಳಿ ಋಷಿಶ್ರೇಷ್ಠರು ಸೂತಮುನಿಯನ್ನು ಕುರಿತು ಹೀಗೆಂದರು.

೧೨. ಋಷಿಗಳು ಹೇಳಿದರು.—ಈ ಕಥೆಯು ಬಹಳ ಆಶ್ಚರ್ಯಕರವೂ ರಮ್ಯವೂ ಆಗಿದೆ. ಅಷ್ಟೇ ಅಲ್ಲ; ಕೇಳುವವರ ಪಾಪಗಳನ್ನು ಕಳೆಯುತ್ತದೆ. ಇದನ್ನು ವಿಸ್ತಾರವಾಗಿ ನಮಗೆ ಹೇಳು.

೧೩. "ತಾರಕಾಸುರನು ಪೂರ್ವದಲ್ಲಿ ದೇವತೆಗಳನ್ನು ಅಡಗಿಸಿದನು. ಅವನು ವಜ್ರಾಂಗನ ಮಗ; ಮಹಾಬಲಿಷ್ಠ'' ಎಂದು ಹೇಳಿದೆಯಲ್ಲವೆ? ಆ ವಜ್ರಾಂಗನೆಂಬ ದೈತ್ಯೇಂದ್ರನು ಯಾರ ವಂಶದಲ್ಲಿ ಜನಿಸಿದನು?

ನಿರ್ಮಿತಃ ಕೋ ವಧೇ ಚಾಭೂತ್ತಸ್ಯ ದೈತ್ಯೇಶ್ವರಸ್ಯ ತು ।
ಗುಹಜನ್ಮ ತು ಕಾರ್ತ್ಸ್ನ್ಯೇನ ಅಸ್ಮಾಕಂ ಬ್ರೂಹಿ ಮಾನದ ॥೧೪॥

ಮಾನಸೋ ಬ್ರಹ್ಮಣಃ ಪುತ್ರೋ ದಕ್ಷೋ ನಾಮ ಪ್ರಜಾಪತಿಃ ।
ಷಷ್ಟಿಂ ಸೋಽಜನಯತ್ಕನ್ಯಾ ವೈರಿಣ್ಯಾಮೇವ ನಃ ಶ್ರುತಂ ॥೧೫॥

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಸಪ್ತವಿಂಶತಿಂ ಸೋಮಾಯ ಚತಸ್ರೋಽರಿಷ್ಟನೇಮಯೇ ॥೧೬॥

ದ್ವೇ ವೈ ಬಾಹುಕಪುತ್ರಾಯ ದ್ವೇ ವೈ ಚಾಂಗಿರಸೇ ತಥಾ ।
ದ್ವೇ ಕೃಶಾಶ್ವಾಯ ವಿದುಷೇ ಪ್ರಜಾಪತಿಸುತಃ ಪ್ರಭುಃ ॥೧೭॥

ಅದಿತಿರ್ದಿತಿರ್ದನುರ್ವಿಶ್ವಾ ಹ್ಯರಿಷ್ಟಾ ಸುರಸಾ ತಥಾ ।
ಸುರಭಿರ್ವಿನತಾ ಚೈವ ತಾಮ್ರಾ ಕ್ರೋಧವಶಾ ಇರಾ ॥೧೮॥

---

೧೪. ಗೌರವದಾತನಾದ ಓ ಮುನಿವರ್ಯಾ, ಆ ದೈತ್ಯರಾಜನನ್ನು ವಧಿಸಲು ನಿರ್ಮಿತನಾದವನು ಯಾರು? ಷಣ್ಮುಖನ ಜನ್ಮವೃತ್ತಾಂತವನ್ನು ನಮಗೆ ಪರಿಪೂರ್ಣವಾಗಿ ಹೇಳು.

೧೫. ಸೂತ ಪೌರಾಣಿಕನು ಹೇಳಿದನು.—ದಕ್ಷಪ್ರಜಾಪತಿಯು ಬ್ರಹ್ಮನ ಮಾನಸ ಪುತ್ರ. ಅವನಿಗೆ ವೈರಿಣಿಯೆಂಬ ಒಬ್ಬ ಪತ್ನಿಯಲ್ಲಿಯೇ ಅರವತ್ತು ಜನ ಹೆಣ್ಣುಮಕ್ಕಳು ಹುಟ್ಟಿದರೆಂದು ಕೇಳಿದ್ದೇವೆ.

೧೬. ಅವರಲ್ಲಿ ಅವನು ಧರ್ಮನಿಗೆ ಹತ್ತುಮಂದಿಯನ್ನೂ, ಕಶ್ಯಪನಿಗೆ ಹದಿಮೂರು ಜನರನ್ನೂ, ಚಂದ್ರನಿಗೆ ಇಪ್ಪತ್ತೇಳು ಮಂದಿಯನ್ನೂ, ಅರಿಷ್ಟನೇಮಿಗೆ ನಾಲ್ವರನ್ನೂ ಕೊಟ್ಟು ಮದುವೆಮಾಡಿದನು.

೧೭. ಪ್ರಜಾಪತಿ ಪುತ್ರನಾದ ಆ ಪ್ರಭುವು ಉಳಿದ ಕನ್ಯೆಯರಲ್ಲಿ ಬಾಹುಕ ಪುತ್ರನಿಗೆ ಇಬ್ಬರನ್ನೂ, ಅಂಗಿರಸ್ಸಿಗೆ ಇಬ್ಬರನ್ನೂ, ಜ್ಞಾನಿಯಾದ ಕೃಶಾಶ್ವನಿಗೆ ಕೊನೆಯ ಇಬ್ಬರನ್ನೂ ಪಾಣಿಗ್ರಹಣಮಾಡಿಕೊಟ್ಟನು.

೧೮. ಅದಿತಿ, ದಿತಿ, ದನು, ವಿಶ್ವಾ, ಅರಿಷ್ಟಾ, ಸುರಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾ, ಕದ್ರೂ, ಮುನಿ ಈ ಹದಿಮೂರು ಮಂದಿಯೂ ಲೋಕದ ತಾಯಂದಿರು. ಪಶುಜಾತಿಗೂ ಇವರೇ ಮಾತೆಯರು.

**ಕದ್ರೂರ್ಮುನಿಶ್ಚ ಲೋಕಸ್ಯ ಮಾತರೋ ಗೋಷು ಮಾತರಃ ।**
**ತಾಸಾಂ ಸಕಾಶಾಲ್ಲೋಕಾನಾಂ ಜಂಗಮಸ್ಥಾವರಾತ್ಮನಾಂ ॥೧೯॥**

**ಜನ್ಮ ನಾನಾಪ್ರಕಾರಾಣಾಂ ತಾಭ್ಯೋಽನ್ಯೇ ದೇಹಿನಃ ಸ್ಮೃತಾಃ ।**
**ದೇವೇಂದ್ರೋಪೇಂದ್ರಪೂಷಾದ್ಯಾಃ ಸರ್ವೇ ತೇಽದಿತಿಜಾ ಮತಾಃ ॥೨೦॥**

**ದಿತೇಃ ಸಕಾಶಾಲ್ಲೋಕಾಸ್ತು ಹಿರಣ್ಯಕಶಿಪಾದಯಃ ।**
**ದಾನವಾಶ್ಚ ದನೋಃ ಪುತ್ರಾ ಗಾವಶ್ಚ ಸುರಭೀಸುತಾಃ ॥೨೧॥**

**ಪಕ್ಷಿಣೋ ವಿನತಾಪುತ್ರಾ ಗರುಡಪ್ರಮುಖಾಃ ಸ್ಮೃತಾಃ ।**
**ನಾಗಾಃ ಕದ್ರೂಸುತಾ ಜ್ಞೇಯಾ ಶೇಷಾಶ್ಚಾನ್ಯೇಽಪಿ ಜಂತವಃ ॥೨೨॥**

**ತ್ರೈಲೋಕ್ಯನಾಥಂ ಶಕ್ರಂ ತು ಸರ್ವಾಮರಗಣಪ್ರಭುಂ ।**
**ಹಿರಣ್ಯಕಶಿಪುಶ್ಚಕ್ರೇ ಜಿತ್ವಾ ರಾಜ್ಯಂ ಮಹಾಬಲಃ ॥೨೩॥**

**ತತಃ ಕೇನಾಪಿ ಕಾಲೇನ ಹಿರಣ್ಯಕಶಿಪಾದಯಃ ।**
**ನಿಹತಾ ವಿಷ್ಣುನಾ ಸಂಖ್ಯೇ ಶೇಷಾಶ್ಚೇಂದ್ರೇಣ ದಾನವಾಃ ॥೨೪॥**

---

೧೯-೨೦. ಸ್ಥಾವರಜಂಗಮರೂಪವಾಗಿ ನಾನಾಪ್ರಕಾರದಿಂದಿರುವ ಲೋಕಗಳು ಅವರಿಂದಲೇ ಉತ್ಪನ್ನವಾದುವು. ಉಳಿದ ಪ್ರಾಣಿಗಳೆಲ್ಲವೂ ಅವರಿಂದ ಜನಿಸಿದಂತಹವು. ದೇವೇಂದ್ರ, ಉಪೇಂದ್ರ, ಪೂಷ ಮುಂತಾದ ದೇವತೆಗಳೆಲ್ಲ ಅದಿತಿಯ ಮಕ್ಕಳು.

೨೧. ಹಿರಣ್ಯಕಶಿಪು ಮುಂತಾದ ದೈತ್ಯರು ದಿತಿಯಿಂದ ಜನಿಸಿದರು. ದಾನವರು ದನುವಿನ ಪುತ್ರರು. ಗೋವುಗಳು ಸುರಭಿಯ ಸಂತತಿಯುವು.

೨೨. ಗರುಡನೇ ಮುಂತಾದ ಪಕ್ಷಿಗಳು ವಿನತೆಯ ಮಕ್ಕಳು. ನಾಗರೂ ಇನ್ನೂ ಉಳಿದ ಜಂತುಗಳೂ ಕದ್ರುವಿನ ಪುತ್ರರೆಂದು ಅರಿಯಬೇಕು.

೨೩. ಮಹಾಬಲಿಷ್ಠನಾದ ಹಿರಣ್ಯಕಶಿಪು ದೇವಗಣಗಳೆಲ್ಲಕ್ಕೂ ಪ್ರಭುವಾದ, ತ್ರೈಲೋಕ್ಯನಾಥನೆನಿಸಿದ ಇಂದ್ರನನ್ನು ಗೆದ್ದು ತಾನೇ ರಾಜ್ಯವಾಳುತ್ತಿದ್ದನು.

೨೪. ಕೆಲವು ಕಾಲದ ಬಳಿಕ ಹಿರಣ್ಯಕಶಿಪು ಮುಂತಾದ ದೈತ್ಯರು ವಿಷ್ಣುವಿನಿಂದ ಯುದ್ಧದಲ್ಲಿ ಹತರಾದರು. ಇನ್ನು ಉಳಿದವರನ್ನು ಇಂದ್ರನು ಸಂಹರಿಸಿದನು.

ತತೋ ನಿಹತಪುತ್ರಾಭೂದ್ದಿತಿರ್ವರಮಯಾಚತ ।
ಭರ್ತಾರಂ ಕಶ್ಯಪಂ ದೇವಂ ಪುತ್ರಮನ್ಯಂ ಮಹಾಬಲಂ ॥೨೫॥

ಸಮರೇ ಶಕ್ರಹಂತಾರಂ ಸ ತಸ್ಯಾ ಅದದಾತ್ಪ್ರಭುಃ ॥೨೬॥

ನಿಯಮೋ ವರ್ತ ಹೇ ದೇವಿ ಸಹಸ್ರಂ ಶುಚಿಮಾನಸಾ ।
ವರ್ಷಾಣಾಂ ಲಪ್ಸ್ಯಸೇ ಪುತ್ರಮಿತ್ಯುಕ್ತ್ವಾ ಸಾ ತಥಾಽಕರೋತ್ ॥೨೭॥

ವರ್ತಂತ್ಯಾ ನಿಯಮೋ ತಸ್ಯಾಃ ಸಹಸ್ರಾಕ್ಷಃ ಸಮಾಹಿತಃ ।
ಉಪಾಸಾಮಾಚರತ್ತಸ್ಯಾಃ ಸಾ ಚೈನಮನ್ವಮನ್ಯತ ॥೨೮॥

ದಶವತ್ಸರಶೇಷಸ್ಯ ಸಹಸ್ರಸ್ಯ ತದಾ ದಿತಿಃ ।
ಉವಾಚ ಶಕ್ರಂ ಸುಪ್ರೀತಾ ವರದಾ ತಪಸಿ ಸ್ಥಿತಾ ॥೨೯॥

---

೨೫-೨೬. ಮಕ್ಕಳು ಮೃತರಾಗಲು ದಿತಿಯು ತನ್ನ ಪತಿಯಾದ ಕಶ್ಯಪರಲ್ಲಿಗೆ ಹೋಗಿ "ಮಹಾ ಬಲಶಾಲಿಯೂ, ಯುದ್ಧದಲ್ಲಿ ಇಂದ್ರನನ್ನು ಸಂಹರಿಸುವಾತನೂ ಆದ ಮತ್ತೊಬ್ಬ ಮಗನನ್ನು ಕರುಣಿಸು." ಎಂದು ವರವನ್ನು ಬೇಡಿದಳು. ನಿಗ್ರಹಾನುಗ್ರಹಶಕ್ತಿಯುಳ್ಳ ಆ ಮಹರ್ಷಿ ಹಾಗೆಯೇ ಅನುಗ್ರಹಿಸಿದನು.

೨೭. "ದೇವೀ, ಶುದ್ಧ ಮನಸ್ಕಳಾಗಿ ಒಂದು ಸಾವಿರ ವರ್ಷಗಳ ಕಾಲ ನಿಯಮದಿಂದಿರು. ನೀನು ಬಯಸಿದಂತಹ ಮಗನನ್ನು ಪಡೆಯುವೆ" ಎಂದು ಕಶ್ಯಪಮುನಿ ಹೇಳಲು ಆಕೆ ಹಾಗೆಯೇ ಮಾಡಿದಳು.

೨೮. ಅವಳು ವ್ರತದಲ್ಲಿ ನಿರತಳಾಗಿರುವಾಗ ದೇವೇಂದ್ರನು ಜಾಗರೂಕನಾಗಿ ಅವಳ ಸೇವೆಯನ್ನು ಮಾಡಿದನು. ಅದನ್ನು ಅವಳು ಮೆಚ್ಚಿದಳು.

೨೯. ಸಾವಿರ ಪೂರ್ತಿಯಾಗಲು ಇನ್ನು ಹತ್ತು ವರ್ಷಗಳು ಮಾತ್ರ ಉಳಿದುವು. ಆಗ ತಪೋನಿರತಳಾದ ದಿತಿದೇವಿಯು ಪ್ರೀತಳಾಗಿ ಇಂದ್ರನಿಗೆ ಇಂತೆಂದಳು.

**॥ ದಿತಿರುವಾಚ ॥**

**ಪುತ್ರೋತ್ತೀರ್ಣವ್ರತಾಂ ಪ್ರಾಯೋ ವಿದ್ಧಿ ಮಾಂ ಪಾಕಶಾಸನ ।**
**ಭವಿಷ್ಯತಿ ಚ ತೇ ಭ್ರಾತಾ ತೇನ ಸಾರ್ಧಮಿಮಾಂ ಶ್ರಿಯಂ ॥೩೦॥**

**ಭುಂಕ್ಷ್ವ ವತ್ಸ ಯಥಾಕಾಮಂ ತ್ರೈಲೋಕ್ಯಂ ಹತಕಂಟಕಂ ।**
**ಇತ್ಯುಕ್ತ್ವಾ ನಿದ್ರಯಾವಿಷ್ಟಾ ಚರಣಾಕ್ರಾಂತಮೂರ್ಧಜಾ ॥೩೧॥**

**ಸ್ವಯಂ ಸುಷ್ವಾಪ ನಿಯತಾ ಭಾವಿನೋಽರ್ಥಸ್ಯ ಗೌರವಾತ್ ।**
**ತತ್ತು ರಂಧ್ರಂ ಸಮಾಸಾದ್ಯ ಜಠರಂ ಪಾಕಶಾಸನಃ ॥೩೨॥**

**ಚಕಾರ ಸಪ್ತಧಾ ಗರ್ಭಂ ಕುಲಿಶೇನ ತು ದೇವರಾಟ್ ।**
**ಏಕೈಕಂ ತು ಪುನಃ ಖಂಡಂ ಚಕಾರ ಮಘವಾ ತತಃ ॥೩೩॥**

**ಸಪ್ತಧಾ ಸಪ್ತಧಾ ಕೋಪಾತ್ಪ್ರಾಬುಧ್ಯತ ತತೋ ದಿತಿಃ ।**
**ವಿಬುಧ್ಯೋವಾಚ ಮಾ ಶಕ್ರ ಘಾತಯೇಥಾಃ ಪ್ರಜಾಂ ಮಮ ॥೩೪॥**

**ತಚ್ಛ್ರುತ್ವಾ ನಿರ್ಗತಃ ಶಕ್ರಃ ಸ್ಥಿತ್ವಾ ಪ್ರಾಂಜಲಿರಗ್ರತಃ ।**
**ಉವಾಚ ವಾಕ್ಯಂ ಸಂತ್ರಸ್ತೋ ಮಾತುರ್ವೈ ಶನಕೈರಿದಂ ॥೩೫॥**

---

೩೦-೩೧. "ಪುತ್ರಾ, ದೇವೇಂದ್ರಾ, ಇನ್ನೇನು ನನ್ನ ವ್ರತವು ಸಮಾಪ್ತವಾಯಿತೆಂದು ತಿಳಿ. ನಿನಗೊಬ್ಬ ಸಹೋದರನು ಹುಟ್ಟುವನು. ಐಶ್ವರ್ಯವನ್ನೂ ತ್ರಿಲೋಕಾಧಿಪತ್ಯವನ್ನೂ ಶತ್ರುಬಾಧೆಯಿಲ್ಲದಂತೆ ಅವನೊಡನೆ ಅನುಭವಿಸು." ಹೀಗೆ ಹೇಳಿ, ಮುಂದೆ ಮಹತ್ತಾದ ಸಂಗತಿಯು ಒದಗಬೇಕಾದ ಕಾರಣ ಆಕೆಯು ನಿದ್ರಾಪೀಡಿತಳಾಗಿ ಮಲಗಿದಳು. ಅವಳ ಕೇಶಪಾಶವು ಬಿಚ್ಚಿಹೋಗಿ ಕಾಲಿಗೆ ತಗುಲುತ್ತಿತ್ತು.

೩೨-೩೪. ವ್ರತಭಂಗದ ಅದೊಂದು ಛಿದ್ರವು ಸಿಕ್ಕಿದೊಡನೆಯೇ ದೇವೇಂದ್ರನು ಅವಳ ಜಠರವನ್ನು ಹೊಕ್ಕು, ವಜ್ರಾಯುಧದಿಂದ ಗರ್ಭವನ್ನು ಏಳು ಭಾಗವಾಗಿ ಕತ್ತರಿಸಿದನು. ಬಳಿಕ ಆ ಒಂದೊಂದು ತುಂಡನ್ನೂ ಮತ್ತೆ ಏಳೇಳು ಚೂರಾಗಿ ಮಾಡಿದನು. ಆಗ ದಿತಿಯು ಎಚ್ಚರಗೊಂಡು "ಇಂದ್ರಾ, ನನ್ನ ಮಗುವನ್ನು ಕೊಲ್ಲಬೇಡ" ಎಂದು ಕೋಪದಿಂದ ಹೇಳಿದಳು.

೩೫. ಅದನ್ನು ಕೇಳಿ ಇಂದ್ರನು ಹೊರಕ್ಕೆ ಬಂದು, ತಾಯಿಯ ಮುಂದೆ ಕೈ ಮುಗಿದು ನಿಂತುಕೊಂಡು ಹೆದರಿಕೆಯಿಂದ ಮೆಲ್ಲನೆ ಇಂತೆಂದನು.

|| ಶಕ್ರ ಉವಾಚ ||

ದಿವಾ ಸ್ವಪ್ನಪರಾ ಮಾತಃ ಪಾದಾಕ್ರಾಂತಶಿರೋರುಹಾ ।
ಸಪ್ತಸಪ್ತಭಿರೇವಾತಸ್ತವ ಗರ್ಭಃ ಕೃತೋ ಮಯಾ ||೩೬||

ಏಕೋನಪಂಚಾಶತ್ಕೃತಾ ಭಾಗಾ ವಜ್ರೇಣ ತೇ ಸುತಾಃ ।
ದಾಸ್ಯಾಮಿ ತೇಷಾಂ ಸ್ಥಾನಾನಿ ದಿವಿ ದೈವತಪೂಜಿತೇ ||೩೭||

ಇತ್ಯುಕ್ತಾ ಸಾ ತದಾ ದೇವೀ ಸ್ವೈವಮಸ್ತ್ವಿತ್ಯಭಾಷತ ।
ಪುನಶ್ಚ ದೇವೀ ಭರ್ತಾರಮುವಾಚಾಸಿತಲೋಚನಾ ||೩೮||

ಪುತ್ರಂ ಪ್ರಜಾಪತೇ ದೇಹಿ ಶಕ್ರಜೇತಾರಮೂರ್ಜಿತಂ ।
ಯೋ ನಾಸ್ತ್ರಶಸ್ತ್ರೈರ್ವಧ್ಯತ್ವಂ ಗಚ್ಛೇತ್ತ್ರಿದಿವವಾಸಿನಾಂ ||೩೯||

---

೩೬. ಇಂದ್ರನು ಹೇಳಿದನು.—ಅಮ್ಮಾ, ನೀನು ಹಗಲಿನಲ್ಲಿ ನಿದ್ದೆಮಾಡುತ್ತಿದ್ದೆ. ನಿನ್ನ ತಲೆಗೂದಲು ಕಾಲಿಗೆ ಸೋಕುತ್ತಿತ್ತು. ನಿನ್ನ ನಿಯಮಕ್ಕೆ ಭಂಗ ಒದಗಿತು. ಆದುದರಿಂದ ಆ ವೇಳೆಯಲ್ಲಿ ನಿನ್ನ ಗರ್ಭವನ್ನು ನಾನು ಹೊಕ್ಕು ಅದನ್ನು ನಲವತ್ತೊಂಬತ್ತು ತುಂಡುಗಳಾಗಿ ಕತ್ತರಿಸಿದೆನು.

೩೭. ದೇವ ಪೂಜಿತಳಾದ ಎಲೌ ದೇವೀ, ವಜ್ರಾಯುಧದಿಂದ ನಿನ್ನ ಗರ್ಭವು ಹೀಗೆ ನಲವತ್ತೊಂಬತ್ತು ಭಾಗವಾಯಿತಷ್ಟೆ! ಅವುಗಳನ್ನು ಪುತ್ರರನ್ನಾಗಿ ಮಾಡಿ ಅವರಿಗೆ ಸ್ವರ್ಗದಲ್ಲಿ ಸ್ಥಾನಗಳನ್ನು ಕೊಡುವೆನು.

೩೮. ಇಂದ್ರನು ಹೀಗೆ ಹೇಳಲು ದಿತಿಯು "ಹಾಗೆಯೇ ಆಗಲಿ" ಎಂದು ಹೇಳಿ, ಮರಳಿ ತನ್ನ ಪತಿಯ ಹತ್ತಿರಕ್ಕೆ ಹೋಗಿ ಹೀಗೆಂದಳು.

೩೯. "ಎಲೈ ಪ್ರಜಾಪತೀ, ಇಂದ್ರನನ್ನು ಗೆಲ್ಲುವವನೂ ಪರಾಕ್ರಮಶಾಲಿಯೂ ಆದ ಪುತ್ರನನ್ನು ಕರುಣಿಸು. ಅವನು ದೇವತೆಗಳ ಅಸ್ತ್ರಶಸ್ತ್ರಗಳಿಂದ ಅವಧ್ಯನಾಗಿರಬೇಕು.

**ಇತ್ಯುಕ್ತಃ ಸ ತಥೋವಾಚ ತಾಂ ಪತ್ನೀಮತಿದುಃಖಿತಾಂ ।**
**ದಶ ವರ್ಷಸಹಸ್ರಾಣಿ ತಪಃ ಕೃತ್ವಾ ತು ಲಪ್ಸ್ಯಸೇ ॥೪೦॥**

**ವಜ್ರಸಾರಮಯೈರಂಗೈರಚ್ಛೇದ್ಯೈರಾಯುಸ್ಯೈರ್ದೃಢೈಃ ।**
**ವಜ್ರಾಂಗೋ ನಾಮ ಪುತ್ರಸ್ತೇ ಭವಿತಾ ಪುತ್ರವತ್ಸಲೇ ॥೪೧॥**

**ಸಾ ತು ಲಬ್ಧವರಾ ದೇವೀ ಜಗಾಮ ತಪಸೇ ವನಂ ।**
**ದಶ ವರ್ಷಸಹಸ್ರಾಣಿ ಸಾ ತಪೋ ಘೋರಮಾಚರತ್ ॥೪೨॥**

**ತಪಸೋಽಂತೇ ಭಗವತೀ ಜನಯಾಮಾಸ ದುರ್ಜಯಂ ।**
**ಪುತ್ರಮಪ್ರತಿಕರ್ಮಾಣಮಜೇಯಂ ವಜ್ರದುಶ್ಛಿದಂ ॥೪೩॥**

**ಸ ಜಾತಸ್ತತ್ರ ಏವಾಭೂತ್ಸರ್ವಶಸ್ತ್ರಾಸ್ತ್ರಪಾರಗಃ ।**
**ಉವಾಚ ಮಾತರಂ ಭಕ್ತ್ಯಾ ಮಾತಃ ಕಿಂ ಕರವಾಣ್ಯಹಂ ॥೪೪॥**

---

೪೦. ಎಂದು ಬೇಡಿಕೊಳ್ಳಲು, ಬಹು ದುಃಖಿಸುತ್ತಿರುವ ತನ್ನ ಪತ್ನಿಯನ್ನು ನೋಡಿ ಕಶ್ಯಪನು "ಹತ್ತು ಸಾವಿರ ವರ್ಷಗಳ ಕಾಲ ತಪಸ್ಸು ಮಾಡು. ನೀನು ಕೋರಿದಂತಹ ಮಗನನ್ನು ಪಡೆಯುವೆ" ಎಂದು ಹೇಳಿದನು.

೪೧. "ಪುತ್ರ ವಾತ್ಸಲ್ಯದಿಂದ ಕೂಡಿದ ಎಲೌ ದಿತೀ, ನಿನಗೆ ವಜ್ರಾಂಗ್ನನೆಂಬ ಮಗನು ಹುಟ್ಟುವನು. ಅವನ ಅಂಗಗಳು ವಜ್ರದಂತೆ ಗಟ್ಟಿಯಾದುವು. ಬಲವಾದ ಕಬ್ಬಿಣದ ಆಯುಧಗಳೂ ಸಹ ಅವುಗಳನ್ನು ಛೇದಿಸಲಾರವು."

೪೨. ವರವನ್ನು ಪಡೆದು ಆ ದೇವಿಯು ಕಾಡಿಗೆ ಹೋಗಿ ಹತ್ತುಸಾವಿರ ವರ್ಷಗಳ ಕಾಲ ಘೋರವಾದ ತಪಸ್ಸನ್ನು ಮಾಡಿದಳು.

೪೩. ತಪಸ್ಸಿನ ಕೊನೆಯಲ್ಲಿ ಪೂಜ್ಯಳಾದ ಆ ದೇವಿಯು ದುರ್ಜಯನೂ, ಮಹಾಸಾಹಸಿಯೂ, ಅಜೇಯನೂ, ವಜ್ರದಂತೆ ಅಚ್ಛೇದ್ಯನೂ ಆದ ಪುತ್ರನನು ಹೆತ್ತಳು.

೪೪. ಹುಟ್ಟಿದ ಕೂಡಲೇ ಅವನು ಎಲ್ಲ ಬಗೆಯ ಶಸ್ತ್ರಗಳಲ್ಲಿಯೂ ಅಸ್ತ್ರಗಳಲ್ಲಿಯೂ ಪಾರಂಗತನಾದನು. "ಅಮ್ಮಾ, ನಾನೇನು ಮಾಡಲಿ ?" ಎಂದು ತಾಯಿಯನ್ನು ಭಕ್ತಿಯಿಂದ ಕೇಳಿದನು.

**ತಮುವಾಚ ತತೋ ಹೃಷ್ಟ್ವಾ ದಿತಿರ್ದೈತ್ಯಾಧಿಪಂ ಚ ಸಾ ।**
**ಬಹವೋ ಮೇ ಹತಾಃ ಪುತ್ರಾಃ ಸಹಸ್ರಾಕ್ಷೇಣ ಪುತ್ರಕ ॥೪೫॥**

**ತೇಷಾಂ ತ್ವಂ ಪ್ರತಿಕರ್ತುಂ ವೈ ಗಚ್ಛ ಶಕ್ರವಧಾಯ ಚ ।**
**ಬಾಢಮಿತ್ಯೇವ ತಾಮುಕ್ತ್ವಾ ಜಗಾಮ ತ್ರಿದಿವಂ ಬಲೀ ॥೪೬॥**

**ಬದ್ಧ್ವಾ ತತಃ ಸಹಸ್ರಾಕ್ಷಂ ಪಾಶೇನಾಮೋಘವರ್ಚಸಾ ।**
**ಮಾತುರಂತಿಕಮಾಗಚ್ಛದ್ವ್ಯಾಘ್ರಃ ಕ್ಷುದ್ರಮೃಗಂ ಯಥಾ ॥೪೭॥**

**ಏತಸ್ಮಿನ್ನಂತರೇ ಬ್ರಹ್ಮಾ ಕಶ್ಯಪಶ್ಚ ಮಹಾತಪಾಃ ।**
**ಆಗತೌ ತತ್ರ ಯತ್ರಾಸ್ತಾಂ ಮಾತಾಪುತ್ರಾವಭೀತಕೌ ॥೪೮॥**

**ದೃಷ್ಟ್ವಾ ತು ತಮುವಾಚೇದಂ ಬ್ರಹ್ಮಾ ಕಶ್ಯಪ ಏವ ಚ ।**
**ಮುಂಚೈನಂ ಪುತ್ರ ದೇವೇಂದ್ರಂ ಕಿಮನೇನ ಪ್ರಯೋಜನಂ ॥೪೯॥**

---

೪೫-೪೬. ಬಳಿಕ ದಿತಿದೇವಿಯು ಸಂತೋಷಪಟ್ಟು ಆ ದೈತ್ಯೇಶ್ವರನಿಗೆ ಹೀಗೆ ಹೇಳಿದಳು. "ಮಗೂ, ದೇವೇಂದ್ರನು ನನ್ನ ಎಷ್ಟೋ ಮಕ್ಕಳನ್ನು ಕೊಂದನು. ಅವರ ಮರಣದ ಸೇಡನ್ನು ತೀರಿಸಿಕೊಳ್ಳುವುದಕ್ಕೂ, ಇಂದ್ರನನ್ನು ಸಂಹರಿಸುವುದಕ್ಕೂ ಈಗ ಹೊರಡು." ಬಲಶಾಲಿಯಾದ ವಜ್ರಾಂಗನು ಹಾಗೆಯೇ ಆಗಲೆಂದು ಹೇಳಿ ಸ್ವರ್ಗಕ್ಕೆ ಹೋದನು.

೪೭. ಬಳಿಕ ವಜ್ರಾಂಗನು ಹುಲಿಯು ಕ್ಷುದ್ರಮೃಗವನ್ನು ಆಕ್ರಮಿಸುವಂತೆ, ಅತ್ಯತಿಶಯವಾದ ತೇಜಸ್ಸುಳ್ಳ ಪಾಶಾಯುಧದಿಂದ ಇಂದ್ರನನ್ನು ಬಂಧಿಸಿ ತಾಯಿಯ ಬಳಿಗೆ ಎಳೆದುಕೊಂಡು ಬಂದನು.

೪೮. ಈ ವೇಳೆಗೆ ಬ್ರಹ್ಮನೂ ಮಹಾ ತಪಸ್ವಿಯಾದ ಕಶ್ಯಪನೂ ಕೂಡಿ, ತಾಯಿಮಕ್ಕಳಿಬ್ಬರೂ ನಿರ್ಭೀತರಾಗಿ ಕುಳಿತಿದ್ದ ಆ ಸ್ಥಳಕ್ಕೆ ಬಂದರು.

೪೯. ಆ ವಜ್ರಾಂಗನನ್ನು ನೋಡಿ ಬ್ರಹ್ಮನೂ ಕಶ್ಯಪನೂ ಹೀಗೆ ಹೇಳಿದರು. "ಮಗೂ, ಈ ಇಂದ್ರನನ್ನು ಬಿಡು. ಇವನಿಂದ ನಿನಗೆ ಆಗಬೇಕಾಗಿರುವುದೇನು ?

ಅಪಮಾನೋ ವಧಃ ಪ್ರೋಕ್ತಃ ಪುತ್ರ ಸಂಭಾವಿತಸ್ಯ ಚ ।
ಅಸ್ಮದ್ವಾಕ್ಯೇನ ಯೋ ಮುಕ್ತೋ ವಿದ್ಧಿ ತಂ ಮೃತಮೇವ ಚ ॥೫೦॥

ಪರಸ್ಯ ಗೌರವಾನ್ಮುಕ್ತಃ ಶತ್ರುಣಾ ಸ ಮಹಾಹವೇ ।
ಜೀವನ್ನೇವ ಮೃತೋ ವತ್ಸ ದಿವಸೇ ದಿವಸೇ ಸ ತು ॥೫೧॥

ಮಹತಾಂ ವಶಮಾಯಾತೇ ವೈರಂ ನೈವಾಸ್ತಿ ವೈರಿಣಿ ।
ಏತಚ್ಛ್ರುತ್ವಾ ತು ವಜ್ರಾಂಗಃ ಪ್ರಣತೋ ವಾಕ್ಯಮಬ್ರವೀತ್ ॥೫೨॥

ನ ಮೇ ಕೃತ್ಯಮನೇನಾಸ್ತಿ ಮಾತುರಾಜ್ಞಾ ಕೃತಾ ಮಯಾ ।
ತ್ವಂ ಸುರಾಸುರನಾಥೋ ವೈ ಮಮ ಚ ಪ್ರಪಿತಾಮಹಃ ॥೫೩॥

ಕರಿಷ್ಯೇ ತ್ವದ್ವಚೋ ದೇವ ಏಷ ಮುಕ್ತಃ ಶತಕ್ರತುಃ ।
ತಪಸೇ ಮೇ ರತಿರ್ದೇವ ನಿರ್ವಿಘ್ನಂ ಚೈವ ಮೇ ಭವೇತ್ ॥೫೪॥

---

೫೦. ಪುತ್ರಾ, ಗೌರವಸ್ಥನಿಗೆ ಅಪಮಾನವೇ ವಧವೆನಿಸುವುದು. ಇವನು ನಮ್ಮ ಮಾತಿನಮೇಲೆ ಬಿಡುಗಡೆಹೊಂದಿದ ಬಳಿಕ ಇವನನ್ನು ನೀನು ಮೃತನೆಂದೇ ಭಾವಿಸು.

೫೧. ದೊಡ್ಡ ಯುದ್ಧದಲ್ಲಿ ಮೂರನೆಯವನ ಗೌರವದ ಸಲುವಾಗಿ ಶತ್ರುವಿನಿಂದ ಬಿಡುಗಡೆ ಹೊಂದಿದವನು ಜೀವಿಸಿದ್ದರೂ ದಿನದಿನವೂ ಸಾಯುತ್ತಿರುವನು.

೫೨. ಕೈಗೆ ಸಿಕ್ಕಿದ ಶತ್ರುವಿನ ಮೇಲೆ ಮಹಾತ್ಮರಿಗೆ ದ್ವೇಷವೇ ಇರದು." ಈ ಮಾತನ್ನು ಕೇಳಿ ವಜ್ರಾಂಗನು ವಿನೀತನಾಗಿ ಇಂತು ಹೇಳಿದನು.

೫೩. "ನನಗೆ ಇವನಿಂದ ಆಗಬೇಕಾದುದೇನೂ ಇಲ್ಲ. ನಾನು ತಾಯಿಯ ಅಪ್ಪಣೆಯನ್ನು ನಡೆಸಿದೆನು. ಅಷ್ಟೇ! ನೀನು ಸುರಾಸುರರ ಅಧಿಪತಿ. ನನಗೂ ಪ್ರಪಿತಾಮಹ.

೫೪. ದೇವಾ, ನಿನ್ನ ಮಾತನ್ನು ನಡೆಸುವೆನು. ಇಗೋ! ಇಂದ್ರನನ್ನು ಬಿಟ್ಟೆನು. ಪ್ರಭೂ, ನನಗೆ ತಪಸ್ಸಿನಲ್ಲಿ ಅಭಿಲಾಷೆ ಹುಟ್ಟಿದೆ. ಎಲೈ ಪೂಜ್ಯನೇ, ನಿನ್ನ ಅನುಗ್ರಹದಿಂದ ಅದು ನಿರ್ವಿಘ್ನವಾಗಿ ನಡೆಯಲಿ" ಎಂದು ಹೇಳಿ ವಜ್ರಾಂಗನು ಸುಮ್ಮನಾದನು.

ತ್ವತ್ಪ್ರಸಾದೇನ ಭಗವನ್ನಿತ್ಯುಕ್ತ್ವಾ ವಿರರಾಮ ಸಃ ।
ತಸ್ಮಿಂಸ್ತೂಷ್ಣೀಂ ಸ್ಥಿತೇ ದೈತ್ಯೇ ಪ್ರೋವಾಚೇದಂ ಪಿತಾಮಹಃ ||೫೫||

|| ಬ್ರಹ್ಮೋವಾಚ ||

ತಪಸ್ತ್ವಂ ಕ್ರೂರಮಾಪನ್ನೋ ಹ್ಯಸ್ಮಚ್ಛಾಸನಸಂಸ್ಥಿತಃ ।
ಅನಯಾ ಚಿತ್ತಶುದ್ಧ್ಯಾ ತೇ ಪರ್ಯಾಪ್ತಂ ಜನ್ಮನಃ ಫಲಂ ||೫೬||

ಇತ್ಯುಕ್ತ್ವಾ ಪದ್ಮಜಃ ಕನ್ಯಾಂ ಸಸರ್ಜಾಯತಲೋಚನಾಂ ।
ತಾಮಸ್ಮೈ ಪ್ರದದೌ ದೇವಃ ಪತ್ನ್ಯರ್ಥಂ ಪದ್ಮಸಂಭವಃ ||೫೭||

ವರಾಂಗೀತಿ ಚ ನಾಮಾಸ್ಯಾಃ ಕೃತ್ವಾ ಯಾತಃ ಪಿತಾಮಹಃ ।
ವಜ್ರಾಂಗೋಽಪಿ ತಯಾ ಸಾರ್ಧಂ ಜಗಾಮ ತಪಸೇ ವನಂ ||೫೮||

ಊರ್ಧ್ವಬಾಹುಸ್ಸ ದೈತ್ಯೇಂದ್ರೋಽಚರದಬ್ದಸಹಸ್ರಕಂ ।
ಕಾಲಂ ಕಮಲಪತ್ರಾಕ್ಷಃ ಶುದ್ಧಬುದ್ಧಿರ್ಮಹಾತಪಾಃ ||೫೯||

---

೫೫. ಆ ದೈತ್ಯನು ಮೌನವಾಗಿ ನಿಂತಿರಲು ಬ್ರಹ್ಮನು ಇಂತೆಂದನು.

೫೬. ಬ್ರಹ್ಮನು ಹೇಳಿದನು.—ನೀನು ನನ್ನ ಅಪ್ಪಣೆಯನ್ನು ನೆರವೇರಿಸಿ ಕ್ರೂರವಾದ ತಪಸ್ಸಿನಲ್ಲಿ ತೊಡಗಿದೆ. ಈ ಚಿತ್ತಶುದ್ಧಿಯಿಂದ ನಿನ್ನ ಜನ್ಮವು ಸಫಲವಾಯಿತು.

೫೭. ಬ್ರಹ್ಮನು ಹೀಗೆ ಹೇಳಿ, ಕಣ್ಣುಗಳು ವಿಸ್ತಾರವಾಗಿ ಸೌಂದರ್ಯದಿಂದ ಬೆಳಗುವ ಕನ್ಯೆಯೊಬ್ಬಳನ್ನು ಸೃಷ್ಟಿಸಿ, ಅವಳನ್ನು ಆ ವಜ್ರಾಂಗನಿಗೆ ಪತ್ನಿಯನ್ನಾಗಿ ಮಾಡಿದನು.

೫೮. ಅವಳಿಗೆ ವರಾಂಗಿ ಎಂದು ಹೆಸರಿಟ್ಟು ಬ್ರಹ್ಮನು ಹೊರಟು ಹೋದನು. ವಜ್ರಾಂಗನೂ ಸಹ ಅವಳೊಡಗೂಡಿ ತಪಸ್ಸಿಗಾಗಿ ಕಾಡಿಗೆ ತೆರಳಿದನು.

೫೯. ಕಣ್ಣುಗಳು ತಾವರೆಯೆಸಳಿನಂತೆ ಶೋಭಿಸುವ ಆ ದೈತ್ಯರಾಜನು ಸಾವಿರ ವರ್ಷಗಳ ಕಾಲ ತೋಳುಗಳನ್ನು ಮೇಲೆತ್ತಿಕೊಂಡು, ಪರಿಶುದ್ಧವಾದ ಬುದ್ಧಿಯಿಂದ ಘೋರವಾದ ತಪಸ್ಸನ್ನು ಮಾಡಿದನು.

ತಾವಚ್ಚಾ ವಾಙ್ಮುಖಃ ಕಾಲಂ ತಾವತ್ಪಂಚಾಗ್ನಿಮಧ್ಯಗಃ ।
ನಿರಾಹಾರೋ ಘೋರತಪಾಸ್ತಪೋರಾಶಿರಜಾಯತ ॥೬೦॥

ತತಃ ಸೋಽಂತರ್ಜಲೇ ಚಕ್ರೇ ಕಾಲಂ ವರ್ಷಸಹಸ್ರಕಂ ।
ಜಲಾಂತರಂ ಪ್ರವಿಷ್ಟಸ್ಯ ತಸ್ಯ ಪತ್ನೀ ಮಹಾವ್ರತಾ ॥೬೧॥

ತಸ್ಯೈವ ತೀರೇ ಸರಸಸ್ತತ್ರೈತ್ಯಾ ಮೌನಮಾಸ್ಥಿತಾ ।
ನಿರಾಹಾರಾ ತಪೋ ಘೋರಂ ಪ್ರವಿವೇಶ ಮಹಾದ್ಯುತಿಃ ॥೬೨॥

ತಸ್ಯಾಂ ತಪಸಿ ವರ್ತಂತ್ಯಾಮಿಂದ್ರಶ್ಚಕ್ರೇ ವಿಭೀಷಿಕಾಂ ।
ಭೂತ್ವಾ ತು ಮರ್ಕಟಸ್ತತ್ರ ತದಾಶ್ರಮುಪದಂ ಮಹಾ: ॥೬೩॥

ಚಕ್ರೇ ವಿಲೋಲಂ ನಿಶ್ಶೇಷಂ ತುಂಬೀಘಟಕರಂಡಕಂ ।
ತತಸ್ತು ಮೇಷರೂಪೇಣ ಕಂಪಂ ತಸ್ಯಾಕರೋನ್ಮಹಾ: ॥೬೪॥

ತತೋ ಭುಜಂಗರೂಪೇಣ ಬದ್ಧ್ವಾ ಚ ಚರಣದ್ವಯಂ ।
ಅಪಾಕರ್ಷತ್ತತೋ ದೂರಂ ಭ್ರಮಂಸ್ತಸ್ಯಾ ಮಹೀಮಿಮಾಂ ॥೬೫॥

---

೬೦. ಅಷ್ಟು ಕಾಲವೂ ಆತನು ಮುಖತಗ್ಗಿಸಿಕೊಂಡು, ದಕ್ಷಿಣ, ಗಾರ್ಹಪತ್ಯ, ಆಹವನೀಯ ಸಭ್ಯ ಮತ್ತು ಆವಸಥ್ಯಗಳೆಂಬ ಪಂಚಾಗ್ನಿಗಳ ನಡುವೆ ನಿರಾಹಾರನಾಗಿ ಘೋರವಾದ ತಪಸ್ಸನ್ನು ಮಾಡುತ್ತಿದ್ದನು. ಹೀಗೆ ಅವನು ತಪಿಸ್ಸಿನ ರಾಶಿಯೆನಿಸಿದನು.

೬೧-೬೨. ಬಳಿಕ ಅವನು ನೀರಿನೊಳಗಡೆ ಸಾವಿರವರ್ಷಗಳ ಕಾಲ ತಪಸ್ಸನ್ನು ಮಾಡಿದನು. ಮಹಾಪತಿವ್ರತೆಯಾದ ಆತನ ಪತ್ನಿಯು ಸರೋವರದ ತೀರದಲ್ಲಿ ಮೌನದಿಂದ ನಿರಾಹಾರಳಾಗಿ ಘೋರವಾದ ತಪಸ್ಸಿನಲ್ಲಿದ್ದಳು. ಅವಳ ತೇಜಸ್ಸು ಅತಿಶಯವಾಗಿತ್ತು.

೬೩. ಆಕೆಯು ತಪಸ್ಸಿನಲ್ಲಿ ತೊಡಗಿರಲು ಇಂದ್ರನು ಬಂದು ಹೆದರಿಸಿದನು. ದೊಡ್ಡ ಕಪಿಯ ರೂಪವನ್ನು ತಾಳಿ ಆಶ್ರಮದಲ್ಲಿದ್ದ ಸೋರೆಬುರುಡೆ, ಗಡಿಗೆ, ಭರಣಿ ಇವೆಲ್ಲವನ್ನೂ ದಿಕ್ಕು ದಿಕ್ಕಿಗೆ ಎರಚಾಡಿದನು.

೬೪-೬೫. ಬಳಿಕ ಆಡಿನ ರೂಪದಿಂದ ಬಂದು ಅವಳಿಗೆ ನಡುಕವನ್ನು ಹುಟ್ಟಿಸಿದನು. ತರುವಾಯ ಹಾವಿನ ಆಕಾರವನ್ನು ತಾಳಿ, ಎರಡು ಕಾಲುಗಳನ್ನೂ ಬಿಗಿದು, ನೆಲದಮೇಲೆ ಅವಳನ್ನು ಬಹುದೂರ ಎಳೆದುಕೊಂಡು ಹೋದನು.

ತಪೋಬಲಾಢ್ಯಾ ಸಾ ತಸ್ಯ ನ ವಧ್ಯತ್ವಂ ಜಗಾಮ ಹ ।
ತತೋ ಗೋಮಾಯುರೂಪೇಣ ತಸ್ಯಾದೂಷಯದಾಶ್ರಮಂ ॥೧೬॥

ತತಸ್ತು ಮೇಘರೂಪೇಣ ತಸ್ಯಾಃ ಕ್ಲೇದಯದಾಶ್ರಮಂ ।
ಭೀಷಿಕಾಭಿರನೇಕಾಭಿಸ್ತಾಂ ಕ್ಲಿಶ್ಯ ಪಾಕಶಾಸನಃ ॥೧೭॥

ವಿರರಾಮ ಯದಾ ನೈವಂ ವಜ್ರಾಂಗಮಹಿಷೀ ತದಾ ।
ಶೈಲಸ್ಯ ದುಷ್ಟತಾಂ ಮತ್ವಾ ಶಾಪಂ ದಾತುಂ ವ್ಯವಸ್ಥಿತಾ ॥೧೮॥

ಸ ಶಾಪಾಭಿಮುಖಾಂ ದೃಷ್ಟ್ವಾ ಶೈಲಃ ಪುರುಷವಿಗ್ರಹಃ ।
ಉವಾಚ ತಾಂ ವರಾರೋಹಾಂ ವರಾಂಗೀಂ ಭೀರುಚೇತನಃ ॥೧೯॥

ನಾಹಂ ವರಾಂಗನೇ ದುಷ್ಟಃ ಸೇವ್ಯೋಽಹಂ ಸರ್ವದೇಹಿನಾಂ ।
ವಿಭ್ರಮಂ ತು ಕರೋತ್ಯೇಷ ರುಷಿತಃ ಪಾಕಶಾಸನಃ ॥೨೦॥

---

೧೬. ತಪೋಬಲದಿಂದ ತುಂಬಿದ್ದ ಕಾರಣ ಆಕೆಯು ಮೃತಳಾಗಲಿಲ್ಲ. ಅನಂತರ ಇಂದ್ರನು ನರಿಯ ವೇಷದಿಂದ ಬಂದು ಅವಳ ಆಶ್ರಮವನ್ನು ಅಪವಿತ್ರ ಮಾಡಿದನು.

೧೭-೧೮. ತರುವಾಯ ಮೋಡದ ಆಕಾರವನ್ನೆತ್ತಿ ಅವಳ ಆಶ್ರಮವನ್ನು ತೋಯಿಸಿದನು. ಹೀಗೆ ಹಲವು ಬಗೆಯಾಗಿ ಬೆದರಿಸಿ ಅವಳಿಗೆ ತೊಂದರೆ ಕೊಟ್ಟ ಮೇಲೂ ಇಂದ್ರನು ಸುಮ್ಮನಾಗಲಿಲ್ಲ. ಆಗ ವರಾಂಗಿಯು ವಾಸ್ತವಾಂಶವನ್ನು ತಿಳಿಯದೆ, ಇಷ್ಟಕ್ಕೂ ಅಲ್ಲಿದ್ದ ದುಷ್ಟ ಪರ್ವತವೇ ಕಾರಣವೆಂದು ಊಹಿಸಿ ಶಾಪ ಕೊಡಲು ಸಿದ್ಧಳಾದಳು.

೧೯. ಸುಂದರಿಯಾದ ವರಾಂಗಿಯು ಶಾಪಕೊಡುವುದಕ್ಕೆ ತೊಡಗಿದುದನ್ನು ನೋಡಿ, ಬೆಟ್ಟವು ಹೆದರಿ ಪುರುಷರೂಪದಿಂದ ಅವಳಿಗೆ ಹೀಗೆಂದಿತು.

೨೦. "ಎಲೌ ವರಾಂಗೀ, ನಾನು ದುಷ್ಟನಲ್ಲ. ಎಲ್ಲ ಪ್ರಾಣಿಗಳಿಗೂ ನಾನು ಆಶ್ರಯವನ್ನು ಕೊಡುವವನು. ನಿನ್ನ ಮೇಲೆ ಕೋಪಿಸಿಕೊಂಡು ಈ ಇಂದ್ರನು ಬಗೆಬಗೆಯ ರೂಪವನ್ನು ತಾಳುತ್ತ ನಿನಗೆ ತೊಂದರೆ ಕೊಡುತ್ತಿರುವನು."

ಏತಸ್ಮಿನ್ನಂತರೇ ಜಾತಃ ಕಾಲೋ ವರ್ಷಸಹಸ್ರಕಃ ।
ತಸ್ಮಿನ್ ಗತೇ ತು ಭಗವಾನ್ ಕಾಲೇ ಕಮಲಸಂಭವಃ ।
ತುಷ್ಟಃ ಪ್ರೋವಾಚ ವಜ್ರಾಂಗಂ ತಮಾಗಮ್ಯ ಜಲಾಶ್ರಯಂ ॥೭೧॥

॥ ಬ್ರಹ್ಮೋವಾಚ ॥

ದದಾಮಿ ಸರ್ವಕಾಮಾಂಸ್ತೇ ಉತ್ತಿಷ್ಠ ದಿತಿನಂದನ ।
ಏವಮುಕ್ತಸ್ತದೋತ್ಥಾಯ ದೈತ್ಯೇಂದ್ರಸ್ತಪಸಾಂ ನಿಧಿಃ ।
ಉವಾಚ ಪ್ರಾಂಜಲಿರ್ವಾಕ್ಯಂ ಸರ್ವಲೋಕಪಿತಾಮಹಂ ॥೭೨॥

ಆಸುರೋ ಮಾಸ್ತು ಮೇ ಭಾವಃ ಸಂತು ಲೋಕಾ ಮಮಾಕ್ಷಯಾಃ ।
ತಪಸ್ಯೇವ ರತಿರ್ಮೇಽಸ್ತು ಶರೀರಸ್ಯಾಸ್ತು ವರ್ತನಂ ॥೭೩॥

ಏವಮಸ್ತ್ವಿತಿ ತಂ ದೇವೋ ಜಗಾಮ ಸ್ವಕಮಾಲಯಂ ।
ವಜ್ರಾಂಗೋಽಪಿ ಸಮಾಪ್ತೇ ತು ತಪಸಿ ಸ್ಥಿರಸಂಯಮಃ ॥೭೪॥

---

೭೧. ಈ ವೇಳೆಗೆ ಸಾವಿರವರ್ಷಗಳ ಕಾಲವಾಯಿತು. ಆಗ ಪೂಜ್ಯನಾದ ಬ್ರಹ್ಮನು ಜಲದಲ್ಲಿದ್ದ ವಜ್ರಾಂಗನ ಬಳಿಗೆ ಬಂದು ಸಂತೋಷದಿಂದ ಹೇಳಿದನು.

೭೨. ಬ್ರಹ್ಮನು ಹೇಳಿದನು.—" ಓ ದಿತಿಪುತ್ರಾ, ನಿನ್ನ ಕೋರಿಕೆಗಳನ್ನೆಲ್ಲ ಕೊಡುವೆನು. ಏಳು" ಎನ್ನಲು ತಪೋನಿಧಿಯಾದ ದೈತ್ಯರಾಜನು ಎದ್ದು ಸರ್ವ ಲೋಕಗಳಿಗೂ ಪಿತಾಮಹನಾದ ಬ್ರಹ್ಮನಿಗೆ ಕೈಮುಗಿದು ಹೇಳಿದನು.

೭೩. ವಜ್ರಾಂಗನು ಹೇಳಿದನು.—ನನಗೆ ತಮೋಗುಣಮಯವಾದ ಆಸುರಭಾವವು ಬೇಡ. ಪುಣ್ಯಲೋಕಗಳು ಪ್ರಾಪ್ತವಾಗಲಿ. ತಪಸ್ಸಿನಲ್ಲೇ ಆಸಕ್ತಿಯಿರಲಿ. ಹೀಗೆಯೇ ಈ ದೇಹಯಾತ್ರೆಯು ಸಾಗಲಿ.

೭೪-೭೫. ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ತನ್ನ ನಿವಾಸಕ್ಕೆ ತೆರಳಿದನು. ತಪಸ್ಸು ಮುಗಿಯಲು ಸ್ಥಿರಚಿತ್ತನಾದ ವಜ್ರಾಂಗನಿಗೆ ಆಹಾರದ

**ಆಹಾರಮಿಚ್ಛನ್ ಭಾರ್ಯಾಂ ಸ್ವಾಂ ನ ದದರ್ಶಾಶ್ರಮೇ ಸ್ವಕೇ ।**
**ಕ್ಷುಧಾವಿಷ್ಟಃ ಸ ಶೈಲಸ್ಯ ಗಹನಂ ಪ್ರವಿವೇಶ ಹ ॥೭೫॥**

**ರುದತೀಂ ತಾಂ ಪ್ರಿಯಾಂ ದೀನಾಂ ತರುಪ್ರಚ್ಛಾದಿತಾನನಾಂ ।**
**ತಾಂ ವಿಲೋಕ್ಯ ಸ ದೈತ್ಯೇಂದ್ರಃ ಪ್ರೋವಾಚ ಪರಿಸಾಂತ್ವಯನ್ ॥೭೬॥**

**॥ ವಜ್ರಾಂಗ ಉವಾಚ ॥**

**ಕೇನ ತೇಽಪಕೃತಂ ಭೀರು ಯಮಲೋಕಂ ಯಿಯಾಸುನಾ ।**
**ಕಂ ವಾ ಕಾಮಂ ಪ್ರಯಚ್ಛಾಮಿ ಶೀಘ್ರಂ ಮೇ ಬ್ರೂಹಿ ಭಾಮಿನಿ ॥೭೭॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಷಟ್ಚತ್ವಾರಿಂಶದಧಿಕ ಶತತಮೋಽಧ್ಯಾಯಃ**

---

ಅಪೇಕ್ಷೆಯಾಯಿತು. ಆಶ್ರಮದಲ್ಲಿ ಅವನ ಪತ್ನಿ ಕಾಣಿಸಲಿಲ್ಲ. ಹಸಿವಿನಿಂದ ಬಳಲಿ ಗೆಡ್ಡೆಗೆಣಸುಗಳನ್ನು ತರುವುದಕ್ಕಾಗಿ ಅವನು ಬೆಟ್ಟದ ಕಾಡನ್ನು ಒಳಹೊಕ್ಕನು. ಅಲ್ಲಿ ಆತನು ತನ್ನ ಪತ್ನಿಯನ್ನು ನೋಡಿದನು.

೭೬. ಅವನ ಪ್ರಿಯೆಯು ಮರದ ಹಿಂದೆ ಮುಖವನ್ನಿಟ್ಟುಕೊಂಡು ದೈನ್ಯದಿಂದ ಅಳುತ್ತಿದ್ದಳು. ದೈತ್ಯರಾಜನು ಅವಳನ್ನು ನೋಡಿ ಸಂತೈಸುತ್ತ ಇಂತೆಂದನು.

೭೭. ವಜ್ರಾಂಗನು ಹೇಳಿದನು.—ಎಲೌ ನಾರೀಮಣಿಯೆ, ನಿನಗೆ ಅಪಕಾರ ಮಾಡಿದವನಾರು ? ಅವನಿಗೆ ಯಮಲೋಕಕ್ಕೆ ಹೋಗಬೇಕೆಂಬ ಆಸೆಯಿರುವಂತಿದೆ. ನಿನಗೆ ಯಾವ ಇಷ್ಟಾರ್ಥವನ್ನು ಸಲ್ಲಿಸಲಿ ? ಓ ಭಾಮಿನೀ, ಬೇಗನೆ ಹೇಳು.

## ಅಧ್ಯಾಯದ ಸಾರಾಂಶ

ತಾರಕಾಸುರನ ಸಂಹಾರದ ವೃತ್ತಾಂತವು ಈ ಅಧ್ಯಾಯದಲ್ಲಿ ಪ್ರಾರಂಭವಾಗುತ್ತದೆ.

ದಿತಿಯ ಮಕ್ಕಳೆಲ್ಲರನ್ನೂ ಇಂದ್ರನು ಕೊಂದನು. ಅವಳು ದುಃಖಿತಳಾಗಿ, ತನ್ನ ಶತ್ರುವನ್ನು ಕೊಲ್ಲಬಲ್ಲ ಮಗನನ್ನು ಪಡೆಯಬೇಕೆಂದು ಕಶ್ಯಪನನ್ನು ಬೇಡಿ ಅವನ ಅನುಜ್ಞೆಯಂತೆ ತಪಸ್ಸುಮಾಡುತ್ತಿದ್ದಳು. ಇಂದ್ರನು ಅವಳ ಸೇವೆಮಾಡುತ್ತ ಸಮಯನೋಡಿ ಅವಳ ಗರ್ಭವನ್ನು ತುಂಡುತುಂಡಾಗಿ ಕತ್ತರಿಸಿದನು. ಅವಳು

ಮರಳಿ ಮತ್ತೊಬ್ಬ ಮಗನಾದರೂ ಆಗಲೆಂದು ಘೋರವಾದ ತಪಸ್ಸನ್ನೆಸಗಿದಳು. ಬ್ರಹ್ಮನು ಮೆಚ್ಚಿ ವಜ್ರಾಂಗನೆಂಬ ಮಹಾಬಲಿಷ್ಠನಾದ ಪುತ್ರನನ್ನು ಕರುಣಿಸಿದನು.

ಅವನು ಹುಟ್ಟುವಾಗಲೇ ಸಕಲ ಶಸ್ತ್ರಾಸ್ತ್ರಪಂಡಿತನಾಗಿದ್ದನು. ಇಂದ್ರನನ್ನು ವಧಿಸುವಂತೆ ತಾಯಿ ಹೇಳಲು ವಜ್ರಾಂಗನು ಅವಳ ಅಪ್ಪಣೆಯಂತೆ ಅವನನ್ನು ಸೋಲಿಸಿ ಬಂಧಿಸಿ ತಂದನು. ಆದರೆ ಬ್ರಹ್ಮದೇವನ ಬುದ್ಧಿವಾದವನ್ನು ಮನ್ನಿಸಿ ಅವನನ್ನು ಬಿಟ್ಟುಬಿಟ್ಟನು. ಬ್ರಹ್ಮನು ಮೆಚ್ಚಿ ವರಾಂಗಿಯೆಂಬ ಸುಂದರಿಯಾದ ಕನ್ಯೆಯನ್ನು ಸೃಷ್ಟಿಸಿ ಅವಳನ್ನು ಅವನಿಗೆ ಪತ್ನಿಯನ್ನಾಗಿ ಮಾಡಿದನು.

ವ್ರಜಾಂಗನಿಗೆ ತಪಸ್ಸಿನಲ್ಲಿ ಅಭಿಲಾಷೆ ಹುಟ್ಟಿತು. ಪಂಚಾಗ್ನಿಗಳ ಮಧ್ಯದಲ್ಲಿ ಸಾವಿರ ವರ್ಷವೂ, ತರುವಾಯ ಅಂತರ್ಜಲದಲ್ಲಿ ಸಾವಿರ ವರ್ಷವೂ ತಪೋನಿಷ್ಠನಾಗಿದ್ದನು. ಪತಿವ್ರತಾಶಿರೋಮಣಿಯಾದ ವರಾಂಗಿಯೂ ಸಹ ಸರೋವರದ ತೀರದಲ್ಲಿ ತಪೋನಿರತಳಾಗಿದ್ದಳು. ಇಂದ್ರನು ಮಾಯೆಯಿಂದ ಬಂದು ಅವಳನ್ನು ಬಗೆಬಗೆಯಾಗಿ ಹಿಂಸಿಸಿ ದೂರವಾಗಿ ಕಾಡಿನೊಳಕ್ಕೆ ಎಳೆದುಕೊಂಡು ಹೋಗಿ ಬಿಟ್ಟನು.

ಇತ್ತ ತಪಸ್ಸು ಮುಗಿಯಲು, ಬ್ರಹ್ಮದೇವನ ಅನುಗ್ರಹವನ್ನು ಪಡೆದು ವಜ್ರಾಂಗನು ಆಹಾರಕ್ಕಾಗಿ ಆಶ್ರಮಕ್ಕೆ ಬಂದನು. ಅಲ್ಲಿ ಅವನ ಪತ್ನಿಯಿರಲಿಲ್ಲ. ಗೆಡ್ಡೆಗೆಣಸುಗಳನ್ನಾದರೂ ತರೋಣವೆಂದು ಕಾಡಿಗೆ ಹೋದನು. ಅಲ್ಲಿ ಅವಳು ದೀನಳಾಗಿ ಅಳುತ್ತಿದ್ದಳು. ಅವಳನ್ನು ಕಂಡು ಸಂತೈಸಿ ದುಃಖಕ್ಕೆ ಕಾರಣವನ್ನು ಕೇಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನೂರನಲವತ್ತಾರನೆಯ
ಅಧ್ಯಾಯವು ಮುಗಿದುದು.

## ಅಥ ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ

|| ವರಾಂಗ್ಯುವಾಚ ||

ತ್ರಾಸಿತಾಸ್ಮ್ಯಪವಿದ್ಧಾಸ್ಮಿ ತಾಡಿತಾ ಪೀಡಿತಾಪಿ ಚ ।
ರೌದ್ರೇಣ ದೇವರಾಜೇನ ನಷ್ಟನಾಥೇವ ಭೂರಿಶಃ || ೧ ||

ದುಃಖಪಾರಮಪಶ್ಯಂತೀ ಪ್ರಾಣಾಂಸ್ತ್ಯಕ್ತುಂ ವ್ಯವಸ್ಥಿತಾ ।
ಪುತ್ರಂ ಮೇ ತಾರಕಂ ದೇಹಿ ದುಃಖಶೋಕಮಹಾರ್ಣವಾತ್ || ೨ ||

ಏವಮುಕ್ತಃ ಸ ದೈತ್ಯೇಂದ್ರಃ ಕೋಪವ್ಯಾಕುಲಲೋಚನಃ ।
ಶಕ್ತೋಽಪಿ ದೇವರಾಜಸ್ಯ ಪ್ರತಿಕರ್ತುಂ ಮಹಾಸುರಃ || ೩ ||

ತಪಃ ಕರ್ತುಂ ಪುನರ್ದೈತ್ಯೋ ವ್ಯವಸ್ಯತ ಮಹಾಬಲಃ ।
ಜ್ಞಾತ್ವಾ ತು ತಸ್ಯ ಸಂಕಲ್ಪಂ ಬ್ರಹ್ಮಾ ಕ್ರೂರತರಂ ಪುನಃ || ೪ ||

ಆಜಗಾಮ ತದಾ ತತ್ರ ಯತ್ರಾಸೌ ದಿತಿನಂದನಃ ।
ಉವಾಚ ತಸ್ಮೈ ಭಗವಾನ್ ಪ್ರಭುರ್ಮಧುರಯಾ ಗಿರಾ || ೫ ||

---

೧. ವರಾಂಗಿಯು ಹೇಳಿದಳು.—ಕ್ರೂರನಾದ ದೇವೇಂದ್ರನು ದಿಕ್ಕಿಲ್ಲದವಳಂತೆ ನನ್ನನ್ನು ಕಡೆಗಣಿಸಿ ಹಲವು ಸಾರಿ ಹೆದರಿಸಿದನು; ತಿರಸ್ಕರಿಸಿದನು; ಹೊಡೆದನು; ಎಷ್ಟೋ ಹಿಂಸಿಸಿದನು.

೨. ಈ ದುಃಖವನ್ನು ದಾಟುವುದು ಹೇಗೆಂಬುದೇ ನನಗೆ ಗೊತ್ತಾಗಲಿಲ್ಲ. ಆದುದರಿಂದ ಪ್ರಾಣಬಿಡಬೇಕೆಂದು ನಿಶ್ಚಯಿಸಿದ್ದೇನೆ. ಈ ದುಃಖಸಾಗರದಿಂದ ನನ್ನನ್ನು ಪಾರುಮಾಡಬಲ್ಲ ಮಗನನ್ನು ಕರುಣಿಸು.

೩-೫. ವರಾಂಗಿಯು ಇಂತೆನಲು, ದೈತ್ಯೇಂದ್ರನ ಕಣ್ಣುಗಳಲ್ಲಿ ಕೋಪವೂ ವ್ಯಾಕುಲತೆಯೂ ತೋರಿಬಂದುವು. ದೇವೇಂದ್ರನ ಮೇಲೆ ಸೇಡುತೀರಿಸಿಕೊಳ್ಳಲು ಶಕ್ತಿಯಿದ್ದರೂ ಮಹಾಬಲನಾದ ಆತನು ಮತ್ತೆ ತಪಸ್ಸನ್ನು ಮಾಡುವುದಕ್ಕೆ ನಿಶ್ಚಯಿಸಿದನು. ಅವನ ಘೋರಸಂಕಲ್ಪವನ್ನು ತಿಳಿದು, ಬ್ರಹ್ಮನು ಮರಳಿ ಅವನಿದ್ದೆಡೆಗೆ ಬಂದು ಮಧುರ ವಚನದಿಂದ ಹೀಗೆ ಹೇಳಿದನು.

|| ಬ್ರಹ್ಮೋವಾಚ ||

ಕಿಮರ್ಥಂ ಪುತ್ರ ಭೂಯಸ್ತ್ವಂ ನಿಯಮಂ ಕ್ರೂರಮಿಚ್ಛಸಿ |
ಆಹಾರಾಭಿಮುಖೋ ದೈತ್ಯ ತನ್ನೋ ಬ್ರೂಹಿ ಮಹಾವ್ರತ || ೬ ||

ಯಾವದಬ್ದಸಹಸ್ರೇಣ ನಿರಾಹಾರಸ್ಯ ಯತ್ಫಲಂ |
ಕ್ಷಣೇನೈಕೇನ ತಲ್ಲಭ್ಯಂ ತ್ಯಕ್ತ್ವಾಹಾರಮುಪಸ್ಥಿತಂ || ೭ ||

ತ್ಯಾಗೋ ಹ್ಯಪ್ರಾಪ್ತಕಾಮಾನಾಂ ಕಾಮೇಭ್ಯೋ ನ ತಥಾ ಗುರುಃ |
ಯಥಾ ಪ್ರಾಪ್ತಂ ಪರಿತ್ಯಜ್ಯ ಕಾಮಂ ಕಮಲಲೋಚನ || ೮ ||

ಶ್ರುತ್ವೈತದ್ಬ್ರಹ್ಮಣೋ ವಾಕ್ಯಂ ದೈತ್ಯಃ ಪ್ರಾಂಜಲಿರಬ್ರವೀತ್ |
ಚಿಂತಯಂಸ್ತಪಸಾ ಯುಕ್ತೋ ಹೃದಿ ಬ್ರಹ್ಮಮುಖೇರಿತಂ || || ೯ ||

|| ವಜ್ರಾಂಗ ಉವಾಚ ||

ಉತ್ಥಿತೇನ ಮಯಾ ದೃಷ್ಟಾ ಸಮಾಧಾನಾತ್ತ್ವದಾಜ್ಞಯಾ |
ಮಹಿಷೀ ಭೀಷಿತಾ ದೀನಾ ರುದತೀ ಶಾಖಿನಸ್ತಲೇ ||೧೦||

---

೬. ಬ್ರಹ್ಮನು ಹೇಳಿದನು.—ಓ ಪುತ್ರಾ, ದೈತ್ಯಾ, ನೀನು ಆಹಾರವನ್ನು ತೆಗೆದುಕೊಳ್ಳಬೇಕೆಂದಿದ್ದೆ. ಈಗ ಏತಕ್ಕಾಗಿ ಮತ್ತೆ ಘೋರವಾದ ತಪಸ್ಸಿಗೆ ತೊಡಗಲಿಚ್ಛಿಸುವೆ? ಎಲೈ ವ್ರತನಿಷ್ಠನೇ, ಅದರ ಕಾರಣವನ್ನು ತಿಳಿಸು.

೭. ಒಂದು ಸಾವಿರ ವರ್ಷಗಳ ಉಪವಾಸವ್ರತದಿಂದ ಬರುವ ಫಲವು, ಸಿದ್ಧವಾಗಿ ಕೈಸೇರಿರುವ ಆಹಾರವನ್ನು ತ್ಯಾಗಮಾಡುವಾತನಿಗೆ ಒಂದು ಕ್ಷಣಕಾಲದಲ್ಲಿ ಬರುವುದು.

೮. ಸುಖವು ಕೈಗೆ ಸಿಕ್ಕದಿರುವಾಗ ಅದರ ಅಭಿಲಾಷೆಯನ್ನು ತೊರೆಯುವುದೇನೂ ದೊಡ್ಡದಲ್ಲ. ಕಣ್ಣುಗಳು ತಾವರೆಯಂತೆ ಪ್ರಕಾಶಿಸುವ ಎಲೈ ವಜ್ರಾಂಗನೇ, ಹಸ್ತಗತವಾದ ಒಂದು ಇಷ್ಟಾರ್ಥವನ್ನಾದರೂ ಬಿಡುವುದೇ ದೊಡ್ಡದು.

೯. ತಪೋನಿಷ್ಠನಾದ ವಜ್ರಾಂಗನು ಬ್ರಹ್ಮನು ಹೇಳಿದ ಈ ಮಾತನ್ನು ಕೇಳಿ ಅದನ್ನೇ ಮನಸ್ಸಿನಲ್ಲಿ ಚಿಂತಿಸುತ್ತ ಕೈಮುಗಿದುಕೊಂಡು ಹೀಗೆ ಹೇಳಿದನು.

೧೦. ವಜ್ರಾಂಗನು ಹೇಳಿದನು.—ನಿನ್ನ ಅಪ್ಪಣೆಯಂತೆ ಸಮಾಧಾನಗೊಂಡು, ನಾನು ಮೇಲಕ್ಕೆದ್ದು ಬಂದು ನನ್ನ ಹೆಂಡತಿಯನ್ನು ನೋಡಿದೆನು. ಅವಳು ಹೆದರಿ ಕೊಂಡಿದ್ದಳು. ಮರದ ಬಳಿಯಲ್ಲಿ ದೀನಳಾಗಿ ಅಳುತ್ತಿದ್ದಳು.

ಸಾ ಮಯೋಕ್ತಾ ತು ತನ್ವಂಗೀ ದೂಯಮಾನೇನ ಚೇತಸಾ ।
ಕಿಮೇವಂ ವರ್ತಸೇ ಭೀರು ವದ ತ್ವಂ ಕಿಂ ಚಿಕೀರ್ಷಸಿ ॥೧೧॥

ಇತ್ಯುಕ್ತಾ ಸಾ ಮಯಾ ದೇವ ಪ್ರೋವಾಚ ಸ್ಖಲಿತಾಕ್ಷರಂ ।
ವಾಕ್ಯಂ ವಾಚಸ್ಪತೇ ಭೀತಾ ತನ್ವಂಗೀ ಹೇತುಸಂಹಿತಂ ॥೧೨॥

॥ ವರಾಂಗ್ಯುವಾಚ ॥

ತ್ರಾಸಿತಾಸ್ಮ್ಯಪವಿದ್ಧಾಸ್ಮಿ ಕರ್ಷಿತಾ ಪೀಡಿತಾಸ್ಮಿ ಚ ।
ರೌದ್ರೇಣ ದೇವರಾಜೇನ ನಷ್ಟನಾಥೇವ ಭೂರಿಶಃ ॥೧೩॥

ದುಃಖಸ್ಯಾಂತಮಪಶ್ಯಂತೀ ಪ್ರಾಣಾಂಸ್ತ್ಯಕ್ತುಂ ವ್ಯವಸ್ಥಿತಾ ।
ಪುತ್ರಂ ಮೇ ತಾರಕಂ ದೇಹಿ ಹ್ಯಸ್ಮಾದ್ದುಃಖಮಹಾರ್ಣವಾತ್ ॥೧೪॥

ಏವಮುಕ್ತಸ್ತು ಸಂಕ್ಷುಬ್ಧಸ್ತಸ್ಯಾಃ ಪುತ್ರಾರ್ಥಮುದ್ಯತಃ ।
ತಪೋ ಘೋರಂ ಕರಿಷ್ಯಾಮಿ ಜಯಾಯ ತ್ರಿದಿವೌಕಸಾಂ ॥೧೫॥

---

೧೧. ನನ್ನ ಮನಸ್ಸಿನಲ್ಲಿ ಬಹು ಸಂಕಟ ಹುಟ್ಟಿತು. ನಾನು ಆ ಕೋಮಲೆಯನ್ನು ಕೇಳಿದೆನು. "ಎಲೌ ನಾರೀ, ಏತಕ್ಕಾಗಿ ಹೀಗಿರುವೆ? ಏನು ಮಾಡಬೇಕೆಂದಿರುವೆ ಹೇಳು."

೧೨. ಪೂಜ್ಯನಾದ ಎಲೈ ಬ್ರಹ್ಮದೇವನೇ, ನಾನು ಹೀಗೆ ಕೇಳಲು ಆ ಕೋಮಲೆಯು ಹೆದರಿಕೆಯಿಂದ ಮಾತು ಹೊರಡದೆ ತಡವರಿಸುತ್ತ ಸಕಾರಣವಾದ ಈ ವಾಕ್ಯವನ್ನು ಹೇಳಿದಳು.

೧೩. ವರಾಂಗಿಯು ಹೇಳಿದಳು.—ಭಯಂಕರನಾದ ದೇವೇಂದ್ರನು ದಿಕ್ಕಿಲ್ಲದವಳಂತೆ ಭಾವಿಸಿ ನನ್ನನ್ನು ಹಲವುಸಾರಿ ಹೆದರಿಸಿದನು, ಜರೆದನು, ಎಳೆದನು ಮತ್ತು ಹಿಂಸಿಸಿದನು.

೧೪. ಈ ದುಃಖಕ್ಕೆ ಪರಿಹಾರವೇ ನನಗೆ ತೋಚದಾಗಿದೆ. ನಾನು ಪ್ರಾಣಗಳನ್ನು ಬಿಡಲು ಸಿದ್ಧಳಾಗಿದ್ದೇನೆ. ದುಃಖವೆಂಬ ಈ ಮಹಾಸಾಗರದಿಂದ ನನ್ನನ್ನು ಪಾರುಮಾಡಬಲ್ಲ ಪುತ್ರನನ್ನು ಕರುಣಿಸು.

೧೫. ಅವಳು ಹೀಗೆ ಹೇಳಿದುದರಿಂದ ನನಗೆ ಬಹಳ ರೇಗು ಹತ್ತಿದೆ. ಅವಳಿಗೆ ಪುತ್ರಲಾಭವಾಗುವುದಕ್ಕಾಗಿ ಯತ್ನಿಸುತ್ತಿದ್ದೇನೆ. ದೇವತೆಗಳನ್ನು ಗೆಲ್ಲುವುದಕ್ಕೋಸ್ಕರ ಘೋರವಾದ ತಪಸ್ಸನ್ನು ಮಾಡುವೆನು.

ಏತಚ್ಛ್ರುತ್ವಾ ವಚೋ ದೇವಃ ಪದ್ಮಗರ್ಭೋದ್ಭವಸ್ತದಾ ।
ಉವಾಚ ದೈತ್ಯರಾಜಾನಂ ಪ್ರಸನ್ನಶ್ಚತುರಾನನಃ ॥೧೬॥

॥ ಬ್ರಹ್ಮೋವಾಚ ॥

ಅಲಂ ತೇ ತಪಸಾ ವತ್ಸ ಮಾ ಕ್ಲೇಶೇ ದುಸ್ತರೇ ವಿಶ ।
ಪುತ್ರಸ್ತೇ ತಾರಕೋ ನಾಮ ಭವಿಷ್ಯತಿ ಮಹಾಬಲಃ ॥೧೭॥

ದೇವಸೀಮಂತಿನೀನಾಂ ತು ಧಮ್ಮಿಲ್ಲಸ್ಯ ವಿಮೋಕ್ಷಣಂ ।
ಇತ್ಯುಕ್ತೋ ದೈತ್ಯನಾಥಸ್ತು ಪ್ರಣಿಪತ್ಯ ಪಿತಾಮಹಂ ॥೧೮॥

ಆಗತ್ಯಾನಂದಯಾಮಾಸ ಮಹಿಷೀಂ ಹರ್ಷಿತಾನನಃ ।
ತೌ ದಂಪತೀ ಕೃತಾರ್ಥೌ ತು ಜಗ್ಮತುಃ ಸ್ವಾಶ್ರಮಂ ಮುದಾ ॥೧೯॥

ವಜ್ರಾಂಗೇಣಾಹಿತಂ ಗರ್ಭಂ ವರಾಂಗೀ ವರವರ್ಣಿನೀ ।
ಪೂರ್ಣಂ ವರ್ಷಸಹಸ್ರಂ ಚ ದಧಾರೋದರ ಏವ ಹಿ ॥೨೦॥

---

೧೬. ಈ ವಾಕ್ಯವನ್ನು ಕೇಳಿ ಪದ್ಮಸಂಭವನಾದ ಬ್ರಹ್ಮದೇವನು ಪ್ರಸನ್ನನಾಗಿ ದೈತ್ಯರಾಜನಾದ ವಜ್ರಾಂಗನಿಗಿಂತೆಂದನು.

೧೭. ಬ್ರಹ್ಮನು ಹೇಳಿದನು.—ಮಗೂ, ತಪಸ್ಸು ಸಾಕು. ದುಸ್ಸಹವಾದ ಕ್ಲೇಶಕ್ಕೆ ಕೈಹಾಕಬೇಡ. ನಿನಗೆ ಮಹಾಬಲಿಷ್ಠನಾದ ತಾರಕನೆಂಬ ಮಗನು ಹುಟ್ಟುವನು. ಆತನು ದೇವತೆಗಳನ್ನು ಸಂಹರಿಸಿ, ಅವರ ಪತ್ನಿಯರಿಗೆ ವೈಧವ್ಯವನ್ನು ತಂದು ಅವರ ಕೇಶಪಾಶಗಳನ್ನು ಕೆದರಿಸುವನು.

೧೮. ಬ್ರಹ್ಮನು ಹೀಗೆ ಹೇಳಲು, ದೈತ್ಯರಾಜನಾದ ವಜ್ರಾಂಗನು ಅವನಿಗೆ ನಮಸ್ಕಾರಮಾಡಿ, ಮುಖದಲ್ಲಿ ಹರ್ಷವುಕ್ಕುತ್ತಿರಲು ತನ್ನ ಪತ್ನಿಯನ್ನು ಸಂತೋಷಪಡಿಸಿದನು. ದಂಪತಿಗಳಿಬ್ಬರೂ ಕೃತಾರ್ಥರಾಗಿ ಆನಂದದಿಂದ ತಮ್ಮ ಆಶ್ರಮಕ್ಕೆ ಹೋದರು.

೨೦. ಸುಂದರಿಯಾದ ವರಾಂಗಿಯು ವಜ್ರಾಂಗನಿಂದ ಗರ್ಭವನ್ನು ತಾಳಿ ಪೂರ್ಣವಾಗಿ ಒಂದು ಸಾವಿರ ವರ್ಷಗಳ ಕಾಲ ಅದನ್ನು ತನ್ನ ಉದರದಲ್ಲಿಯೇ ಧರಿಸಿದ್ದಳು.

ತತೋ ವರ್ಷಸಹಸ್ರಾಂತೇ ವರಾಂಗೀ ಸುಷುವೇ ಸುತಂ ।
ಜಾಯಮಾನೇ ತು ದೈತ್ಯೇಂದ್ರೇ ತಸ್ಮಿಂಲ್ಲೋಕಭಯಂಕರೇ ॥೨೧॥

ಚಚಾಲ ಸಕಲಾ ಪೃಥ್ವೀ ಸಮುದ್ರಾಶ್ಚ ಚಕಂಪಿರೇ ।
ಚೇಲುರ್ಮಹೀಧರಾಃ ಸರ್ವೇ ವವುರ್ವಾತಾಶ್ಚ ಭೀಷಣಾಃ ॥೨೨॥

ಜೇಪುರ್ಜಪ್ಯಂ ಮುನಿವರಾ ನೇದುರ್ವ್ಯಾಲಮೃಗಾ ಅಪಿ ।
ಚಂದ್ರಸೂರ್ಯೌ ಜಹುಃ ಕಾಂತಿಂ ಸನೀಹಾರಾ ದಿಶೋಽಭವನ್ ॥೨೩॥

ಜಾತೇ ಮಹಾಸುರೇ ತಸ್ಮಿನ್ ಸರ್ವೇ ಚಾಪಿ ಮಹಾಸುರಾಃ ।
ಆಜಗ್ಮುರ್ಹರ್ಷಿತಾಸ್ತತ್ರ ತಥಾ ಚಾಸುರಯೋಷಿತಃ ॥೨೪॥

ಜಗುರ್ಹರ್ಷಸಮಾವಿಷ್ಟಾ ನನೃತುಶ್ಚಾಸುರಾಂಗನಾಃ ।
ತತೋ ಮಹೋತ್ಸವೋ ಜಾತೋ ದಾನವಾನಾಂ ದ್ವಿಜೋತ್ತಮಾಃ ॥೨೫॥

---

೨೧-೨೨. ಬಳಿಕ ಸಾವಿರ ವರ್ಷಗಳ ಕೊನೆಯಲ್ಲಿ ವರಾಂಗಿಯು ಪುತ್ರನನ್ನು ಹೆತ್ತಳು. ಲೋಕಭಯಂಕರನಾದ ಆ ದೈತ್ಯೇಂದ್ರನು ಹುಟ್ಟಲು ಭೂಮಿಯೆಲ್ಲ ನಡುಗಿತು; ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ಎಲ್ಲ ಪರ್ವತಗಳೂ ಅಲ್ಲಾಡಿದುವು. ಗಾಳಿ ಭಯಂಕರವಾಗಿ ಬೀಸಿತು.

೨೩. ಮುನಿಶ್ರೇಷ್ಠರು ಲೋಕಕ್ಷೇಮಕ್ಕಾಗಿ ಮಂತ್ರಗಳನ್ನು ಜಪಿಸಿದರು. ಸರ್ಪಗಳೂ, ಮೃಗಗಳೂ ಕೂಗಿಕೊಂಡುವು. ಚಂದ್ರಸೂರ್ಯರು ಕಾಂತಿಹೀನರಾದರು. ದಿಕ್ಕುಗಳಿಗೆಲ್ಲ ಮಂಜು ಕವಿಯಿತು.

೨೪. ಆ ಮಹಾಸುರನು ಜನಿಸಲು, ಅಸುರಶ್ರೇಷ್ಠರೂ ದೈತ್ಯಸ್ತ್ರೀಯರೂ ಅಲ್ಲಿಗೆ ಬಂದರು. ಎಲ್ಲರ ಮುಖಗಳಲ್ಲಿಯೂ ಸಂತೋಷವು ಕುಣಿದಾಡುತ್ತಿದ್ದಿತು.

೨೫. ಅಸುರಾಂಗನೆಯರು ಮಹಾ ಹರ್ಷದಿಂದ ಹಾಡಿದರು; ಕುಣಿದರು. ಓ ದ್ವಿಜೋತ್ತಮರೇ, ದಾನವರಿಗೆ ಅದೊಂದು ಮಹೋತ್ಸವವಾಯಿತು.

ವಿಷಣ್ಣಮನಸೋ ದೇವಾ ಸಮಹೇಂದ್ರಾಸ್ತಥಾಭವನ್ ।
ವರಾಂಗೀ ಸ್ವಸುತಂ ದೃಷ್ಟ್ವಾ ಹರ್ಷೇಣಾಪೂರಿತಾ ತದಾ ॥೨೬॥

ಬಹು ಮೇನೇ ನ ದೇವೇಂದ್ರವಿಜಯಂ ತು ತದೈವ ಸಾ ।
ಜಾತಮಾತ್ರಸ್ತು ದೈತ್ಯೇಂದ್ರಸ್ತಾರಕಶ್ಚಂಡವಿಕ್ರಮಃ ॥೨೭॥

ಅಭಿಷಿಕ್ತೋಽಸುರೈಃ ಸರ್ವೈಃ ಕುಜಂಭಮಹಿಷಾದಿಭಿಃ ।
ಸರ್ವಾಸುರಮಹಾರಾಜ್ಯೇ ಪೃಥಿವೀತುಲನಕ್ಷಮೈಃ ॥೨೮॥

ಸ ತು ಪ್ರಾಪ್ಯ ಮಹಾರಾಜ್ಯಂ ತಾರಕೋ ಮುನಿಸತ್ತಮಾಃ ।
ಉವಾಚ ದಾನವಶ್ರೇಷ್ಠಾನ್ ಯುಕ್ತಿಯುಕ್ತಮಿದಂ ವಚಃ ॥೨೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಸುರೋಪಾಖ್ಯಾನೇ
ತಾರಕೋತ್ಪತ್ತಿರ್ನಾಮ ಸಪ್ತಚತ್ವಾರಿಂಶದಧಿಕಶತತಮೋಽಧ್ಯಾಯಃ

---

೨೬. ಇಂದ್ರಾದಿದೇವತೆಗಳು ವಿಷಣ್ಣಮನಸ್ಕರಾದರು. ವರಾಂಗಿಯು ತನ್ನ ಮಗನನ್ನು ಕಂಡು ಆನಂದದಿಂದ ತುಂಬಿಹೋದಳು.

೨೭. "ದೇವೇಂದ್ರನನ್ನು ಗೆಲ್ಲುವುದೇನೂ ದೊಡ್ಡ ಕೆಲಸವಲ್ಲ" ಎಂದು ಆಕೆ ಆಗಲೇ ತಿಳಿದಳು. ಏಕೆಂದರೆ ಹುಟ್ಟಿದಾಗಲೇ ದೈತ್ಯೇಂದ್ರನಾದ ತಾರಕನು ಅದ್ಭುತ ಪರಾಕ್ರಮಶಾಲಿಯಾಗಿದ್ದನು.

೨೮. ಭೂಮಿಯನ್ನೆತ್ತಿ ತೂಗಾಡಿಸಬಲ್ಲ ಕುಜಂಭ, ಮಹಿಷ ಮೊದಲಾದ ಅಸುರರೆಲ್ಲರೂ ತಾರಕನನ್ನು ಅಸುರಸಾಮ್ರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದರು.

೨೯. ಎಲೈ ಋಷಿಶ್ರೇಷ್ಠರೇ, ತಾರಕಾಸುರನು ಮಹಾರಾಜ್ಯದ ಅಧಿಪತಿಯಾದ ಬಳಿಕ ದಾನವೋತ್ತಮರನ್ನು ಕುರಿತು ಯುಕ್ತಿಸಹಿತವಾದ ಈ ಮಾತನ್ನು ಹೇಳಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ತಾರಕಾಸುರನ ಜನನವು ವರ್ಣಿತವಾಗಿದೆ.

ತನಗಾದ ಪರಿಭವವನ್ನು ವರಾಂಗಿಯು ವಜ್ರಾಂಗನಿಗೆ ವಿವರಿಸಿ, ಇಂದ್ರ ಸಂಹಾರಕನಾದ ಮಗನನ್ನು ತನಗೆ ಕರುಣಿಸಬೇಕೆಂದು ಬೇಡಿದಳು. ವಜ್ರಾಂಗನು ಸಂಕ್ಷುಬ್ಧನಾಗಿ, ಅದಕ್ಕೆ ಒಪ್ಪಿ ಘೋರವಾದ ತಪಸ್ಸಿಗೆ ಕುಳಿತನು. ಚತುರ್ಮುಖ ಬ್ರಹ್ಮನು ಇದನ್ನರಿತು ಅಲ್ಲಿಗೆ ಬಂದು, ವಜ್ರಾಂಗನನ್ನು ಸಂತೈಸಿ, ತಪಸ್ಸನ್ನು ನಿಲ್ಲಿಸುವಂತೆ ಹೇಳಿದನು. ಮತ್ತು ಅವನಿಗೆ ತಾರಕನೆಂಬ ಮಗನು ಹುಟ್ಟುವಂತೆ ವರವನ್ನಿತ್ತನು. ಅದರಂತೆಯೇ ವರಾಂಗಿಯು ಮಹಾಶೂರನಾದ ಮಗನನ್ನು ಹೆತ್ತಳು. ಆಗ ದೇವತೆಗಳಿಗೆ ಭೀತಿಯೂ ದಾನವರಿಗೆ ಹರ್ಷವೂ ಆದುವು. ದೈತ್ಯರೆಲ್ಲರೂ ಸೇರಿ ತಾರಕನನ್ನು ದೈತ್ಯರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಸುರೋಪಾಖ್ಯಾನದಲ್ಲಿ ತಾರಕೋತ್ಪತ್ತಿ ಯೆಂಬ ನೂರ ನಲವತ್ತೇಳನೆಯ ಅಧ್ಯಾಯವು ಮುಗಿದುದು.



## ಅಥಾಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ

॥ ತಾರಕ ಉವಾಚ ॥

ಶೃಣುಧ್ವಮಸುರಾಃ ಸರ್ವೇ ವಾಕ್ಯಂ ಮಮ ಮಹಾಬಲಾಃ ।
ಶ್ರೇಯಸೇ ಕ್ರಿಯತಾಂ ಬುದ್ಧಿಃ ಸರ್ವೈಃ ಕೃತ್ಯಸ್ಯ ಸಂವಿಧೌ ॥ ೧ ॥

ವಂಶಕ್ಷಯಕರಾ ದೇವಾಃ ಸರ್ವೇಷಾಮೇವ ದಾನವಾಃ ।
ಅಸ್ಮಾಕಂ ಜಾತಿಧರ್ಮೋ ಹಿ ವಿರೂಢಂ ವೈರಮಕ್ಷಯಂ ॥ ೨ ॥

ವಯಮದ್ಯ ಗಮಿಷ್ಯಾಮಃ ಸುರಾಣಾಂ ನಿಗ್ರಹಾಯ ತು ।
ಸ್ವಬಾಹುಬಲಮಾಶ್ರಿತ್ಯ ಸರ್ವ ಏವ ನ ಸಂಶಯಃ ॥ ೩ ॥

ಕಿಂತು ನಾತಪಸಾ ಯುಕ್ತೋ ಮನ್ಯೇಽಹಂ ಸುರಸಂಗರಂ ।
ಅಹಮಾದೌ ಕರಿಷ್ಯಾಮಿ ತಪೋ ಘೋರಂ ದಿತೇಃ ಸುತಾಃ ॥ ೪ ॥

---

೧. ತಾರಕಾಸುರನು ಹೇಳಿದನು.—ಬಹು ಬಲಶಾಲಿಗಳಾದ ಎಲೈ ಅಸುರರೇ, ಎಲ್ಲರೂ ನನ್ನ ಮಾತನ್ನು ಕೇಳಿ. ಕರ್ತವ್ಯವನ್ನು ಸರಿಯಾಗಿ ಮಾಡುವುದರಲ್ಲಿಯೂ ನಮ್ಮ ಶ್ರೇಯಸ್ಸಿನಲ್ಲೂ ಬುದ್ಧಿಯನ್ನಿಡಿ.

೨. ಓ ದಾನವರೇ, ದೇವತೆಗಳು ನಮ್ಮೆಲ್ಲರ ವಂಶವನ್ನೂ ನಾಶಮಾಡುವರು. ಅವರಲ್ಲಿ ಅನಂತವಾದ ವೈರವನ್ನು ಬೆಳೆಸುವುದು ನಮ್ಮ ಜಾತಿ ಧರ್ಮವಲ್ಲವೆ !

೩. ನಾವೆಲ್ಲರೂ ಈಗ ನಮ್ಮ ಭುಜಬಲವನ್ನು ಆಶ್ರಯಿಸಿ ದೇವತೆಗಳನ್ನು ನಿಗ್ರಹಿಸುವುದಕ್ಕಾಗಿ ಹೊರಡೋಣ. ಇದರಲ್ಲಿ ಸಂಶಯವೇನೂ ಬೇಡ.

೪. ಆದರೆ ತಪೋಬಲವಿಲ್ಲದೆ ದೇವತೆಗಳೊಡನೆ ಯುದ್ಧಮಾಡುವುದು ಸಾಧ್ಯವಲ್ಲವೆಂದು ತಿಳಿಯುತ್ತೇನೆ. ಆದುದರಿಂದ, ಎಲೈ ದೈತ್ಯರೇ, ನಾನು ಮೊದಲು ಘೋರವಾದ ತಪಸ್ಸನ್ನು ಮಾಡುವೆನು.

ತತಃ ಸುರಾನ್ವಿಜೇಷ್ಯಾಮೋ ಭೋಕ್ಷ್ಯಾಮೋಽಥ ಜಗತ್ತ್ರಯಂ ।
ಸ್ಥಿರೋಪಾಯೋ ಹಿ ಪುರುಷಃ ಸ್ಥಿರಶ್ರೀರಪಿ ಜಾಯತೇ ॥ ೫ ॥

ರಕ್ಷಿತುಂ ನೈವ ಶಕ್ನೋತಿ ಚಪಲಶ್ಚಪಲಾಃ ಶ್ರಿಯಃ ।
ತಚ್ಛ್ರುತ್ವಾ ದಾನವಾಃ ಸರ್ವೇ ವಾಕ್ಯಂ ತಸ್ಯಾಸುರಸ್ಯ ತು ॥ ೬ ॥

ಸಾಧು ಸಾಧ್ವಿತ್ಯವೋಚಂಸ್ತೇ ತತ್ರ ದೈತ್ಯಾಃ ಸವಿಸ್ಮಯಾಃ ॥ ೭ ॥

ಸರ್ವರ್ತುಕುಸುಮಾಕೀರ್ಣಂ ನಾನೌಷಧಿವಿದೀಪಿತಂ ।
ನಾನಾಧಾತುರಸಸ್ರಾವಚಿತ್ರಂ ನಾನಾಗುಹಾಗೃಹಂ ॥ ೮ ॥

ಗಹನೈಃ ಸರ್ವತೋ ಗೂಢಂ ಚಿತ್ರಕಲ್ಪದ್ರುಮಾಶ್ರಯಂ ।
ಅನೇಕರತ್ನಬಹುಲಂ ನೃತ್ಯತ್ಪಕ್ಷಿಕುಲಾಕುಲಂ ॥ ೯ ॥

---

೫. ಬಳಿಕ ದೇವತೆಗಳನ್ನು ಗೆದ್ದು ಮೂರುಲೋಕವನ್ನೂ ಅನುಭವಿಸೋಣ. ಮನುಷ್ಯನು ಸ್ಥಿರವಾದ ಉಪಾಯವನ್ನು ಮಾಡಿದರೆ ಅವನ ಸಂಪತ್ತೂ ಸಹ ಸ್ಥಿರವಾಗಿ ನಿಲ್ಲುತ್ತದೆ. ಚಪಲಸ್ವಭಾವದವನು ಸಂಪತ್ತನ್ನು ರಕ್ಷಿಸಲೇ ಆರನು. ಏಕೆಂದರೆ ಐಶ್ವರ್ಯವೂ ಸಹ ಚಂಚಲವಾದುದು.

೬-೭. ಆ ತಾರಕಾಸುರನ ಮಾತನ್ನು ಕೇಳಿ, ದಾನವರೆಲ್ಲರೂ ಸರಿಸರಿಯೆಂದು ಹೊಗಳಿದರು. ಅವರಿಗೆ ಬಹಳ ಆಶ್ಚರ್ಯವಾಯಿತು. ಅಸುರೇಂದ್ರನು ಪಾರಿಯಾತ್ರ ಪರ್ವತದ ರಮಣೀಯವಾದ ಒಂದು ಗುಹೆಗೆ ಹೋದನು.

೮. ಅದು ಎಲ್ಲ ಋತುಗಳ ಹೂಗಳಿಂದಲೂ ತುಂಬಿತ್ತು. ಬಗೆಬಗೆಯ ಓಷಧಿಗಳಿಂದ ಪ್ರಕಾಶಿಸುತ್ತಿತ್ತು. ನಾನಾವಿಧವಾದ ಧಾತುರಸಗಳ ಪ್ರವಾಹದಿಂದ ಚಿತ್ರವಿಚಿತ್ರವಾಗಿತ್ತು. ಹಲವು ಗುಹಾಗೃಹಗಳಿಂದ ಭರಿತವಾಗಿತ್ತು.

೯. ಎಲ್ಲಕಡೆಯೂ ಕಾಡು ಬೆಳೆದು ಆ ಗುಹೆಯನ್ನು ಮುಚ್ಚಿದ್ದಿತು. ಚಿತ್ರವಿಚಿತ್ರವಾದ ಕಲ್ಪದ್ರುಮಗಳಿಗೆ ಅದು ಆಶ್ರಯವಾಗಿದ್ದಿತು. ಬಗೆಬಗೆಯ ರತ್ನಗಳಿಂದ ಪೂರ್ಣವಾಗಿ ಕುಣಿಯುತ್ತಿರುವ ಹಕ್ಕಿಗಳ ಗುಂಪಿನಿಂದ ವ್ಯಾಪ್ತವಾಗಿತ್ತು.

**ನಾನಾಪ್ರಸ್ರವಣೋಪೇತಂ ನಾನಾವಿಧಜಲಾಶಯಂ ।**
**ಪ್ರಾಪ್ಯ ತತ್ಕಂದರಂ ದೈತ್ಯಶ್ಚಕಾರ ವಿಪುಲಂ ತಪಃ ॥೧೦॥**

**ನಿರಾಹಾರಃ ಪಂಚತಪಾಃ ಪತ್ರಭುಗ್ವಾರಿಭೋಜನಃ ।**
**ಶತಂ ಶತಂ ಸಮಾನಾಂ ತು ತಪಾಂಸ್ಯೇತಾನಿ ಸೋಽಕರೋತ್ ॥೧೧॥**

**ತತಃ ಸ್ವದೇಹಾದುತ್ಕೃತ್ಯ ಕರ್ಷಂ ಕರ್ಷಂ ದಿನೇ ದಿನೇ ।**
**ಮಾಂಸಸ್ಯಾಗ್ನೌ ಜುಹಾವಾಸೌ ತತೋ ನಿರ್ಮಾಂಸತಾಂ ಗತಃ ॥೧೨॥**

**ತಸ್ಮಿನ್ನಿರ್ಮಾಂಸತಾಂ ಯಾತೇ ತಪೋರಾಶಿತ್ವಮಾಗತೇ ।**
**ಜಜ್ವಲುಃ ಸರ್ವಭೂತಾನಿ ತೇಜಸಾ ತಸ್ಯ ಸರ್ವತಃ ॥೧೩॥**

**ಉದ್ವಿಗ್ನಾಶ್ಚ ಸುರಾಃ ಸರ್ವೇ ತಪಸಾ ತಸ್ಯ ಭೀಷಿತಾಃ ।**
**ಏತಸ್ಮಿನ್ನಂತರೇ ಬ್ರಹ್ಮಾ ಪರಮಂ ತೋಷಮಾಗತಃ ॥೧೪॥**

---

೧೦. ನಾನಾವಿಧವಾದ ಗಿರಿಪ್ರವಾಹಗಳಿಂದಲೂ ಜಲಾಶಯಗಳಿಂದಲೂ ಅದು ಕೂಡಿದ್ದಿತು. ಆ ಗವಿಗೆ ಹೋಗಿ ತಾರಕಾಸುರನು ತೀವ್ರವಾದ ತಪಸ್ಸನ್ನು ಮಾಡಿದನು.

೧೧. ನಿರಾಹಾರನಾಗಿ ಪಂಚಾಗ್ನಿಗಳ ಮಧ್ಯದಲ್ಲಿದ್ದುಕೊಂಡು ಎಲೆಯನ್ನು ತಿನ್ನುತ್ತ, ನೀರನ್ನು ಮಾತ್ರ ಕುಡಿಯುತ್ತ ಎಷ್ಟೋ ನೂರು ವರ್ಷಗಳ ಕಾಲ ಈ ಬಗೆಯ ಘೋರವಾದ ತಪಸ್ಸನ್ನು ಅವನು ಆಚರಿಸಿದನು.

೧೨. ಬಳಿಕ ದಿನದಿನವೂ ತನ್ನ ದೇಹದಿಂದ ಮಾಂಸಖಂಡಗಳನ್ನು ಕಿತ್ತು ಕಿತ್ತು ಅಗ್ನಿಯಲ್ಲಿ ಹೋಮಮಾಡಿದನು. ಹೀಗಾಗಿ ಅವನ ದೇಹದಲ್ಲಿ ಮಾಂಸವೇ ಉಳಿಯಲಿಲ್ಲ.

೧೩. ಅವನು ಮಾಂಸರಹಿತನಾಗಿ ತಪೋರಾಶಿಯ ರೂಪವನ್ನು ಹೊಂದಿದನು. ಅವನ ತೇಜಸ್ಸಿನಿಂದ ಸುತ್ತಲೂ ಇದ್ದ ಪ್ರಾಣಿಗಳೆಲ್ಲ ಉರಿದುವು.

೧೪. ದೇವತೆಗಳೆಲ್ಲರೂ ಗಾಬರಿಗೊಂಡರು. ಅವನ ತಪಸ್ಸಿನಿಂದ ಹೆದರಿದರು. ಈ ವೇಳೆಗೆ ಬ್ರಹ್ಮನು ಬಹಳ ಸಂತೋಷಪಟ್ಟು ತಾರಕಾಸುರನಿಗೆ ವರವನ್ನು ಕೊಡುವುದಕ್ಕಾಗಿ ದೇವಲೋಕದಿಂದ ಹೋದನು.

**ತಾರಕಸ್ಯ ವರಂ ದಾತುಂ ಜಗಾಮ ತ್ರಿದಶಾಲಯಾತ್ ।**
**ಪ್ರಾಪ್ಯ ತಂ ಶೈಲರಾಜಾನಂ ಸ ಗಿರೇಃ ಕಂದರಸ್ಥಿತಂ ।**
**ಉವಾಚ ತಾರಕಂ ದೇವೋ ಗಿರಾ ಮಧುರಯಾ ಯುತಃ ॥೧೫॥**

**॥ ಬ್ರಹ್ಮೋವಾಚ ॥**

**ಪುತ್ರಾಲಂ ತಪಸಾ ತೇಽಸ್ತು ನಾಸ್ತ್ಯಸಾಧ್ಯಂ ತವಾಧುನಾ ।**
**ವರಂ ವೃಣೀಷ್ವ ರುಚಿರಂ ಯತ್ತೇ ಮನಸಿ ವರ್ತತೇ ॥೧೬॥**

**ಇತ್ಯುಕ್ತಸ್ತಾರಕೋ ದೈತ್ಯಃ ಪ್ರಣಮ್ಯಾತ್ಮಭುವಂ ವಿಭುಂ ।**
**ಉವಾಚ ಪ್ರಾಂಜಲಿರ್ಭೂತ್ವಾ ಪ್ರಣತಃ ಪೃಥುವಿಕ್ರಮಃ ॥೧೭॥**

**॥ ತಾರಕ ಉವಾಚ ॥**

**ದೇವ ಭೂತಮನೋವಾಸ ವೇತ್ಸಿ ಜಂತುವಿಚೇಷ್ಟಿತಂ ।**
**ಕೃತಪ್ರತಿಕೃತಾಕಾಂಕ್ಷೀ ಜಿಗೀಷುಃ ಪ್ರಾಯಶೋ ಜನಃ ॥೧೮॥**

---

೧೫. ಬ್ರಹ್ಮದೇವನು ಪಾರಿಯಾತ್ರಪರ್ವತಕ್ಕೆ ಹೋಗಿ, ಗುಹೆಯಲ್ಲಿ ವಾಸಮಾಡುತ್ತಿದ್ದ ತಾರಕನಿಗೆ ಮಧುರವಚನದಿಂದ ಹೀಗೆ ಹೇಳಿದನು.

೧೬. ಬ್ರಹ್ಮನು ಹೇಳಿದನು.—ಮಗೂ, ನೀನು ಮಾಡಿದ ತಪಸ್ಸು ಸಾಕು. ನಿನ್ನ ಇಷ್ಟಾರ್ಥವು ಸಿದ್ಧಿಸಲಿ. ನಿನಗೆ ಈಗ ಅಸಾಧ್ಯವಾದುದು ಯಾವುದೂ ಇಲ್ಲ. ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಬೇಡು.

೧೭. ಬ್ರಹ್ಮನು ಇಂತೆನಲು ಅತಿ ಪರಾಕ್ರಮಶಾಲಿಯೂ ದೈತ್ಯಮುಖ್ಯನೂ ಆದ ತಾರಕನು ಕೈಮುಗಿದುಕೊಂಡು ನಮ್ರನಾಗಿ ಉತ್ತರವಿತ್ತನು.

೧೮. ತಾರಕನು ಹೇಳಿದನು.—ದೇವಾ, ನೀನು ಪ್ರಾಣಿಗಳ ಮನಸ್ಸಿನಲ್ಲಿ ನೆಲಸಿರುವೆ. ಅವುಗಳ ವ್ಯಾಪಾರವನ್ನು ಅರಿತಿರುವೆ. ಸಾಮಾನ್ಯವಾಗಿ ಜಯಶೀಲನಾಗಬೇಕೆನ್ನುವವನು ಶತ್ರುವು ಮಾಡಿದ ಅಪಕಾರಕ್ಕೆ ಪ್ರತಿಯನ್ನು ಮಾಡ ಬಯಸುವನು.

ವಯಂ ಚ ಜಾತಿಧರ್ಮೇಣ ಕೃತವೈರಾಃ ಸಹಾಮರೈಃ ।
ತೈಶ್ಚ ನಿಶ್ಶೇಷಿತಾ ದೈತ್ಯಾಃ ಕ್ರೂರೈಃ ಸಂತ್ಯಜ್ಯ ಧರ್ಮತಾಂ ।
ತೇಷಾಮಹಂ ಸಮುದ್ಧರ್ತಾ ಭವೇಯಮಿತಿ ಮೇ ಮತಿಃ ॥೧೯॥

ಅವಧ್ಯಃ ಸರ್ವಭೂತಾನಾಮಸ್ತ್ರಾಣಾಂ ಚ ಮಹೌಜಸಾಂ ।
ಸ್ಯಾಮಹಂ ಪರಮಂ ಹ್ಯೇಷ ವರೋ ಮಮ ಹೃದಿ ಸ್ಥಿತಿಃ ॥೨೦॥

ಏತನ್ಮೇ ದೇಹಿ ದೇವೇಶ ನಾನ್ಯೋ ಮೇ ರೋಚತೇ ವರಃ ।
ತಮುವಾಚ ತತೋ ದೈತ್ಯಂ ವಿರಿಂಚಿಃ ಸುರನಾಯಕಃ ॥೨೧॥

ನ ಯುಜ್ಯಂತೇ ವಿನಾ ಮೃತ್ಯುಂ ದೇಹಿನೋ ದೈತ್ಯಸತ್ತಮ ।
ಯತಸ್ತತೋಽಪಿ ವರಯ ಮೃತ್ಯುಂ ಯಸ್ಮಾನ್ನ ಶಂಕಸೇ ॥೨೨॥

ತತಃ ಸಂಚಿಂತ್ಯ ದೈತ್ಯೇಂದ್ರಃ ಶಿಶೋರ್ವವ್ರೇ ಸಪ್ತವಾಸರಾತ್ ।
ವವ್ರೇ ಮಹಾಸುರೋ ಮೃತ್ಯುಮವಲೇಪನಮೋಹಿತಃ ॥೨೩॥

---

೧೯. ನಾವು ದೇವತೆಗಳೊಡನೆ ದ್ವೇಷಕಟ್ಟಿಕೊಂಡಿದ್ದೇವೆ. ಇದು ನಮ್ಮ ಜಾತಿಧರ್ಮ. ಕ್ರೂರಿಗಳಾದ ಅವರು ಧರ್ಮವನ್ನು ತೊರೆದು ದೈತ್ಯರನ್ನು ನಿರ್ಮೂಲ ಮಾಡಿಬಿಟ್ಟಿದ್ದಾರೆ. ಆದುದರಿಂದ ನಮ್ಮವರನ್ನು ಉದ್ಧರಿಸಬೇಕೆಂಬುದು ನನ್ನ ಬಯಕೆ.

೨೦. ಯಾವ ಪ್ರಾಣಿಯೂ ನನ್ನನ್ನು ಕೊಲ್ಲಕೂಡದು. ಎಂತಹ ತೇಜಸ್ವಿಯಾದ ಅಸ್ತ್ರವೇ ಆಗಿರಲಿ ನನ್ನನ್ನು ಘಾತಿಸಬಾರದು. ಇದೇ ನನ್ನ ಮನಸ್ಸಿನಲ್ಲಿರುವ ಶ್ರೇಷ್ಠವಾದ ವರ.

೨೧. ಓ ದೇವಾಧೀಶ್ವರಾ, ಇದನ್ನು ನನಗೆ ಕರುಣಿಸು. ನನಗೆ ಬೇರೆ ವರವು ಬೇಕಿಲ್ಲ" ಎಂದು ತಾರಕಾಸುರನು ಬಿನ್ನವಿಸಲು ಸುರಕನಾಯಕನಾದ ಬ್ರಹ್ಮನು ಆ ದೈತ್ಯನಿಗೆ ಹೀಗೆ ಹೇಳಿದನು.

೨೨. "ಎಲೈ ದೈತ್ಯೇಂದ್ರಾ, ಪ್ರಾಣಿಗಳಿಗೆ ಸಾವೇ ಕೂಡದೆಂಬುದು ಯುಕ್ತವಲ್ಲ. ಹೆದರಿಕೆಗೆ ಕಾರಣವೇ ಇಲ್ಲದ ಯಾವುದಾದರೊಂದು ವಸ್ತುವಿನಿಂದ ಮೃತ್ಯುವನ್ನು ಇಚ್ಛಿಸು."

೨೩. ಬಳಿಕ ಗರ್ವಾಂಧನಾದ ದೈತ್ಯರಾಜನು ಯೋಚನೆಮಾಡಿ ಏಳು ದಿನಗಳ ಮಗುವಿನಿಂದ ತನಗೆ ಮರಣವನ್ನು ಕೋರಿದನು.

ಬ್ರಹ್ಮಾ ಚಾಸ್ಮೈ ವರಂ ದತ್ವಾ ಯತ್ಕಿಂಚಿನ್ಮನಸೇಪ್ಸಿತಂ ।
ಜಗಾಮ ತ್ರಿದಿವಂ ದೇವೋ ದೈತ್ಯೋऽಪಿ ಸ್ವಕಮಾಲಯಂ ॥೨೪॥

ಉತ್ತೀರ್ಣಂ ತಪಸಸ್ತಂ ತು ದೈತ್ಯಂ ದೈತ್ಯೇಶ್ವರಾಸ್ತದಾ ।
ಪರಿವವ್ರುಃ ಸಹಸ್ರಾಕ್ಷಂ ದಿವಿ ದೇವಗಣಾ ಯಥಾ ॥೨೫॥

ತಸ್ಮಿನ್ಮಹತಿ ರಾಜ್ಯಸ್ಥೇ ತಾರಕೇ ದೈತ್ಯನಂದನೇ ।
ಋತವೋ ಮೂರ್ತಿಮಂತಶ್ಚ ಸ್ವಕಾಲಗುಣಬೃಂಹಿತಾಃ ॥೨೬॥

ಅಭವನ್ ಕಿಂಕಿರಾಸ್ತಸ್ಯ ಲೋಕಪಾಲಾಶ್ಚ ಸರ್ವಶಃ ।
ಕಾಂತಿರ್ದ್ಯುತಿರ್ಧೃತಿರ್ಮೇಧಾ ಶ್ರೀರವೇಕ್ಷ್ಯ ಚ ದಾನವಂ ॥೨೭॥

ಪರಿವವ್ರುರ್ಗುಣಾಕೀರ್ಣಾ ನಿಶ್ಛಿದ್ರಾಃ ಸರ್ವ ಏವ ಹಿ ।
ಕಾಲಾಗುರುವಿಲಿಪ್ತಾಂಗಂ ಮಹಾಮುಕುಟಭೂಷಣಂ ॥೨೮॥

---

೨೪. ಬ್ರಹ್ಮನು ದೈತ್ಯನಿಗೆ ಅವನ ಇಷ್ಟದಂತೆ ವರವನ್ನು ಕೊಟ್ಟು ಸ್ವರ್ಗಕ್ಕೆ ಹೋದನು. ಅತ್ತ ತಾರಕನೂ ಸಹ ತನ್ನ ಮನೆಗೆ ತೆರಳಿದನು.

೨೫. ತಪಸ್ಸಿನಲ್ಲಿ ಸಿದ್ಧಿಯನ್ನು ಪಡೆದು ಮರಳಿಬಂದ ತಾರಕನನ್ನು ದೈತ್ಯ ಪ್ರಮುಖರು, ಸ್ವರ್ಗದಲ್ಲಿ ದೇವೇಂದ್ರನನ್ನು ದೇವತೆಗಳು ಸುತ್ತುಗಟ್ಟುವಂತೆ, ಸುತ್ತುವರಿದು ನಿಂತರು.

೨೬. ವಜ್ರಾಂಗನ ಪುತ್ರನೂ, ಮಹಾವೀರನೂ ಆದ ತಾರಕನು ರಾಜ್ಯಭಾರ ಮಾಡುತ್ತಿರುವಾಗ ಋತುಗಳು ತಮ್ಮತಮ್ಮ ಕಾಲ ಸ್ವಭಾವಗಳಿಂದ ಪೂರ್ಣವಾಗಿ ಆಕಾರವನ್ನು ತಳೆದು ಅವನನ್ನು ಸೇವಿಸುತ್ತಿದ್ದುವು.

೨೭. ಎಲ್ಲದಿಕ್ಕಿನ ಲೋಕಪಾಲಕರೂ ಅವನ ಕಿಂಕರರಾದರು. ಕಾಂತಿ, ದ್ಯುತಿ, ಧೃತಿ, ಮೇಧೆ, ಶ್ರೀ ಇವರೆಲ್ಲರೂ ಅವನನ್ನು ಕಂಡು ಸೇವೆಗಾಗಿ ಸುತ್ತ ನಿಂತರು. ಎಲ್ಲರೂ ಗುಣಪೂರ್ಣರೂ ನಿರ್ದೋಷಿಗಳೂ ಆಗಿದ್ದರು.

೨೮-೨೯. ಕಾಲಾಗುರುಗಂಧವನ್ನು ಲೇಪಿಸಿಕೊಂಡು, ಕಿರೀಟವನ್ನೂ ಭೂಷಣಗಳನ್ನೂ ಧರಿಸಿ, ತೋಳುಗಳಲ್ಲಿ ತೋಳುಬಳೆಗಳು ಪ್ರಕಾಶಿಸುತ್ತಿರಲು

ರುಚಿರಾಂಗದನದ್ಧಾಂಗಂ ಮಹಾಸಿಂಹಾಸನೇ ಸ್ಥಿತಂ ।
ವೀಜಯಂತ್ಯಪ್ಸರಃಶ್ರೇಷ್ಠಾ ಭೃಶಂ ಮುಂಚಂತಿ ನೈವ ತಾಃ ॥೨೯॥
ಚಂದ್ರಾರ್ಕೌ ದೀಪಮಾರ್ಗೇಷು ವ್ಯಜನೇಷು ಚ ಮಾರುತಃ ।
ಕೃತಾಂತೋಽಗ್ರೇಸರಸ್ತಸ್ಯ ಬಭೂವುರ್ಮುನಿಸತ್ತಮಾಃ ॥೩೦॥
ಏವಂ ಪ್ರಯಾತಿ ಕಾಲೇ ತು ವಿತತೇ ತಾರಕಾಸುರಃ ।
ಬಭಾಷೇ ಸಚಿವಾನ್ ದೈತ್ಯಃ ಪ್ರಭೂತವರದರ್ಪಿತಃ ॥೩೧॥

॥ ತಾರಕ ಉವಾಚ ॥

ರಾಜ್ಯೇನ ಕಾರಣಂ ಕಿಂ ಮೇ ತ್ವನಾಕ್ರಮ್ಯ ತ್ರಿವಿಷ್ಟಪಂ ।
ಅನಿರ್ಯಾಪ್ಯ ಸುರೈರ್ವೈರಂ ಕಾ ಶಾಂತಿರ್ಹೃದಯೇ ಮಮ ॥೩೨॥
ಭುಂಜತೇಽದ್ಯಾಪಿ ಯಜ್ಞಾಂಶಾನಮರಾ ನಾಕ ಏವ ಹಿ ।
ವಿಷ್ಣುಃ ಶ್ರಿಯಂ ನ ಜಹತಿ ತಿಷ್ಠತೇ ಚ ಗತಭ್ರಮಃ ॥೩೩॥

---

ತಾರಕಾಸುರನು ಸಿಂಹಾಸನದಲ್ಲಿ ಮಂಡಿಸಿದ್ದನು. ಬಹು ಸುಂದರಿಯರಾದ ಅಪ್ಸರ ಸ್ತ್ರೀಯರು ಅವನಿಗೆ ಚಾಮರವಿಕ್ಕುತ್ತಿದ್ದರು. ಅವನನ್ನು ಬಿಟ್ಟು ಅವರು ಕದಲುತ್ತಿರಲಿಲ್ಲ.

೩೦. ಓ ಮುನಿವರ್ಯರೇ, ಚಂದ್ರಸೂರ್ಯರು ಆ ಅಸುರೇಂದ್ರನಿಗೆ ದೀಪ ಹಿಡಿಯುವರು. ವಾಯುವು ಬೀಸಣಿಗೆ ಬೀಸುವನು. ಯಮನು ಮಾರ್ಗದರ್ಶಕ ನಾಗಿ ಮುಂದೆ ನಡೆಯುವನು.

೩೧. ಹೀಗೆ ಬಹುಕಾಲವು ಕಳೆಯಿತು. ಬ್ರಹ್ಮನಿಂದ ದೊಡ್ಡ ವರವನ್ನು ಪಡೆದು ಗರ್ವಿತನಾಗಿದ್ದ ತಾರಕಾಸುರನು ತನ್ನ ಮಂತ್ರಿಗಳಿಗಿಂತೆಂದನು.

೩೨. ತಾರಕಾಸುರನು ಹೇಳಿದನು.—ಸ್ವರ್ಗವನ್ನು ಆಕ್ರಮಿಸದಿದ್ದರೆ ನನಗೆ ರಾಜ್ಯವೇತಕ್ಕೆ? ದೇವತೆಗಳ ಮೇಲಣ ವೈರವನ್ನು ತೀರಿಸಿಕೊಳ್ಳದಿದ್ದರೆ ನನ್ನ ಹೃದಯದಲ್ಲಿ ಶಾಂತಿಯೆಲ್ಲಿಯದು?

೩೩. ದೇವತೆಗಳು ಸ್ವರ್ಗದಲ್ಲಿ ಇದ್ದುಕೊಂಡು ಇಂದಿಗೂ ಯಜ್ಞಭಾಗ ಗಳನ್ನು ಅನುಭವಿಸುತ್ತಿದ್ದಾರೆ. ಲಕ್ಷ್ಮಿಯನ್ನು ವಿಷ್ಣು ಅಗಲದೆ ಈಗಲೂ ಸುಖದಿಂದ ಇರುವನು. ಅಷ್ಟೇ ಅಲ್ಲ! ಅವನಿಗೆ ಗಾಬರಿಯೆಂಬುದು ಸಹ ಇಲ್ಲ.

ಸ್ವಸ್ಥಾಭಿಃ ಸ್ವರ್ಗನಾರೀಭಿಃ ಪೀಡ್ಯಂತೇಽಮರವಲ್ಲಭಾಃ ।
ಸೋತ್ಪಲಾ ಮದಿರಾಮೋದಾ ದಿವಿ ಕ್ರೀಡಾಯನೇಷು ಚ ॥೩೪॥
ಲಬ್ಧ್ವಾ ಜನ್ಮ ನ ಯಃ ಕಶ್ಚಿದ್ಘಟಯೇತ್ಪೌರುಷಂ ನರಃ ।
ಜನ್ಮ ತಸ್ಯ ವೃಥಾ ಭೂತಮಜನ್ಮಾ ತು ವಿಶಿಷ್ಯತೇ ॥೩೫॥

ಮಾತಾಪಿತೃಭ್ಯಾಂ ನ ಕರೋತಿ ಕಾಮಾನ್ ।
ಬಂಧೂನಶೋಕಾನ್ನ ಕರೋತಿ ಯೋ ವಾ ॥
ಕೀರ್ತಿಂ ಹಿ ವಾ ನಾರ್ಜಯತೇ ಹಿಮಾಭಾಂ ।
ಪುಮಾನ್ ಸ ಜಾತೋಽಪಿ ಮೃತೋ ಮತಂ ಮೇ ॥೩೬॥

ತಸ್ಮಾಜ್ಜಯಾಯಾಮರಪುಂಗವಾನಾಂ
ತ್ರೈಲೋಕ್ಯಲಕ್ಷ್ಮೀಹರಣಾಯ ಶೀಘ್ರಂ ॥
ಸಂಯೋಜ್ಯತಾಂ ಮೇ ರಥಮಷ್ಟಚಕ್ರಂ ।
ಬಲಂ ಚ ಮೇ ದುರ್ಜಯದೈತ್ಯಚಕ್ರಂ ॥
ಧ್ವಜಂ ಚ ಮೇ ಕಾಂಚನಪಟ್ಟನದ್ಧಂ ।
ಛತ್ರಂ ಚ ಮೇ ಮೌಕ್ತಿಕಜಾಲಬದ್ಧಂ ॥೩೭॥

---

೩೪-೩೫. ದೇವತಾಸ್ತ್ರೀಯರು ಸಂತುಷ್ಟರಾಗಿ ತಮ್ಮ ತಮ್ಮ ವಲ್ಲಭರನ್ನು ಸುರತಾದಿಸುಖಸಮಯಗಳಲ್ಲಿ ಪೀಡಿಸುತ್ತಿದ್ದಾರೆ. ನೈದಿಲೆಗಳ ವಾಸನೆಯೊಡಗೂಡಿದ ಮಧ್ಯದ ಸುಗಂಧವು ಸ್ವರ್ಗದ ಕ್ರೀಡಾಸ್ಥಾನಗಳಲ್ಲಿ ಹರಡುತ್ತಿದೆ. ಜನ್ಮವನ್ನು ಪಡೆದ ಮೇಲೆ ಯಾವ ಮನುಷ್ಯನು ಪೌರುಷವನ್ನು ತೋರುವುದಿಲ್ಲವೋ ಅವನ ಬಾಳು ವ್ಯರ್ಥವೇ ಸರಿ. ಅವನಿಗಿಂತ ಹುಟ್ಟದಿರುವವನೇ ಮೇಲು.

೩೬. ಯಾವನು ತಾಯಿತಂದೆಗಳ ಇಷ್ಟಾರ್ಥಗಳನ್ನು ಸಲ್ಲಿಸುವುದಿಲ್ಲವೋ, ಬಂಧುಗಳ ಶೋಕಗಳನ್ನು ಪರಿಹರಿಸುವುದಿಲ್ಲವೋ, ಹಿಮದಂತೆ ಶುಭ್ರವಾದ ಕೀರ್ತಿಯನ್ನು ಸಂಪಾದಿಸುವುದಿಲ್ಲವೋ ಅಂತಹ ಮನುಷ್ಯನು ಹುಟ್ಟಿದ್ದರೂ ಸತ್ತವನೆಂದೇ ನನ್ನ ಭಾವನೆ.

೩೭. ಆದುದರಿಂದ ದೇವಪ್ರಮುಖರನ್ನು ಗೆದ್ದು, ಮೂರು ಲೋಕದ ಸಂಪತ್ತನ್ನೂ ಬೇಗನೆ ಅಪಹರಿಸುವ. ಎಂಟು ಚಕ್ರದ ನನ್ನ ತೇರು ಸಿದ್ಧವಾಗಲಿ. ಅಪಜಯವನ್ನೇ ಕಂಡರಿಯದ ನಮ್ಮ ದೈತ್ಯಸೈನ್ಯವು ಹೊರಡಲಿ. ಜರತಾರಿಯ ಪಟದಿಂದ ಕೂಡಿದ ನನ್ನ ಧ್ವಜವು ಹಾರಾಡಲಿ. ಮುತ್ತಿನ ಕುಚ್ಚುಗಳನ್ನು ಕಟ್ಟಿರುವ ನನ್ನ ಬೆಳ್ಗೊಡೆಯು ಬೆಳಗಲಿ.

ತಾರಕಸ್ಯ ವಚಃ ಶ್ರುತ್ವಾ ಗ್ರಸನೋ ನಾಮ ದಾನವಃ ।
ಸೇನಾನೀರ್ದೈತ್ಯರಾಜಸ್ಯ ತಥಾ ಚಕ್ರೇ ಮಹಾಬಲಃ ||೩೮||

ಆಹತ್ಯ ಭೇರೀಂ ಗಂಭೀರಾಂ ದೈತ್ಯಾನಾಹೂಯ ಸತ್ವರಃ ।
ತುರಗಾಣಾಂ ಸಹಸ್ರೇಣ ಚಕ್ರಾಷ್ಟಕವಿಭೂಷಿತಂ ||೩೯||

ಶುಕ್ಲಾಂಬರಪರಿಷ್ಕಾರಂ ಚತುರ್ಯೋಜನವಿಸ್ತೃತಂ ।
ನಾನಾಕ್ರೀಡಾಗೃಹಯುತಂ ಗೀತವಾದ್ಯಮನೋಹರಂ ||೪೦||

ವಿಮಾನಮಿವ ದೇವಸ್ಯ ಸುರಭರ್ತುಃ ಶತಕ್ರತೋಃ ।
ದಶಕೋಟೀಶ್ವರಾ ದೈತ್ಯಾ ದೈತ್ಯಾನಾಂ ಚಂಡವಿಕ್ರಮಾಃ ||೪೧||

ತೇಷಾಮಗ್ರೇಸರೋ ಜಂಭಃ ಕುಜಂಭೋಽನಂತರಸ್ತತಃ ।
ಮಹಿಷಃ ಕುಂಜರೋ ಮೇಘಃ ಕಾಲನೇಮಿರ್ನಿಮಿಸ್ತಥಾ ||೪೨||

---

೩೮. ತಾರಕನ ಮಾತನ್ನು ಕೇಳಿ ಅವನ ಸೇನಾಪತಿಯೂ ಮಹಾಬಲಶಾಲಿಯೂ ಆದ ಗ್ರಸನನು ಪ್ರಭುವಿನ ಅಪ್ಪಣೆಯಂತೆ ಎಲ್ಲವನ್ನೂ ಸಿದ್ಧಪಡಿಸಿದನು.

೩೯-೪೦. ಗಂಭೀರವಾಗಿ ಧ್ವನಿಮಾಡುವ ಭೇರಿಯನ್ನು ಹೊಡೆಯಿಸಿ ಬೇಗನೆ ದೈತ್ಯರನ್ನು ಕರೆದನು. ತೇರನ್ನು ಸಜ್ಜುಮಾಡಿದನು. ಅದಕ್ಕೆ ಸಾವಿರ ಕುದುರೆಗಳನ್ನು ಹೂಡಿತ್ತು. ಎಂಟು ಚಕ್ರಗಳಿಂದ ಅದು ಶೋಭಿಸುತ್ತಿತ್ತು. ಬಿಳಿಯ ಬಟ್ಟೆಗಳಿಂದ ಅಲಂಕೃತವಾಗಿ ನಾಲ್ಕುಯೋಜನ ವಿಸ್ತಾರವಾಗಿತ್ತು. ಬಗೆಬಗೆಯ ಕ್ರೀಡಾಗೃಹಗಳಿಂದ ಕೂಡಿ ಗೀತವಾದ್ಯಗಳಿಂದ ಮನೋಹರವಾಗಿತ್ತು. ದೇವರಾಜನಾದ ಇಂದ್ರನ ವಿಮಾನದಂತೆ ಕಂಗೊಳಿಸುತ್ತಿತ್ತು.

೪೧-೪೪. ಹತ್ತು ಕೋಟಿ ದೈತ್ಯಸೈನ್ಯಕ್ಕೆ ಅಧಿಪತಿಗಳೂ, ಭಯಂಕರ ಪರಾಕ್ರಮಶಾಲಿಗಳೂ ಆದ ದೈತ್ಯರು ಒಡನೆ ಹೊರಟರು. ಎಲ್ಲರಿಗಿಂತ ಮುಂದೆ ಜಂಭನೂ ಅವನ ಹಿಂದೆ ಕುಜಂಭನೂ ನಡೆದರು. ಮಹಿಷ, ಕುಂಜರ, ಮೇಘ, ಕಾಲನೇಮಿ, ನಿಮಿ, ಮಥನ, ಜಂಭಕ, ಶುಂಭ ಇವರು ಅವರಿಬ್ಬರನ್ನೂ ಅನುಸರಿಸಿ

**ಮಥನೋ ಜಂಭಕಃ ಶುಂಭೋ ದೈತ್ಯೇಂದ್ರಾ ದಶ ನಾಯಕಾಃ ।**
**ಅನ್ಯೇಽಪಿ ಶತಶಸ್ತಸ್ಯ ಪೃಥಿವೀದಲನಕ್ಷಮಾಃ ॥೪೩॥**

**ದೈತ್ಯೇಂದ್ರಾ ಗಿರಿವರ್ಷ್ಮಾಣಃ ಸಂತಿ ಚಂಡಪರಾಕ್ರಮಾಃ ।**
**ನಾನಾಯುಧಪ್ರಹರಣಾ ನಾನಾಶಸ್ತ್ರಾಸ್ತ್ರಪಾರಗಾಃ ॥೪೪॥**

**ತಾರಕಸ್ಯಾಭವತ್ಕೇತೂ ರೌದ್ರಃ ಕನಕಭೂಷಣಃ ।**
**ಕೇತುನಾ ಮಕರೇಣಾಪಿ ಸೇನಾನೀರ್ಗ್ರಸನೋಽರಿಹಾ ॥೪೫॥**

**ಪೈಶಾಚಂ ಯಸ್ಯ ವದನಂ ಜಂಭಸ್ಯಾಸೀದಯೋಮಯಂ ।**
**ಖರಂ ವಿಧೂತಲಾಂಗೂಲಂ ಕುಜಂಭಸ್ಯಾಭವದ್ಧ್ವಜೇ ॥೪೬॥**

**ಮಹಿಷಸ್ಯ ತು ಗೋಮಾಯುಃ ಕೇತೋರ್ಹೈಮಸ್ತದಾಭವತ್ ।**
**ಧ್ವಾಂಕ್ಷೋ ಧ್ವಜೇ ತು ಶುಂಭಸ್ಯ ಕೃಷ್ಣಾಯೋಮಯಮುಚ್ಛ್ರಿತಂ ॥೪೭॥**

**ಅನೇಕಾಕಾರವಿನ್ಯಾಸಾಶ್ಚಾನ್ಯೇಷಾಂ ತು ಧ್ವಜಾಸ್ತಥಾ ।**
**ಶತೇನ ಶೀಘ್ರವೇಗಾಣಾಂ ವ್ಯಾಘ್ರಾಣಾಂ ಹೇಮಮಾಲಿನಾಂ ॥೪೮॥**

---

ದರು. ಈ ಹತ್ತು ಜನರೂ ದೈತ್ಯನಾಯಕರೆನಿಸಿದ್ದರು. ಭೂಮಿಯನ್ನು ಸೀಳ ಬಲ್ಲವರೂ, ಬೆಟ್ಟವನ್ನೆತ್ತಿ ಬಿಸುಡಬಲ್ಲವರೂ ಆದ ಇನ್ನೂ ಎಷ್ಟೋ ಜನ ಪರಾಕ್ರಮ ಶಾಲಿಗಳಿದ್ದರು. ಅವರು ಬಗೆಬಗೆಯ ಆಯುಧಗಳಲ್ಲೂ ಅಸ್ತ್ರಗಳಲ್ಲೂ ಪ್ರವೀಣ ರಾಗಿದ್ದರು.

೪೫. ತಾರಕಾಸುರನ ಬಾವುಟವು ಸುವರ್ಣಾಲಂಕಾರಗಳಿಂದ ಕೂಡಿ ಶತ್ರುಭಯಂಕರವಾಗಿತ್ತು. ಶತ್ರುನಾಶಕನೂ ಸೇನಾಧಿಪತಿಯೂ ಆದ ಗ್ರಸನನ ಧ್ವಜವು ಮಕರಲಾಂಛಿತವಾಗಿದ್ದಿತು.

೪೬. ಜಂಭನ ಧ್ವಜದಲ್ಲಿ ಕಬ್ಬಿಣದಿಂದ ಮಾಡಿದ ಪಿಶಾಚದ ಮುಖವೂ, ಕುಜಂಭನ ಪತಾಕೆಯಲ್ಲಿ ಬಾಲವನ್ನು ಬೀಸುತ್ತಿರುವ ಕತ್ತೆಯೂ ಅಂಕಿತ ವಾಗಿದ್ದುವು.

೪೭. ಮಹಿಷನ ಧ್ವಜವು ನರಿ. ಅದು ಸುವರ್ಣಮಯವಾಗಿತ್ತು. ಶುಂಭನ ಧ್ವಜದಲ್ಲಿ ಉಕ್ಕಿನಿಂದ ಮಾಡಿದ ಎತ್ತರವಾದ ಕಾಗೆಯನ್ನು ಕಟ್ಟಿದ್ದಿತು.

೪೮-೪೯. ಇನ್ನೂ ಉಳಿದವರ ಬಾವುಟಗಳು ಬಗೆಬಗೆಯ ಆಕಾರ ದಿಂದಿದ್ದುವು. ಗ್ರಸನನ ತೇರಿಗೆ ಚಿನ್ನದ ಸರಗಳಿಂದಲೂ ಕಿರುಗೆಜ್ಜೆಗಳ ಕುಚ್ಚಿ

ಗ್ರಸನಸ್ಯ ರಥೋ ಯುಕ್ತೋ ಕಿಂಕಿಣೀಜಾಲಮಾಲಿನಾಂ ।
ಶತೇನಾಪಿ ಚ ಸಿಂಹಾನಾಂ ರಥೋ ಜಂಭಸ್ಯ ದುರ್ಜಯಃ ॥೪೯॥

ಕುಜಂಭಸ್ಯ ರಥೋ ಯುಕ್ತಃ ಪಿಶಾಚವದನೈಃ ಖರೈಃ ।
ರಥಸ್ತು ಮಹಿಷಸ್ಯೋಷ್ಟ್ರೈರ್ಗಜಸ್ಯ ತು ತುರಂಗಮೈಃ ॥೫೦॥

ಮೇಘಸ್ಯ ದ್ವೀಪಿಭಿರ್ಭೀಮೈಃ ಕುಂಜರೈಃ ಕಾಲನೇಮಿನಃ ।
ಪರ್ವತಾಭೈಃ ಸಮಾರೂಢೋ ನಿಮಿರ್ಮತ್ತೈರ್ಮಹಾಗಜೈಃ ॥೫೧॥

ಚತುರ್ದಂತೈರ್ಗಂಧವದ್ಭಿಃ ಶಿಕ್ಷಿತೈರ್ಮೇಘಭೈರವೈಃ ।
ಶತಹಸ್ತಾಯತೈಃ ಕೃಷ್ಣೈಸ್ತುರಂಗೈರ್ಹೇಮಭೂಷಣೈಃ ॥೫೨॥

ಸಿತಚಾಮರಜಾಲೇನ ಶೋಭಿತೇ ದಕ್ಷಿಣಾಂ ದಿಶಂ ।
ಸಿತಚಂದನಚಾರ್ವಂಗೋ ನಾನಾಪುಷ್ಪಸ್ರಜೋಜ್ವಲಃ ॥೫೩॥

---

ನಿಂದಲೂ ಅಲಂಕೃತವಾಗಿ ಶೀಘ್ರಗಾಮಿಗಳೆನಿಸಿದ ನೂರು ಹುಲಿಗಳನ್ನು ಕಟ್ಟಿದ್ದರು. ಜಂಭನ ತೇರು ನೂರು ಸಿಂಹಗಳಿಂದ ಯುಕ್ತವಾಗಿ ಶತ್ರುಗಳಿಗೆ ದುರ್ಜಯವಾಗಿದ್ದಿತು.

೫೦. ಕುಜಂಭನ ರಥಕ್ಕೆ ಪಿಶಾಚಮುಖದ ಕತ್ತೆಗಳನ್ನು ಹೂಡಿದ್ದರು. ಮಹಿಷನ ತೇರಿಗೆ ಒಂಟೆಗಳನ್ನೂ, ಗಜನ ರಥಕ್ಕೆ ಕುದುರೆಗಳನ್ನೂ ಕಟ್ಟಿದ್ದರು.

೫೧-೫೩. ಮೇಘನ ರಥವು ಭಯಂಕರವಾದ ಹುಲಿಗಳಿಂದಲೂ ಕಾಲನೇಮಿಯದು ಆನೆಗಳಿಂದಲೂ ಕೂಡಿದ್ದುವು. ಆ ಸೊಕ್ಕಾನೆಗಳು ನೂರುಮೊಳ ಎತ್ತರವಾಗಿ ಮೇಘಗಳಂತೆ ಭಯಂಕರವಾಗಿ ಧ್ವನಿಮಾಡುತ್ತ, ನಾಲ್ಕು ಕೊಂಬುಗಳಿಂದ ಪ್ರಕಾಶಿಸುತ್ತ ಚೆನ್ನಾಗಿ ಪಳಗಿದ್ದುವು. ಇವುಗಳ ಜತೆಗೆ ಸ್ವರ್ಣಾಲಂಕೃತವಾದ ಕರಿಯ ಕುದುರೆಗಳನ್ನೂ ಹೂಡಿದ್ದರು. ಕಾಲನೇಮಿಯು ಬಿಳಿಯ ಚಂದನವನ್ನು ಅಂಗಗಳಿಗೆ ಲೇಪಿಸಿಕೊಂಡು, ಬಿಳಿಯ ಚಾಮರಗಳ ಕುಚ್ಚಿನಿಂದ ಅಲಂಕೃತವಾದ ತೇರಿನಲ್ಲಿ ಕುಳಿತು ದಕ್ಷಿಣದಿಕ್ಕಿಗೆ ಹೊರಟನು.

ಮಥನೋ ನಾಮ ದೈತ್ಯೇಂದ್ರಃ ಪಾಶಹಸ್ತೋ ವ್ಯರಾಜತ ।
ಜಂಭಕಃ ಕಿಂಕಿಣೀಜಾಲಮಾಲಮುಷ್ಟ್ರಂ ಸಮಾಸ್ಥಿತಃ ॥೫೪॥

ಕಾಲಶುಕ್ಲಮಹಾಮೇಷಮಾರೂಢಃ ಶುಂಭದಾನವಃ ।
ಅನ್ಯೇಽಪಿ ದಾನವಾ ವೀರಾ ನಾನಾವಾಹನಗಾಮಿನಃ ॥೫೫॥

ಪ್ರಚಂಡಚಿತ್ರಕರ್ಮಾಣಃ ಕುಂಡಲೋಷ್ಣೀಷಭೂಷಣಾಃ ।
ನಾನಾವಿಧೋತ್ತರಾಸಂಗಾ ನಾನಾಮಾಲ್ಯವಿಭೂಷಣಾಃ ॥೫೬॥

ನಾನಾಸುಗಂಧಿಗಂಧಾಢ್ಯಾ ನಾನಾಬಂದಿಜನಸ್ತುತಾಃ ।
ನಾನಾವಾದ್ಯಪರಿಸ್ಪಂದಾಶ್ಚಾಗ್ರೇಸರಮಹಾರಥಾಃ ॥೫೭॥

ನಾನಾಶೌರ್ಯಕಥಾಸಕ್ತಾಸ್ತಸ್ಮಿನ್ ಸೈನ್ಯೇ ಮಹಾಸುರಾಃ ।
ತದ್ಬಲಂ ದೈತ್ಯಸಿಂಹಸ್ಯ ಭೀಮರೂಪಂ ವ್ಯಜಾಯತ ॥೫೮॥

---

೫೪. ಮಥನನೆಂಬ ದೈತ್ಯವೀರನು ಪಾಶಾಯುಧವನ್ನು ಕೈಯಲ್ಲಿ ಹಿಡಿದು ಮೆರೆಯುತ್ತಿದ್ದನು. ಕಿರುಗೆಜ್ಜೆಗಳ ಸರವನ್ನು ಕಟ್ಟಿದ್ದ ಒಂಟೆಯ ಮೇಲೆ ಜಂಭಕನು ಕುಳಿತನು.

೫೫. ಶುಂಭನೆಂಬ ದಾನವನು ಬಿಳುಪೂ ಕಪ್ಪೂ ಆದ ದೊಡ್ಡಮೇಕೆಯನ್ನೇರಿದನು. ಉಳಿದ ದಾನವವೀರರೂ ಸಹ ಬಗೆಬಗೆಯ ವಾಹನಗಳ ಮೇಲೆ ಕುಳಿತು ನಡೆದರು.

೫೬-೫೮. ಆ ಸೈನ್ಯದಲ್ಲಿದ್ದ ಮಹಾಸುರರು ಅತ್ಯದ್ಭುತವಾದ ಕಾರ್ಯವನ್ನು ಮಾಡತಕ್ಕವರು. ಅವರು ಕುಂಡಲಗಳನ್ನೂ ಉಷ್ಣೀಷಗಳನ್ನೂ ಹಾಕಿಕೊಂಡಿದ್ದರು. ಬಗೆಬಗೆಯ ಉತ್ತರೀಯಗಳನ್ನು ಹೊದೆದು, ಪುಷ್ಪಹಾರಗಳನ್ನೂ ಒಡವೆಗಳನ್ನೂ ಧರಿಸಿ, ಪರಿಮಳ ದ್ರವ್ಯಗಳನ್ನು ಲೇಪಿಸಿಕೊಂಡಿದ್ದರು. ಹಲವರು ಹೊಗಳುಭಟ್ಟರು ಅವರನ್ನು ಹೊಗಳುತ್ತಿರಲು, ಬಗೆಬಗೆಯ ವಾದ್ಯಗಳು ಭೋರ್ಗರೆಯುತ್ತಿರಲು, ಮಹಾರಥರು ಮುಂದೆ ನಡೆಯುತ್ತಿರಲು ಅವರು ವಿಧವಿಧವಾದ ವೀರವೃತ್ತಾಂತಗಳನ್ನು ಕಿವಿಗೊಟ್ಟು ಕೇಳುತ್ತಿದ್ದರು. ಹೀಗೆ ದೈತ್ಯರಾಜನಾದ ತಾರಕನ ಆ ಸೈನ್ಯವು ಭಯಂಕರಾಕಾರದಿಂದಿತ್ತು.

ಪ್ರಮತ್ತಚಂಡಮಾತಂಗತುರಂಗರಥಸಂಕುಲಂ ।
ಪ್ರತಸ್ಥೇಽಮರಯುದ್ಧಾಯ ಬಹುಪತ್ತಿಪತಾಕಿ ತತ್ ॥೫೯॥

ಏತಸ್ಮಿನ್ನಂತರೇ ವಾಯುರ್ದೇವದೂತೋಽಂಬರಾಲಯೇ ।
ದೃಷ್ಟ್ವಾ ಸ ದಾನವಬಲಂ ಜಗಾಮೇಂದ್ರಸ್ಯ ಶಂಸಿತುಂ ॥೬೦॥

ಸ ಗತ್ವಾ ತು ಸಭಾಂ ದಿವ್ಯಾಂ ಮಹೇಂದ್ರಸ್ಯ ಮಹಾತ್ಮನಃ ।
ಶಶಂಸ ಮಧ್ಯೇ ದೇವಾನಾಂ ತತ್ಕಾರ್ಯಂ ಸಮುಪಸ್ಥಿತಂ ॥೬೧॥

ತಚ್ಛ್ರುತ್ವಾ ದೇವರಾಜಸ್ತು ನಿಮೀಲಿತವಿಲೋಚನಃ ।
ಬೃಹಸ್ಪತಿಮುವಾಚೇದಂ ವಾಕ್ಯಂ ಕಾಲೇ ಮಹಾಭುಜಃ ॥೬೨॥

॥ ಇಂದ್ರ ಉವಾಚ ॥

ಸಂಪ್ರಾಪ್ತೋಽತಿ ವಿಮರ್ದೋಽಯಂ ದೇವಾನಾಂ ದಾನವೈಃ ಸಹ ।
ಕಾರ್ಯಂ ಕಿಮತ್ರ ತದ್ಬ್ರೂಹಿ ನೀತ್ಯುಪಾಯಸಮನ್ವಿತಂ ॥೬೩॥

---

೫೯. ಮದಿಸಿದ ಆನೆಗಳು, ಕುದುರೆಗಳು, ತೇರುಗಳು, ಅಸಂಖ್ಯಾತವಾದ ಕಾಲುಬಲ ಇವುಗಳಿಂದ ನಿಬಿಡವಾದ ಆ ದೈತ್ಯಸೈನ್ಯವು ದೇವತೆಗಳಮೇಲೆ ಯುದ್ಧಕ್ಕಾಗಿ ಹೊರಟಿತು.

೬೦. ಈ ಸಮಯದಲ್ಲಿ ದೇವದೂತನಾದ ವಾಯುವು ಆಕಾಶದಲ್ಲಿ ನಿಂತು, ದೈತ್ಯಬಲವನ್ನು ನೋಡಿ ಇಂದ್ರನಿಗೆ ಹೇಳುವುದಕ್ಕಾಗಿ ಹೋದನು.

೬೧. ಅವನು ದೇವಸಭೆಗೆ ಹೋಗಿ ದೇವತೆಗಳ ನಡುವೆ ಕುಳಿತಿದ್ದ ಇಂದ್ರನಿಗೆ ತತ್ಕಾಲದಲ್ಲಿ ಒದಗಿದ್ದ ಆ ಗುರುತರವಾದ ಕಾರ್ಯವನ್ನು ವರ್ಣಿಸಿದನು.

೬೨. ಶೂರನಾದ ಇಂದ್ರನಾದರೋ ಆ ವೃತ್ತಾಂತವನ್ನು ಕೇಳಿ, ಕಣ್ಣುಗಳನ್ನು ಮುಚ್ಚಿಕೊಂಡು ಏನೋ ಯೋಚಿಸುತ್ತ ಬಳಿಕ ಬೃಹಸ್ಪತಿಗೆ ಹೀಗೆಂದು ಹೇಳಿದನು.

೬೩. ಇಂದ್ರನು ಹೇಳಿದನು.—ದೇವತೆಗಳಿಗೆ ದಾನವರೊಡನೆ ದೊಡ್ಡ ಯುದ್ಧವು ಒದಗಿದೆ. ಈಗ ನಾವು ಮಾಡಬೇಕಾದುದೇನು? ನೀತಿಶಾಸ್ತ್ರಕ್ಕೆ ಅನುಗುಣವಾಗಿ ಹೇಳು.

ಏತಚ್ಛ್ರುತ್ವಾ ತು ವಚನಂ ಮಹೇಂದ್ರಸ್ಯ ಗಿರಾಂ ಪತಿಃ ।
ಇತ್ಯುವಾಚ ಮಹಾಭಾಗೋ ಬೃಹಸ್ಪತಿರುದಾರಧೀಃ ॥೬೪॥

ಸಾಮಪೂರ್ವಾ ಸ್ಮೃತಾ ನೀತಿಶ್ಚತುರಂಗಾ ಪತಾಕಿನೀ ।
ಜಿಗೀಷತಾಂ ಸುರಶ್ರೇಷ್ಠ ಸ್ಥಿತಿರೇಷಾ ಸನಾತನೀ ॥೬೫॥

ಸಾಮ ಭೇದಸ್ತಥಾ ದಾನಂ ದಂಡಶ್ಚಾಂಗಚತುಷ್ಟಯಂ ।
ನೀತೌ ಕ್ರಮಾದ್ದೇಶಕಾಲರಿಪುಯೋಗ್ಯಕ್ರಮಾದಿದಂ ॥೬೬॥

ಸಾಮ ದೈತ್ಯೇಷು ನೈವಾಸ್ತಿ ಯತಸ್ತೇ ಲಬ್ಧಸಂಶ್ರಯಾಃ ।
ಜಾತಿಧರ್ಮೇಣ ವಾಽಭೇದ್ಯಾ ದಾನಂ ಪ್ರಾಪ್ತಶ್ರಿಯೇ ಚ ಕಿಂ ॥೬೭॥

---

೬೪. ಮಹಾಮಹಿಮನೂ, ವಿದ್ಯಾನಿಧಿಯೂ, ಉದಾರಬುದ್ಧಿಯೂ ಆದ ಬೃಹಸ್ಪತಿಯು ಇಂದ್ರನ ಈ ಮಾತನ್ನು ಕೇಳಿ ಇಂತೆಂದನು.

೬೫. ದೇವೇಂದ್ರಾ, ಜಯಶಾಲಿಯಾಗಬೇಕೆನ್ನುವವನು ನೀತಿಯನ್ನು ಸಾಮೋಪಾಯದಿಂದ ಪ್ರಾರಂಭಿಸಬೇಕು. ಸೈನ್ಯಕ್ಕೆ ಆನೆ, ಕುದುರೆ, ರಥ, ಕಾಲಾಳುಗಳೆಂಬ ನಾಲ್ಕು ಅಂಗಗಳಿವೆಯಷ್ಟೆ! ಇದರಂತೆಯೇ ನೀತಿಯಲ್ಲಿ ಸಹ ಸಾಮ, ದಾನ, ಭೇದ ಮತ್ತು ದಂಡೋಪಾಯಗಳೆಂಬ ನಾಲ್ಕು ಅವಯವಗಳುಂಟು.

೬೬. ನೀತಿಗೆ ಸಾಮ, ದಾನ, ಭೇದ ದಂಡಗಳೆಂಬ ನಾಲ್ಕು ಅಂಗವುಂಟಲ್ಲವೆ! ದೇಶ, ಕಾಲ, ಶತ್ರು ಮತ್ತು ಪಾತ್ರ ಇವುಗಳನ್ನು ಅರಿತು ಕ್ರಮವಾಗಿ ಇವುಗಳನ್ನು ಪ್ರಯೋಗಿಸಬೇಕು.

೬೭. ದೈತ್ಯರಲ್ಲಿ ಸಾಮೋಪಾಯವು ನಡೆಯುವುದೇ ಇಲ್ಲ. ಏಕೆಂದರೆ ಅವರಿಗೆ ಆಶ್ರಯವು ಬಲವಾಗಿದೆ. ಜಾತಿಧರ್ಮನ್ನು ನೋಡಿದರೆ ಅವರಲ್ಲಿ ಪರಸ್ಪರ ಭೇದವನ್ನು ಹುಟ್ಟಿಸುವುದೂ ಅಸಾಧ್ಯ. ಕಾರಣವೇನೆಂದರೆ ಅವರಲ್ಲಿ ಒಗ್ಗಟ್ಟು ಹೆಚ್ಚಾಗಿದೆ. ದಾನದಿಂದಲೂ ಅವರನ್ನು ವಶಪಡಿಸಿಕೊಳ್ಳಲಾಗದು. ಐಶ್ವರ್ಯವು ಅಪರಿಮಿತವಾಗಿರುವಾಗ ಅವರಿಗೆ ದಾನವೇಕೆ?

ಏಕೋಽಭ್ಯುಪಾಯೋ ದಂಡೋಽತ್ರ ಭವತಾಂ ಯದಿ ರೋಚತೇ ।
ದುರ್ಜನೇಷು ಕೃತಂ ಸಾಮ ಮಹದ್ಯಾತಿ ಚ ವಾಚ್ಯತಾಂ ॥೬೮॥

ಭಯಾದಿತಿ ವ್ಯವಸ್ಯಂತಿ ಕ್ರೂರಾಃ ಸಾಮ ಮಹಾತ್ಮನಾಂ ।
ಋಜುತಾಮಾರ್ಯಬುದ್ಧಿತ್ವಂ ದಯಾಂ ನೀತಿವ್ಯತಿಕ್ರಮಂ ॥೬೯॥

ಮನ್ಯಂತೇ ದುರ್ಜನಾ ನಿತ್ಯಂ ಸಾಮ ಚಾಪಿ ಭಯೋದಯಾತ್ ।
ತಸ್ಮಾದ್ದುರ್ಜನಮಾಕ್ರಾಂತುಂ ಶ್ರೇಯಾನ್ ಪೌರುಷಸಂಶ್ರಯಃ ॥೭೦॥

ಆಕ್ರಾಂತೇ ತು ಕ್ರಿಯಾ ಯುಕ್ತಾ ಸತಾಮೇತನ್ಮಹಾವ್ರತಂ ।
ದುರ್ಜನಃ ಸುಜನತ್ವಾಯ ಕಲ್ಪತೇ ನ ಕದಾಚನ ॥೭೧॥

ಸುಜನೋಽಪಿ ಸ್ವಭಾವಸ್ಯ ತ್ಯಾಗಂ ವಾಂಛೇತ್ಕದಾಚನ ।
ಏವಂ ಮೇ ಬುಧ್ಯತೇ ಬುದ್ಧಿರ್ಭವಂತೋಽತ್ರಾಧ್ಯವಸ್ಯತಾಂ ॥೭೨॥

---

೬೮. ಇವರಲ್ಲಿ ನಡೆಯಬಹುದಾದ ಉಪಾಯವೆಂದರೆ ದಂಡವೊಂದೇ. ಇನ್ನು ನಿಮ್ಮ ಇಷ್ಟ. ದುರ್ಜನರಲ್ಲಿ ಪ್ರಯೋಗಿಸಿದ ಸಾಮೋಪಾಯವು ದೂಷಣೆಗೆ ಗುರಿಯಾಗುತ್ತದೆ.

೬೯. ಮಹಾತ್ಮರು ಸಾಮೋಪಾಯವನ್ನು ಆಚರಿಸಿದರೆ ದುಷ್ಟರು ಅದನ್ನು ಹೆದರಿಕೆಗೋಸ್ಕರವೆಂದು ನಿಶ್ಚಯಿಸುವರು. ಹೀಗೆಯೇ ಸರಳತೆಯನ್ನು ಸಂಪಾದನೆಯ ಬುದ್ಧಿಯೆಂದೂ, ದಯೆಯನ್ನು ನೀತಿಯ ಲೋಪವೆಂದೂ ಹೇಳುವರು.

೭೦. "ಶತ್ರುಗಳು ನಮಗೆ ಹೆದರಿಕೊಂಡಿದ್ದಾರೆ. ಆದುದರಿಂದಲೇ ಸಾಮೋಪಾಯದಿಂದ ವ್ಯವಹರಿಸುತ್ತಾರೆ" ಎಂದು ದುರ್ಜನರು ಯಾವಾಗಲೂ ತಿಳಿಯುತ್ತಾರೆ. ಆದಕಾರಣ ಅವರನ್ನು ಅಡಗಿಸಬೇಕಾದರೆ ಪರಾಕ್ರಮವನ್ನು ತೋರಿಸುವುದೇ ಮೇಲು.

೭೧. ಆಕ್ರಮಣಕ್ಕೆ ಗುರಿಯಾದಾಗ ಪ್ರತಿಕ್ರಿಯೆಯನ್ನು ಕೈಗೊಳ್ಳಬೇಕು. ಸತ್ಪುರುಷರಿಗೆ ಇದು ಮಹಾವ್ರತ. ದುರ್ಜನನು ಎಂದಿಗೂ ಸಜ್ಜನನಾಗಲಾರನು.

೭೨. ಸತ್ಪುರುಷನು ತನ್ನ ಸ್ವಭಾವವನ್ನು ಬಿಡಲು ಎಂದಿಗೂ ಬಯಸಬಾರದು. ನನ್ನ ಬುದ್ಧಿಗೆ ಹೀಗೆಂದು ತೋರುತ್ತದೆ. ನೀವು ಆಲೋಚನೆಮಾಡಿ ಇದನ್ನು ನಿಶ್ಚಯಿಸಿರಿ.

ಏವಮುಕ್ತಃ ಸಹಸ್ರಾಕ್ಷ ಏವಮೇವೇತ್ಯುವಾಚ ತಂ ।
ಕರ್ತವ್ಯತಾಂ ಸ ಸಂಚಿತ್ಯ ಪ್ರೋವಾಚಾಮರಸಂಸದಿ ॥೭೩॥

॥ ಇಂದ್ರ ಉವಾಚ ॥

ಸ್ವೇ ಮಹಿಮ್ನಿ ಸ್ಥಿತಾ ನಿತ್ಯಂ ಜಗತಃ ಪರಿಪಾಲಕಾಃ ।
ಭವತಶ್ಚಾನಿಮಿತ್ತೇನ ಬಾಧಂತೇ ದಾನವೇಶ್ವರಾಃ ॥೭೪॥

ತೇಷಾಂ ಸಾಮಾದಿ ನೈವಾಸ್ತಿ ದಂಡ ಏವ ವಿಧೀಯತಾಂ ।
ಕ್ರಿಯತಾಂ ಸಮರೋದ್ಯೋಗಃ ಸೈನ್ಯಂ ಸಂಯುಜ್ಯತಾಂ ಮಮ ॥೭೫॥

ಆಧೀಯತಾಂ ಚ ಶಸ್ತ್ರಾಣಿ ಪೂಜ್ಯಂತಾಮಸ್ತ್ರದೇವತಾಃ ।
ವಾಹನಾನಿ ಚ ಯಾನಾನಿ ಯೋಜಯಂತು ಮಮಾಮರಾಃ ॥೭೬॥

ಯಮಂ ಸೇನಾಪತಿಂ ಕೃತ್ವಾ ಶ್ರೀಘ್ರಮೇವಂ ದಿವೌಕಸಃ ।
ಇತ್ಯುಕ್ತಾಃ ಸಮನಹ್ಯಂತ ದೇವಾನಾಂ ಯೇ ಪ್ರಧಾನತಃ ॥೭೭॥

---

೭೩. ಗುರುವು ಹೀಗೆ ಹೇಳಲು, ಇಂದ್ರನು "ಅದು ಹಾಗೆಯೇ ಸರಿ" ಎಂದು ಉತ್ತರವಿತ್ತನು. ಅವನು ಮುಂದೆ ಮಾಡಬೇಕಾದುದೇನೆಂದು ಯೋಚಿಸಿ ದೇವಸಭೆಯಲ್ಲಿ ಇಂತು ಹೇಳಿದನು.

೭೪. ಇಂದ್ರನು ಹೇಳಿದನು.—ಓ ಲೋಕರಕ್ಷಕರೇ, ನೀವು ಸದಾ ನಿಮ್ಮ ಸಾಹಸಪೌರುಷಗಳಲ್ಲಿ ನಿರತರಾಗಿರಿ. ದಾನವರಾಜರು ನಿಮ್ಮನ್ನು ನಿಷ್ಕಾರಣವಾಗಿ ಬಾಧಿಸುತ್ತಾರೆ.

೭೫. ಅವರಿಗೆ ಸಾಮಾದ್ಯುಪಾಯಗಳಿಲ್ಲ. ದಂಡವನ್ನೇ ಪ್ರಯೋಗಿಸಬೇಕು. ಯುದ್ಧದ ಪ್ರಯತ್ನವನ್ನು ಮಾಡಿ. ನಮ್ಮ ಸೈನ್ಯವನ್ನು ಸಜ್ಜುಗೊಳಿಸಿ.

೭೬. ಶಸ್ತ್ರಗಳನ್ನು ಹಿಡಿಯಿರಿ. ಅಸ್ತ್ರದೇವತೆಗಳನ್ನು ಪೂಜಿಸಿ. ಓ ದೇವತೆಗಳೇ, ನನ್ನ ವಾಹನಗಳನ್ನೂ ಯಾನಗಳನ್ನೂ ಸಿದ್ಧಪಡಿಸಿ.

೭೭. ಇಂದ್ರನಿಂದ ಆಜ್ಞಪ್ತರಾದ ಸುರಪ್ರಮುಖರು ಕೂಡಲೇ ಯಮನನ್ನು ಸೇನಾಪತಿಯಾಗಿ ಮಾಡಿ ಯುದ್ಧಸನ್ನದ್ಧರಾದರು.

ವಾಜಿನಾಮಯುತೇನಾಜೌ ಹೇಮಘಂಟಾಪರಿಷ್ಕೃತಂ ।
ನಾನಾಶ್ಚರ್ಯಗುಣೋಪೇತಂ ಸಂಪ್ರಾಪ್ತಂ ಸರ್ವದೈವತೈಃ ॥೨೮॥

ರಥಂ ಮಾತಲಿನಾ ಕ್ಲೃಪ್ತಂ ದೇವರಾಜಸ್ಯ ದುರ್ಜಯಂ ।
ಯಮೋ ಮಹಿಷಮಾಸ್ಥಾಯ ಸೇನಾಗ್ರೇ ಸಮವರ್ತತ ॥೨೯॥

ಚಂಡಕಿಂಕರವೃಂದೇನ ಸರ್ವತಃ ಪರಿವಾರಿತಃ ।
ಕಲ್ಪಕಾಲೋದ್ಧತಜ್ವಾಲಾಪೂರಿತಾಂಬರಲೋಚನಃ ॥೩೦॥

ಹುತಾಶನಶ್ಛಾಗರೂಢಃ ಶಕ್ತಿಹಸ್ತೋ ವ್ಯವಸ್ಥಿತಃ ।
ಪವನೋಽಂಕುಶಪಾಣಿಸ್ತು ವಿಸ್ತಾರಿತಮಹಾಜವಃ ॥೩೧॥

ಭುಜಗೇಂದ್ರಸಮಾರೂಢೋ ಜಲೇಶೋ ಭಗವಾನ್ ಸ್ವಯಂ ।
ನರಯುಕ್ತರಥೇ ದೇವೋ ರಾಕ್ಷಸೇಶೋ ವಿಯಚ್ಚರಃ ॥೩೨॥

---

೨೮. ಶತ್ರುಗಳಿಗೆಲ್ಲ ಅಸಾಧ್ಯವಾಗುವಂತೆ ಹತ್ತುಸಾವಿರ ಕುದುರೆಗಳೊಡನೆ ಇಂದ್ರನ ರಥವನ್ನು ಮಾತಲಿಯು ಸಿದ್ಧಪಡಿಸಿದನು. ಚಿನ್ನದ ಘಂಟೆಗಳಿಂದ ಅದು ಅಲಂಕೃತವಾಗಿ ವಿಧವಿಧವಾದ ಆಶ್ಚರ್ಯಗುಣಗಳಿಂದ ತುಂಬಿದ್ದಿತು. ಎಲ್ಲ ದೇವತೆಗಳೂ ಅದರೊಡನೆ ಬರುತ್ತಿದ್ದರು.

೨೯-೩೦. ಯಮನು ಮಹಿಷವನ್ನೇರಿ ಸೇನೆಯ ಮುಂದೆ ನಿಂತನು. ಅವನ ಸುತ್ತಲು ಭಯಂಕರರಾದ ಅವನ ಕಿಂಕರರು ನೆರೆದರು. ಅವನ ವಸ್ತ್ರಗಳೂ ಕಣ್ಣುಗಳೂ ಪ್ರಳಯಕಾಲದ ಬೆಂಕಿಯ ದಳ್ಳುರಿಯಂತೆ ಕೆಂಪಗಿದ್ದುವು.

೩೧. ಅಗ್ನಿಯು ಮೇಕೆಯ ಮೇಲೆ ಕುಳಿತು, ಶಕ್ತ್ಯಾಯುಧವನ್ನು ಕೈಯಲ್ಲಿ ಹಿಡಿದು ಸಿದ್ಧನಾದನು. ವಾಯುವು ಅಂಕುಶಹಸ್ತನಾಗಿ ಬಹುವೇಗವನ್ನು ಪ್ರಕಟಿಸುತ್ತಿದ್ದನು.

೩೨. ವರುಣದೇವನು ತನ್ನ ವಾಹನವಾದ ಮಹಾಸರ್ಪವನ್ನೇರಿದನು. ಗಗನಗಾಮಿಯಾದ ನಿರಋತಿಯು ಮನುಷ್ಯರನ್ನು ಹೂಡಿದ ರಥದಲ್ಲಿ ಕುಳಿತನು.

ತೀಕ್ಷ್ಣಖಡ್ಗಯುತೋ ಭೀಮಃ ಸಮರೇ ಸಮವಸ್ಥಿತಃ ।
ಮಹಾಸಿಂಹರವೋ ದೇವೋ ಧನಾಧ್ಯಕ್ಷೋ ಗದಾಯುಧಃ ||೬೩||

ಚಂದ್ರಾದಿತ್ಯಾವಶ್ವಿನೌ ಚ ಚತುರಂಗಬಲಾನ್ವಿತೌ ।
ರಾಜರ್ಷಿಸಹಿತಾಸ್ತಸ್ಥುರ್ಗಂಧರ್ವಾ ಹೇಮಭೂಷಣಾಃ ||೬೪||

ಹೇಮಪೀತೋತ್ತರಾಸಂಗಾಶ್ಚಿತ್ರವರ್ಮರಥಾಯುಧಾಃ ।
ನಾಕಪೃಷ್ಠಶಿಖಂಡಾಸ್ತು ವೈದೂರ್ಯಮಕರಧ್ವಜಾಃ ||೬೫||

ಜಪಾರಕ್ತೋತ್ತರಾಸಂಗಾ ರಾಕ್ಷಸಾ ರಕ್ತಮೂರ್ಧಜಾಃ ।
ಗೃಧ್ರಧ್ವಜಾ ಮಹಾವೀರ್ಯಾ ನಿರ್ಮಲಾಯೋವಿಭೂಷಣಾಃ ||೬೬||

ಮುಸಲಾಸಿಗದಾಹಸ್ತಾ ರಥೇ ಚೋಷ್ಣೀಷದಂಶಿತಾಃ ।
ಮಹಾಮೇಘರವಾ ನಾಗಾ ಭೀಮೋಲ್ಕಾಶನಿಹೇತಯಃ ||೬೭||

---

೬೩. ಗಟ್ಟಿಯಾಗಿ ಸಿಂಹನಾದಮಾಡುತ್ತ ಪೂಜ್ಯನಾದ ಕುಬೇರನು ತೀಕ್ಷ್ಣವಾದ ಖಡ್ಗವನ್ನೂ ಗದೆಯನ್ನೂ ಧರಿಸಿ ರೌದ್ರಾಕಾರದಿಂದ ಯುದ್ಧಕ್ಕೋಸ್ಕರ ಹೊರಟು ಬಂದನು.

೬೪. ಚಂದ್ರನೂ, ಆದಿತ್ಯನೂ, ಅಶ್ವಿನೀದೇವತೆಗಳೂ ಚತುರಂಗಬಲದೊಡನೆ ಸಿದ್ಧರಾದರು. ಗಂಧರ್ವರು ಸುವರ್ಣಾಲಂಕಾರಗಳನ್ನು ಧರಿಸಿ ರಾಜರ್ಷಿಗಳ ಸಹಿತರಾಗಿ ನಿಂತರು.

೬೫. ದೇವತೆಗಳು ಸುವರ್ಣಪೀತಾಂಬರವನ್ನು ಹೊದೆದು ಕವಚ, ತೇರು, ಇವು ಚಿತ್ರವಿಚಿತ್ರವಾಗಿರಲು ವೈದೂರ್ಯರತ್ನಖಚಿತವಾದ ಮಕರಧ್ವಜಗಳನ್ನು ಏರಿಸಿದರು.

೬೬. ರಾಕ್ಷಸರು ಕೆಂಪು ದಾಸವಾಳ ಬಣ್ಣದ ಉತ್ತರೀಯವನ್ನು ಧರಿಸಿದ್ದರು. ಅವರ ಕೂದಲು ಕೆಂಚಗಿತ್ತು. ಮಹಾವೀರರಾದ ಅವರ ಧ್ವಜವು ಹದ್ದು ; ಒಡವೆಗಳು ಕಬ್ಬಿಣದಿಂದಾದುವು.

೬೭. ನಾಗರು ಮುಸಲ, ಕತ್ತಿ ಇವನ್ನು ಹಿಡಿದು ಕಿರೀಟ ಕವಚಧಾರಿಗಳಾಗಿ, ಮಹಾ ಮೇಘಗಳಂತೆ ಗರ್ಜಿಸುತ್ತ, ಭಯಂಕರವಾದ ಉರಿಗೊಳ್ಳಿ, ಸಿಡಿಲು ಇವುಗಳು ಆಯುಧವಾಗಿರಲು ರಥದಲ್ಲಿ ಕುಳಿತಿದ್ದರು.

ಯಕ್ಷಾಃ ಕೃಷ್ಣಾಂಬರಭೃತೋ ಭೀಮಬಾಣಧನುರ್ಧರಾಃ ।
ತಾಮ್ರೋಲೂಕಧ್ವಜಾ ರೌದ್ರಾ ಹೇಮರತ್ನವಿಭೂಷಣಾಃ ॥೮೮॥

ದ್ವೀಪಿಚರ್ಮೋತ್ತರಾಸಂಗಂ ನಿಶಾಚರಬಲಂ ಬಭೌ ।
ಗಾರ್ಧ್ರಪತ್ರಧ್ವಜಪ್ರಾಯಮಸ್ಥಿಭೂಷಣಭೂಷಿತಂ ॥೮೯॥

ಮುಸಲಾಯುಧದುಷ್ಪ್ರೇಕ್ಷಂ ನಾನಾಪ್ರಾಣಿಮಹಾರವಂ ।
ಕಿನ್ನರಾಃ ಶ್ವೇತವಸನಾಃ ಸಿತಪತ್ರಿಪತಾಕಿನಃ ॥೯೦॥

ಮತ್ತೇಭವಾಹನಪ್ರಾಯಾಸ್ತೀಕ್ಷ್ಣತೋಮರಹೇತಯಃ ।
ಮುಕ್ತಾಜಾಲಪರಿಷ್ಕಾರೋ ಹಂಸೋ ರಜತನಿರ್ಮಿತಃ ॥೯೧॥

ಕೇತುರ್ಜಲಾಧಿನಾಥಸ್ಯ ಭೀಮಧೂಮಧ್ವಜಾನಲಃ ।
ಪದ್ಮರಾಗಮಹಾರತ್ನವಿಟಪಂ ಧನದಸ್ಯ ತು ॥೯೨॥

---

೮೮. ಯಕ್ಷರು ಕರಿಯ ಬಟ್ಟೆಯನ್ನುಟ್ಟು, ಉಗ್ರವಾದ ಬಿಲ್ಲುಬಾಣಗಳನ್ನು ಹಿಡಿದು, ಚಿನ್ನದ ಮತ್ತು ರತ್ನದ ಒಡವೆಗಳನ್ನು ಧರಿಸಿ, ತಾಮ್ರದ ಗೂಬೆಯ ಧ್ವಜದಿಂದ ಕೂಡಿ ಭಯಂಕರರಾಗಿದ್ದರು.

೮೯. ರಾಕ್ಷಸ ಸೈನಿಕರು ಹುಲಿಯ ಚರ್ಮವನ್ನು ಧರಿಸಿದ್ಧರು. ಹದ್ದಿನ ಗರಿಗಳ ಧ್ವಜಗಳನ್ನು ಅನೇಕವಾಗಿ ಹಾರಿಸಿದ್ದರು. ಮೂಳೆಯ ಒಡವೆಗಳನ್ನು ತೊಟ್ಟಿದ್ದರು. ಮುಸಲಾಯುಧವನ್ನು ಹಿಡಿದು ನೋಡುವುದಕ್ಕೆ ಆಗದಷ್ಟು ಭಯಂಕರರೂಪದಿಂದ ಕೂಡಿದ್ದರು. ಅವರ ಸೈನ್ಯದಲ್ಲಿದ್ದ ಬಗೆಬಗೆಯ ಪ್ರಾಣಿಗಳು ಗಟ್ಟಿಯಾಗಿ ಧ್ವನಿಮಾಡುತ್ತಿದ್ದುವು.

೯೦-೯೧. ಕಿನ್ನರರು ಬಿಳಿಯ ಬಟ್ಟೆಗಳನ್ನು ಧರಿಸಿದ್ದರು. ಅವರ ತೇರೂ ಬಾವುಟಗಳೂ ಬಿಳಿಯವು. ಅವರು ಮದ್ದಾನೆಗಳನ್ನು ಏರಿದ್ದರು. ತೀಕ್ಷ್ಣವಾದ ತೋಮರಾಯುಧಗಳನ್ನು ಧರಿಸಿದ್ದರು. ಮುತ್ತಿನ ಕುಚ್ಚುಗಳಿಂದ ಅಲಂಕೃತವಾದ ಬೆಳ್ಳಿಯ ಹಂಸವು ಅವರ ಧ್ವಜವನ್ನಲಂಕರಿಸಿತ್ತು.

೯೨. ಭಯಂಕರವಾಗಿ ಹೊಗೆಯೇಳುತ್ತಿರುವ ಬೆಂಕಿಯು ವರುಣನ ಬಾವುಟವಾಗಿತ್ತು. ಪದ್ಮರಾಗಮಣಿಯಿಂದ ನಿರ್ಮಿತವಾದ ಮರವು ಕುಬೇರನ ಧ್ವಜವೆನಿಸಿತ್ತು. ಅದು ಆಕಾಶಕ್ಕೆ ಹೋಗಲಿಚ್ಛಿಸುತ್ತಿದೆಯೋ ಎನ್ನುವಷ್ಟು ಎತ್ತರವಾಗಿ ಪ್ರಕಾಶಿಸುತ್ತಿತ್ತು.

ಧ್ವಜಂ ಸಮುಚ್ಛ್ರಿತಂ ಭಾತಿ ಗಂತುಕಾಮಮಿವಾಂಬರಂ ।
ವೃಕೇಣ ಕಾರ್ಷ್ಣಲೋಹೇನ ಯಮಸ್ಯಾಸೀನ್ಮಹಾಧ್ವಜಃ ॥೯೩॥

ರಾಕ್ಷಸೇಶಸ್ಯ ಕೇತೋರ್ವೈ ಪ್ರೇತಸ್ಯ ಮುಖಮಾಬಭೌ ।
ಹೇಮಸಿಂಹಧ್ವಜೌ ದೇವೌ ಚಂದ್ರಾರ್ಕಾವಮಿತದ್ಯುತೀ ॥೯೪॥

ಕುಂಭೇನ ರತ್ನಚಿತ್ರೇಣ ಕೇತುರಶ್ವಿನಯೋರಭೂತ್ ।
ಹೇಮಮಾತಂಗರಚಿತಂ ಚಿತ್ರರತ್ನಪರಿಷ್ಕೃತಂ ॥೯೫॥

ಧ್ವಜಂ ಶತಕ್ರತೋರಾಸೀತ್ಸಿತಚಾಮರಮಂಡಿತಂ ।
ಸನಾಗಯಕ್ಷಗಂಧರ್ವಮಹೋರಗನಿಶಾಚರಾ ॥೯೬॥

ಸೇನಾ ಸಾ ದೇವರಾಜಸ್ಯ ದುರ್ಜಯಾ ಭುವನತ್ರಯೇ ।
ಕೋಟಯಸ್ತಾಸ್ತ್ರಯಸ್ತ್ರಿಂಶದ್ದೈವೇ ದೇವನಿಕಾಯಿನಾಂ ॥೯೭॥

ಹಿಮಾಚಲಾಭೇ ಸಿತಕರ್ಣಚಾಮರೇ
ಸುವರ್ಣಪದ್ಮಾಮಲಸುಂದರಸ್ರಜಿ ।

---

೯೩-೯೪. ಯಮನ ದೊಡ್ಡ ಧ್ವಜವು ಕಬ್ಬಿಣದಿಂದ ಮಾಡಿದ ತೋಳದಿಂದ ವಿರಾಜಿಸುತ್ತಿತ್ತು. ನಿರಋತಿಯ ಪತಾಕವು ಪ್ರೇತಮುಖದಿಂದ ರಂಜಿಸಿತು. ಅತಿಶಯ ತೇಜಸ್ವಿಗಳಾದ ಚಂದ್ರಸೂರ್ಯರಿಗೆ ಸುವರ್ಣಸಿಂಹವೇ ಬಾವುಟವಾಗಿದ್ದಿತು.

೯೫. ರತ್ನಚಿತ್ರಿತವಾದ ಕುಂಭವು ಅಶ್ವಿನೀ ದೇವತೆಗಳ ಧ್ವಜಲಾಂಛನವಾಗಿತ್ತು. ಚಿತ್ರರತ್ನಗಳಿಂದ ಅಲಂಕೃತವಾಗಿ, ಬಿಳಿಯ ಚಾಮರದಿಂದ ಸುಂದರವಾದ ಸುವರ್ಣಗಜವು ದೇವೇಂದ್ರನ ಪತಾಕವೆನಿಸಿತ್ತು.

೯೬-೯೭. ನಾಗರು, ಯಕ್ಷರು, ಗಂಧರ್ವರು, ಮಹೋರಗರು, ನಿಶಾಚರರು ಇವರಿಂದ ಪೂರ್ಣವಾದ ದೇವೇಂದ್ರನ ಸೈನ್ಯವನ್ನು ಮೂರು ಲೋಕದಲ್ಲಿ ಯಾರೂ ಗೆಲ್ಲುವವರಿರಲಿಲ್ಲ. ಆ ದೇವಸೇನೆಯಲ್ಲಿ ಮೂವತ್ತು ಮೂರು ಕೋಟಿ ದೇವತೆಗಳೂ ನೆರೆದಿದ್ದರು.

೯೮. ಮಹಾಬಲಶಾಲಿಯಾದ ದೇವೇಂದ್ರನು ವಸ್ತ್ರಭೂಷಣಗಳನ್ನು ಧರಿಸಿ ಐರಾವತವೆಂಬ ಆನೆಯ ಮೇಲೆ ಕುಳಿತಿದ್ದನು. ಅದು ಹಿಮಾಲಯ ಪರ್ವತದಂತೆ

ಕೃತಾಭಿರಾಗೋಜ್ವಲ ಕುಂಕುಮಾಂಕುರೇ
ಕಪೋಲಲೀಲಾಲಿಕದಂಬಸಂಕುಲೇ ||೯೮||

ಸ್ಥಿತಸ್ತದೈರಾವತನಾಮ ಕುಂಜರೇ
ಮಹಾಬಲಶ್ಚಿತ್ರವಿಭೂಷಣಾಂಬರಃ |
ವಿಶಾಲವಸ್ತ್ರಾಂಶುವಿತಾನಭೂಷಿತಃ
ಪ್ರಕೀರ್ಣಕೇಯೂರಭುಜಾಗ್ರಮಂಡಲಃ |
ಸಹಸ್ರದೃಗ್ವಂದಿಸಹಸ್ರಸಂಸ್ತುತ
ಸ್ತ್ರಿವಿಷ್ಟಪೇಽಶೋಭತ ಪಾಕಶಾಸನಃ ||೯೯||

ತುರಂಗಮಾತಂಗಬಲೌಘಸಂಕುಲಾ
ಸಿತಾತಪತ್ರಧ್ವಜರಾಜಿಶಾಲಿನೀ |
ಚಮೂಶ್ಚ ಸಾ ದುರ್ಜಯಪತ್ರಿಸಂತತಾ
ವಿಭಾತಿ ನಾನಾಯುಧಯೋಧದುಸ್ತರಾ ||೧೦೦||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕೋಪಾಖ್ಯಾನೇ
ರಣಯೋಜನೋ ನಾಮಾಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ

---

ಉನ್ನತವಾಗಿಯೂ ಬೆಳ್ಳಗೂ ಇದ್ದಿತು. ಬಿಳಿಯ ಕರ್ಣಚಾಮರದಿಂದ ಅಲಂಕೃತವಾಗಿತ್ತು. ಸುವರ್ಣಕಮಲಗಳ ಮಾಲೆಗಳನ್ನು ಅದಕ್ಕೆ ಹಾಕಿದ್ದರು. ಕುಂಕುಮ ಕೇಸರಿಯಿಂದ ಅದಕ್ಕೆ ವರ್ಣರೇಖೆಯನ್ನು ಬರೆದಿದ್ದರು. ಅದರ ಕೆನ್ನೆಯಲ್ಲಿ ಸೋರುತ್ತಿದ್ದ ಮದೋದಕದ ವಾಸನೆಗಾಗಿ ದುಂಬಿಗಳು ಮುತ್ತುತ್ತಿದ್ದುವು.

೯೯. ದೇವೇಂದ್ರನು ಕಾಂತಿಯನ್ನು ಬೀರುತ್ತಿರುವ ವಸ್ತ್ರಗಳಿಂದಲಂಕೃತನಾಗಿ, ತೋಳುಬಳೆಗಳನ್ನು ತೊಟ್ಟು, ಪರಿಪುಷ್ಟವಾದ ಭುಜಾಗ್ರವು ಶೋಭಿಸುತ್ತಿರಲು, ಸಾವಿರಾರು ಜನ ಸ್ತುತಿಪಾಠಕರು ಹೊಗಳುತ್ತಿರಲು, ಎತ್ತರವಾದ ಆ ಆನೆಯ ಮೇಲಣ ಅಂಬಾರಿಯಲ್ಲಿ ಶೋಭಿಸಿದನು.

೧೦೦. ಆ ದೇವಸೇನೆಯು ಅಜೇಯರಾದ ರಥಿಕರಿಂದಲೂ, ಬಗೆಬಗೆಯ ಆಯುಧಗಳನ್ನು ಧರಿಸಿದ ಯೋಧರಿಂದಲೂ ಪರಿಪೂರ್ಣವಾಗಿತ್ತು. ಆನೆ ಕುದುರೆಗಳ ಬಲದಿಂದ ಕಿಕ್ಕಿರಿಯುತ್ತಿತ್ತು. ಶ್ವೇತಛತ್ರಗಳಿಂದಲೂ ಧ್ವಜಸಮೂಹಗಳಿಂದಲೂ ಪ್ರಕಾಶಿಸುತ್ತಿತ್ತು.

## ಅಧ್ಯಾಯದ ಸಾರಾಂಶ

ದೇವಾಸುರರ ರಣೋದ್ಯೋಗವನ್ನು ಈ ಅಧ್ಯಾಯದಲ್ಲಿ ವರ್ಣಿಸಿದೆ.

ದೇವತೆಗಳನ್ನು ಅಡಗಿಸಲು ತಕ್ಕಷ್ಟು ಸಾಮರ್ಥ್ಯವನ್ನು ಪಡೆಯಬೇಕೆಂದು ತಾರಕಾಸುರನು ಘೋರವಾದ ತಪಸ್ಸನ್ನೆಸಗಿದನು. ಬ್ರಹ್ಮನು ಪ್ರಸನ್ನನಾಗಲು ಅಸುರನು "ಯಾರಿಂದಲೂ ನನಗೆ ಮರಣವೇ ಬಾರದಂತಹ ವರವನ್ನು ಕೊಡಬೇಕು" ಎಂದು ಬೇಡಿದನು. "ಸರ್ವರಿಂದಲೂ ಅವಧ್ಯತ್ವವೆಂಬುದು ಪ್ರಾಣಿಧರ್ಮಕ್ಕೇ ವಿರುದ್ಧ ; ಅದು ಆಗದ ಮಾತು" ಎಂದು ಚತುರ್ಮುಖನು ಉತ್ತರವಿತ್ತನು "ಹಾಗಾದರೆ ಏಳು ದಿನಗಳ ಮಗುವಿನಿಂದ ನನಗೆ ಮರಣವೊದಗಲಿ" ಎಂದು ತಾರಕಾಸುರನು ಕೇಳಿಕೊಂಡನು. ಬ್ರಹ್ಮನು ಹಾಗೆಯೇ ಆಗಲೆಂದು ಹೇಳಿ ತನ್ನ ಸ್ಥಳಕ್ಕೆ ಹೊರಟು ಹೋದನು.

ಇತ್ತ ತಾರಕನು ವರದ ಬಲದಿಂದ ಕೊಬ್ಬಿ, ಸೈನ್ಯವನ್ನು ಸಿದ್ಧಪಡಿಸಿಕೊಂಡು ದೇವತೆಗಳ ಮೇಲೆ ದಂಡಯಾತ್ರೆಗೆ ಹೊರಟನು. ಈ ಸುದ್ದಿ ಇಂದ್ರನಿಗೆ ತಿಳಿಯಿತು. ಅವನೂ ಸಹ ಯಮನಿಗೆ ಸೇನಾಧಿಪತ್ಯವನ್ನು ಕೊಟ್ಟು, ಸಕಲದೇವಗಣಗಳೊಡಗೂಡಿ ದೈತ್ಯರನ್ನು ಎದುರಿಸಲು ಸಸೈನ್ಯನಾಗಿ ಪ್ರಯಾಣಮಾಡಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಸುರೋಪಾಖ್ಯಾನದಲ್ಲಿ ರಣಯೋಜನವೆಂಬ ನೂರ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.



## ಅಥೈಕೋನಪಂಚಾಶದಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಸುರಾಸುರಾಣಾಂ ಸಂಮರ್ದಸ್ತಸ್ಮಿನ್ನತ್ಯಂತದಾರುಣೇ ।
ತುಮುಲೋಽತಿಮಹಾನಾಸೀತ್ಸೇನಯೋರುಭಯೋರಪಿ || ೧ ||

ಗರ್ಜತಾಂ ದೇವದೈತ್ಯಾನಾಂ ಶಂಖಭೇರೀರವೇಣ ಚ ।
ತೂರ್ಯಾಣಾಂ ಚೈವ ನಿರ್ಘೋಷೈರ್ಮಾತಂಗಾನಾಂ ಚ ಬೃಂಹಿತೈಃ || ೨ ||

ಹ್ರೇಷತಾಂ ಹಯವೃಂದಾನಾಂ ರಥನೇಮಿಸ್ವನೇನ ಚ ।
ಜ್ಯಾಘೋಷೇಣ ಚ ಶೂರಾಣಾಂ ತುಮುಲೋಽತಿಮಹಾನಭೂತ್ || ೩ ||

ಸಮಾಸಾದ್ಯೋಭಯೋಃ ಸೇನೇ ಪರಸ್ಪರಜಯೈಷಿಣಾಂ ।
ರೋಷೇಣಾತಿಪರೀತಾನಾಂ ತ್ಯಕ್ತಜೀವಿತಚೇತಸಾಂ || ೪ ||

ಸಮಾಸಾದ್ಯ ತು ತೇಽನ್ಯೋನ್ಯಂ ಪ್ರಕ್ರಮೇಣ ವಿಲೋಮತಃ ।
ರಥೇನಾಸಕ್ತಸಾದಾತೋ ರಥೇನ ಚ ತುರಂಗಮಃ || ೫ ||

---

೧. ಅತಿಭಯಂಕರವಾದ ಆ ದೇವಾಸುರ ಯುದ್ಧದಲ್ಲಿ ಇಕ್ಕಡೆಯ ಸೈನ್ಯಗಳಿಗೂ ಬಹಳ ದೊಡ್ಡ ಕೈ ಕೈ ಕಾಳಗವು ನಡೆಯಿತು.

೨-೩. ದೇವತೆಗಳ ಮತ್ತು ದೈತ್ಯರ ಗರ್ಜನೆ, ಶಂಖಗಳ ಮತ್ತು ಭೇರಿಗಳ ಅಬ್ಬರ, ವಾದ್ಯಗಳ ಮೊರೆತ, ಆನೆಗಳ ಘೀಂಕಾರ, ಕುದುರೆಗಳ ಕೆನೆತ, ಚಕ್ರಗಳ ಕಿರುಚಲು, ಶೂರರ ಧನುಷ್ಟಂಕಾರ ಇವೆಲ್ಲವೂ ಒಟ್ಟಿಗೆ ಕೂಡಿ ದೊಡ್ಡ ಗದ್ದಲವು ಕೇಳಿಬರುತ್ತಿತ್ತು.

೪. ಎರಡು ಸೈನ್ಯವೂ ಸಂಧಿಸಿತು. ಅವುಗಳ ವೀರರು ಒಬ್ಬರನ್ನೊಬ್ಬರು ಗೆಲ್ಲಬೇಕೆಂದಿದ್ದರು. ಅಳತೆಮೀರಿದ ಕೋಪದಿಂದ ಕೂಡಿದ್ದರು. ಪ್ರಾಣದ ಮೇಲಣ ಆಸೆಯನ್ನೂ ಕೂಡ ಅವರು ದೂರಮಾಡಿದ್ದರು.

೫-೬. ಅವರು ಕ್ರಮವಾಗಿಯೂ ಅಕ್ರಮವಾಗಿಯೂ ಒಬ್ಬರನ್ನೊಬ್ಬರು ಎದುರಿಸಿದರು. ಕಾಲಾಳು ತೇರನ್ನೂ, ಕುದುರೆಯು ರಥವನ್ನೂ, ಆನೆಯು ಪದಾತಿಯನ್ನೂ, ರಥಿಕನು ರಥಿಕನನ್ನೂ, ಆನೆಯು ಆನೆಯನ್ನೂ ಸಂಧಿಸಿದುವು.

ಹಸ್ತೀ ಪದಾತಿಸಂಯುಕ್ತೋ ರಥಿನಾ ಚ ಕ್ವಚಿದ್ರ ಥೀ ।
ಮಾತಂಗೇನಾಪರೋ ಹಸ್ತೀ ತುರಂಗೈರ್ಬಹುಭಿರ್ಗಜಃ ॥ ೬ ॥

ಪದಾತಿರೇಕೋ ಬಹುಭಿರ್ಗಜೈರ್ಮತ್ತೈಶ್ಚ ಯುಜ್ಯತೇ ।
ತತಃ ಪ್ರಾಸಾಶನಿಗದಾಭಿಂದಿಪಾಲಪರಶ್ವಧೈಃ ॥ ೭ ॥

ಶಕ್ತಿಭಿಃ ಪಟ್ಟಿಶೈಃ ಶೂಲೈರ್ಮುದ್ಗರೈಃ ಕುಣಪೈರ್ಗಡೈಃ ।
ಚಕ್ರೈಶ್ಚ ಶಂಕುಭಿಶ್ಚೈವ ತೋಮರೈರಂಕುಶೈಃ ಸಿತೈಃ ॥ ೮ ॥

ಕರ್ಣಿನಾಲೀಕನಾರಾಚವತ್ಸದಂತಾರ್ಧಚಂದ್ರಕೈಃ ।
ಭಲ್ಲೈಶ್ಚ ಶತಪತ್ರೈಶ್ಚ ಶುಕತುಂಡೈಶ್ಚ ನಿರ್ಮಲೈಃ ॥ ೯ ॥

ವೃಷ್ಟಿರತ್ಯದ್ಭುತಾಕಾರಾ ಗಗನೇ ಸಮದೃಶ್ಯತ ।
ಸಂಪ್ರಚ್ಛಾದ್ಯ ದಿಶಃ ಸರ್ವಾಸ್ತಮೋಮಯಮಿವಾಕರೋತ್ ॥೧೦॥

ನ ಪ್ರಾಜ್ಞಾಯತ ತೇಽನ್ಯೋನ್ಯಂ ತಸ್ಮಿಂಸ್ತಮಸಿ ಸಂಕುಲೇ ।
ಅಲಕ್ಷ್ಯಂ ವಿಸೃಜಂತಸ್ತೇ ಹೇತಿಸಂಘಾತಮುದ್ಧತಂ ॥೧೧॥

---

ಇನ್ನೊಂದು ಕಡೆ ಒಂದು ಆನೆಯು ಹಲವು ಕುದುರೆಗಳನ್ನೂ, ಕಾಲಾಳೊಬ್ಬನು ಅನೇಕ ಮದದಾನೆಗಳನ್ನೂ ಎದುರಿಸಿ ಹೋರಾಡಿದರು.

೭-೧೦. ಬಳಿಕ ಎರಡು ಪಕ್ಷದವರೂ ಪ್ರಾಸ, ಅಶನಿ, ಗದೆ, ಬಿಂಡಿವಾಳ, ಕೊಡಲಿ, ಶಕ್ತಿ, ಪಟ್ಟಿಶ, ಶೂಲ, ಮುದ್ಗರ, ಕುಣಪ, ಗಡ, ಚಕ್ರ, ಶಂಕು, ತೋಮರ, ಅಂಕುಶ, ಬಾಣ, ಕರ್ಣಿ, ನಾಲೀಕ, ನಾರಾಚ, ವತ್ಸದಂತ, ಅರ್ಧ ಚಂದ್ರ, ಭಲ್ಲ, ಶತಪತ್ರ, ಶುಕತುಂಡ—(ಗಿಳಿಯ ಕೊಕ್ಕಿನಂತೆ ಬಾಗಿ ಮೊನ ಚಾಗಿರುವ ಆಯುಧ ವಿಶೇಷ ಇವುಗಳ ದೊಡ್ಡ ಮಳೆಯನ್ನೇ ಸುರಿಸಿದರು. ಇವು ಆಕಾಶವನ್ನೆಲ್ಲ ಮುಚ್ಚಿಕೊಂಡು ಕಗ್ಗತ್ತಲೆಯನ್ನು ಉಂಟುಮಾಡಿದುವು.

೧೧. ಆ ಕಗ್ಗತ್ತಲೆಯ ಕೈಕೈಯುದ್ಧದಲ್ಲಿ ಒಬ್ಬರನ್ನೊಬ್ಬರು ತಿಳಿಯು ವಂತಿರಲಿಲ್ಲ. ಅವರು ಗಾಬರಿಯಿಲ್ಲದೆ ಆಯುಧವನ್ನು ಎತ್ತಿ ಬಿಸಾಡುತ್ತಿದ್ದರು, ಸೈನ್ಯದ ಮಧ್ಯದಲ್ಲಿ ಅದು ಬಂದು ಬಿದ್ದಾಗ ಒಬ್ಬರನ್ನೊಬ್ಬರು ನೋಡುತ್ತಿದ್ದರು.

ಪತಿತಂ ಸೇನಯೋರ್ಮಧ್ಯೇ ನಿರೀಕ್ಷಂತೇ ಪರಸ್ಪರಂ ।
ತತೋ ಧ್ವಜೈರ್ಭುಜೈಶ್ಛತ್ರೈಃ ಶಿರೋಭಿಶ್ಚ ಸಕುಂಡಲೈಃ ॥೧೨॥
ಗಜೈಸ್ತುರಂಗೈಃ ಪಾದಾತ್ಯೈಃ ಪತದ್ಭಿಃ ಪತಿತೈರಪಿ ।
ಆಕಾಶಸರಸೋ ಭ್ರಷ್ಟೈಃ ಪಂಕಜೈರಿವ ಭೂಃ ಸ್ತೃತಾ ॥೧೩॥
ಭಗ್ನದಂತಾ ಭಿನ್ನಕುಂಭಾಶ್ಛಿನ್ನದೀರ್ಘಮಹಾಕರಾಃ ।
ಗಜಾಃ ಶೈಲನಿಭಾಃ ಪೇತುರ್ಧರಣ್ಯಾಂ ರುಧಿರಸ್ರವಾಃ ॥೧೪॥
ಭಗ್ನೇಷಾದಂಡಚಕ್ರಾಕ್ಷಾ ರಥಾಶ್ಚ ಶಕಲೀಕೃತಾಃ ।
ಪೇತುಃ ಶಕಲತಾಂ ಯಾತಾಸ್ತುರಂಗಾಶ್ಚ ಸಹಸ್ರಶಃ ॥೧೫॥
ತತೋಽಸೃಗ್ಹ್ರದದುಸ್ತಾರಾ ಪೃಥಿವೀ ಸಮಜಾಯತ ।
ನದ್ಯಶ್ಚ ರುಧಿರಾವರ್ತಾ ಹರ್ಷದಾಃ ಪಿಶಿತಾಶಿನಾಂ ।
ವೇತಾಲಕ್ರೀಡಮಭವತ್ತತ್ಸಂಕುಲರಣಾಜಿರಂ ॥೧೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕಾಸುರೋಪಾಖ್ಯಾನೇ
ದೇವಾಸುರಯುದ್ಧಂ ನಾಮೈಕೋನಪಂಚಾಶದಧಿಕಶತತಮೋಽಧ್ಯಾಯಃ

---

೧೨-೧೩. ಬಳಿಕ ಧ್ವಜಗಳು, ಭುಜಗಳು, ಛತ್ರಗಳು, ಕುಂಡಲಸಹಿತವಾದ ತಲೆಗಳು, ಆನೆಗಳು, ಕುದುರೆಗಳು ಮತ್ತು ಕಾಲಾಳುಗಳು ಕತ್ತರಿಸಿಹೋಗಿ ನೆಲದ ಮೇಲೆ ಬಿದ್ದು ಹರಡಿಕೊಂಡಿದ್ದುವು. ಅದನ್ನು ನೋಡಿದರೆ ಆಕಾಶವೆಂಬ ಸರೋವರದಿಂದ ಉದುರಿದ ತಾವರೆಗಳೋ ಎನ್ನುವಂತಿತ್ತು.

೧೪. ಕೊಂಬು, ಕುಂಭಸ್ಥಳ, ಸೊಂಡಲು, ಇವೆಲ್ಲ ತುಂಡರಿಸಿಹೋಗಲು, ರಕ್ತವನ್ನು ಸುರಿಸುತ್ತ ಪರ್ವತದಂತಹ ಆನೆಗಳು ನೆಲದ ಮೇಲೆ ಬಿದ್ದುವು.

೧೫. ಮೂಕಿಮರ, ಚಕ್ರ, ಅಚ್ಚು ಇವು ಮುರಿದು ತೇರುಗಳು ಪುಡಿಪುಡಿಯಾಗಿ ಬಿದ್ದುವು. ಕುದುರೆಗಳೂ ಸಹ ತುಂಡುತುಂಡಾಗಿ ಸಾವಿರಗಟ್ಟಲೆಯಲ್ಲಿ ಕತ್ತರಿಸಿಹೋದುವು.

೧೬. ಬಳಿಕ ನೆಲದ ಮೇಲೆ ರಕ್ತವು ಮಡುವಿನಂತೆ ನಿಂತಿತು. ಅದನ್ನು ದಾಟುವುದೇ ಅಶಕ್ಯವಾಯಿತು. ನೆತ್ತರ ಹೊಳೆಗಳು ಸುಳಿಗಳಿಂದ ಕೂಡಿ ರಾಕ್ಷಸರಿಗೆ ಹರ್ಷವನ್ನುಂಟುಮಾಡಿದುವು. ಬೇತಾಳಗಳು ನರ್ತಿಸಿದುವು. ಇವುಗಳಿಂದ ಯುದ್ಧರಂಗವು ಕಿಕ್ಕಿರಿದು ಹೋಯಿತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ದೇವಾಸುರಯುದ್ಧವು ವರ್ಣಿತವಾಗಿದೆ.

ದೇವಾಸುರರ ಸೈನ್ಯಗಳು ಒಟ್ಟುಗೂಡಿ ತುಮುಲಯುದ್ಧವನ್ನು ಮಾಡಿದುವು. ಎರಡುಕಡೆಯಲ್ಲಿಯೂ ಅಸಂಖ್ಯಾತಬಲವು ನಷ್ಟವಾಯಿತು. ನೆಲದ ಮೇಲೆ ರಕ್ತದ ಹೊಳೆ ಹರಿಯಿತು. ರಾಕ್ಷಸರಿಗೆ ಆನಂದವಾಯಿತು. ಬೇತಾಳಗಳು ನರ್ತನ ಮಾಡಿದುವು. ಶಸ್ತ್ರಾಸ್ತ್ರಗಳ ಹಾರಾಟದಿಂದ ರಣರಂಗದಲ್ಲಿ ಕತ್ತಲೆ ಕವಿದು ಕೊಂಡಿತ್ತು.

ಶ್ರೀಮತ್ಸ್ಯಮಹಾಪುರಾಣದಲ್ಲಿತಾರಕೋಪಾಖ್ಯಾನದಲ್ಲಿ ದೇವಾಸುರಯುದ್ಧವೆಂಬ ನೂರನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



## ಅಥ ಪಂಚಾಶದಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಅಥ ಗ್ರಸನಮಾಲೋಕ್ಯ ಯಮಃ ಕ್ರೋಧವಿಮೂರ್ಛಿತಃ ।
ವವರ್ಷ ಶರವರ್ಷೇಣ ವಿಶೇಷಾಣಾಗ್ನಿವರ್ಚಸಾ || ೧ ||

ಸ ವಿದ್ಧೋ ಬಹುಭಿರ್ಬಾಣೈರ್ಗ್ರಸನೋಽತಿಪರಾಕ್ರಮಃ ।
ಕೃತಪ್ರತಿಕೃತಾಕಾಂಕ್ಷೀ ಧನುರಾನಮ್ಯ ಭೈರವಂ || ೨ ||

ಶತೈಃ ಪಂಚಭಿರತ್ಯುಗ್ರೈಃ ಶರಾಣಾಂ ಯಮಮರ್ದಯತ್ ।
ಸ ವಿಚಿಂತ್ಯ ಯಮೋ ಬಾಣಾನ್ಗ್ರಸನಸ್ಯಾತಿಪೌರುಷಂ || ೩ ||

ಬಾಣವೃಷ್ಟಿಭಿರುಗ್ರಾಭಿರ್ಯಮೋ ಗ್ರಸನಮರ್ದಯತ್ ।
ಕೃತಾಂತಶರವೃಷ್ಟಿಂ ತಾಂ ವಿಯತಿ ಪ್ರತಿಸರ್ಪಿಣೀಂ || ೪ ||

---

೧. ಸೂತಪೌರಾಣಿಕನು ಹೇಳಿದನು.—ಬಳಿಕ ಯಮನು ಗ್ರಸನನನ್ನು ನೋಡಿ ಕೋಪದಿಂದ ಮೈಮರೆತನು. ಬೆಂಕಿಯಂತೆ ಉರಿಯನ್ನು ಕರೆಯುವ ಬಾಣಗಳ ಮಳೆಯನ್ನು ಸುರಿಸಿದನು.

೨. ಗ್ರಸನನ ಮೈಯಲ್ಲಿ ನೂರಾರು ಬಾಣಗಳು ನಾಟಿಕೊಂಡುವು. ಅತಿ ಪರಾಕ್ರಮಶಾಲಿಯಾದ ಆತನು ಪ್ರತೀಕಾರಮಾಡಲಿಚ್ಛಿಸಿ, ಭಯಂಕರವಾದ ತನ್ನ ಬಿಲ್ಲನ್ನು ಬಗ್ಗಿಸಿ, ಅತಿ ತೀಕ್ಷ್ಣವಾದ ಐದುನೂರು ಅಂಬುಗಳಿಂದ ಯಮನನ್ನು ಪ್ರಹರಿಸಿದನು.

೩. ಯಮನು ಗ್ರಸನನ ಅತ್ಯದ್ಭುತವಾದ ಸಾಹಸವನ್ನು ಮನಗಂಡು, ಅವನ ಮೇಲೆ ಅತ್ಯುಗ್ರವಾದ ಬಾಣಗಳ ಮಳೆಯನ್ನು ಕರೆದನು.

೪. ದಾನವೇಶ್ವರನಾದ ಗ್ರಸನನು ಆಕಾಶದಲ್ಲಿ ಹಾದುಬರುತ್ತಿರುವ ಯಮನ ಬಾಣಪರಂಪರೆಯನ್ನು ತನ್ನ ಕೋಲ್ಮಳೆಯಿಂದ ಕತ್ತರಿಸಿದನು.

ಚಿಚ್ಛೇದ ಶರವರ್ಷೇಣ ಗ್ರಸನೋ ದಾನವೇಶ್ವರಃ ।
ವಿಫಲಾಂ ತಾಂ ಸಮಾಲೋಕ್ಯಯಮಸ್ತಾಂ ಶರಸಂತತಿಂ ॥ ೫ ॥

ಸ ವಿಚಿಂತ್ಯ ಶರವ್ರಾತಂ ಗ್ರಸನಸ್ಯ ರಥಂ ಪ್ರತಿ ।
ಚಿಕ್ಷೇಪ ಮುದ್ಗರಂ ಘೋರಂ ತರಸಾ ತಸ್ಯ ಚಾಂತಕಃ ॥ ೬ ॥

ಸ ತಂ ಮುದ್ಗರಮಾಯಾಂತಮುತ್ಪ್ಲುತ್ಯ ಗಗನಸ್ಥಿತಂ ।
ಜಗ್ರಾಹ ವಾಮಹಸ್ತೇನ ಯಾಮ್ಯಂ ದಾನವನಂದನಃ ॥ ೭ ॥

ತಮೇವ ಮುದ್ಗರಂ ಗೃಹ್ಯ ಯಮಸ್ಯ ಮಹಿಷಂ ರುಷಾ ।
ಪಾತಯಾಮಾಸ ವೇಗೇನ ಸ ಪಪಾತ ಮಹೀತಲೇ ॥ ೮ ॥

ಉತ್ಪ್ಲುತ್ಯಾಥ ಯಮಸ್ತಸ್ಮಾನ್ಮಹಿಷಾನ್ನಿಷ್ಪತಿಷ್ಯತಃ ।
ಪ್ರಾಸೇನ ತಾಡಯಾಮಾಸ ಗ್ರಸನಂ ವದನೇ ದೃಢಂ ॥ ೯ ॥

ಸ ತು ಪ್ರಾಸಪ್ರಹಾರೇಣ ಮೂರ್ಛಿತೋ ನ್ಯಪತದ್ಭುವಿ ।
ಗ್ರಸನಂ ಪತಿತಂ ದೃಷ್ಟ್ವಾ ಜಂಭೋ ಭೀಮಪರಾಕ್ರಮಃ ॥೧೦॥

---

೫-೬. ತನ್ನ ಬಾಣಗಳೆಲ್ಲ ವ್ಯರ್ಥವಾದುದನ್ನು ಕಂಡು ಯಮನು ಚಿಂತಿಸಿ, ಗ್ರಸನನ ರಥದ ಮೇಲೆ ಭಯಂಕರವಾದ ಮುದ್ಗರವನ್ನೆಸೆದನು.

೭. ಯಮನ ಮುದ್ಗರವು ಆಕಾಶದಲ್ಲಿ ಹಾಯ್ದು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ, ಗ್ರಸನನು ಮೇಲಕ್ಕೆ ನೆಗೆದು ಎಡಗೈಯಿಂದ ಅದನ್ನು ಹಿಡಿದುಕೊಂಡನು.

೮. ಅವನು ಸಿಟ್ಟುಗೊಂಡು ಅದೇ ಮುದ್ಗರದಿಂದ ಯಮನ ವಾಹನವಾದ ಮಹಿಷವನ್ನು ಬಲವಾಗಿ ಹೊಡೆದನು. ಅದು ನೆಲದ ಮೇಲೆ ಬಿದ್ದುರುಳಿತು.

೯. ತನ್ನ ವಾಹನವು ಬೀಳುವಷ್ಟರಲ್ಲೇ ಯಮನು ಅದರಿಂದ ನೆಗೆದು ಗ್ರಸನನ ಮುಖದ ಮೇಲೆ ಪ್ರಾಸಾಯುಧದಿಂದ ಬಲವಾಗಿ ಹೊಡೆದನು.

೧೦-೧೧. ಅವನು ಪ್ರಾಸದ ಪೆಟ್ಟಿನಿಂದ ಮೂರ್ಛೆಹೋಗಿ ನೆಲದ ಮೇಲೆ ಬಿದ್ದನು. ಗ್ರಸನನು ಬಿದ್ದುದನ್ನು ಕಂಡು ಬಹುಪರಾಕ್ರಮಶಾಲಿಯಾದ ಜಂಭನು

ಯಮಸ್ಯ ಭಿಂದಿಪಾಲೇನ ಪ್ರಹಾರಮಕರೋದ್ಧೃದಿ।
ಯಮಸ್ತೇನ ಪ್ರಹಾರೇಣ ಸುಸ್ರಾವ ರುಧಿರಂ ಮುಖಾತ್ ॥೧೧॥

ಕೃತಾಂತಮರ್ದಿತಂ ದೃಷ್ಟ್ವಾ ಗದಾಪಾಣಿರ್ಧನಾಧಿಪಃ।
ವೃತೋ ಯಕ್ಷಾಯುತಶತೈರ್ಜಂಭಂ ಪ್ರತ್ಯುದ್ಯಯೌ ರುಷಾ ॥೧೨॥

ಜಂಭೋ ರುಷಾ ತಮಾಯಾಂತಂ ದಾನವಾನೀಕಸಂವೃತಃ।
ಉವಾಚ ಪ್ರಾಜ್ಞೋ ವಾಕ್ಯಂ ತು ಯಥಾ ಸ್ನಿಗ್ಧೇನ ಭಾಷಿತಂ ॥೧೩॥

ಗ್ರಸನೋ ಲಬ್ಧಸಂಜ್ಞೋಽಥ ಯಮಸ್ಯ ಪ್ರಾಹಿಣೋದ್ಗದಾಂ।
ಮಣಿಹೇಮಪರಿಷ್ಕಾರಾಂ ಗುರ್ವೀಮರಿವಿಮರ್ದಿನೀಂ ॥೧೪॥

ತಾಮಪ್ರತರ್ಕ್ಯಾಂ ಸಂಪ್ರೇಕ್ಷ್ಯ ಗದಾಂ ಮಹಿಷವಾಹನಃ।
ಗದಾಯಾಃ ಪ್ರತಿಘಾತಾರ್ಥಂ ಜಗದ್ದಲನಭೈರವಂ ॥೧೫॥

---

ಯಮನ ಎದೆಯಮೇಲೆ ಭಿಂದಿಪಾಲದಿಂದ ಹೊಡೆದನು. ಆ ಏಟಿಗೆ ಯಮನ ಮುಖದಿಂದ ರಕ್ತವು ಸುರಿಯಿತು.

೧೨. ಯಮನಿಗೆ ಪೆಟ್ಟು ಬಿದ್ದುದನ್ನು ನೋಡಿ, ಕುಬೇರನು ಗದೆಯನ್ನು ಕೈಯಲ್ಲಿ ಹಿಡಿದು, ಲಕ್ಷಗಟ್ಟಲೆ ಯಕ್ಷರೊಡನೆ ಕೂಡಿ ಕೋಪದಿಂದ ಜಂಭನನ್ನೆದುರಿಸಿದನು.

೧೩. ದಾನವ ಸೈನ್ಯಸಹಿತನೂ, ಪ್ರಜ್ಞಾಶಾಲಿಯೂ ಆದ ಜಂಭನು ಕೋಪದಿಂದ ತನ್ನ ಮೇಲೆ ಏರಿ ಬರುತ್ತಿರುವ ಕುಬೇರನಿಗೆ ಸ್ನೇಹಿತನಂತೆ ಹೇಳಿದನು.

೧೪. ಬಳಿಕ ಗ್ರಸನನು ಮೂರ್ಛೆಯಿಂದೆದ್ದು, ರತ್ನಗಳಿಂದಲೂ ಸುವರ್ಣದಿಂದಲೂ ಅಲಂಕೃತವಾಗಿ ಶತ್ರುಗಳನ್ನು ಮರ್ದನಮಾಡುವ ದೊಡ್ಡ ಗದೆಯನ್ನು ಯಮನ ಮೇಲೆ ಎಸೆದನು.

೧೫-೧೬. ಯಮನು ಊಹೆಗೆ ಮೀರಿದ ಆ ಗದೆಯನ್ನು ನೋಡಿ ಅದನ್ನು ನಿವಾರಿಸುವುದಕ್ಕಾಗಿ ಯತ್ನಿಸಿದನು. ಲೋಕವನ್ನು ಸೀಳಿಹಾಕುವಷ್ಟು ಭಯಂಕರವಾಗಿರುವ ತನ್ನ ದಂಡವನ್ನು ಕೋಪದಿಂದ ಪ್ರಯೋಗಿಸಿದನು. ಅದು ಉರಿಯನ್ನು

**ದಂಡಂ ಮುಮೋಚ ಕೋಪೇನ ಜ್ವಾಲಾಮಾಲಾಸಮಾಕುಲಂ ।**
**ಸ ಗದಾಂ ವಿಯತಿ ಪ್ರಾಪ್ಯ ರರಾಸಾಂಬುಧರೋ ಯಥಾ ॥೧೬॥**

**ಸಂಘಟ್ಟಮಭವತ್ತಾಭ್ಯಾಂ ಶೈಲಾಭ್ಯಾಮಿವ ದುಃಸಹಂ ।**
**ತಾಭ್ಯಾಂ ನಿಷ್ಪೇಷನಿರ್ಹ್ರಾದಜಡೀಕೃತದಿಗಂತರಂ ॥೧೭॥**

**ಜಗದ್ವ್ಯಾಕುಲತಾಂ ಯಾತಂ ಪ್ರಲಯಾಗಮಶಂಕಯಾ ।**
**ಕ್ಷಣಾತ್ಪ್ರಶಾಂತನಿರ್ಹ್ರಾದಂ ಜ್ವಲದುಲ್ಕಾಸಮಾಹಿತಂ ॥೧೮॥**

**ನಿಷ್ಪೇಷೇಣ ತಯೋರ್ಭೀಮಮಭೂದ್ಗಗನಗೋಚರಂ ।**
**ನಿಹತ್ಯಾಥ ಗದಾಂ ದಂಡಸ್ತತೋ ಗ್ರಸನಮೂರ್ಧನಿ ॥೧೯॥**

**ಹೃತ್ವಾ ಶ್ರಿಯಮಿವಾನರ್ಥೋ ದುರ್ವೃತ್ತಸ್ಯಾಪತದ್ದೃಢಃ ।**
**ಸ ತು ತೇನ ಪ್ರಹಾರೇಣ ದೃಷ್ಟ್ವಾ ಸತಿಮಿರಾ ದಿಶಃ ॥೨೦॥**

---

ಉಗುಳುತ್ತಿತ್ತು. ಗ್ರಸನನು ಅದನ್ನು ಅಂತರಾಳದಲ್ಲಿಯೇ ಹಿಡಿದು ನಿಲ್ಲಿಸಿ ಮೋಡದಂತೆ ಗರ್ಜಿಸಿದನು.

೧೭. ಎರಡು ಬೆಟ್ಟಗಳು ಒಂದನ್ನೊಂದು ಸಂಘಟ್ಟಿಸುವಂತೆ ಆ ಆಯುಧಗಳೆರಡೂ ಘೋರವಾಗಿ ಹೋರಾಡಿದುವು. ಅವುಗಳ ತಿಕ್ಕಾಟದ ಘೋರರವದಿಂದ ದಿಗಂತವು ಸ್ತಬ್ಧವಾಯಿತು.

೧೮. ಆ ಅಬ್ಬರವನ್ನು ಕೇಳಿ ಪ್ರಲಯಕಾಲವು ಬಂದಿತೋ ಎಂಬ ಸಂದೇಹದಿಂದ ಲೋಕವು ವ್ಯಾಕುಲಗೊಂಡಿತು. ಸ್ವಲ್ಪ ಹೊತ್ತಿನಲ್ಲಿಯೇ ಉರಿಗೊಳ್ಳಿಯ ರಾಶಿಯೂ ಗುಡಿಗನ ಸದ್ದೂ ಪ್ರಶಾಂತವಾದುವು.

೧೯. ಅವೆರಡರ ಸಂಘರ್ಷಣದಿಂದ ಗಗನಪ್ರದೇಶವು ಭಯಂಕರವಾಗಿ ಕಂಡಿತು. ಬಳಿಕ ದಂಡವು ಗದೆಯನ್ನು ಧ್ವಂಸಮಾಡಿ, ದುರಾಚಾರಿಯ ಸಂಪತ್ತನ್ನು ಅನರ್ಥವು ಅಪಹರಿಸುವಂತೆ ಗ್ರಸನನ ತಲೆಯ ಮೇಲೆ ವೇಗವಾಗಿ ಬಿದ್ದಿತು.

೨೦. ಆ ಏಟಿನಿಂದ ಅವನಿಗೆ ತಲೆ ತಿರುಗಿತು. ಎಲ್ಲ ದಿಕ್ಕುಗಳಲ್ಲಿಯೂ ಕಗ್ಗತ್ತಲು ಕವಿದಿರುವಂತೆ ಕಂಡಿತು. ಮೂರ್ಛೆಹೋಗಿ ಅವನು ನೆಲದ ಮೇಲೆ ಬಿದ್ದನು. ಭೂಮಿಯ ಧೂಳು ಅವನ ಮೈಮೇಲೆ ಹತ್ತಿಕೊಂಡಿತು.

ಪಪಾತ ಭೂಮೌ ನಿಃಸಂಜ್ಞೋ ಭೂಮಿರೇಣುವಿಭೂಷಿತಃ ।
ತತೋ ಹಾಹಾರವೋ ಘೋರಃ ಸೇನಯೋರುಭಯೋರಭೂತ್ ॥೨೧॥

ತತೋ ಮುಹೂರ್ತಮಾತ್ರೇಣ ಗ್ರಸನಃ ಪ್ರಾಪ್ಯ ಚೇತನಾಂ ।
ಅಪಶ್ಯತ್ಸ್ವಾಂ ತನುಂ ಧ್ವಸ್ತಾಂ ವಿಲೋಲಾಭರಣಾಂಬರಾಂ ॥೨೨॥

ಸ ಚಾಪಿ ಚಿಂತಯಾಮಾಸ ಕೃತೇ ಪ್ರತಿಕೃತಿಕ್ರಿಯಾಂ ।
ಮದ್ವಿಧೇ ವಸ್ತುನಿ ಪುಂಸಿ ಪ್ರಭೋಃ ಪರಿಭವೋದಯಃ ॥೨೩॥

ಮಯ್ಯಾಶ್ರಿತಾನಿ ಸೈನ್ಯಾನಿ ಜಿತೇ ಮಯಿ ವಿನಾಶಿತಾ ।
ಅಸಂಭಾವಿತ ಏವಾಸ್ತು ಜನಃ ಸ್ವಚ್ಛಂದಚೇಷ್ಟಿತಃ ॥೨೪॥

ನ ತು ವ್ಯರ್ಥಶತೋದ್ಘುಷ್ಟಸಂಭಾವಿತಧನೋ ನರಃ ।
ಏವಂ ಸಂಚಿಂತ್ಯ ವೇಗೇನ ಸಮುತ್ತಸ್ಥೌ ಮಹಾಬಲಃ ॥೨೫॥

---

೨೧-೨೨. ಬಳಿಕ ಎರಡು ಸೈನ್ಯಗಳಲ್ಲಿಯೂ ಭಯಂಕರವಾದ ಹಾಹಾಕಾರವೆದ್ದಿತು. ಮುಹೂರ್ತಕಾಲದಲ್ಲಿಯೇ ಗ್ರಸನನು ಮೂರ್ಛೆಯಿಂದೆದ್ದನು. ದಿವ್ಯವಾದ ಆಭರಣಗಳಿಂದ ಪ್ರಕಾಶಿಸುತ್ತಿದ್ದ ತನ್ನ ದೇಹವು ಧೂಳಿಯಿಂದ ಕಾಂತಿಹೀನವಾಗಿರುವುದನ್ನು ಅವನು ನೋಡಿದನು.

೨೩. ತನಗೆ ಅಪಕಾರಮಾಡಿದ ಶತ್ರುವಿನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ಅವನೂ ಸಹ ಯೋಚಿಸುತ್ತಿದ್ದನು. "ನನ್ನಂತಹ ವೀರಪುರುಷನಿರುವಾಗ ಪ್ರಭುವಿಗೆ ಅಪಮಾನವಾಗಬೇಕೆ?

೨೪-೨೫. ಸೈನ್ಯಗಳೆಲ್ಲ ನನ್ನನ್ನು ಆಶ್ರಯಿಸಿವೆ. ನಾನು ಸೋತರೆ ಅವುಗಳಿಗೆ ವಿನಾಶವೇ ಸರಿ. ಸ್ವಾರ್ಥದಿಂದ ಮನಸ್ಸುಬಂದಂತೆ ಕೆಲಸಮಾಡುವ ಮನುಷ್ಯನು ಅಗೌರವಸ್ಥನೇ ಆಗುವನು. ಆದರೆ ನೂರಾರು ಜನ ದರಿದ್ರರಿಗೆ ಧನಸಹಾಯಮಾಡಿ ಅವರಿಂದ ಹೊಗಳಿಸಿಕೊಳ್ಳುವವನು ಮಾತ್ರ ಅಂತಹವನಾಗುವುದಿಲ್ಲ" ಹೀಗೆ ಯೋಚಿಸಿ ಮಹಾಬಲಶಾಲಿಯಾದ ಗ್ರಸನನು ಬೇಗನೆ ಎದ್ದನು.

ಮುದ್ಗರಂ ಕಾಲದಂಡಾಭಂ ಗೃಹೀತ್ವಾ ಗಿರಿಸನ್ನಿಭಂ ।
ಗ್ರಸನೋ ಘೋರಸಂಕಲ್ಪಃ ಸಂದಷ್ಟೌಷ್ಠಪುಟಚ್ಛದಃ ॥೨೬॥

ರಥೇನ ತ್ವರಿತೋ ಗಚ್ಛನ್ಸಾಸಸಾದಾಂತಕಂ ರಣೇ ।
ಸಮಾಸಾದ್ಯ ಯಮಂ ಯುದ್ಧೇ ಗ್ರಸನೋ ಭ್ರಾಮ್ಯ ಮುದ್ಗರಂ ॥೨೭॥

ವೇಗೇನ ಮಹತಾ ರೌದ್ರಂ ಚಿಕ್ಷೇಪ ಯಮಮೂರ್ಧನಿ ।
ವಿಲೋಕ್ಯ ಮುದ್ಗರಂ ದೀಪ್ತಂ ಯಮಃ ಸಂಭ್ರಾಂತಲೋಚನಃ ॥೨೮॥

ವಂಚಯಾಮಾಸ ದುರ್ಧರ್ಷಂ ಮುದ್ಗರಂ ಸ ಮಹಾಬಲಃ ।
ತಸ್ಮಿನ್ನಪಸೃತೇ ದೂರಂ ಚಂಡಾನಾಂ ಭೀಮಕರ್ಮಣಾಂ ॥೨೯॥

ಯಾಮ್ಯಾನಾಂ ಕಿಂಕರಾಣಾಂ ತು ಸಹಸ್ರಂ ನಿಷ್ಪಿಪೇಷ ಹ ।
ತತಸ್ತಾಂ ನಿಹತಾಂ ದೃಷ್ಟ್ವಾ ಘೋರಾಂ ಕಿಂಕರವಾಹಿನೀಂ ॥೩೦॥

---

೨೬. ಗ್ರಸನನು ಘೋರಸಂಕಲ್ಪನಾಗಿ ತುಟಿಗಳನ್ನು ಕಚ್ಚಿಕೊಂಡು, ಕಾಲದಂಡಸದೃಶವೂ ಗಿರಿಸಮಾನವೂ ಆದ ಮುದ್ಗರವನ್ನು ಎತ್ತಿಹಿಡಿದು, ರಥದಲ್ಲಿ ಕುಳಿತು, ಬೇಗನೆ ಹೋಗಿ ಯಮನನ್ನು ರಣದಲ್ಲಿ ಸಂಧಿಸಿದನು.

೨೭. ಗ್ರಸನನು ಭಯಂಕರವಾದ ಮುದ್ಗರವನ್ನು ತಿರುಗಿಸುತ್ತಾ ಬಹಳ ವೇಗದಿಂದ ಯಮನ ತಲೆಯ ಮೇಲೆ ಅದನ್ನು ಬಿಸಾಡಿದನು.

೨೮. ಬಹು ಬಲಶಾಲಿಯಾದ ಯಮನು ಜ್ವಲಿಸುತ್ತಿರುವ ಆ ಮುದ್ಗರವನ್ನು ನೋಡಿದನು. ಅವನ ಕಣ್ಣುಗಳು ತಿರುಗಹತ್ತಿದುವು. ಅದನ್ನು ಪರಾಭವಗೊಳಿಸುವುದು ಅಶಕ್ಯವೆಂದು ತಿಳಿದು ಅದಕ್ಕೆ ಸಿಕ್ಕದಂತೆ ತಪ್ಪಿಸಿಕೊಂಡನು.

೨೯. ಯಮನು ದೂರವಾಗಿ ಸರಿಯಲು ಕ್ರೂರರೂ, ಅತ್ಯಂತ ಸಾಹಸಿಗಳೂ ಆದ ಸಾವಿರಾರು ಜನ ಯಮಕಿಂಕರರನ್ನು ಗ್ರಸನನು ಮರ್ದನಮಾಡಿದನು.

೩೦. ತನ್ನ ಕಿಂಕರರ ಸೈನ್ಯವು ಹತವಾದುದನ್ನು ಕಂಡು ಯಮನು ಬಗೆಬಗೆಯ ಆಯುಧಗಳನ್ನು ಹಿಡಿದು ಬಹಳ ಸಿಟ್ಟಾಗಿ ಬಂದನು.

ಅಗಮತ್ಪರಮಂ ಕ್ಷೋಭಂ ನಾನಾಪ್ರಹರಣೋದ್ಯತಃ ।
ಗ್ರಸನಸ್ತು ಸಮಾಲೋಕ್ಯ ತಾಂ ಕಿಂಕರಮಯೀಂ ಚಮೂಂ ॥೩೧॥

ಮೇನೇ ಯಮಸಹಸ್ರಾಣಿ ಸೃಷ್ಟಾನಿ ಯಮಮಾಯಯಾ ।
ನಿಗ್ರಾಹ್ಯ ಗ್ರಸನಃ ಸೇನಾಂ ವಿಸೃಜನ್ನಸ್ತ್ರವೃಷ್ಟಯಃ ॥೩೨॥

ಕಲ್ಪಾಂತಘೋರಸಂಕಾಶೋ ಬಭೂವ ಕ್ರೋಧಮೂರ್ಛಿತಃ ।
ಕಾಂಶ್ಚಿದ್ಬಿಭೇದ ಶೂಲೇನ ಕಾಂಶ್ಚಿದ್ಬಾಣೈರಜಿಹ್ಮಗೈಃ ॥೩೩॥

ಕಾಂಶ್ಚಿತ್ಪಿಪೇಷ ಗದಯಾ ಕಾಂಶ್ಚ ಮುದ್ಗರವೃಷ್ಟಿಭಿಃ ।
ಕಾಂಶ್ಚಿತ್ಪ್ರಾಸಪ್ರಹಾರೈಶ್ಚ ದಾರುಣೈಃ ಪಟ್ಟಿಶೈಸ್ತದಾ ॥೩೪॥

ಅಪರೇ ಬಹುಶಸ್ತಸ್ಯ ಲಲಂಬುರ್ಬಾಹುಮಂಡಲೇ ।
ಶಿಲಾಭಿರಪರೇ ಜಘ್ನುರ್ದ್ರುಮೈರನ್ಯೈರ್ಮಹೋಚ್ಛ್ರಯೈಃ ॥೩೫॥

---

೩೧. ವೀರರಾದ ಕಿಂಕರರಿಂದ ತುಂಬಿದ ಆ ಸೇನೆಯನ್ನು ಗ್ರಸನನು ನೋಡಿದನು. "ಯಮನು ತನ್ನ ಮಾಯೆಯಿಂದ ತನ್ನಂತೆಯೇ ಸಾವಿರಾರು ಜನ ಯಮರನ್ನು ಸೃಷ್ಟಿಸಿಬಿಟ್ಟನೋ" ಎಂದು ಅವನು ಭಾವಿಸಿದನು.

೩೨. ಗ್ರಸನನು ಶತ್ರು ಸೇನೆಯನ್ನು ಅಡಗಿಸಿ ಅಸ್ತ್ರಗಳ ಮಳೆಗರೆಯುತ್ತ ಪ್ರಳಯಕಾಲದ ರುದ್ರನಂತೆ ಪ್ರಕಾಶಿಸಿದನು. ಕ್ರೋಧದಿಂದ ಅವನಿಗೆ ದೇಹದ ಮೇಲಣ ಅರಿವೇ ಹೋಯಿತು.

೩೩-೩೪. ಕೆಲವರನ್ನು ಶೂಲದಿಂದಲೂ ಕೆಲವರನ್ನು ಗುರಿತಪ್ಪದೆ ನೇರವಾಗಿ ಹೋಗುವ ಬಾಣಗಳಿಂದಲೂ ಇರಿದನು. ಮತ್ತೆ ಕೆಲವರನ್ನು ಗದೆಯಿಂದಲೂ ಇನ್ನು ಕೆಲವರನ್ನು ಮುದ್ಗರ ವರ್ಷಗಳಿಂದಲೂ ಪುಡಿಮಾಡಿದನು. ಹಲವರನ್ನು ಪ್ರಾಸಗಳಿಂದಲೂ ಕ್ರೂರವಾದ ಪಟ್ಟಿಶಗಳಿಂದಲೂ ಹೊಡೆದನು.

೩೫. ಯಮನ ಕಿಂಕರರಲ್ಲಿ ಕೆಲವರು ಅವನ ತೋಳುಗಳಿಗೆ ನೇತುಹಾಕಿಕೊಂಡರು. ಮಿಕ್ಕವರು ಶಿಲೆಗಳಿಂದಲೂ, ಅತ್ಯುನ್ನತವಾದ ವೃಕ್ಷಗಳಿಂದಲೂ ಅವನನ್ನು ಪ್ರಹರಿಸಿದರು.

ತಸ್ಯಾಪರೇ ತು ಗಾತ್ರೇಷು ದಶನೈರಪ್ಯದಂಶರ್ಯು ।
ಅಪರೇ ಮುಷ್ಟಿಭಿಃ ಪೃಷ್ಠಂ ಕಿಂಕರಾಃ ಪ್ರಹರಂತಿ ಚ ||೩೬||

ಅಭಿದ್ರುತಸ್ತಥಾ ಘೋರೈರ್ಗ್ರಸನಃ ಕ್ರೋಧಮೂರ್ಛಿತಃ ।
ಉತ್ಸೃಜ್ಯ ಗಾತ್ರಂ ಭೂಪೃಷ್ಠೇ ನಿಷ್ಪಿಪೇಷ ಸಹಸ್ರಶಃ ||೩೭||

ಕಾಂಶ್ಚಿದುತ್ಥಾಯ ಮುಷ್ಟಿಭಿರ್ಜಘ್ನೇ ಕಿಂಕರಸಂಶ್ರಯಾನ್ ।
ಸ ತು ಕಿಂಕರಯುದ್ಧೇನ ಗ್ರಸನಃ ಶ್ರಮವಾಪ್ತವಾನ್ ||೩೮||

ತಮಾಲೋಕ್ಯ ಯಮಃ ಶ್ರಾಂತಂ ನಿಹತಾಂ ಚ ಸ್ವವಾಹಿನೀಂ ।
ಆಜಗಾಮ ಸಮುದ್ಯಮ್ಯ ದಂಡಂ ಮಹಿಷವಾಹನಃ ||೩೯||

ಗ್ರಸನಸ್ತು ಸಮಾಯಾತಮಾಜಘ್ನೇ ಗದಯೋರಸಿ ।
ಅಚಿಂತಯಿತ್ವಾ ತತ್ಕರ್ಮ ಗ್ರಸನಸ್ಯಾಂತಕೋಽರಿಹಾ ||೪೦||

---

೩೬. ಕೆಲವರು ಅವನ ಅವಯವಗಳನ್ನು ಹಲ್ಲುಗಳಿಂದ ಕಚ್ಚಿದರು. ಉಳಿದವರು ಮುಷ್ಟಿಗಳಿಂದ ಬೆನ್ನಿನ ಮೇಲೆ ಗುದ್ದಿದರು.

೩೭. ಅಷ್ಟಕ್ಕೇ ನಿಲ್ಲದೆ ಭಯಂಕರರೂಪರಾದ ಆ ಯಮಕಿಂಕರರು ಓಡಿಸಿಕೊಂಡು ಬಂದರು. ಗ್ರಸನನು ಕ್ರೋಧದಿಂದ ಮೂರ್ಛಿತನಾದನು. ಅವನು ನೆಲದ ಮೇಲೆ ಹೊರಳಾಡಿ ಸಾವಿರಾರು ಜನ ಶತ್ರುಭಟರನ್ನು ಅರೆದು ಜಜ್ಜಿದನು.

೩೮. ಬಳಿಕ ಎದ್ದು ಕೆಲವರನ್ನು ಮುಷ್ಟಿಗಳಿಂದ ಹೊಡೆದನು. ಹೀಗೆ ಕಿಂಕರರೊಡನೆ ಯುದ್ಧಮಾಡಿ ಆ ಗ್ರಸನನು ಆಯಾಸಪಟ್ಟನು.

೩೯. ಹಗೆಯು ಬಳಲಿದುದನ್ನೂ, ತನ್ನ ಸೈನ್ಯವು ಬಹುಮಟ್ಟಿಗೆ ನಷ್ಟವಾದುದನ್ನೂ ಕಂಡು ಯಮನು ದಂಡವನ್ನು ಕೈಯಲ್ಲಿ ಹಿಡಿದುಕೊಂಡು ಮುಂದೆ ನುಗ್ಗಿದನು.

೪೦-೪೧. ಗ್ರಸನನಾದರೋ ತನ್ನಲ್ಲಿಗೆ ಬಂದ ಯಮನನ್ನು ಗದೆಯಿಂದ ಎದೆಯ ಮೇಲೆ ಬಲವಾಗಿ ಹೊಡೆದನು. ಶತ್ರುನಾಶಕನಾದ ಅಂತಕನು ಅದನ್ನು

ಜಘ್ನೇ ರಥಸ್ಯ ಮೂರ್ಧನ್ಯಾನ್ ವ್ಯಾಘ್ರಾನ್ ದಂಡೇನ ಕೋಪನಃ ।
ಸ ರಥೋ ದಂಡಮಥಿತೈರ್ವ್ಯಾಘ್ರೈರ್ನದ್ಧೈರ್ನ ಕೃಷ್ಯತೇ ॥೪೦॥

ಸಂಶಯಃ ಪುರುಷಸ್ಯೇವ ಚಿತ್ತಂ ದೈತ್ಯಸ್ಯ ತದ್ರಥಂ ।
ಸಮುತ್ಸೃಜ್ಯ ರಥಂ ದೈತ್ಯಃ ಪದಾತಿರ್ಧರಣೀಂ ಗತಃ ॥೪೨॥

ಯಮಂ ಭುಜಾಭ್ಯಾಮಾದಾಯ ಯೋಧಯಾಮಾಸ ದಾನವಃ ।
ಯಮೋಽಪಿ ಶಸ್ತ್ರಾಣ್ಯುತ್ಸೃಜ್ಯ ಬಾಹುಯುದ್ಧೇಷ್ವವರ್ತತ ॥೪೩॥

ಗ್ರಸನಃ ಕಟಿವಸ್ತ್ರೈಸ್ತು ಯಮಂ ಗೃಹ್ಯ ಬಲೋದ್ಧತಃ ।
ಭ್ರಾಮಯಾಮಾಸ ವೇಗೇನ ಪ್ರಚಿತ್ತಮಿವ ಸಂಭ್ರಮಃ ॥೪೪॥

ಯಮೋಽಪಿ ಕಂಠೇಽವಷ್ಟಭ್ಯ ದೈತ್ಯಂ ಬಾಹುಯುಗೇನ ತು ।
ವೇಗೇನ ಭ್ರಾಮಯಾಮಾಸ ಸಮುತ್ಕೃಷ್ಯ ಮಹೀತಲಾತ್ ॥೪೫॥

---

ಲೆಕ್ಕಿಸದೆ ಕೋಪದಿಂದ ಅವನ ರಥಕ್ಕೆ ಹೂಡಿದ್ದ ಹುಲಿಗಳನ್ನು ಪ್ರಹರಿಸಿದನು. ದಂಡದಿಂದ ಜಜ್ಜಿಹೋಗಿ ಅವು ತೇರನ್ನೆಳೆಯಲಾರದೆ ಹೋದುವು.

೪೨. ಸಂಶಯವು ಧೀರನಾದ ಮನುಷ್ಯನ ಮನಸ್ಸನ್ನು ಬಿಡುವಂತೆ, ದೈತ್ಯನು ಆ ತೇರನ್ನು ಬಿಟ್ಟು ನೆಲಕ್ಕಿಳಿದು ಪಾದಚಾರಿಯಾಗಿದ್ದನು.

೪೩. ಗ್ರಸನನು ತನ್ನ ತೋಳುಗಳಿಂದ ಯಮನನ್ನೆತ್ತಿಕೊಂಡು ಬಂದು ಯುದ್ಧಮಾಡಿದನು. ಯಮನೂ ಕೂಡ ಶಸ್ತ್ರಗಳನ್ನು ಬಿಸುಟು ಬಾಹುಯುದ್ಧಕ್ಕೆ ತೊಡಗಿದನು.

೪೪. ಬಲದಿಂದ ಗರ್ವಿತನಾದ ಗ್ರಸನನು ನಡುವಿಗೆ ಸುತ್ತಿದ್ದ ಬಟ್ಟೆಯನ್ನು ಹಿಡಿದು ಯಮನನ್ನು ಮೇಲಕ್ಕೆತ್ತಿ, ಸಂಭ್ರಮವು ವೀರನನ್ನು ಭ್ರಾಂತಿಗೊಳಿಸುವಂತೆ ವೇಗವಾಗಿ ತಿರುಗಿಸಿದನು.

೪೫. ಯಮನೂ ಸಹ ಗ್ರಸನನನ್ನು ನೆಲದಿಂದೆಳೆದುಕೊಂಡು, ತೋಳು ಗಳಿಂದ ಕುತ್ತಿಗೆಯನ್ನು ಹಿಡಿದು ವೇಗವಾಗಿ ತಿರುಗಿಸಿದನು.

ತತೋ ಮುಷ್ಟಿಭಿರಾಜಘ್ನು ರರ್ದಯಂತೌ ಪರಸ್ಪರಂ ।
ದೈತ್ಯೇಂದ್ರಸ್ಯಾತಿಕಾಯತ್ವಾತ್ತತಃ ಶ್ರಾಂತಭುಜೋ ಯಮಃ ॥೪೬॥
ಸ್ಕಂಧೇ ನಿಧಾಯ ದೈತ್ಯಸ್ಯ ಮುಖಂ ವಿಶ್ರಾಂತಿಮೈಚ್ಛತ
ತಮಾಲಕ್ಷ್ಯ ತತೋ ದೈತ್ಯಃ ಶ್ರಾಂತಮಂತಕಮೋಜಸಾ ॥೪೭॥
ನಿಷ್ಪಿಪೇಷ ಮಹೀಪೃಷ್ಠೇ ಬಹುಶಃ ಪಾರ್ಷ್ಣಿಪಾಣಿಭಿಃ ।
ಯಾವದ್ಯಮಸ್ಯ ವದನಾತ್ಸುಸ್ರಾವ ರುಧಿರಂ ಬಹು ॥೪೮॥
ನಿರ್ಜೀವಿತಂ ಯಮಂ ದೃಷ್ಟ್ವಾ ತತಃ ಸಂತ್ಯಜ್ಯ ದಾನವಃ ।
ಜಯಂ ಪ್ರಾಪ್ಯೋದ್ಧತಂ ದೈತ್ಯೋ ನಾದಂ ಮುಕ್ತ್ವಾ ಮಹಾಸ್ವನಃ ॥೪೯॥
ಸ್ವಯಂ ಸೈನ್ಯಂ ಸಮಾಸಾದ್ಯ ತಸ್ಥೌ ಗಿರಿರಿವಾಚಲಃ ।
ಧನಾಧಿಪಸ್ಯ ಜಂಭೇನ ಸಾಯಕೈರ್ಮರ್ಮಭೇದಿಭಿಃ ॥೫೦॥

---

೪೬. ಬಳಿಕ ಇಬ್ಬರೂ ಮುಷ್ಟಿಗಳಿಂದ ಒಬ್ಬರನ್ನೊಬ್ಬರು ಗುದ್ದಿದರು. ದೈತ್ಯನ ದೇಹವು ಬಹಳ ಸ್ಥೂಲವಾಗಿದ್ದುದರಿಂದ ಆ ಭಾರಕ್ಕೆ ಯಮನ ತೋಳುಗಳು ಸೋತುಹೋದುವು.

೪೭-೪೮. ಯಮನು ಗ್ರಸನನ ಹೆಗಲಿನ ಮೇಲೆ ತನ್ನ ಮುಖವನ್ನಿಟ್ಟುಕೊಂಡು ವಿಶ್ರಾಂತಿಪಡೆಯಲು ಬಯಸಿದನು. ಬಳಿಕ ದೈತ್ಯನು ಯಮನು ಬಳಲಿರುವುದನ್ನು ನೋಡಿ, ತನ್ನ ಬಲದಿಂದ ನೆಲದ ಮೇಲೆ ಅವನನ್ನು ಕೆಡವಿ, ಹಿಮ್ಮಡಿಗಳಿಂದಲೂ ಕೈಗಳಿಂದಲೂ ಅವನನ್ನು ಜಜ್ಜಿದನು. ಅವನ ಬಾಯಿಯಿಂದ ರಕ್ತವು ಪ್ರವಾಹವಾಗಿ ಹರಿಯಿತು.

೪೯. ಯಮನು ಪ್ರಾಣರಹಿತನಾದುದನ್ನು ಕಂಡು ದಾನವನು ಅವನನ್ನು ಬಿಟ್ಟುಬಿಟ್ಟನು. ಯುದ್ಧದಲ್ಲಿ ಗೆಲವನ್ನು ಪಡೆದ ದರ್ಪದಿಂದ ಗಟ್ಟಿಯಾಗಿ ಸಿಂಹನಾದಮಾಡುತ್ತ ಆನಂದದಿಂದ ತನ್ನ ಸೈನ್ಯವನ್ನು ಸೇರಿ ಪರ್ವತದಂತೆ ನಿಶ್ಚಲನಾಗಿ ಕಂಗೊಳಿಸಿದನು.

೫೦. ಜಂಭಾಸುರನು ಕ್ರುದ್ಧನಾಗಿ, ಮರ್ಮವನ್ನಿರಿಯುವ ಬಾಣಗಳಿಂದ ಕುಬೇರನನ್ನು ಪ್ರಹರಿಸಿ ಅವನಿಗೆ ದಿಕ್ಕುತೋಚದಂತೆ ಮಾಡಿದನು. ಮತ್ತು ಅವನ ಸೈನ್ಯಗಳನ್ನೂ ಛೇದಿಸಿದನು.

ದಿಶೋವರುದ್ಧಾಃ ಕ್ರುದ್ಧೇನ ಸೈನ್ಯಂ ಚಾಸ್ಯ ನಿಕೃಂತಿತಂ ।
ತತಃ ಕ್ರೋಧಪರೀತಸ್ತು ಧನೇಶೋ ಜಂಭದಾನವಂ ॥೫೧॥

ಹೃದಿ ವಿವ್ಯಾಧ ಬಾಣಾನಾಂ ಸಹಸ್ರೇಣಾಗ್ನಿವರ್ಚಸಾಂ ।
ಸಾರಥಿಂ ಚ ಶತೇನಾಜೌ ಧ್ವಜಂ ದಶಭಿರೇವ ಚ ॥೫೨॥

ಹಸ್ತೌ ಚ ಪಂಚಸಪ್ತತ್ಯಾ ಮಾರ್ಗಣೈರ್ದಶಭಿರ್ಧನುಃ ।
ಮಾರ್ಗಣೈರ್ಬರ್ಹಿಪತ್ರಾಂಗೈಸ್ತೈಲಧೌತೈರಜಿಹ್ಮಗೈಃ ॥೫೩॥

ಸಿಂಹಮೇಕೇನ ತಂ ತೀಕ್ಷ್ಣೈರ್ವಿವ್ಯಾಧ ದಶಭಿಃ ಶರೈಃ ।
ಜಂಭಸ್ತು ಕರ್ಮ ತದ್ದೃಷ್ಟ್ವಾ ಧನೇಶಸ್ಯಾತಿದುಷ್ಕರಂ ॥೫೪॥

ಹೃದಿ ಧೈರ್ಯಂ ಸಮಾಲಂಬ್ಯ ಕಿಂಚಿತ್ಸಂತ್ರಸ್ತಮಾನಸಃ ।
ಜಗ್ರಾಹ ನಿಶಿತಾನ್ ಬಾಣಾಞ್ಛತ್ರುಮರ್ಮವಿಭೇದಿನಃ ॥೫೫॥

ಆಕರ್ಣಾಕೃಷ್ಟಚಾಪಸ್ತು ಜಂಭಃ ಕ್ರೋಧಪರಿಪ್ಲುತಃ ।
ವಿವ್ಯಾಧ ಧನದಂ ತೀಕ್ಷ್ಣೈಃ ಶರೈರ್ವಕ್ಷಸಿ ದಾನವಃ ॥೫೬॥

---

೫೧. ಬಳಿಕ ಕುಬೇರನಿಗೆ ಬಹು ಕೋಪ ಬಂದಿತು. ಅವನು ಅಗ್ನಿಯಂತೆ ತೇಜಸ್ವಿಗಳಾದ ಸಾವಿರಬಾಣಗಳಿಂದ ಜಂಭಾಸುರನ ಎದೆಯನ್ನಿರಿದನು.

೫೨-೫೩. ನೂರುಬಾಣಗಳಿಂದ ಸಾರಥಿಯನ್ನೂ, ಹತ್ತರಿಂದ ಧ್ವಜವನ್ನೂ, ಎಪ್ಪತ್ತೈದರಿಂದ ಕೈಗಳನ್ನೂ, ಹತ್ತರಿಂದ ಬಿಲ್ಲನ್ನೂ ಕತ್ತರಿಸಿದನು. ಆ ಬಾಣಗಳಿಗೆ ನವಿಲುಗರಿಗಳನ್ನು ಕಟ್ಟಿ ವಿಷದ ಎಣ್ಣೆಯನ್ನು ಸವರಿದ್ದರು. ಅವು ನೇರವಾಗಿ ಹೋಗುವಂತಹವು.

೫೪-೫೫. ಕುಬೇರನು ಒಂದು ಬಾಣದಿಂದ ಸಿಂಹವನ್ನೂ, ತೀಕ್ಷ್ಣವಾದ ಹತ್ತು ಬಾಣಗಳಿಂದ ಆ ಜಂಭನನ್ನೂ ಹೊಡೆದನು. ಜಂಭನಾದರೋ ಕುಬೇರನ ಆ ಮಹಾಸಾಹಸಕಾರ್ಯವನ್ನು ನೋಡಿ, ಸ್ವಲ್ಪಮಟ್ಟಿಗೆ ಹೆದರಿದ್ದರೂ ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು, ಮೊನೆಯಾದ ಬಾಣಗಳನ್ನು ತೆಗೆದುಕೊಂಡನು. ಅವು ಶತ್ರುಗಳ ಮರ್ಮವನ್ನು ಇರಿಯುವಂಥವಾಗಿದ್ದುವು.

೫೬-೫೭. ಜಂಭಾಸುರನು ಕಿವಿಯವರೆಗೆ ಬಿಲ್ಲನ್ನೆಳೆದು, ಕೋಪದಿಂದ ಕಿಡಿಕಿಡಿಯಾಗಿ ಚೂಪಾದ ಬಾಣಗಳಿಂದ ಕುಬೇರನನ್ನು ಇರಿದನು. ಅವನ

**ಸಾರಥಿಂ ಚಾಸ್ಯ ಬಾಣೇನ ದೃಢೇನಾಭ್ಯಹನದ್ಧೃದಿ ।**
**ಚಿಚ್ಛೇದ ಜ್ಯಾಮಥೈಕೇನ ತೈಲಧೌತೇನ ದಾನವಃ ॥೫೭॥**

**ತತಸ್ತು ನಿಶಿತೈರ್ಬಾಣೈರ್ದಾರುಣೈರ್ಮರ್ಮಭೇದಿಭಿಃ ।**
**ವಿವ್ಯಾಧೋರಸಿ ವಿತ್ತೇಶಂ ದಶಭಿಃ ಕ್ರೂರಕರ್ಮಕೃತ್ ॥೫೮॥**

**ಮೋಹಂ ಪರಮತೋ ಗಚ್ಛ ದೃಢವಿದ್ಧೋ ಹಿ ವಿತ್ತಪಃ ।**
**ಸ ಕ್ಷಣಾದ್ಧೈರ್ಯಮಾಲಂಬ್ಯ ಧನುರಾಕೃಷ್ಯ ಭೈರವಂ ॥೫೯॥**

**ಕಿರನ್ಬಾಣಸಹಸ್ರಾಣಿ ನಿಶಿತಾನಿ ಧನಾಧಿಪಃ ।**
**ದಿಶಃ ಖಂ ವಿದಿಶೋ ಭೂಮೀರನೀಕಾನ್ಯಸುರಸ್ಯ ಚ ॥೬೦॥**

**ಪೂರಯಾಮಾಸ ವೇಗೇನ ಸಂಛಾದ್ಯ ರವಿಮಂಡಲಂ ।**
**ಜಂಭೋಽಪಿ ಪರಮೇಕೈಕಂ ಶರೈರ್ಬಹುಭಿರಾಹವೇ ॥೬೧॥**

---

ಸಾರಥಿಯ ಎದೆಗೆ ಬಲವಾದ ಬಾಣವನ್ನು ಪ್ರಯೋಗಿಸಿದನು. ಬಳಿಕ ವಿಷತೈಲದಲ್ಲಿ ಅದ್ದಿದ ಒಂದು ಬಾಣದಿಂದ ಹೆದೆಯನ್ನು ಕತ್ತರಿಸಿದನು.

೫೮. ಆ ಮೇಲೆ ಕ್ರೂರಕರ್ಮವನ್ನೆಸಗುವ ಜಂಭಾಸುರನು ಭಯಂಕರವೂ ಮರ್ಮವನ್ನಿರಿಯತಕ್ಕವೂ ಆದ ಹತ್ತು ಮೊನಚಾದ ಬಾಣಗಳನ್ನು ಕುಬೇರನ ಎದೆಗೆ ನಾಟಿಸಿದನು.

೫೯-೬೦. ಬಾಣಪ್ರಹಾರವು ಬಹಳವಾಗಲು ಕುಬೇರನು ಮೂರ್ಛೆ ಹೋದನು. ಸ್ವಲ್ಪ ಹೊತ್ತಿನೊಳಗಾಗಿಯೇ ಧೈರ್ಯವನ್ನು ತಂದುಕೊಂಡು ಭಯಂಕರವಾದ ಬಿಲ್ಲನ್ನು ಎಳೆದು, ತೀಕ್ಷ್ಣವಾದ ಸಾವಿರಾರು ಬಾಣಗಳನ್ನು ಬಿಟ್ಟನು. ಅವು ಆಕಾಶ, ಭೂಮಿ, ದಿಕ್ಕು, ವಿದಿಕ್ಕು, ಶತ್ರುಸೈನ್ಯ ಇವೆಲ್ಲವನ್ನೂ ಬೇಗನೆ ಆವರಿಸಿದುವು. ಸೂರ್ಯಮಂಡಲವನ್ನು ಮುಚ್ಚಿದುವು.

೬೧. ಜಂಭಾಸುರನೂ ಸಹ ಬಹಳ ಪೌರುಷದಿಂದ ಬೇಗಬೇಗನೆ ಬಿಲ್ಲಿಗೆ ಬಾಣಗಳನ್ನು ಹೂಡಿ, ಅವುಗಳಿಂದ ಶತ್ರುವಿನ ಒಂದೊಂದು ಬಾಣವನ್ನೂ ಕತ್ತರಿಸಿದನು.

ಚಿಚ್ಛೇದ ಲಘುಸಂಧಾನೋ ಧನೇಶಸ್ಯಾತಿಪೌರುಷಾತ್ ।
ತತೋ ಧನೇಶಃ ಸಂಕ್ರುದ್ಧೋ ದಾನವೇಂದ್ರಸ್ಯ ಕರ್ಮಣಾ ॥೬೨॥

ವ್ಯಧಮತ್ತಸ್ಯ ಸೈನ್ಯಾನಿ ನಾನಾಸಾಯಕವೃಷ್ಟಿಭಿಃ ।
ತದ್ದೃಷ್ಟ್ವಾ ದುಷ್ಕೃತಂ ಕರ್ಮ ಧನಾಧ್ಯಕ್ಷಸ್ಯ ದಾನವಃ ॥೬೩॥

ಗೃಹೀತ್ವಾ ಮುದ್ಗರಂ ಭೀಮಮಾಯಸಂ ಹೇಮಭೂಷಿತಂ ।
ಧನದಾನುಚರಾನ್ಯಕ್ಷಾನ್ನಿಷ್ಪಿಪೇಷ ಸಹಸ್ರಶಃ ॥೬೪॥

ತೇ ವಧ್ಯಮಾನಾ ದೈತ್ಯೇನ ಮುಂಚಂತೋ ಭೈರವಾನ್ ಸ್ವನಾನ್ ।
ರಥಂ ಧನಪತೇಃ ಸರ್ವೇ ಪರಿವಾರ್ಯ ವ್ಯವಸ್ಥಿತಾಃ ॥೬೫॥

ದೃಷ್ಟ್ವಾ ತಾನರ್ದಿತಾನ್ ದೇವಃ ಶೂಲಂ ಜಗ್ರಾಹ ದಾರುಣಂ ।
ತೇನ ದೈತ್ಯಸಹಸ್ರಾಣಿ ಸೂದಯಾಮಾಸ ಸತ್ವರಃ ॥೬೬॥

ಕ್ಷೀಯಮಾಣೇಷು ದೈತ್ಯೇಷು ದಾನವಃ ಕ್ರೋಧಮೂರ್ಛಿತಃ ।
ಜಗ್ರಾಹ ಪರಶುಂ ದೈತ್ಯೋ ಮರ್ದನಂ ದೈತ್ಯವಿದ್ವಿಷಾಂ ॥೬೭॥

---

೬೨-೬೪. ಬಳಿಕ ಕುಬೇರನಿಗೆ ದಾನವೇಂದ್ರನ ಕಾರ್ಯವನ್ನು ನೋಡಿ ಕೋಪ ಬಂದಿತು. ಅವನು ಬಗೆಬಗೆಯ ಬಾಣಗಳನ್ನು ಮಳೆಯಂತೆ ಕರೆದು ಅವನ ಸೈನ್ಯವನ್ನು ನಿರ್ಮೂಲಮಾಡಿದನು. ಕುಬೇರನ ಈ ಅಸಾಧ್ಯ ಕೃತ್ಯವನ್ನು ನೋಡಿ ಜಂಭಾಸುರನು ಕಬ್ಬಿಣದ ದೊಡ್ಡ ಮುದ್ಗರಾಯುಧವನ್ನು ತೆಗೆದುಕೊಂಡು ಕುಬೇರನ ಅನುಚರರನ್ನು ಸಾವಿರಗಟ್ಟಲೆಯಾಗಿ ಮರ್ದನಮಾಡಿದನು.

೬೫. ದೈತ್ಯನು ಎಲ್ಲರನ್ನೂ ಸಂಹರಿಸುತ್ತಿರಲು ಭಯಂಕರವಾಗಿ ಧ್ವನಿ ಮಾಡುತ್ತ, ಅವರು ಕುಬೇರನ ಬಳಿಗೆ ಬಂದು ಅವನ ತೇರಿನ ಸುತ್ತಲೂ ನಿಂತರು.

೬೬. ತನ್ನ ಕಡೆಯವರು ಪೀಡಿತರಾದುದನ್ನು ಕಂಡು ಕುಬೇರನು ಕ್ರೂರವಾದ ಶೂಲವನ್ನೆತ್ತಿಕೊಂಡನು. ಸಾವಿರಾರು ಜನ ದೈತ್ಯರನ್ನು ಕೂಡಲೆ ಸಂಹರಿಸಿದನು.

೬೭. ದೈತ್ಯಬಲವು ಕ್ಷಯಿಸತೊಡಗಿತು. ಜಂಭನು ಅದನ್ನು ಕಂಡು ಮೂರ್ಛಿತನಾಗಿ ಶತ್ರುನಾಶಕವಾದ ಪರಶುವನ್ನು ಕೈಯಲ್ಲೆತ್ತಿಕೊಂಡನು.

**ಸ ತೇನ ಶಿತಧಾರೇಣ ಧನಭರ್ತುರ್ಮಹಾರಥಂ ।**
**ಚಿಚ್ಛೇದ ತಿಲಶೋ ದೈತ್ಯೋ ಹ್ಯಾಖುಃ ಸ್ನಿಗ್ಧಮಿವಾಂಬರಂ ॥೬೮॥**

**ಪದಾತಿರಥ ವಿತ್ತೇಶೋ ಗದಾಮಾದಾಯ ಭೈರವೀಂ ।**
**ಮಹಾಹವವಿಮರ್ದೇಷು ದೃಪ್ತಶತ್ರುವಿನಾಶಿನೀಂ ॥೬೯॥**

**ಅಧೃಷ್ಯಾಂ ಸರ್ವಭೂತಾನಾಂ ಬಹುವರ್ಷಗಣಾರ್ಚಿತಾಂ ।**
**ನಾನಾಚಂದನದಿಗ್ಧಾಂಗಾಂ ದಿವ್ಯಪುಷ್ಪವಿವಾಸಿತಾಂ ॥೭೦॥**

**ನಿರ್ಮಲಾಯೋಮಯೀಂ ಗುರ್ವೀಮನೋಘಾಂ ಹೇಮಭೂಷಣಾಂ ।**
**ಚಿಕ್ಷೇಪ ಮೂರ್ಧ್ನಿ ಸಂಕ್ರುದ್ಧೋ ಜಂಭಸ್ಯ ತು ಧನಾಧಿಪಃ ॥೭೧॥**

**ಆಯಾಂತೀಂ ತಾಂ ಸಮಾಲೋಕ್ಯ ತಡಿತ್ಸಂಘಾತಮಂಡಿತಾಂ ।**
**ದೈತ್ಯೋ ಗದಾಭಿಘಾತಾರ್ಥಂ ಶಸ್ತ್ರವೃಷ್ಟಿಂ ಮುಮೋಚ ಹ ॥೭೨॥**

---

೬೮. ಆ ದೈತ್ಯನು ಹರಿತವಾದ ಆ ಆಯುಧದಿಂದ ಕುಬೇರನ ದೊಡ್ಡ ತೇರನ್ನು, ಇಲಿಯು ಜಿಡ್ಡು ಹತ್ತಿದ ಬಟ್ಟೆಯನ್ನು ಕತ್ತರಿಸುವಂತೆ, ಎಳ್ಳಿನಷ್ಟು ಚೂರುಚೂರಾಗಿ ಕತ್ತರಿಸಿದನು.

೬೯-೭೧. ಬಳಿಕ ಕುಬೇರನು ನೆಲದ ಮೇಲೆ ನಿಂತು ಯುದ್ಧಮಾಡುತ್ತ ಭಯಂಕರವಾದ ಉಕ್ಕಿನ ಗದೆಯನ್ನು ಜಂಭನ ತಲೆಯ ಮೇಲೆ ಎಸೆದನು. ಅದು ದೊಡ್ಡದೊಡ್ಡ ಯುದ್ಧಗಳಲ್ಲಿ ಮತ್ತರಾದ ಶತ್ರುಗಳನ್ನು ಅಡಗಿಸಿತ್ತು. ಅದನ್ನು ಎದುರಿಸುವುದು ಯಾವ ಪ್ರಾಣಿಗೂ ಸಾಧ್ಯವಿರಲಿಲ್ಲ. ಅದನ್ನವನು ಬಹು ವರ್ಷಗಳಿಂದ ಪೂಜಿಸುತ್ತಿದ್ದನು. ಅದಕ್ಕೆ ಬಗೆಬಗೆಯ ಚಂದನಗಳನ್ನು ಲೇಪಿಸಿ ದಿವ್ಯ ಪುಷ್ಪಗಳನ್ನು ಧರಿಸಿದ್ದನು. ಅದು ಬಲು ದೊಡ್ಡದೂ ಸುವರ್ಣಾಲಂಕೃತವೂ ಆಗಿದ್ದಿತು.

೭೨. ಆ ಗದೆಯು ಮಿಂಚಿನ ಬಳ್ಳಿಗಳಂತೆ ತೇಜಸ್ಸನ್ನು ಬೀರುತ್ತ ಬರುತ್ತಿತ್ತು. ದೈತ್ಯನು ಅದನ್ನು ಮುರಿಯಬೇಕೆಂದು ಶಸ್ತ್ರಗಳ ಮಳೆಯನ್ನು ಸುರಿಸಿದನು.

ಚಕ್ರಾಣಿ ಕುಣಪಾನ್ ಪ್ರಾಸಾನ್ ಮುಶುಂಡೀಃ ಪಟ್ಟಿಶಾನಪಿ ।
ಹೇಮಕೇಯೂರನದ್ಧಾಭ್ಯಾಂ ಬಾಹುಭ್ಯಾಂ ಚಂಡವಿಕ್ರಮಃ ॥೭೩॥

ವ್ಯರ್ಥೀಕೃತ್ಯ ತು ತಾನ್ ಸರ್ವಾನಾಯುಧಾನ್ ದೈತ್ಯವಕ್ಷಸಿ ।
ಪ್ರಸ್ಫುರಂತೀ ಪಪಾತೋಗ್ರಾ ಮಹೋಲ್ಕೇವಾದ್ರಿಕಂದರೇ ॥೭೪॥

ಸ ತಯಾಭಿಹತೋ ಗಾಢಂ ಪಪಾತ ರಥಕೂಬರೇ ।
ಸ್ರೋತೋಭಿಶ್ಚಾಸ್ಯ ರುಧಿರಂ ಸುಸ್ರಾವ ಗತಚೇತಸಃ ॥೭೫॥

ಜಂಭಂ ತು ನಿಹತಂ ಮತ್ವಾ ಕುಜಂಭೋ ಭೈರವಸ್ವನಃ ।
ಧನಾಧಿಪಸ್ಯ ಸಂಕ್ರುದ್ಧೋ ವಾಕ್ಯೇನಾತೀವ ಕೋಪಿತಃ ॥೭೬॥

ಚಕ್ರೇ ಬಾಣಮಯಂ ಜಾಲಂ ದಿಕ್ಷು ಯಕ್ಷಾಧಿಪಸ್ಯ ತು ।
ಚಿಚ್ಛೇದ ಬಾಣಜಾಲಂ ತದರ್ಧಚಂದ್ರೈಃ ಶಿತೈಸ್ತತಃ ॥೭೭॥

---

೭೩. ಅದ್ಭುತ ಪ್ರರಾಕ್ರಮಶಾಲಿಯಾದ ಜಂಭನು ಚಿನ್ನದ ಬಳೆಗಳಿಂದ ಅಲಂಕೃತವಾದ ತನ್ನ ತೋಳುಗಳಿಂದ ಚಕ್ರಗಳು, ಕುಣಪಗಳು, ಪ್ರಾಸಗಳು, ಮುಶುಂಡಿಗಳು, ಪಟ್ಟಿಶಗಳು ಮುಂತಾದ ಆಯುಧಗಳನ್ನು ಬಿಸುಟನು.

೭೪. ಕುಬೇರನು ಪ್ರಯೋಗಿಸಿದ ಗದೆಯು ಈ ಆಯುಧಗಳೆಲ್ಲವನ್ನೂ ವ್ಯರ್ಥಪಡಿಸಿ, ಹೊಳೆಹೊಳೆಯುತ್ತ ಬೆಟ್ಟದ ಗವಿಯಲ್ಲಿ ಧೂಮಕೇತು ಬೀಳುವಂತೆ ದೈತ್ಯನ ಎದೆಯ ಮೇಲೆ ಬಿದ್ದಿತು.

೭೫. ಅದರ ಪೆಟ್ಟಿನಿಂದ ಆ ದೈತ್ಯನು ತೇರಿನ ನೊಗದ ಮೇಲೆ ಬಿದ್ದು ಮೂರ್ಛಿತನಾದನು. ಅವನ ದೇಹದಿಂದ ರಕ್ತವು ಪ್ರವಾಹವಾಗಿ ಹರಿಯಿತು.

೭೬. ಜಂಭನು ಹತನಾದುದನ್ನು ತಿಳಿದು ಕುಜಂಭನು ಭಯಂಕರವಾಗಿ ಕೂಗುತ್ತ, ಕುಬೇರನ ಮಾತಿಗೆ ಬಹಳ ಸಿಟ್ಟಾಗಿ ಅವನ ಸುತ್ತಲೂ ಬಾಣದ ಪಂಜರ ವನ್ನು ನಿರ್ಮಿಸಿದನು.

೭೭-೭೮. ಬಲಶಾಲಿಯಾದ ಕುಬೇರನು ತೀಕ್ಷ್ಣವಾದ, ಅರ್ಧಚಂದ್ರಾಕಾರದ ಶಸ್ತ್ರಗಳಿಂದ ಆ ಶರಪಂಜರವನ್ನು ಕತ್ತರಿಸಿದನು. ಮತ್ತು ಆ ದೈತ್ಯನ

ಮುಮೋಚ ಶರವೃಷ್ಟಿಂ ತು ತಸ್ಮೈ ಯಕ್ಷಾಧಿಪೋ ಬಲೀ ।
ಸ ತಂ ದೈತ್ಯಃ ಶರವ್ರಾತಂ ಚಿಚ್ಛೇದ ನಿಶಿತೈಃ ಶರೈಃ ॥೭೮॥

ವ್ಯರ್ಥೀಕೃತಾಂ ತು ತಾಂ ದೃಷ್ಟ್ವಾ ಶರವೃಷ್ಟಿಂ ಧನಾಧಿಪಃ ।
ಶಕ್ತಿಂ ಜಗ್ರಾಹ ದುರ್ಧರ್ಷೋ ಹೇಮಘಂಟಾಟ್ಟಹಾಸಿನೀಂ ॥೭೯॥

ಬಾಹುನಾ ರತ್ನಕೇಯೂರಕಾಂತಿಸಂತಾನಹಾಸಿನಾ ।
ಸ ತಾಂ ನಿರೂಪ್ಯ ವೇಗೇನ ಕುಜಂಭಾಯ ಮುಮೋಚ ಹ ॥೮೦॥

ಸಾ ಕುಜಂಭಸ್ಯ ಹೃದಯಂ ದಾರಯಾಮಾಸ ದಾರುಣಂ ।
ವಿತ್ತೇಹಾ ಸ್ವಲ್ಪಸತ್ವಸ್ಯ ಪುರುಷಸ್ಯೇವ ಭಾವಿತಾ ॥೮೧॥

ಅಥಾಸ್ಯ ಹೃದಯಂ ಭಿತ್ವಾ ಜಗಾಮ ಧರಣೀತಲಂ ।
ತತೋ ಮುಹೂರ್ತಾದಸ್ವಸ್ಥೋ ದಾನವೋ ದಾರುಣಾಕೃತಿಃ ॥೮೨॥

---

ಮೇಲೆ ಬಾಣದ ಮಳೆಯನ್ನು ಕರೆದನು. ಕುಜಂಭನಾದರೋ ಆ ಬಾಣಪಙ್ಕ್ತಿ ಯನ್ನು ತೀಕ್ಷ್ಣವಾದ ಶರಗಳಿಂದ ಛೇದಿಸಿದನು.

೭೯. ವೀರನೂ ಧನಾಧಿಪತಿಯೂ ಆದ ಕುಬೇರನು ತನ್ನ ಬಾಣವರ್ಷವು ವಿಫಲವಾದುದನ್ನು ನೋಡಿ, ಚಿನ್ನದ ಘಂಟೆಗಳಿಂದ ಅಲಂಕೃತವಾಗಿ ಭಯಂಕರ ವಾಗಿ ಧ್ವನಿಮಾಡುತ್ತಿರುವ ಶಕ್ತಿಯನ್ನು ತೆಗೆದುಕೊಂಡನು.

೮೦. ರತ್ನಖಚಿತವಾದ ತೋಳುಬಳೆಗಳ ಕಾಂತಿಯು ಪ್ರಸರಿಸುತ್ತಿರಲು, ಆ ಶಕ್ತಿಯನ್ನು ಕೈಯಿಂದ ತೂಗಿ ವೇಗದಿಂದ ಕುಜಂಭನ ಮೇಲೆ ಬಿಟ್ಟನು.

೮೧. ಯೋಚನೆ ಮಾಡಿದ ಹಾಗೆಲ್ಲಾ ಅಧೀರನ ಹೃದಯದಲ್ಲಿ ಹಣದಾಸೆಯು ನಾಟಿಕೊಳ್ಳುವಂತೆ, ಆ ಶಕ್ತಿಯು ಕುಜಂಭನ ಅತಿ ಕಠಿನವಾದ ಎದೆಯಲ್ಲಿ ಪ್ರವೇಶಿಸಿ ಅದನ್ನು ಇರಿದು ಭೇದಿಸಿತು.

೮೨. ಮೈಮರೆತು ಬಿದ್ದಿದ್ದ ಭಯಂಕರಾಕಾರನಾದ ಆ ದೈತ್ಯನು ಸ್ವಲ್ಪ ಹೊತ್ತಿನೊಳಗಾಗಿ ಎದ್ದು ಉನ್ನತವೂ, ತೀಕ್ಷ್ಣವಾದ ಬಾಣದಿಂದ ಕೂಡಿದುದೂ ಆದ ಪಟ್ಟಿಶಾಯುಧವನ್ನು ಎತ್ತಿಕೊಂಡನು.

ಜಗ್ರಾಹ ಪಟ್ಟಿಶಂ ದೈತ್ಯಃ ಪ್ರಾಂಶುಂ ಶಿತಶಿಲೀಮುಖಂ ।
ಸ ತೇನ ಪಟ್ಟಿಶೇನಾಜೌ ಧನದಸ್ಯ ಸ್ತನಾಂತರಂ ॥೩೩॥

ವಾಕ್ಯೇನ ತೀಕ್ಷ್ಣರೂಪೇಣ ಮರ್ಮಾಂತರವಿಸರ್ಪಿಣಾ ।
ನಿರ್ಬಿಭೇದಾಭಿಜಾತಸ್ಯ ಹೃದಯಂ ದುರ್ಜನೋ ಯಥಾ ॥೩೪॥

ತೇನ ಪಟ್ಟಿಶಘಾತೇನ ಧನೇಶಃ ಪರಿಮೂರ್ಛಿತಃ ।
ನಿಪಪಾತ ರಥೋಪಸ್ಥೇ ಜರ್ಜರೋ ಧೂರ್ವಹೋ ಯಥಾ ॥೩೫॥

ತಥಾಗತಂ ತು ತಂ ದೃಷ್ಟ್ವಾ ಧನೇಶಂ ನರವಾಹನಂ ।
ಖಡ್ಗಾಸ್ತ್ರೋ ನಿರ್ಋತಿರ್ದೇವೋ ನಿಶಾಚರಬಲಾನುಗಃ ॥೩೬॥

ಅಭಿದುದ್ರಾವ ವೇಗೇನ ಕುಜಂಭಂ ಭೀಮವಿಕ್ರಮಂ ।
ಅಥ ದೃಷ್ಟ್ವಾ ತು ದುರ್ಧರ್ಷಂ ಕುಜಂಭೋ ರಾಕ್ಷಸೇಶ್ವರಂ ॥೩೭॥

ಚೋದಯಾಮಾಸ ಸೈನ್ಯಾನಿ ರಾಕ್ಷಸೇಂದ್ರವಧಂ ಪ್ರತಿ ।
ಸ ದೃಷ್ಟ್ವಾ ಚೋದಿತಾಂ ಸೇನಾಂ ಭಲ್ಲನಾನಾಸ್ತ್ರಭೀಷಣಾಂ ॥೩೮॥

---

೩೩-೩೪. ಮರ್ಮವನ್ನರಿಯುವ ಬಿರುನುಡಿಗಳಿಂದ ಸಜ್ಜನನ ಮನಸ್ಸನ್ನು ನೋಯಿಸುವಂತೆ, ಕುಜಂಭನು ಆ ಪಟ್ಟಿಶಾಯುಧದಿಂದ ಕುಬೇರನ ಸ್ತನ ಪ್ರದೇಶವನ್ನು ಭೇದಿಸಿದನು.

೩೫. ಆ ಪಟ್ಟಿಶದ ಪ್ರಹಾರದಿಂದ ಕುಬೇರನು ಮೂರ್ಛೆಹೋಗಿ, ಮುಪ್ಪಿನಿಂದ ದುರ್ಬಲವಾದ ಎತ್ತು ಮುಗ್ಗರಿಸಿಬೀಳುವಂತೆ ರಥದೊಳಗೆ ಬಿದ್ದನು.

೩೬. ನರವಾಹನನಾದ ಕುಬೇರನು ಆ ಗತಿಯಾದುದನ್ನು ನೋಡಿ ಪೂಜ್ಯನಾದ ನಿರ್ಋತಿಯು ಖಡ್ಗಾಸ್ತ್ರಗಳನ್ನು ಧರಿಸಿ, ರಾಕ್ಷಸಸೈನ್ಯ ಸಹಿತನಾಗಿ ಅತಿ ಪರಾಕ್ರಮಶಾಲಿಯಾದ ಕುಜಂಭನ ಕಡೆಗೆ ವೇಗವಾಗಿ ಓಡಿದನು.

೩೭. ಬಳಿಕ ಕುಜಂಭನು ಸಾಹಸಿಯಾದ ನಿರಋತಿಯನ್ನು ನೋಡಿ ಅವನ ವಧೆಗಾಗಿ ತನ್ನ ಸೈನ್ಯಗಳಿಗೆ ಆಜ್ಞೆಮಾಡಿದನು.

೩೮-೩೯. ಭಲ್ಲಾಯುಧವೇ ಮೊದಲಾದ ನಾನಾಬಗೆಯ ಅಸ್ತ್ರಗಳಿಂದ ಭಯಂಕರವಾಗಿ ಕಾಣುವ ಸೇನೆಯು ತನ್ನಮೇಲೆ ಬರುವುದನ್ನು ನಿರಋತಿಯು

**ರಥಾದಾಪ್ಲುತ್ಯ ವೇಗೇನ ಭೂಷಣದ್ಯುತಿಭಾಸ್ವರಃ ।**
**ಖಡ್ಗೇನ ಕಮಲಾನೀವ ವಿಕೋಶೇನಾಂಬರತ್ವಿಷಾ ॥೮೯॥**

**ಚಿಚ್ಛೇದ ರಿಪುವಕ್ತ್ರಾಣಿ ವಿಚಿತ್ರಾಣಿ ಸಮಂತತಃ ।**
**ತಿರ್ಯಕ್ಪೃಷ್ಠಮಥಶ್ಚೋರ್ಧ್ವಂ ದೀರ್ಘಬಾಹುರ್ಮಹಾಸಿನಾ ॥೯೦॥**

**ಸಂದಷ್ಟೌಷ್ಠಪುಟಾಟೋಪಭ್ರುಕುಟೀವಿಕಟಾನನಃ ।**
**ಪ್ರಚಂಡಕೋಪರಕ್ತಾಕ್ಷೋ ನ್ಯಕೃಂತದ್ದಾನವಾನ್ ರಣೇ ॥೯೧॥**

**ತತೋ ನಿಶ್ಶೇಷಿತಪ್ರಾಯಾಂ ವಿಲೋಕ್ಯ ಸ್ವಾಮನೀಕಿನೀಂ ।**
**ಮುಕ್ತ್ವಾ ಕುಜಂಭೋ ಧನದಂ ರಾಕ್ಷಸೇಂದ್ರಮಭಿದ್ರುವತ್ ॥೯೨॥**

**ಲಬ್ಧಸಂಜ್ಞೋಽಥ ಜಂಭಸ್ತು ಧನಾಧ್ಯಕ್ಷಪದಾನುಗಾನ್ ।**
**ಜೀವಗ್ರಾಹಾನ್ ಸ ಜಗ್ರಾಹ ಬಧ್ವಾ ಪಾಶೈಃ ಸಹಸ್ರಶಃ ॥೯೩॥**

**ಮೂರ್ತಿಮಂತಿ ತು ರತ್ನಾನಿ ವಿವಿಧಾನಿ ಚ ದಾನವಾಃ ।**
**ವಾಹನಾನಿ ಚ ದಿವ್ಯಾನಿ ವಿಮಾನಾನಿ ಸಹಸ್ರಶಃ ॥೯೪॥**

---

ಕಂಡನು. ಭೂಷಣಗಳು ಪ್ರಕಾಶಿಸುತ್ತಿರಲು ಅವನು ಬೇಗನೆ ರಥದಿಂದಿಳಿದನು. ಆಕಾಶದಂತೆ ನೀಲಿಬಣ್ಣವಾದ ಕತ್ತಿಯನ್ನು ಒರೆಯಿಂದೆಳೆದು ಎಲ್ಲಕಡೆಯೂ ಶತ್ರುಗಳ ತಲೆಗಳನ್ನು ತಾವರೆಗಳನ್ನು ಕತ್ತರಿಸಿಹಾಕುವಂತೆ ಕತ್ತರಿಸಿದನು.

೯೦-೯೧. ಆಜಾನುಬಾಹುವಾದ ನಿರಋತಿಯು ಕಚ್ಚಿದ ತುಟಿ, ಗಂಟಿಕ್ಕಿದ ಹುಬ್ಬು, ವಿಕಾರವಾದ ಮುಖ ಇವುಗಳಿಂದ ಕೂಡಿ ಕೋಪವು ಮಿತಿಮೀರಿ ಕಣ್ಣು ಕೆಂಪಾಗಿರಲು, ತನ್ನ ದೊಡ್ಡಕತ್ತಿಯಿಂದ ಅಡ್ಡಡ್ಡಲಾಗಿ, ಹಿಂದೆ, ಮೇಲೆ ಮತ್ತು ಕೆಳಗೆ ಓಡಾಡುತ್ತ ಕೈಗೆ ಸಿಕ್ಕಿದ ದಾನವರನ್ನು ತುಂಡರಿಸಿದನು.

೯೨. ಹೆಚ್ಚುಕಡಿಮೆ ತನ್ನ ಸೈನ್ಯವೆಲ್ಲವೂ ಹಾಳಾದುದನ್ನು ನೋಡಿ ಕುಜಂಭನು ಕುಬೇರನನ್ನು ಬಿಟ್ಟು ನಿರಋತಿಯ ಮೇಲೆ ಬಿದ್ದನು.

೯೩. ಬಳಿಕ ಜಂಭನು ಮೂರ್ಛೆತಿಳಿದೆದ್ದು ಕುಬೇರನ ಪಕ್ಷದವರನ್ನು ಸಾವಿರಗಟ್ಟಲೆಯಲ್ಲಿ ಜೀವಸಹಿತವಾಗಿ ಹಗ್ಗಗಳಿಂದ ಬಿಗಿದು ಕಟ್ಟಿದನು.

೯೪. ದಾನವರು ಶ್ರೇಷ್ಠವಾದ ಬಗೆಬಗೆಯ ರತ್ನಗಳನ್ನೂ, ಉತ್ತಮವಾದ ವಾಹನಗಳನ್ನೂ, ವಿಮಾನಗಳನ್ನೂ ಸಾವಿರಲೆಕ್ಕದಲ್ಲಿ ಅಪಹರಿಸಿದರು.

ಧನೇಶೋ ಲಬ್ಧಸಂಜ್ಞೋಽಥ ತಾಮವಸ್ಥಾಂ ವಿಲೋಕ್ಯ ತು ।
ನಿಃಶ್ವಸನ್ ದೀರ್ಘಮುಷ್ಣಂ ಚ ರೋಷಾತ್ತಾಮ್ರವಿಲೋಚನಃ ॥೯೫॥

ಧ್ಯಾತ್ವಾಽಸ್ತ್ರಂ ಗಾರುಡಂ ದಿವ್ಯಂ ಬಾಣಂ ಸಂಧಾಯ ಕಾರ್ಮುಕೇ ।
ಮುಮೋಚ ದಾನವಾನೀಕೇ ತಂ ಬಾಣಂ ಶತ್ರುದಾರುಣಂ ॥೯೬॥

ಪ್ರಥಮಂ ಕಾರ್ಮುಕಾತ್ತಸ್ಯ ನಿಶ್ಚೇರುರ್ಧೂಮರಾಜಯಃ ।
ಅನಂತರಂ ಸ್ಫುಲಿಂಗಾನಾಂ ಕೋಟಯೋ ದೀಪ್ತವರ್ಚಸಾಂ ॥೯೭॥

ತತೋ ಜ್ವಾಲಾಕುಲಂ ವ್ಯೋಮ ಚಕಾರಾಸ್ತ್ರಂ ಸಮಂತತಃ ।
ತತಃ ಕ್ರಮೇಣ ದುರ್ವಾರಂ ನಾನಾರೂಪಂ ತದಾಭವತ್ ॥೯೮॥

ಅಮೂರ್ತಶ್ಚಾಭವಲ್ಲೋಕೋ ಹ್ಯಂಧಕಾರಸಮಾವೃತಃ ।
ತತೋಽಂತರೀಕ್ಷೇ ಶಂಸಂತಿ ತೇಜಸ್ತೇ ತು ಪರಿಷ್ಕೃತಂ ॥೯೯॥

ಕುಜಂಭಸ್ತತ್ಸಮಾಲೋಕ್ಯ ದಾನವೋಽತಿಪರಾಕ್ರಮಃ ।
ಅಭಿದುದ್ರಾವ ವೇಗೇನ ಪದಾತಿರ್ಧನದಂ ವದನ್ ॥೧೦೦॥

---

೯೫-೯೬. ಬಳಿಕ ಕುಬೇರನು ಎಚ್ಚೆತ್ತು ತನ್ನ ಅವಸ್ಥೆಯನ್ನು ನೋಡಿದನು. ರೋಷದಿಂದ ಅವನ ಕಣ್ಣು ಕೆಂಪೇರಿತು. ಅವನು ನಿಟ್ಟುಸಿರು ಬಿಟ್ಟನು. ಗಾರುಡಾಸ್ತ್ರವನ್ನು ಧ್ಯಾನಮಾಡಿ, ಬಿಲ್ಲಿನಲ್ಲಿ ಶತ್ರುಭಯಂಕರವಾದ ಬಾಣವನ್ನು ಹೂಡಿ ದಾನವಸೈನ್ಯದ ಮೇಲೆ ಬಿಟ್ಟನು.

೯೭-೯೮. ಮೊದಲು ಅವನ ಬಿಲ್ಲಿನಿಂದ ಹೊಗೆಯ ರಾಶಿಯೂ ಅನಂತರ ಹೊಳೆಹೊಳೆವ ಕಿಡಿಗಳೂ ಮೇಲಕ್ಕೆದ್ದುವು. ತರುವಾಯ ಆ ಅಸ್ತ್ರವು ಆಕಾಶವನ್ನು ಜ್ವಾಲಾಮಯವನ್ನಾಗಿ ಮಾಡಿ ಕ್ರಮವಾಗಿ ನಾನಾಬಗೆಯ ರೂಪವನ್ನು ತಾಳಿತು. ಅದನ್ನು ನಿವಾರಿಸಲು ಏತರಿಂದಲೂ ಸಾಧ್ಯವಾಗಲಿಲ್ಲ.

೯೯. ಮೊದಲು ಕಗ್ಗತ್ತಲೆಯಿಂದ ತುಂಬಿದ್ದ ಲೋಕವು ಈಗ ತೇಜೋಮಯವಾಗಿ ಕಣ್ಣನ್ನು ಕೋರೈಸುತ್ತ ನಿರಾಕಾರವಾಗಿ ಕಂಡಿತು. ಬಳಿಕ ಗಗನಚಾರಿಗಳು ಆ ದಿವ್ಯತೇಜಸ್ಸನ್ನು ಹೊಗಳಿದರು.

೧೦೦. ಬಹು ಪರಾಕ್ರಮಶಾಲಿಯಾದ ಕುಜಂಭಾಸುರನು ಅದನ್ನು ನೋಡಿ ಕುಬೇರನನ್ನು ಮಾತನಾಡಿಸುತ್ತ ಕಾಲ್ನಡೆಯಲ್ಲಿ ವೇಗದಿಂದ ಓಡಿದನು.

ಅಥಾಭಿಮುಖಮಾಯಾಂತಂ ದೈತ್ಯಂ ದೃಷ್ಟ್ವಾ ಧನಾಧಿಪಃ ।
ಬಭೂವ ಸಂಭ್ರಮಾವಿಷ್ಟಃ ಪಲಾಯನಪರಾಯಣಃ ॥೧೦೧॥

ತತಃ ಪಲಾಯತಸ್ತಸ್ಯ ಮುಕುಟಂ ರತ್ನಮಂಡಿತಂ ।
ಪಪಾತ ಭೂತಲೇ ದೀಪ್ತಂ ರವಿಬಿಂಬಮಿವಾಂಬರಾತ್ ॥೧೦೨॥

ಶೂರಾಣಾಮಭಿಜಾತಾನಾಂ ಭರ್ತರ್ಯಪಸೃತೇ ರಣಾತ್ ।
ಮರ್ತುಂ ಸಂಗ್ರಾಮಶಿರಸಿ ಯುಕ್ತಂ ತದ್ಭೂಷಣಾಗ್ರತಃ ॥೧೦೩॥

ಇತಿ ವ್ಯವಸ್ಯ ದುರ್ಧರ್ಷಾ ನಾನಾಶಸ್ತ್ರಾಸ್ತ್ರಪಾಣಯಃ ।
ಯುಯುತ್ಸವಃ ಸ್ಥಿತಾ ಯಕ್ಷಾ ಮುಕುಟಂ ಪರಿವಾರ್ಯ ತತ್ ॥೧೦೪॥

ಅಭಿಮಾನಧನಾ ವೀರಾ ಧನದಸ್ಯ ಪದಾನುಗಾಃ ।
ತಾನಮರ್ಷಾಚ್ಚ ಸಂಪ್ರೇಕ್ಷ್ಯ ದಾನವಶ್ಚಂಡಪೌರುಷಃ ॥೧೦೫॥

ಮುಶುಂಡೀಂ ಭೈರವಾಕಾರಾಂ ಗೃಹೀತ್ವಾ ಶೈಲಗೌರವಾಂ ।
ರಕ್ಷಿಣೋ ಮುಕುಟಸ್ಯಾಥ ನಿಷ್ಪಿಪೇಷ ನಿಶಾಚರಾ ॥೧೦೬॥

---

೧೦೧. ಕುಬೇರನು ತನ್ನ ಕಡೆಗೆ ಬರುತ್ತಿರುವ ದೈತ್ಯನನ್ನು ನೋಡಿ ಸಂಭ್ರಮಗೊಂಡು ಓಡುವುದಕ್ಕೆ ತೊಡಗಿದನು.

೧೦೨. ಓಡುತ್ತಿರುವಾಗ ರತ್ನಖಚಿತವಾಗಿ ಹೊಳೆಯುತ್ತಿದ್ದ ಅವನ ಕಿರೀಟವು ಆಕಾಶದಿಂದ ಸೂರ್ಯಬಿಂಬವು ಬಿದ್ದಂತೆ ನೆಲದ ಮೇಲೆ ಬಿದ್ದಿತು.

೧೦೩-೧೦೪. "ಸ್ವಾಮಿಯು ಯುದ್ಧಬಿಟ್ಟು ಹೊರಟುಹೋದ ಮೇಲೆ ಸತ್ಕುಲಪ್ರಸೂತರಾದ ಶೂರರು ರಣರಂಗದಲ್ಲಿ ಯುದ್ಧಮಾಡುತ್ತ ಮಡಿಯುವುದೇ ಯುಕ್ತ. ಅದೇ ಅವರಿಗೆ ಉತ್ತಮವಾದ ಭೂಷಣ" ಎಂದು ನಿಶ್ಚಯಿಸಿ, ಬಗೆಬಗೆಯ ಶಸ್ತ್ರಾಸ್ತ್ರಧಾರಿಗಳೂ, ಅಭಿಮಾನಧನರೂ, ಕುಬೇರನ ಅನುಯಾಯಿಗಳೂ ಆದ ಯಕ್ಷವೀರರು ಆ ಕಿರೀಟದ ಸುತ್ತಲೂ ಯುದ್ಧಾಭಿಲಾಷೆಯಿಂದ ನಿಂತರು.

೧೦೫-೧೦೬. ಬಹುಪರಾಕ್ರಮಿಯಾದ ದಾನವನು ಅವರನ್ನು ಬಿರಬಿರನೆ ನೋಡಿ, ಬೆಟ್ಟದಂತೆ ಭಾರವಾದ ಮತ್ತು ಭಯಂಕರವಾದ ಮುಸುಂಡಿಯನ್ನು ಹಿಡಿದು, ಕಿರೀಟವನ್ನು ರಕ್ಷಿಸುತ್ತಿದ್ದ ರಾಕ್ಷಸರನ್ನು ಜಜ್ಜಿ ಪುಡಿಮಾಡಿದನು.

ತಾಂ ಪ್ರಮಥ್ಯಾಥ ದನುಜೋ ಮುಕುಟಂ ತತ್ಸ್ವಕೇ ರಥೇ ।
ಸಮಾರೋಪ್ಯಾಮರರಿಪುರ್ಜಿತ್ವಾ ಧನದಮಾಹವೇ ॥೧೦೭॥

ಧನಾನಿ ರತ್ನಾನಿ ಚ ಮೂರ್ತಿಮಂತಿ
ತಥಾ ನಿಧಾನಾನಿ ಶರೀರಿಣಶ್ಚ ।
ಆದಾಯ ಸರ್ವಾಣಿ ಜಗಾಮ ದೈತ್ಯೋ
ಜಂಭಃ ಸ್ವಸೈನ್ಯಂ ದನುಜೇಂದ್ರಸಿಂಹಃ ।
ಧನಾಧಿಪೋ ವೈ ವಿನಿಕೀರ್ಣಮೂರ್ಧಜೋ
ಜಗಾಮ ದೀನಃ ಸುರಭರ್ತುರಂತಿಕಂ ॥೧೦೮॥

ಕುಜಂಭೇನಾಥ ಸಂಸಕ್ತೋ ರಜನೀಚರನಂದನಃ ।
ಮಾಯಾಮಮೋಘಾಮಾಶ್ರಿತ್ಯ ತಾಮಸೀಂ ರಾಕ್ಷಸೇಶ್ವರಃ ॥೧೦೯॥

ಮೋಹಯಾಮಾಸ ದೈತ್ಯೇಂದ್ರಂ ಜಗತ್ಕೃತ್ವಾ ತಮೋಮಯಂ ।
ತತೋ ವಿಫಲನೇತ್ರಾಣಿ ದಾನವಾನಾಂ ಬಲಾನಿ ತು ॥೧೧೦॥

---

೧೦೭. ಬಳಿಕ ದೇವಶತ್ರುವಾದ ಕುಜಂಭನು ಅವರನ್ನು ಸದೆಬಡಿದು, ಆ ಕಿರೀಟವನ್ನು ತನ್ನ ರಥದ ಮೇಲಿಟ್ಟುಕೊಂಡನು. ಹೀಗೆ ಅವನು ಕುಬೇರನನ್ನು ಯುದ್ಧದಲ್ಲಿ ಗೆದ್ದನು.

೧೦೮. ದೈತ್ಯಪ್ರಮುಖನಾದ ಜಂಭನು ಧನಗಳು, ಉತ್ತಮವಾದ ರತ್ನಗಳು ನಿಧಿಗಳು, ವೀರಭಟರು ಇವರೆಲ್ಲರನ್ನೂ ವಶಪಡಿಸಿಕೊಂಡು ತನ್ನ ಪಾಳಯಕ್ಕೆ ಹೋದನು.

೧೦೯. ಬಳಿಕ ರಾಕ್ಷಸೇಶ್ವರನಾದ ನಿರಋತಿಯು ಕುಜಂಭನನ್ನು ಸಂಧಿಸಿದನು. ಅವನು ವ್ಯರ್ಥವಾಗದ, ತಮೋಗುಣಮಯವಾದ ತನ್ನ ಮಾಯೆಯ ಬಲದಿಂದ ಜಗತ್ತನ್ನು ಕಗ್ಗತ್ತಲನ್ನಾಗಿ ಮಾಡಿ ದೈತ್ಯಾಧಿಪತಿಯನ್ನು ಮೋಹಗೊಳಿಸಿದನು.

೧೧೦. ಬಳಿಕ ದಾನವಸೈನಿಕರಿಗೆ ಕಣ್ಣು ಕಾಣದೆ ಹೋಯಿತು. ಅವರ ನೇತ್ರಗಳು ವಿಫಲವಾದುವು. ಅವರು ಒಂದು ಹೆಜ್ಜೆಯನ್ನೂ ಸಹ ಮುಂದೆ ಇಡಲಾರದೆ ಹೋದರು.

ನ ಶೇಕುಶ್ಚಲಿತುಂ ತತ್ರ ಪದಾದಪಿ ಪದಂ ತದಾ ।
ತತೋ ನಾನಾಸ್ತ್ರವರ್ಷೇಣ ದಾನವಾನಾಂ ಮಹಾಚಮೂಂ ॥೧೧೧॥

ಜಘಾನ ಘನನೀಹಾರತಿಮಿರಾತುರವಾಹನಾಂ ।
ವಧ್ಯಮಾನೇಷು ದೈತ್ಯೇಷು ಕಜಂಭೇ ಮೂಢಚೇತಸಿ ॥೧೧೨॥

ಮಹಿಷೋ ದಾನವೇಂದ್ರಸ್ತು ಕಲ್ಪಾಂತಾಂಭೋದಸನ್ನಿಭಃ ।
ಅಸ್ತ್ರಂ ಚಕಾರ ಸಾವಿತ್ರಮುಲ್ಕಾಸಂಘಾತಮಂಡಿತಂ ॥೧೧೩॥

ವಿಜೃಂಭತ್ಯಥ ಸಾವಿತ್ರೇ ಪರಮಾಸ್ತ್ರೇ ಪ್ರತಾಪಿನಿ ।
ಪ್ರಣಾಶಮಗಮತ್ತೀವ್ರಂ ತಮೋ ಘೋರಮನಂತರಂ ॥೧೧೪॥

ತತೋಽಸ್ತ್ರಂ ವಿಸ್ಫುಲಿಂಗಾಂಕಂ ತಮಃ ಕೃತ್ಸ್ನಂ ವ್ಯನಾಶಯತ್ ।
ಪ್ರಫುಲ್ಲಾರುಣಪದ್ಮೌಘಂ ಶರದೀವಾಮಲಂ ಸರಃ ॥೧೧೫॥

---

೧೧೧. ಬಳಿಕ ದಟ್ಟವಾದ ಮಂಜಿನಿಂದ ಕತ್ತಲು ಕವಿದು ಕುದುರೆಗಳು ಕಣ್ಣುಕಾಣದೆ ತೊಳಲುತ್ತಿದ್ದುವು. ನಿರಋತಿಯು ಆ ಮಹಾಸೈನ್ಯವನ್ನು ಬಗೆಬಗೆಯ ಅಸ್ತ್ರಗಳ ಮಳೆಗರೆದು ಸಂಹರಿಸಿದನು.

೧೧೨-೧೧೩. ದೈತ್ಯರು ಮೇಲೆ ಮೇಲೆ ಹತರಾಗುತ್ತಿದ್ದರು. ಕುಜಂಭನು ಮುಂದುತೋಚದೆ ಮೂಢನಾಗಿದ್ದನು. ಆಗ ಪ್ರಳಯಮೇಘಸದೃಶನೂ, ದಾನವಾಧಿಪತಿಯೂ ಆದ ಮಹಿಷನು ಧೂಮಕೇತುಗಳ ಸಮೂಹದಿಂದ ಅಲಂಕೃತವಾದ ಸೂರ್ಯಾಸ್ತ್ರವನ್ನು ಪ್ರಯೋಗಿಸಿದನು.

೧೧೪. ಅಸ್ತ್ರಗಳಲ್ಲಿ ಶ್ರೇಷ್ಠವಾದ ಸೂರ್ಯಾಸ್ತ್ರವು ತೇಜಸ್ಸನ್ನು ಬೀರುತ್ತ ಮೆರೆಯುತ್ತಿರಲು ಬೇಗನೆ ಕಗ್ಗತ್ತಲೆಯು ನಾಶವಾಯಿತು.

೧೧೫. ಕಿಡಿಗಳನ್ನು ಕೆದರುತ್ತಿರುವ ಆ ಸೂರ್ಯಾಸ್ತ್ರವು ಬಳಿಕ ಕತ್ತಲೆಯೆಲ್ಲವನ್ನೂ ಹೋಗಲಾಡಿಸಿತು. ಆಗ ರಣರಂಗವು ಶರತ್ಕಾಲದಲ್ಲಿ ಅರಳಿದ ಕೆಂದಾವರೆಗಳಿಂದ ತುಂಬಿದ ನಿರ್ಮಲವಾದ ಸರೋವರದಂತೆ ಪ್ರಕಾಶಿಸಿತು.

ತತಸ್ತಮಸಿ ಸಂಶಾಂತೇ ದೈತ್ಯೇಂದ್ರಾಃ ಪ್ರಾಪ್ತಚಕ್ಷುಷಃ ।
ಚಕ್ರುಃ ಕ್ರೂರೇಣ ಮನಸಾ ದೇವಾನೀಕೈಃ ಸಹಾದ್ಭುತಂ ॥೧೧೬॥

ಶಸ್ತ್ರೈರಮರ್ಷಾನ್ನಿರ್ಮುಕ್ತೈರ್ಭುಜಂಗಾಸ್ತ್ರಂ ವಿನೋದಿತಂ ।
ಅಥಾದಾಯ ಧನುರ್ಘೋರಮಿಷೂಂಶ್ಚಾಶೀವಿಷೋಪಮಾನ್ ॥೧೧೭॥

ಕುಜಂಭೋಽಧಾವತ ಕ್ಷಿಪ್ರಂ ರಕ್ಷೋರಾಜಬಲಂ ಪ್ರತಿ ।
ರಾಕ್ಷಸೇಂದ್ರಸ್ತಮಾಯಾಂತಂ ವಿಲೋಕ್ಯ ಸಪದಾನುಗಃ ॥೧೧೮॥

ವಿವ್ಯಾಧ ನಿಶಿತೈರ್ಬಾಣೈಃ ಕ್ರೂರಾಶೀವಿಷಭೀಷಣೈಃ ।
ತದಾದಾನಂ ಚ ಸಂಧಾನಂ ನ ಮೋಕ್ಷಶ್ಚಾಪಿ ಲಕ್ಷ್ಯತೇ ॥೧೧೯॥

ಚಿಚ್ಛೇದಾಸ್ಯ ಶರವ್ರಾತಾನ್ ಸ್ವಶರೈರತಿಲಾಘವಾತ್ ।
ಧ್ವಜಂ ಪರಮತೀಕ್ಷ್ಣೇನ ಚಿತ್ರಕರ್ಮಾಮರದ್ವಿಷಃ ॥೧೨೦॥

---

೧೧೬. ಕತ್ತಲೆಯು ಅಡಗಿದ ಬಳಿಕ ದೈತ್ಯೇಂದ್ರರಿಗೆ ಕಣ್ಣು ಬಂದಿತು. ಅವರು ಕೈಯಿಂದಲೂ ಮನಸ್ಸಿನಿಂದಲೂ ದೇವತೆಗಳ ಸೈನ್ಯದೊಡನೆ ಅದ್ಭುತವಾದ ಯುದ್ಧವನ್ನು ಮಾಡಿದರು.

೧೧೭. ಕೋಪದಿಂದ ಬಗೆಬಗೆಯ ಶಸ್ತ್ರಗಳನ್ನು ಪ್ರಯೋಗಿಸಿ ಅವರು ಸರ್ಪಾಸ್ತ್ರವನ್ನು ಅಡಗಿಸಿದರು. ಬಳಿಕ ಕುಜಂಭನು ಭಯಂಕರವಾದ ಬಿಲ್ಲನ್ನೂ ಸರ್ಪಸಮಾನಗಳಾದ ಬಾಣಗಳನ್ನೂ ಹಿಡಿದುಕೊಂಡು ತಡಮಾಡದೆ ನಿರಋತಿಯ ಕಡೆಗೆ ಓಡಿದನು.

೧೧೮-೧೧೯. ರಾಕ್ಷಸೇಂದ್ರನಾದ ನಿರಋತಿಯು ಅನುಯಾಯಿಗಳೊಡನೆ ಕೂಡಿ ಬರುತ್ತಿರುವ ಆ ಕುಜಂಭನನ್ನು ಕ್ರೂರವಾದ ಸರ್ಪಗಳಂತೆ ಭಯಂಕರವಾದ ಕೂರಂಬುಗಳಿಂದ ಭೇದಿಸಿದನು. ಅವನು ಬಾಣವನ್ನು ತೆಗೆಯುವುದು, ಹೂಡುವುದು ಮತ್ತು ಬಿಡುವುದು ಇದೊಂದೂ ಗೊತ್ತಾಗುತ್ತಿರಲಿಲ್ಲ.

೧೨೦. ತನ್ನ ಬಾಣಗಳಿಂದ ಶತ್ರುವಿನ ಬಾಣಗಳನ್ನು ಬಹಳ ಚಟುವಟಿಕೆಯಿಂದ ಕತ್ತರಿಸಿದನು. ಆಶ್ಚರ್ಯಕರವಾಗಿ ಯುದ್ಧಮಾಡಬಲ್ಲ ನಿರಋತಿಯು ದೇವಶತ್ರುವಾದ ಕುಜಂಭನ ಧ್ವಜವನ್ನು ಉಗ್ರವಾದ ಅಸ್ತ್ರದಿಂದ ತುಂಡರಿಸಿದನು. ಮತ್ತು ಅವನ ಸಾರಥಿಯನ್ನು ಭಲ್ಲದಿಂದ ತಿವಿದು ತೇರಿನ ಮೂಕಿಯಿಂದ ಬೀಳಿಸಿದನು.

**ಸಾರಥಿಂ ಚಾಸ್ಯ ಭಲ್ಲೇನ ರಥನೀಡಾದಪಾತಯತ್ ।**
**ಕುಜಂಭಃ ಕರ್ಮ ತದ್ದೃಷ್ಟ್ವಾ ರಾಕ್ಷಸೇಂದ್ರಸ್ಯ ಸಂಯುಗೇ ॥೧೨೧॥**

**ರೋಷರಕ್ತೇಕ್ಷಣಯುತೋ ರಥಾದಾಪ್ಲುತ್ಯ ದಾನವಃ ।**
**ಖಡ್ಗಂ ಜಗ್ರಾಹ ವೇಗೇನ ಶರದಂಬರನಿರ್ಮಲಂ ॥೧೨೨॥**

**ಚರ್ಮ ಚೋದಯಖಂಡೇಂಡುದಶಕೇನ ವಿಭೂಷಿತಂ ।**
**ಅಭ್ಯದ್ರವದ್ರಣೇ ದೈತ್ಯೋ ರಕ್ಷೋಧಿಪತಿಮೋಜಸಾ ॥೧೨೩॥**

**ತಂ ರಕ್ಷೋಧಿಪತಿಃ ಪ್ರಾಪ್ತಂ ಮುದ್ಗರೇಣಾಹನದ್ಧೃದಿ ।**
**ಸ ತು ತೇನ ಪ್ರಹಾರೇಣ ಕ್ಷೀಣಃ ಸಂಭ್ರಾಂತಮಾನಸಃ ॥೧೨೪॥**

**ತಸ್ಥಾವಚೇಷ್ಟೋ ದನುಜೋ ಯಥಾ ಧೀರೋ ಧರಾಧರಃ ।**
**ಸ ಮುಹೂರ್ತಂ ಸಮಾಶ್ವಸ್ತೋ ದಾನವೇಂದ್ರೋऽತಿದುರ್ಜಯಃ ॥೧೨೫॥**

**ರಥಮಾರುಹ್ಯ ಜಗ್ರಾಹ ರಕ್ಷೋ ವಾಮಕರೇಣ ತು ।**
**ಕೇಶೇಷು ನಿರ್ಋತಿಂ ದೈತ್ಯೋ ಜಾನುನಾಕ್ರಮ್ಯ ಧಿಷ್ಠಿತಂ ॥೧೨೬॥**

---

೧೨೧-೧೨೨. ಕುಜಂಭನು ನಿರಋತಿಯ ಆ ಸಾಹಸಕಾರ್ಯವನ್ನು ನೋಡಿ, ಕೋಪದಿಂದ ಕಣ್ಣು ಕೆಂಪೇರಲು ತೇರಿನಿಂದ ಧುಮುಕಿ, ಶರತ್ಕಾಲದ ಮೋಡದಂತೆ ನಿರ್ಮಲವಾದ ಕತ್ತಿಯನ್ನು ಬೇಗನೆ ತೆಗೆದುಕೊಂಡನು.

೧೨೩. ಆ ದೈತ್ಯನು ಉದಿಸುತ್ತಿರುವ ಅರ್ಧಚಂದ್ರನ ಆಕಾರದ ಹತ್ತು ಪ್ರತಿಮೆಗಳಿಂದ ಅಲಂಕೃತವಾದ ಗುರಾಣಿಯನ್ನು ಸಹ ಹಿಡಿದುಕೊಂಡು ಮಹಾ ಪರಾಕ್ರಮದಿಂದ ನಿರಋತಿಯ ಬಳಿಗೆ ಓಡಿದನು.

೧೨೪. ರಾಕ್ಷಸೇಶ್ವರನಾದ ನಿರಋತಿಯು ತನ್ನ ಬಳಿಗೆ ಬಂದ ಕುಜಂಭನಿಗೆ ಮುದ್ಗರದಿಂದ ಎದೆಯ ಮೇಲೆ ಹೊಡೆದನು. ಆ ಪೆಟ್ಟಿನಿಂದ ಅವನು ಬಳಲಿ, ಮುಂದುತೋಚದೆ ಭ್ರಾಂತನಾಗಿ ದೊಡ್ಡ ಪರ್ವತದಂತೆ ನಿಶ್ಚಲನಾದನು.

೧೨೫. ಜಯಿಸಲಸಾಧ್ಯನಾದ ಆ ದಾನವೇಂದ್ರನು ಸ್ವಲ್ಪಹೊತ್ತು ಸುಧಾರಿಸಿ ಕೊಂಡು, ತೇರನ್ನೇರಿ ನಿರಋತಿಯನ್ನು ಎಡಗೈಯಲ್ಲಿ ಹಿಡಿದುಕೊಂಡನು.

೧೨೬. ಕುಪಿತನಾದ ಕುಜಂಭನು ನಿರಋತಿಯ ಕೂದಲನ್ನು ಹಿಡಿದು ಮೊಣಕಾಲಿನಿಂದ ಅದುಮಿ, ಕತ್ತಿಯಿಂದ ಅವನ ತಲೆಯನ್ನು ಕತ್ತರಿಸಲಿಚ್ಛಿಸಿದನು.

ತತಃ ಖಡ್ಗೇನ ಚ ಶಿರಶ್ಛೇತ್ತುಮೈಚ್ಛದಮರ್ಷಣಃ ।
ತಸ್ಮಿಂಸ್ತದಂತರೇ ದೇವೋ ವರುಣೋಽಪಾಂ ಪತಿರ್ದ್ರುತಂ ॥೧೨೭॥

ಪಾಶೇನ ದಾನವೇಂದ್ರಸ್ಯ ಬಬಂಧ ಚ ಭುಜದ್ವಯಂ ।
ತತೋ ಬದ್ಧಭುಜಂ ದೈತ್ಯಂ ವಿಫಲೀಕೃತಪೌರುಷಂ ॥೧೨೮॥

ತಾಡಯಾಮಾಸ ಗದಯಾ ದಯಾಮುತ್ಸೃಜ್ಯ ಪಾಶಭೃತ್ ।
ಸ ತು ತೇನ ಪ್ರಹಾರೇಣ ಸ್ರೋತೋಭಿಃ ಕ್ಷತಜಂ ವಮನ್ ॥೧೨೯॥

ದಧಾರ ರೂಪಂ ಮೇಘಸ್ಯ ವಿದ್ಯುನ್ಮಾಲಾಲತಾವೃತಂ ।
ತದವಸ್ಥಾಗತಂ ದೃಷ್ಟ್ವಾ ಕುಜಂಭಂ ಮಹಿಷಾಸುರಃ ॥೧೩೦॥

ವ್ಯಾವೃತ್ತವದನೋಽಗಾಧೇ ಗ್ರಸ್ತುಮೈಚ್ಛತ್ತು ಸುರಾವುಭೌ ।
ನಿರ್ಋತಿಂ ವರುಣಂ ಚೈವ ತೀಕ್ಷ್ಣದಂಷ್ಟ್ರೋತ್ಕಟಾನನಃ ॥೧೩೧॥

---

೧೨೭. ಆ ವೇಳೆಗೆ ಜಲಾಧಿಪತಿಯಾದ ವರುಣರಾಜನು ಬೇಗನೆ ಬಂದು ದಾನವೇಂದ್ರನ ಭುಜಗಳೆರಡನ್ನೂ ಪಾಶದಿಂದ ಬಿಗಿದು ಕಟ್ಟಿದನು.

೧೨೮. ಹಾಗೆ ತೋಳನ್ನು ಕಟ್ಟಿದ ಬಳಿಕ ಆ ದೈತ್ಯನ ಪೌರುಷವು ನಡೆಯದೆ ಹೋಯಿತು. ವರುಣನು ನಿರ್ದಯನಾಗಿ ಅವನನ್ನು ಗದೆಯಿಂದ ಪ್ರಹರಿಸಿದನು.

೧೨೯. ಅವನು ಪೆಟ್ಟಿನಿಂದ ರಕ್ತವನ್ನು ಕಾರಿದನು. ಅದು ಹೊಳೆಯಂತೆ ಹರಿಯಿತು. ಆಗ ಮಿಂಚಿನ ಬಳ್ಳಿಗಳಿಂದ ಕೂಡಿದ ಮೇಘವನ್ನು ಅವನು ಹೋಲುತ್ತಿದ್ದನು.

೧೩೦-೧೩೧. ಕುಜಂಭನು ಆ ಸ್ಥಿತಿಗೆ ಬಂದುದನ್ನು ನೋಡಿ ಮಹಿಷಾಸುರನು ಬಾಯನ್ನು ಅಗಲವಾಗಿ ತೆರೆದು ನಿರಋತಿ, ವರುಣ ಇವರಿಬ್ಬರನ್ನೂ ನುಂಗಲು ಇಚ್ಛಿಸಿದನು. ಮೊನಚಾದ ಕೋರೆಹಲ್ಲುಗಳಿಂದ ತುಂಬಿದ ಅವನ ಬಾಯಿ ತವಕಪಡುತ್ತಿತ್ತು.

ತಾವಭಿಪ್ರಾಯಮಾಲಕ್ಷ್ಯ ತಸ್ಯ ದೈತ್ಯಸ್ಯ ದೂಷಿತಂ ।
ತ್ಯಕ್ತ್ವಾ ರಥಪಥಂ ಭೀತೌ ಮಹಿಷಸ್ಯಾತಿರಂಹಸಾ ॥೧೩೨॥

ಭೃಶಂ ದ್ರುತೌ ಜವಾದ್ದಿಗ್ಭ್ಯಮುಭಾಭ್ಯಾಂ ಭಯವಿಹ್ವಲೌ ।
ಜಗಾಮ ನಿಋತಿಃ ಕ್ಷಿಪ್ರಂ ಶರಣಂ ಪಾಕಶಾಸನಂ ॥೧೩೩॥

ಕ್ರುದ್ಧಸ್ತು ಮಹಿಷೋ ದೈತ್ಯೋ ವರುಣಂ ಸಮಭಿದ್ರುತಃ ।
ತಮಂತಕಮುಖಾಸಕ್ತಮಾಲೋಕ್ಯ ಹಿಮವದ್ದ್ಯುತಿಃ ॥೧೩೪॥

ಚಕ್ರೇ ಸೋಮಾಸ್ತ್ರನಿಃಸೃಷ್ಟಂ ಹಿಮಸಂಘಾತಕಂಟಕಂ ।
ವಾಯವ್ಯಂ ಚಾಸ್ತ್ರಮತುಲಂ ಚಂದ್ರಶ್ಚಕ್ರೇ ದ್ವಿತೀಯಕಂ ॥೧೩೫॥

ವಾಯುನಾ ತೇನ ಚಂದ್ರೇಣ ಸಂಶುಷ್ಕೇಣ ಹಿಮೇನ ಚ ।
ವ್ಯಥಿತಾ ದಾನವಾಃ ಸರ್ವೇ ಶೀತೋಚ್ಛಿನ್ನಾ ವಿಪೌರುಷಾಃ ॥೧೩೬॥

---

೧೩೨-೧೩೩. ಅವರಿಬ್ಬರಿಗೂ ಆ ದೈತ್ಯನ ಕೆಟ್ಟ ಆಲೋಚನೆಯು ತಿಳಿಯಿತು. ಅವರು ಹೆದರಿ ಮಹಿಷಾಸುರನ ರಥದ ಮಾರ್ಗವನ್ನು ಬಿಟ್ಟು ಬಹಳ ವೇಗವಾಗಿ ಬೇರೆಬೇರೆ ದಿಕ್ಕುಗಳಿಗೆ ಓಡಿಹೋದರು. ನಿರಋತಿಯು ತಡಮಾಡದೆ ದೇವೇಂದ್ರನನ್ನು ಮರೆಹೊಕ್ಕನು.

೧೩೪-೧೩೫. ಮಹಿಷಾಸುರನು ಕೋಪಗೊಂಡು ವರುಣನನ್ನು ಬೆನ್ನಟ್ಟಿ ಹೋದನು. ಅವನಿಗೆ ಸಾವು ಸನ್ನಿಹಿತವಾಗಿರುವುದನ್ನು ತಿಳಿದು ಚಂದ್ರನು ಸೋಮಾಸ್ತ್ರವನ್ನು ಹೂಡಿ ಮಂಜಿನಗಡ್ಡೆಗಳನ್ನು ಸುರಿಸುವ ಬಾಣಗಳನ್ನು ಬಿಟ್ಟನು. ಅದರ ಜೊತೆಗೆ ವಾಯವ್ಯಾಸ್ತ್ರವನ್ನೂ ಪ್ರಯೋಗಿಸಿದನು.

೧೩೬. ಬಿರುಗಾಳಿಯು ಬೀಸಿ ಎಲ್ಲವನ್ನೂ ಹೊಡೆದುಕೊಂಡು ಹೋಗುತ್ತಿತ್ತು. ಚಂದ್ರನು ಕೊರೆಯುವ ಹಿಮವನ್ನು ಕರೆಯುತ್ತಿದ್ದನು. ಆಗ ದಾನವರೆಲ್ಲ ಶೈತ್ಯದಿಂದ ಪೌರುಷವಿಹೀನರಾಗಿ ದುಃಖಿತರಾದರು.

ನ ಶೇಕುಶ್ಚಲಿತುಂ ಪದ್ಭ್ಯಾಂ ನಾಸ್ತ್ರಾಣ್ಯಾದಾತುಮೇವ ಚ ।
ಮಹಾಹಿಮನಿಪಾತೇನ ಶಸ್ತ್ರೈಶ್ಚಂದ್ರಪ್ರಚೋದಿತೈಃ ॥೧೩೭॥

ಗಾತ್ರಾಣ್ಯಸುರಸೈನ್ಯಾನಾಮದಹ್ಯಂತ ಸಮಂತತಃ ।
ಮಹಿಷೋ ನಿಷ್ಪ್ರಯತ್ನಸ್ತು ಶೀತೇನಾಕಂಪಿತಾನನಃ ॥೧೩೮॥

ಕಕ್ಷಾವಾಲಂಬ್ಯ ಪಾಣಿಭ್ಯಾಮುಪವಿಷ್ಟೋ ಹ್ಯಧೋಮುಖಃ ।
ಸರ್ವೇ ತೇ ನಿಷ್ಪ್ರತೀಕಾರಾ ದೈತ್ಯಾಶ್ಚಂದ್ರಮಸಾ ಜಿತಾಃ ॥೧೩೯॥

ರಣೇಚ್ಛಾಂ ದೂರತಸ್ತ್ಯಕ್ತ್ವಾ ತಸ್ಥುಸ್ತೇ ಜೀವಿತಾರ್ಥಿನಃ ।
ತತ್ರಾಬ್ರವೀತ್ಕಾಲನೇಮಿರ್ದೈತ್ಯಾನ್ ಕೋಪೇನ ದೀಪಿತಃ ॥೧೪೦॥

ಭೋ ಭೋಃ ಶೃಂಗಾರಿಣಃ ಶೂರಾಃ ಸರ್ವೇ ಶಸ್ತ್ರಾಸ್ತ್ರಪಾರಗಾಃ ।
ಏಕೈಕೋಽಪಿ ಜಗತ್ಸರ್ವಂ ಶಕ್ತಸ್ತುಲಯಿತುಂ ಭುಜೈಃ ॥೧೪೧॥

---

೧೩೭. ಎಡೆಬಿಡದೆ ಬೀಳುತ್ತಿದ್ದ ಮಂಜಿನಿಂದಲೂ, ಚಂದ್ರನು ಗುರಿತಪ್ಪದೆ ಬಿಡುತ್ತಿದ್ದ ಬಾಣಗಳಿಂದಲೂ ನೊಂದು ಅಸುರರು ಮುಂದಕ್ಕೆ ಹೆಜ್ಜೆಯನ್ನು ಹಾಕಲಾರದೆ ಹೋದರು. ಅಸ್ತ್ರಗಳನ್ನು ತೆಗೆದುಕೊಳ್ಳುವುದಕ್ಕೆ ಕೂಡ ಅವರು ಅಸಮರ್ಥರಾದರು.

೧೩೮. ಸುತ್ತುಮುತ್ತಲಿದ್ದ ಅಸುರಸೈನಿಕರ ಅವಯವಗಳು ಶರಘಾತದಿಂದ ಬೆಂದುಹೋದುವು. ಮಹಿಷನಿಗೋ ಎಂದರೆ ಶೈತ್ಯದಿಂದ ತಲೆ ನಡುಗುತ್ತಿತ್ತು. ಅವನು ಏನೂ ಮಾಡಲಾರದೆ ಕುಳಿತುಬಿಟ್ಟನು.

೧೩೯. ಅವನು ಕೈಗಳನ್ನು ಕಂಕುಳಲ್ಲಿಟ್ಟುಕೊಂಡು ತಲೆತಗ್ಗಿಸಿ ಕುಳಿತನು. ದೈತ್ಯರು ಪ್ರತೀಕಾರಮಾಡಲಾರದೆ ಹೋದರು. ಹೀಗೆ ಚಂದ್ರನು ಅವರನ್ನು ಸೋಲಿಸಿದನು.

೧೪೦. ಅಸುರರು ಯುದ್ಧಾಭಿಲಾಷೆಯನ್ನು ತೊರೆದು ಪ್ರಾಣವುಳಿದರೆ ಸಾಕೆಂದಿದ್ದರು. ಆಗ ಕಾಲನೇಮಿಯು ಬಹಳ ಸಿಟ್ಟಿನಿಂದ ಕಿಡಿಕಿಡಿಯಾಗಿ ಅವರಿಗಿಂತೆಂದನು.

೧೪೧. "ಎಲೈ ಶೂರರೇ, ಪೌರುಷವೇ ನಿಮಗೆ ಭೂಷಣ. ನೀವೆಲ್ಲರೂ ಶಸ್ತ್ರಾಸ್ತ್ರಗಳಲ್ಲಿ ಪಂಡಿತರು. ನಿಮ್ಮಲ್ಲಿ ಒಬ್ಬೊಬ್ಬರೂ ತೋಳುಗಳಿಂದ ಜಗತ್ತೆಲ್ಲವನ್ನೂ ಅಲ್ಲಾಡಿಸಬಲ್ಲಿರಿ.

ಏಕೈಕೋಽಪಿ ಕ್ಷಮೋ ಗ್ರಸ್ತುಂ ಜಗತ್ಸರ್ವಂ ಚರಾಚರಂ ।
ಏಕೈಕಸ್ಯಾಪಿ ಪರ್ಯಾಪ್ತಾ ನ ಸರ್ವೇಽಪಿ ದಿವೌಕಸಃ ॥೧೪೨॥

ಕಲಾಂ ಪೂರಯಿತುಂ ಯತ್ನಾತ್ಷೋಡಶೀಮತಿವಿಕ್ರಮಾಃ ।
ಕಿಂಪ್ರಯಾತಾಶ್ಚ ತಿಷ್ಠಧ್ವಂ ಸಮರೇಽಪರನಿರ್ಜಿತಾಃ ॥೧೪೩॥

ನ ಯುಕ್ತಮೇತಚ್ಛೂರಾಣಾಂ ವಿಶೇಷಾದ್ದೈತ್ಯಜನ್ಮನಾಂ ।
ರಾಜಾ ಚಾಂತರಿತೋಽಸ್ಮಾಕಂ ತಾರಕೋ ಲೋಕಮಾರಕಃ ॥೧೪೪॥

ವಿರತಾನಾಂ ರಣಾದಸ್ಮಾತ್ಕ್ರುದ್ಧಃ ಪ್ರಾಣಾನ್ ಹರಿಷ್ಯತಿ ।
ಶೀತೇನ ನಷ್ಟಶ್ರುತಯೋ ಭ್ರಷ್ಟವಾಕ್ಪಾಟವಾಸ್ತಥಾ ॥೧೪೫॥

ಮೂಕಾಸ್ತದಾಭವನ್ ದೈತ್ಯಾ ರಣದ್ದಶನಪಙ್ಕ್ತಯಃ ।
ತಾನ್ ದೃಷ್ಟ್ವಾ ನಷ್ಟಚೇತಸ್ಕಾನ್ ದೈತ್ಯಾಞ್ಛೀತೇನ ಸಾದಿತಾನ್ ॥೧೪೬॥

---

೧೪೨-೧೪೩. ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ ಒಬ್ಬೊಬ್ಬರೇ ನುಂಗಬಲ್ಲಿರಿ. ದೇವತೆಗಳೆಲ್ಲ ಸೇರಿದರೂ ನಿಮ್ಮಲ್ಲೊಬ್ಬರಿಗೆ ಸಹ ಸರಿಬಾರರು. ಎಲೈ ಶೂರಾಗ್ರೇಸರರೇ, ನಿಮ್ಮ ಸಾಹಸದ ಹದಿನಾರರಲ್ಲಿ ಒಂದುಪಾಲೂ ಕೂಡ ಅವರಿಗಿಲ್ಲ. ಯುದ್ಧಕ್ಕೋಸ್ಕರವೆಂದು ಹೊರಟಿರಿ. ಶತ್ರುಗಳಿಗೆ ಸೋತುಹೋಗಿ ಈಗ ಏತಕ್ಕಾಗಿ ಸುಮ್ಮನೆ ನಿಂತಿರುವಿರಿ?

೧೪೪. ಶೂರರಿಗೆ ಅದರಲ್ಲೂ ಮುಖ್ಯವಾಗಿ ದೈತ್ಯವಂಶದಲ್ಲಿ ಹುಟ್ಟಿದವರಿಗೆ ಇದು ಸರಿಯಲ್ಲ. ಲೋಕಸಂಹಾರಕನೂ, ನಮ್ಮ ಪ್ರಭುವೂ ಆದ ತಾರಕಾಸರನೂ ಸಹ ನಮ್ಮ ಸಮೀಪದಲ್ಲಿಲ್ಲ. ನಾವೇನಾದರೂ ಈಗ ಯುದ್ಧಮಾಡದೆ ಹಿಂದುಳಿದರೆ ಅವನು ಸಿಟ್ಟುಗೊಂಡು ನಮ್ಮ ಪ್ರಾಣಗಳನ್ನು ತೆಗೆದುಬಿಡುವನು."

೧೪೫. ಕಾಲನೇಮಿಯು ಇಷ್ಟು ಹೇಳಿದರೂ ಶೈತ್ಯಾಧಿಕ್ಯದಿಂದ ದೈತ್ಯರಿಗೆ ಕಿವಿ ಕೇಳಿಸಲಿಲ್ಲ. ಅವರಿಗೆ ಮಾತನಾಡುವ ಸಾಮರ್ಥ್ಯವಿರಲಿಲ್ಲ. ಅವರ ಹಲ್ಲು ಕಟಕಟನೆ ಸದ್ದಾಗುತ್ತಿದ್ದುವು. ಅವರು ಮೂಗರಂತಿದ್ದರು.

೧೪೬-೧೪೮. ದೈತ್ಯರು ಚಳಿಯಿಂದ ಪ್ರಜ್ಞೆ ತಪ್ಪಿ ಶಕ್ತಿಗುಂದಿದುದನ್ನು ನೋಡಿ ಮಹಾಸುರನಾದ ಕಾಲನೇಮಿಯು ಆ ಸಮಯಕ್ಕೆ ತಕ್ಕ ಕಾರ್ಯವಾವುದೆಂದು

**ಮತ್ವಾ ಕಾಲಕ್ಷಮಂ ಕಾರ್ಯಂ ಕಾಲನೇಮಿರ್ಮಹಾಸುರಃ |**
**ಆಶ್ರಿತ್ಯ ದಾನವೀಂ ಮಾಯಾಂ ವಿತತ್ಯ ಸ್ವಂ ಮಹಾವಪುಃ ||೧೪೭||**

**ಪೂರಯಾಮಾಸ ಗಗನಂ ದಿಶೋ ವಿದಿಶ ಏವ ಚ |**
**ನಿರ್ಮಮೇ ದಾನವೇಂದ್ರೇಶಃ ಶರೀರೇ ಭಾಸ್ಕರಾಯುತಂ ||೧೪೮||**

**ದಿಶಶ್ಚ ಮಾಯಯಾ ಚಂಡ್ಯೈಃ ಪೂರಯಾಮಾಸ ಪಾವಕೈಃ |**
**ತತೋ ಜ್ವಾಲಾಕುಲಂ ಸರ್ವಂ ತ್ರೈಲೋಕ್ಯಮಭವತ್ಕ್ಷಣಾತ್ ||೧೪೯||**

**ತೇನ ಜ್ವಾಲಾಸಮೂಹೇನ ಹಿಮಾಂಶುರಗಮಚ್ಛಮಂ |**
**ತತಃ ಕ್ರಮೇಣ ವಿಭ್ರಷ್ಟಶೀತದುರ್ದಿನಮಾಬಭೌ ||೧೫೦||**

**ತದ್ಬಲಂ ದಾನವೇಂದ್ರಾಣಾಂ ಮಾಯಯಾ ಕಾಲನೇಮಿನಃ |**
**ತದ್ದೃಷ್ಟ್ವಾ ದಾನವಾನೀಕಂ ಲಬ್ಧಸಂಜ್ಞಂ ದಿವಾಕರಃ |**
**ಉವಾಚಾರುಣಮುದ್ಭ್ರಾಂತಃ ಕೋಪಾಲ್ಲೋಕೈಕಲೋಚನಃ ||೧೫೧||**

---

ಆಲೋಚಿಸಿ ತಿಳಿದುಕೊಂಡನು. ಅಸುರಮಾಯೆಯಿಂದ ಶರೀರವನ್ನು ವಿಸ್ತಾರವಾಗಿ ಬೆಳೆಯಿಸಿ ಆಕಾಶವನ್ನೂ ದಿಕ್ಕು ವಿದಿಕ್ಕುಗಳನ್ನೂ ತುಂಬಿದನು. ತನ್ನ ದೇಹದಲ್ಲಿ ಹತ್ತುಸಾವಿರ ಸೂರ್ಯರನ್ನು ನಿರ್ಮಾಣಮಾಡಿದನು.

೧೪೯. ಮಾಯೆಯಿಂದ ಅತಿತೀವ್ರವಾದ ಅಗ್ನಿಯನ್ನು ಹುಟ್ಟಿಸಿ ಎಲ್ಲ ದಿಕ್ಕುಗಳಲ್ಲಿಯೂ ಹರಡಿದನು. ಆಗ ಮೂರುಲೋಕವೂ ಕ್ಷಣಕಾಲದಲ್ಲಿ ಅಗ್ನಿಜ್ವಾಲೆಯಿಂದ ತುಂಬಿಹೋಯಿತು.

೧೫೦. ಆ ಜ್ವಾಲಾಮಾಲೆಯಿಂದ ಚಂದ್ರನು ಶಕ್ತಿಗುಂದಿದನು. ಕಾಲನೇಮಿಯ ಮಾಯಾಬಲದಿಂದ ಚಳಿಯೂ ಸುರಿಯುತ್ತಿದ್ದ ಮಂಜೂ ಅಡಗಿದುವು. ದಾನವ ಸೈನ್ಯವು ಮತ್ತೆ ಶೌರ್ಯದಿಂದ ಮೆರೆಯತೊಡಗಿತು.

೧೫೧. ದೈತ್ಯಬಲವು ಪುನಃ ಚೇತರಿಸಿಕೊಂಡುದನ್ನು ನೋಡಿ ಲೋಕನೇತ್ರನಾದ ಸೂರ್ಯನು ಗಾಬರಿಗೊಂಡು ಕೋಪದಿಂದ ಅರುಣನಿಗಿಂತೆಂದನು.

|| ದಿವಾಕರ ಉವಾಚ ||

**ನಯಾರುಣ ರಥಂ ಶೀಘ್ರಂ ಕಾಲನೇಮಿರಥೋ ಯತಃ |**
**ವಿಮರ್ದಸ್ತತ್ರ ವಿಷಮೋ ಭವಿತಾ ಶೂರಸಂಕ್ಷಯಃ ||೧೫೨||**

**ಜಿತ ಏಷ ಶಶಾಂಕೋಽತ್ರ ತದ್ಬಲಂ ಬಲಮಾಶ್ರಿತಂ |**
**ಇತ್ಯುಕ್ತಶ್ಚೋದಯಾಮಾಸ ರಥಂ ಗರುಡಪೂರ್ವಜಃ | ||೧೫೩||**

**ಪ್ರಯತ್ನವಿಧೃತೈರಶ್ವೈಃ ಸಿತಚಾಮರಮಾಲಿಭಿಃ**
**ಜಗದ್ದೀಪೋಽಥ ಭಗವಾಞ್ಜಗ್ರಾಹ ವಿತತಂ ಧನುಃ ||೧೫೪||**

**ಶರೌ ಚ ದ್ವೌ ಮಹಾಭಾಗೋ ದಿವ್ಯಾವಾಶೀವಿಷದ್ಯುತೀ |**
**ಸಂಚಾರಾಸ್ತ್ರೇಣ ಸಂಧಾಯ ಬಾಣಮೇಕಂ ಸಸರ್ಜ ಸಃ ||೧೫೫||**

**ದ್ವಿತೀಯಮಿಂದ್ರಜಾಲೇನ ಯೋಜಿತಂ ಪ್ರಮುಮೋಚ ಹ |**
**ಸಂಚಾರಾಸ್ತ್ರೇಣ ರೂಪಾಣಾಂ ಕ್ಷಣಾಚ್ಚಕ್ರೇ ವಿಪರ್ಯಯಂ ||೧೫೬||**

---

೧೫೨. ಸೂರ್ಯನು ಹೇಳಿದನು.—ಎಲೈ ಅರುಣನೇ, ಕಾಲನೇಮಿಯ ರಥದ ಕಡೆಗೆ ನನ್ನ ತೇರನ್ನು ಬೇಗನೆ ಬಿಡು. ಅಲ್ಲಿ ಭಯಂಕರವಾದ ಯುದ್ಧವಾಗುವುದು. ಎರಡು ಕಡೆಯ ಶೂರರೂ ಹತರಾಗುವರು. ಇಗೋ! ಚಂದ್ರನು ಸೋತನು. ಅವರ ಕಡೆಯ ಸೈನ್ಯವು ಬಲಗೊಂಡಿತು.

೧೫೩. ಸೂರ್ಯನು ಹೀಗೆ ಹೇಳಲು ಅರುಣನು ತೇರನ್ನು ನಡೆಸಿದನು. ಬಿಳಿಯ ಚಾಮರದ ಮಾಲೆಗಳನ್ನು ಹಾಕಿದ್ದ ಕುದುರೆಗಳನ್ನು ಬಹಳ ಕಷ್ಟದಿಂದ ಹಿಡಿದು ನಿಲ್ಲಿಸಬೇಕಾಗಿತ್ತು. ಅವು ಅಷ್ಟೊಂದು ವೇಗದಿಂದ ಓಡುತ್ತಿದ್ದುವು.

೧೫೪-೧೫೫. ಲೋಕಕ್ಕೆಲ್ಲ ಬೆಳಕನ್ನು ನೀಡುವ ಪೂಜ್ಯನಾದ ಸೂರ್ಯನು ದೊಡ್ಡ ಬಿಲ್ಲನ್ನೂ ಸರ್ಪಗಳಂತೆ ತೇಜೋಭರಿತಗಳಾದ ಎರಡು ಬಾಣಗಳನ್ನೂ ಎತ್ತಿಕೊಂಡನು. ಸಂಚಾರಾಸ್ತ್ರವನ್ನು ಅಭಿಮಂತ್ರಿಸಿ ಒಂದು ಬಾಣವನ್ನು ಬಿಟ್ಟನು.

೧೫೬. ಎರಡನೆಯದನ್ನು ಇಂದ್ರಜಾಲದಿಂದ ಅಭಿಮಂತ್ರಿಸಿ ಪ್ರಯೋಗಿಸಿದನು. ಕ್ಷಣಕಾಲದಲ್ಲಿಯೇ ಸಂಚಾರಾಸ್ತ್ರದಿಂದ ರೂಪಗಳ ವ್ಯತ್ಯಾಸವಾದುವು. ದೇವತೆಗಳಿಗೆ ದಾನವರ ರೂಪವೂ ದಾನವರಿಗೆ ದೇವತೆಗಳ ರೂಪವೂ ಬಂದುವು.

ದೇವಾನಾಂ ದಾನವಂ ರೂಪಂ ದಾನವಾನಾಂ ಚ ದೈವಿಕಂ ।
ಮತ್ವಾ ಸುರಾನ್ ಸ್ವಕಾನೇವ ಜಘ್ನೇ ಘೋರಾಸ್ತ್ರಲಾಘವಾತ್ ||೧೫೭||

ಕಾಲನೇಮೀ ರುಷಾವಿಷ್ಟಃ ಕೃತಾಂತ ಇವ ಸಂಕ್ಷಯೇ ।
ಕಾಂಶ್ಚಿಶ್ಖಡ್ಗೇನ ತೀಕ್ಷ್ಣೇನ ಕಾಂಶ್ಚಿನ್ನಾರಾಚವೃಷ್ಟಿಭಿಃ ||೧೫೮||

ಕಾಂಶ್ಚಿದ್ಗದಾಭಿರ್ಘೋರಾಭಿಃ ಕಾಂಶ್ಚಿದ್ಘೋರೈಃ ಪರಶ್ವಧೈಃ ||೧೫೯||

ಶಿರಾಂಸಿ ಕೇಷಾಂಚಿದಪಾತಯಚ್ಚ
ಭುಜಾನ್ರಥಾನ್ಸಾರಥೀಂಶ್ಚೋಗ್ರವೇಗಃ ।
ಕಾಂಶ್ಚಿತ್ಪಿಪೇಷಾಥ ರಥಸ್ಯ ವೇಗಾತ್
ಕಾಂಶ್ಚಿತ್ಕ್ರುಧಾ ಚೋದ್ಧತಮುಷ್ಟಿಪಾತೈಃ ||೧೬೦||

ರಣೇ ವಿನಿಹತಾನ್ ದೃಷ್ಟ್ವಾ ನೇಮಿಃ ಸ್ವಾನ್ ದಾನವಾಧಿಪಃ ।
ರೂಪಂ ಸ್ವಂ ತು ಪ್ರಪದ್ಯಂತ ಹ್ಯಸುರಾಃ ಸುರಧರ್ಷಿತಾಃ ||೧೬೧||

---

೧೫೭-೧೫೯. ಘೋರವಾದ ಆ ಅಸ್ತ್ರಬಲದಿಂದ ಕಾಲನೇಮಿಯು ದೇವತೆಗಳನ್ನು ತನ್ನವರೆಂದೇ ತಿಳಿದನು. ಪ್ರಳಯದ ಯಮನಂತೆ ಸಿಟ್ಟುಗೊಂಡು ದೇವತೆಗಳ ರೂಪದಲ್ಲಿದ್ದ ತನ್ನ ಕಡೆಯವರನ್ನು ಕೊಲ್ಲತೊಡಗಿದನು. ಕೆಲವರನ್ನು ಬಾಣದ ಮಳೆಗಳಿಂದಲೂ, ಮತ್ತೆ ಕೆಲವರನ್ನು ಭಯಂಕರವಾದ ಗದೆಗಳಿಂದಲೂ, ಇನ್ನು ಉಳಿದವರನ್ನು ತೀವ್ರವಾದ ಕೊಡಲಿಗಳಿಂದಲೂ ಸಂಹರಿಸಿದನು.

೧೬೦. ಅಪರಿಮಿತ ವೇಗಶಾಲಿಯಾದ ಆ ದೈತ್ಯನು ಕೆಲವರ ರಥ, ಸಾರಥಿ, ತಲೆ ಇವುಗಳನ್ನು ಕೆಡವಿದನು. ರಥದ ವೇಗದಿಂದ ಕೆಲವರನ್ನೂ ಬಲವಾದ ಮುಷ್ಟಿಪ್ರಹಾರದಿಂದ ಮತ್ತೆ ಕೆಲವರನ್ನೂ ಜಜ್ಜಿದನು.

೧೬೧. ದಾನವ ಮುಖ್ಯನಾದ ನೇಮಿಯು ತನ್ನವರೇ ಯುದ್ಧದಲ್ಲಿ ಸಾಯುತ್ತಿರುವುದನ್ನು ಕಂಡನು. ಏಕೆಂದರೆ, ದೇವತೆಗಳಿಂದ ಹತರಾದ ಸುರರೂಪದಲ್ಲಿದ್ದ ಅಸುರರು ಸಾಯುವಾಗ ನಿಜರೂಪವನ್ನು ಪಡೆಯುತ್ತಿದ್ದರು..

**ಕಾಲನೇಮೀ ರುಷಾವಿಷ್ಟಸ್ತೇಷಾಂ ರೂಪಂ ನ ಬುದ್ಧವಾನ್ ।**
**ನೇಮಿರ್ದೈತ್ಯಸ್ತು ತಾನ್ ದೃಷ್ಟ್ವಾ ಕಾಲನೇಮಿಮುವಾಚ ಹ ॥೧೬೨॥**

**ಅಹಂ ನೇಮಿಃ ಸುರೋ ನೈವ ಕಾಲನೇಮೇ ವಿದಿಸ್ವ ಮಾಂ ।**
**ಭವತಾ ಮೋಹಿತೇನಾಜೌ ನಿಹತಾಸ್ಸುರವಿಕ್ರಮ ॥೧೬೩॥**

**ದೈತ್ಯಾನಾಂ ದಶಲಕ್ಷಾಣಿ ದುರ್ಜಯಾನಾಂ ಸುರೈರಿಹ ।**
**ಸರ್ವಾಸ್ತ್ರವಾರಣಂ ಮುಂಚ ಬ್ರಾಹ್ಮಮಸ್ತ್ರಂ ತ್ವರಾನ್ವಿತಃ ॥೧೬೪॥**

**ಸ ತೇನ ಬೋಧಿತೋ ದೈತ್ಯಃ ಸಂಭ್ರಮಾಕುಲಚೇತನಃ ।**
**ಯೋಜಯಾಮಾಸ ಬಾಣಂ ಹಿ ಬ್ರಹ್ಮಾಸ್ತ್ರವಿಹಿತೇನ ತು ॥೧೬೫॥**

**ಮುಮೋಚ ಚಾಪಿ ದೈತ್ಯೇಂದ್ರಃ ಸಸ್ವರಂ ಸುರಕಂಟಕಃ ।**
**ತತೋಽಸ್ತ್ರತೇಜಸಾ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ॥೧೬೬॥**

---

೧೬೨. ಕೋಪದ ಭರದಲ್ಲಿದ್ದ ಕಾಲನೇಮಿಗೆ ಅವರ ಸ್ವರೂಪವು ತಿಳಿಯಲಿಲ್ಲ. ನೇಮಿಯೆಂಬ ಅಸುರನು ಅವರನ್ನು ನೋಡಿ ಕಾಲನೇಮಿಗೆ ಹೇಳಿದನು.

೧೬೩-೧೬೪. ಓ ಕಾಲನೇಮೀ, ನಾನು ನೇಮಿ; ನಿಜವಾಗಿಯೂ ದೇವತೆಯಲ್ಲವೆಂದು ತಿಳಿ. ದೇವತೆಗಳು ನಿನಗೆ ಮೋಹವನ್ನುಂಟುಮಾಡಿದರು. ಎಲೈ ಶೂರಾಗ್ರೇಸರನೇ, ನೀನು ಯುದ್ಧದಲ್ಲಿ ದುರ್ಜಯರಾದ ಹತ್ತುಲಕ್ಷ ಮಂದಿ ದೈತ್ಯವೀರರನ್ನು ಕೊಂದುಬಿಟ್ಟೆ. ತಡಮಾಡದೆ ಬ್ರಹ್ಮಾಸ್ತ್ರವನ್ನು ಬಿಡು. ಅದು ಎಲ್ಲ ಅಸ್ತ್ರಗಳನ್ನೂ ಸೋಲಿಸಬಲ್ಲುದು.

೧೬೫. ನೇಮಿಯು ಎಚ್ಚರಗೊಳಿಸಲು ಕಾಲನೇಮಿಯು ಸಂಭ್ರಮಗೊಂಡು, ಬ್ರಹ್ಮಾಸ್ತ್ರವನ್ನಭಿಮಂತ್ರಿಸಿ ಬಾಣವನ್ನು ಹೂಡಿದನು.

೧೬೬. ದೇವಶತ್ರುವಾದ ಕಾಲನೇಮಿಯು ಪ್ರಯೋಗಿಸಿದ ಆ ಅಸ್ತ್ರವು ಅಬ್ಬರಿಸುತ್ತ ಹೊರಟಿತು. ತರುವಾಯ ಅದರ ತೇಜಸ್ಸು ಚರಾಚರಾತ್ಮಕವಾದ ಮೂರುಲೋಕವನ್ನೂ ವ್ಯಾಪಿಸಿತು.

ದೇವಾನಾಂ ಚಾಭವತ್ಸೈನ್ಯಂ ಸರ್ವಮೇವ ಭಯಾನ್ವಿತಂ ।
ಸಂಚಾರಾಸ್ತ್ರಂ ಚ ಸಂಶಾಂತಂ ಸ್ವಯಮಾಯೋಧನೇ ಬಭೌ ||೧೬೭||

ತಸ್ಮಿನ್ ಪ್ರತಿಹತೇ ಹ್ಯಸ್ತ್ರೇ ಭ್ರಷ್ಟತೇಜಾ ದಿವಾಕರಃ ।
ಮಹೇಂದ್ರಜಾಲಮಾಶ್ರಿತ್ಯ ಚಕ್ರೇ ಸ್ವಾಂ ಕೋಟಿಶಸ್ತನುಂ ||೧೬೮||

ವಿಸ್ಫೂರ್ಜತ್ಕರಸಂಪಾತಸಮಾಕ್ರಾಂತಜಗತ್ತ್ರಯಂ ।
ತತಾಪ ದಾನವಾನೀಕಂ ಗಲನ್ಮಜ್ಜಾಘಶೋಣಿತಂ ||೧೬೯||

ತತಶ್ಚಾವರ್ಷದನಲಂ ಸಮಂತಾದತಿಸಂಹತಂ ।
ಚಕ್ಷೂಂಷಿ ದಾನವೇಂದ್ರಾಣಾಂ ಚಕಾರಾಂಧಾನಿ ಚ ಪ್ರಭುಃ ||೧೭೦||

ಗಜಾನಾಮಗಲನ್ಮೇದಃ ಪೇತುಶ್ಚಾಪ್ಯರವಾ ಭುವಿ ।
ತುರಗಾ ನಿಶ್ವಸಂತಶ್ಚ ಘರ್ಮಾರ್ತಾ ರಥಿನೋಽಪಿ ಚ ||೧೭೧||

---

೧೬೭. ರಣಾಂಗಣದಲ್ಲಿದ್ದ ದೇವತೆಗಳ ಸೈನ್ಯವೆಲ್ಲವೂ ಭಯಾಕುಲಿತವಾಯಿತು. ಸಂಚಾರಾಸ್ತ್ರವು ತಾನಾಗಿಯೇ ಶಾಂತವಾಯಿತು.

೧೬೮. ಆ ಅಸ್ತ್ರವು ಪ್ರತ್ಯಸ್ತ್ರದಿಂದ ನಿರರ್ಥಕವಾಗಲು ಸೂರ್ಯನು ನಿಸ್ತೇಜನಾದನು. ಬಳಿಕ ಅವನು ಮಹೇಂದ್ರಜಾಲದಿಂದ ಕೋಟಿಗಟ್ಟಲೆ ದೇಹಗಳನ್ನು ಧಾರಣೆಮಾಡಿದನು.

೧೬೯. ಅವನ ಕಿರಣಗಳು ಕ್ರೂರವಾಗಿ ಜ್ವಲಿಸುತ್ತ ಮೂರು ಲೋಕದಲ್ಲಿಯೂ ವ್ಯಾಪಿಸಿದುವು. ದಾನವಸೈನ್ಯವು ಸುಟ್ಟುಹೋಯಿತು. ರಕ್ತವೂ ಮಜ್ಜೆಯೂ ಹೊಳೆಯಂತೆ ಹರಿದುವು.

೧೭೦. ಸೂರ್ಯದೇವನು ಬಳಿಕ ಎಲ್ಲಕಡೆಯೂ ದಟ್ಟವಾಗಿ ಬೆಂಕಿಯನ್ನು ಸುರಿಸಿದನು. ಆ ತೇಜಸ್ಸಿಗೆ ದಾನವೇಂದ್ರರ ಕಣ್ಣುಗಳು ಕುರುಡಾದುವು. ಅವರಿಗೆ ಏನೂ ಕಾಣದೆಹೋಯಿತು.

೧೭೧. ಆನೆಗಳ ದೇಹದ ಕೊಬ್ಬು ಹರಿಯಿತು. ಅವು ಧ್ವನಿಯಡಗಿ ನೆಲದಲ್ಲಿ ಬಿದ್ದುವು. ಕುದುರೆಗಳು ನಿಟ್ಟುಸಿರು ಬಿಟ್ಟುವು.

ಇತಶ್ಚೇತಶ್ಚ ಸಲಿಲಂ ಪ್ರಾರ್ಥಯಂತಸ್ತೃಷಾತುರಾಃ ।
ಪ್ರಚ್ಛಾಯ ವಿಟಪಾಂಶ್ಚೈವ ಗಿರೀಣಾಂ ಗಹ್ವರಾಣಿ ಚ ॥೧೭೨॥

ದಾವಾಗ್ನಿಃ ಪ್ರಜ್ವಲಂಶ್ಚೈವ ಘೋರಾರ್ಚಿರ್ದಗ್ಧಪಾದಪಃ ।
ತೋಯಾರ್ಥಿನಃ ಪುರೋ ದೃಷ್ಟ್ವಾ ತೋಯಂ ಕಲ್ಲೋಲಮಾಲಿನಂ

ಪುರಃ ಸ್ಥಿತಮಪಿ ಪ್ರಾಪ್ತುಂ ನ ಶೇಕುರವಿಮರ್ದಿತಾಃ ।
ಅಪ್ರಾಪ್ಯ ಸಲಿಲಂ ಭೂಮೌ ವ್ಯಾತ್ತಾಸ್ಯಾ ಗತಚೇತಸಃ ॥೧೭೪॥

ತತ್ರ ತತ್ರ ವ್ಯದೃಶ್ಯಂತ ಮೃತಾ ದೈತ್ಯೇಶ್ವರಾ ಭುವಿ ।
ರಥಾ ಗಜಾಶ್ಚ ಪತಿತಾಸ್ತುರಗಾಶ್ಚ ಸಮಾಪಿತಾಃ ॥೧೭೫॥

ಸ್ಥಿತಾ ವಮಂತೋ ಧಾವಂತೋ ಗಲದ್ರಕ್ತವಸಾಸೃಜಃ ।
ದಾನವಾನಾಂ ಸಹಸ್ರಾಣಿ ವ್ಯದೃಶ್ಯಂತ ಮೃತಾನಿ ತು ॥೧೭೬॥

---

೧೭೨. ಸಕಲ ಜೀವರಾಶಿಗಳೂ ಬಾಯಾರಿಕೆಯಿಂದ ಬಳಲಿ, ಅತ್ತಿತ್ತ ನೀರನ್ನು ಹುಡುಕುತ್ತ, ಮರದ ನೆರಳನ್ನೂ ಬೆಟ್ಟಗಳ ಗುಹೆಗಳನ್ನೂ ಆಶ್ರಯಿಸುತ್ತಿದ್ದುವು.

೧೭೩-೧೭೪. ಕಾಳ್ಗಿಚ್ಚು ಬಲವಾಗಿ ಉರಿಯುತ್ತ ಭಯಂಕರವಾದ ಜ್ವಾಲೆಯಿಂದ ಮರಗಳನ್ನು ಸುಟ್ಟಿತು. ಪ್ರಾಣಿಗಳು ನೀರನ್ನು ಹುಡುಕಿ ಮುಂದುಗಡೆ ವಿಸ್ತಾರವಾದ ಜಲಾಶಯವನ್ನು ಕಂಡರೂ ಕೂಡ ಅಲ್ಲಿಗೆ ಹೋಗಲಾರದವುಗಳಾದವು. ಅವು ನೀರಿಲ್ಲದೆ ಬಾಯಿಬಿಟ್ಟು ನೆಲದಮೇಲೆ ಬಿದ್ದು ಮೂರ್ಛೆ ಹೋದುವು.

೧೭೫. ಭೂಮಿಯಲ್ಲಿ ಅಲ್ಲಲ್ಲಿ ದೈತ್ಯೇಶ್ವರರು ಸತ್ತು ಉರುಳಿದ್ದರು. ರಥಗಳೂ ಗಜಗಳೂ ಬಿದ್ದಿದ್ದುವು. ಕುದುರೆಗಳು ಸತ್ತಿದ್ದುವು.

೧೭೬. ಕೊಬ್ಬೂ, ರಕ್ತವೂ ಶರೀರದಿಂದ ಹರಿಯುತ್ತಿರಲು, ಆನೆ ಕುದುರೆಗಳು ರಕ್ತವನ್ನು ಕಾರುತ್ತ, ಓಡುತ್ತ ನಿಲ್ಲುತ್ತಲಿದ್ದುವು. ಸಾವಿರಾರು ಜನ ದಾನವರು ಮೃತರಾಗಿದ್ದುದು ಗೋಚರವಾಯಿತು.

ಸಂಕ್ಷಯೇ ದಾನವೇಂದ್ರಾಣಾಂ ತಸ್ಮಿನ್ ಮಹತಿ ವರ್ತತೇ ।
ಪ್ರಕೋಪೋದ್ಭೂತತಾಮ್ರಾಕ್ಷಃ ಕಾಲನೇಮೀ ರುಷಾತುರಃ ||೧೭೭||

ಅಭವತ್ಕಲ್ಪಮೇಘಾಭಃ ಸ್ಫುರದ್ಭೂರಿಶತಹ್ರದಃ ।
ಗಂಭೀರಾಸ್ಫೋಟನಿರ್ಹ್ರಾದ ಜಗದ್ಧೃದಯಘಟ್ಟಕಃ ||೧೭೮||

ಪ್ರಚ್ಛಾದ್ಯ ಗಗನಾಭೋಗಂ ರವಿಮಾಯಾಂ ವ್ಯನಾಶಯತ್ ।
ಶೀತಂ ವವರ್ಷ ಸಲಿಲಂ ದಾನವೇಂದ್ರಬಲಂ ಪ್ರತಿ ||೧೭೯||

ದೈತ್ಯಾಸ್ತಾಂ ವೃಷ್ಟಿಮಾಸಾದ್ಯ ಸಮಾಶ್ವಸ್ತಾಸ್ತತಃ ಕ್ರಮಾತ್ ।
ಬೀಜಾಂಕುರಾ ಇವಾಮ್ಲಾನಾಃ ಪ್ರಾಪ್ಯ ವೃಷ್ಟಿಂ ಧರಾತಲೇ ||೧೮೦||

ತತಃ ಸ ಮೇಘರೂಪೀ ತು ಕಾಲನೇಮಿರ್ಮಹಾಸುರಃ ।
ಶಸ್ತ್ರವೃಷ್ಟಿಂ ವವರ್ಷೋಗ್ರಾಂ ದೇವಾನೀಕೇಷು ದುರ್ಜಯಃ ||೧೮೧||

---

೧೭೭. ಈ ರೀತಿಯಾಗಿ ದಾನವ ಮುಖ್ಯರು ಮಿತಿಯಿಲ್ಲದೆ ಸಾಯುತ್ತಿದ್ದರು. ಅದನ್ನು ಕಂಡು ಕಾಲನೇಮಿಗೆ ತಡೆಯುವುದಕ್ಕಾದಷ್ಟು ಕೋಪ ಬಂದಿತು. ಅವನ ಕಣ್ಣು ಕೆಂಪೇರಿದುವು.

೧೭೮. ಅವನು ಹಲವು ಸಿಡಿಲುಗಳಿಂದ ಉರಿಯನ್ನು ಕಾರುವ ಪ್ರಳಯ ಕಾಲದ ಮೇಘದಂತಾದನು. ಭುಜಗಳನ್ನು ತಟ್ಟಿಕೊಳ್ಳಲು ಆ ಮಹಾಧ್ವನಿಗೆ ಜಗತ್ತಿನ ಎದೆ ಬಿರಿಯಿತು.

೧೭೯. ಅವನು ಗಗನಮಂಡಲವನ್ನು ಮರೆಮಾಡಿ ಸೂರ್ಯನ ಮಾಯೆಯನ್ನು ನಾಶಮಾಡಿದನು. ದೈತ್ಯಬಲದ ಮೇಲೆ ತಣ್ಣೀರಿನ ಮಳೆಯನ್ನು ಸುರಿದನು.

೧೮೦. ಮಳೆ ಬೀಳಲು ಬೀಜದ ಮೊಳಕೆಗಳು ನೆಲದಲ್ಲಿ ಬಾಡದೆ ಚೇತರಿಸಿಕೊಳ್ಳುವಂತೆ, ಕಾಲನೇಮಿ ಸುರಿಸಿದ ತಣ್ಣೀರಿನ ಮಳೆಯಿಂದ ದೈತ್ಯರು ಕ್ರಮವಾಗಿ ಎಚ್ಚೆತ್ತುಕೊಂಡರು.

೧೮೧. ಬಳಿಕ ದುರ್ಜಯನೂ ದೈತ್ಯಮುಖ್ಯನೂ ಆದ ಕಾಲನೇಮಿಯು ಮೇಘರೂಪವನ್ನು ತಾಳಿ ದೇವತೆಗಳ ಸೈನ್ಯದ ಮೇಲೆ ಭಯಂಕರವಾದ ಶಸ್ತ್ರಗಳ ಮಳೆಯನ್ನು ಕರೆದನು.

ತಯಾ ವೃಷ್ಟ್ಯಾ ಬಾಧ್ಯಮಾನಾ ದೈತ್ಯೇಂದ್ರಾಣಾಂ ಮಹೌಜಸಾಂ ।
ಗತಿಂ ಕಾಂ ಚ ನ ಪಶ್ಯಂತೋ ಗಾವಃ ಶೀತಾರ್ದಿತಾ ಇವ ॥೧೮೨॥

ಪರಸ್ಪರಂ ವ್ಯಲೀಯಂತ ಪೃಷ್ಠೇಷು ವ್ಯಸ್ತ್ರಪಾಣಯಃ ।
ಸ್ವೇಷು ಬಾಧೇ ವ್ಯಲೀಯಂತ ಗಜೇಷು ತುರಗೇಷು ಚ ॥೧೮೩॥

ರಥೇಷು ತ್ವಮರಾಸ್ತ್ರಸ್ತಾಸ್ತತ್ರ ತತ್ರ ನಿಲಿಲ್ಯಿರೇ ।
ಅಪರೇ ಕುಂಚಿತೈರ್ಗಾತ್ರೈಃ ಸ್ವಹಸ್ತಪಿಹಿತಾನನಾಃ ॥೧೮೪॥

ಇತಶ್ಚೇತಶ್ಚ ಸಂಭ್ರಾಂತಾ ಬಭ್ರಮುರ್ವೈ ದಿಶೋ ದಶ ।
ಏವಂವಿಧೇ ತು ಸಂಗ್ರಾಮೇ ತುಮುಲೇ ದೇವಸಂಕ್ಷಯೇ ॥೧೮೫॥

ದೃಶ್ಯಂತೇ ಪತಿತಾ ಭೂಮೌ ಶಸ್ತ್ರಭಿನ್ನಾಂಗಸಂಧಯಃ ।
ವಿಭುಜಾ ಭಿನ್ನಮೂರ್ಧಾನಸ್ತಥಾ ಭಿನ್ನೋರುಜಾನವಃ ॥೧೮೬॥

---

೧೮೨. ಮಹಾಪರಾಕ್ರಮಶಾಲಿಗಳಾದ ದೈತ್ಯಮುಖ್ಯರು ಸುರಿಸಿದ ಆ ಮಳೆಯಿಂದ ಬಾಧೆಗೊಂಡು ದೇವತೆಗಳು ಚಳಿಯಿಂದ ತೊಂದರೆ ಪಡುವ ಹಸುಗಳಂತೆ ದಿಕ್ಕುತೋಚದವರಾದರು.

೧೮೩. ಅವರು ಕೈಗಳಲ್ಲಿದ್ದ ಅಸ್ತ್ರಗಳನ್ನು ಬಿಸುಟು ಒಬ್ಬರ ಬೆನ್ನುಹಿಂದೆ ಒಬ್ಬರು ಅಡಗಿಕೊಂಡರು. ಬಾಧೆಯು ಮತ್ತೂ ಹೆಚ್ಚಾಗಲು ತಮ್ಮತಮ್ಮ ಆನೆಗಳನ್ನೂ ಕುದುರೆಗಳನ್ನೂ ತಬ್ಬಿಕೊಂಡು ಕುಳಿತರು.

೧೮೪. ದೇವತೆಗಳಲ್ಲಿ ಕೆಲವರು ಹೆದರಿಕೊಂಡು ಅಲ್ಲಲ್ಲಿದ್ದ ತೇರುಗಳಲ್ಲಿ ಅಡಗಿಕೊಂಡರು. ಉಳಿದವರು ಅವಯವಗಳನ್ನು ಮುದುರಿಕೊಂಡು ಕೈಯಿಂದ ಮುಖವನ್ನು ಮುಚ್ಚಿಕೊಂಡರು.

೧೮೫-೧೮೬. ಗಾಬರಿಗೊಂಡು ಅಲ್ಲಿಂದಿಲ್ಲಿಗೂ ಇಲ್ಲಿಂದಲ್ಲಿಗೂ ಓಡಾಡುತ್ತ ಹತ್ತು ದಿಕ್ಕುಗಳಲ್ಲಿಯೂ ಅಲೆದಾಡಿದರು. ಇಂತಹ ತುಮುಲಯುದ್ಧದಲ್ಲಿ ದೇವತೆಗಳಲ್ಲಿ ಹಲವರು ಹತರಾಗಿ ನೆಲದಮೇಲೆ ಬಿದ್ದಿದ್ದರು. ಅವರ ಅಂಗಸಂಧಿಗಳು ಶಸ್ತ್ರಗಳಿಂದ ಕತ್ತರಿಸಲ್ಪಟ್ಟುವು. ತೋಳುಗಳಿಲ್ಲದೆ, ತಲೆಯೊಡೆದು, ತೊಡೆ ಮತ್ತು ಮಂಡಿಗಳು ಕತ್ತರಿಸಿಹೋಗಿ ಎಷ್ಟೋ ಮಂದಿ ನರಳುತ್ತಿದ್ದರು.

ವಿಪರ್ಯಸ್ತರಥಾಸಂಗಾ ನಿಷ್ಪಿಷ್ಟಧ್ವಜಪಙ್ಕ್ತಯಃ ।
ನಿರ್ಭಿನ್ನಾಂಗೈಸ್ತುರಂಗೈಸ್ತು ಗಜೈಶ್ಚಾಚಲಸನ್ನಿಭೈಃ ॥೧೮೭॥

ಸ್ರುತರಕ್ತಹ್ರದೈರ್ಭೂಮಿರ್ವಿಕೃತಾ ವಿಕೃತಾ ಬಭೌ ।
ಏವಮಾಜೌ ಬಲೀ ದೈತ್ಯಃ ಕಾಲನೇಮಿರ್ಮಹಾಸುರಃ ॥೧೮೮॥

ಜಘ್ನೇ ಮುಹೂರ್ತಮಾತ್ರೇಣ ಗಂಧರ್ವಾಣಾಂ ದಶಾಯುತಂ ।
ಯಕ್ಷಾಣಾಂ ಪಂಚಲಕ್ಷಾಣಿ ರಕ್ಷಸಾಮಯುತಾನಿ ಷಟ್ ॥೧೮೯॥

ತ್ರೀಣಿ ಲಕ್ಷಾಣಿ ಜಘ್ನೇ ಸ ಕಿನ್ನರಾಣಾಂ ತರಸ್ವಿನಾಂ ।
ಜಘ್ನೇ ಪಿಶಾಚಮುಖ್ಯಾನಾಂ ಸಪ್ತಲಕ್ಷಾಣಿ ನಿರ್ಭಯಃ ॥೧೯೦॥

ಇತರೇಷಾಮಸಂಖ್ಯಾತಾಃ ಸುರಜಾತನಿಕಾಯಿನಾಂ ।
ಜಘ್ನೇ ಸ ಕೋಟೀಂ ಸಂಕ್ರುದ್ಧಶ್ಚಿತ್ರಾಸ್ತ್ರೈರಸ್ತ್ರಕೋವಿದಃ ॥೧೯೧॥

---

೧೮೭. ರಥಗಳ ಅವಯುವಗಳು ಹಿಂದುಮುಂದಾದುವು. ಧ್ವಜಗಳು ಪುಡಿಪುಡಿಯಾದುವು. ಅಂಗಗಳು ಮುರಿದುಹೋದ ಕುದುರೆಗಳಿಂದಲೂ, ನೆಲದಮೇಲೆ ಹರಿದು ಮಡುವಿನಂತೆ ನಿಂತಿರುವ ರಕ್ತದಿಂದಲೂ, ಯುದ್ಧಭೂಮಿಯು ಬಹು ವಿಕಾರವಾಗಿ ಕಾಣುತ್ತಿತ್ತು.

೧೮೮-೧೮೯. ಹೀಗೆ ಬಲಿಷ್ಠನೂ ಮಹಾಸುರನೂ ಆದ ಕಾಲನೇಮಿಯು ಮುಹೂರ್ತಮಾತ್ರದೊಳಗೆ ಯುದ್ಧದಲ್ಲಿ ಒಂದು ಲಕ್ಷಜನ ಗಂಧರ್ವರನ್ನೂ, ಐದು ಲಕ್ಷಮಂದಿ ಯಕ್ಷರನ್ನೂ, ಅರವತ್ತುಸಾವಿರಜನ ರಾಕ್ಷಸರನ್ನೂ ಸಂಹರಿಸಿದನು.

೧೯೦. ವೇಗಶಾಲಿಗಳಾದ ಮೂರುಲಕ್ಷಜನ ಕಿನ್ನರರನ್ನು ಕೊಂದನು. ಪಿಶಾಚವೀರರಲ್ಲಿ ಏಳುಲಕ್ಷಮಂದಿಯನ್ನು ನಿರ್ಭಯನಾಗಿ ಸಂಹರಿಸಿದನು.

೧೯೧. ಅಸ್ತ್ರನಿಪುಣನಾದ ಆತನು ದೇವವರ್ಗಕ್ಕೆ ಸೇರಿದ ಇನ್ನೂ ಎಷ್ಟೋ ಕೋಟಿ ಮಂದಿಯನ್ನು ಬಗೆಬಗಯ ಅಸ್ತ್ರಗಳಿಂದ ನಾಶಮಾಡಿದನು.

ಏವಂ ಪರಿಭವೇ ಭೀಮೇ ತದಾ ತ್ವಮರಸಂಕ್ಷಯೇ ।
ಸಂಕ್ರುದ್ಧಾವಶ್ವಿನೌ ದೇವೌ ಚಿತ್ರಾಸ್ತ್ರಕವಚೋಜ್ವಲೌ ॥೧೯೨॥
ಜಘ್ನತುಃ ಸಮರೇ ದೈತ್ಯಂ ಕೃತಾಂತಾನಲಸನ್ನಿಭಂ ।
ತಮಾಸಾದ್ಯ ರಣೇ ಘೋರಮೇಕೈಕಂ ಷಷ್ಟಿಭಿಃ ಶರೈಃ ॥೧೯೩॥
ಜಘ್ನೇ ಮರ್ಮಸು ತೀಕ್ಷ್ಣಾಗ್ರೈರಸುರಂ ಭೀಮದರ್ಶನಂ ।
ತಾಭ್ಯಾಂ ಬಾಣಪ್ರಹಾರೈಃ ಸ ಕಿಂಚಿದಾಯಸ್ತ ಚೇತನಃ । ॥೧೯೪॥
ಜಗ್ರಾಹ ಚಕ್ರಮಷ್ಟಾರಂ ತೈಲಧೌತಂ ರಣಾಂತಕಂ ।
ತೇನ ಚಕ್ರೇಣ ಸೋಽಶ್ವಿಭ್ಯಾಂ ಚಿಚ್ಛೇದ ರಥಕೂಬರಂ ॥೧೯೫॥
ಜಗ್ರಾಹಾಥ ಧನುರ್ದೈತ್ಯಃ ಶರಾಂಶ್ಚಾಶೀವಿಷೋಪಮಾನ್ ।
ವವರ್ಷ ಭಿಷಜೋರ್ಮೂರ್ಧ್ನಿ ಸಂಛಾದ್ಯಾಕಾಶಗೋಚರಂ ॥೧೯೬॥

---

೧೯೨. ಹೀಗೆ ದೇವತೆಗಳಿಗೆ ಭಯಂಕರವಾದ ಅವಮಾನವೂ ಪ್ರಾಣ ಹಾನಿಯೂ ಆಗುತ್ತಿರಲು, ಅಶ್ವಿನೀದೇವತೆಗಳು ಸಿಟ್ಟಾಗಿ ಚಿತ್ರವಿಚಿತ್ರವಾದ ಅಸ್ತ್ರ ಗಳನ್ನೂ ಕವಚಗಳನ್ನೂ ಧರಿಸಿಕೊಂಡು ಬಂದರು.

೧೯೩. ಅವರಿಬ್ಬರೂ ಸೇರಿ ಪರಾಕ್ರಮದಲ್ಲಿ ಯಮನನ್ನೂ ಅಗ್ನಿಯನ್ನೂ ಹೋಲುವ ಆ ದೈತ್ಯನನ್ನು ಯುದ್ಧದಲ್ಲಿ ಪ್ರಹರಿಸಿದರು. ಒಬ್ಬೊಬ್ಬರೂ ಭಯಂಕರ ದರ್ಶನನಾದ ಆ ಅಸುರನನ್ನು ಬಲುಮೊನೆಯಾದ ಅಸ್ತ್ರಗಳಿಂದ ಮರ್ಮಸ್ಥಳಗಳಲ್ಲಿ ಹೊಡೆದರು.

೧೯೪-೧೯೫. ಅವರಿಬ್ಬರ ಬಾಣಪ್ರಹಾರಗಳಿಂದ ಅವನು ಸ್ವಲ್ಪ ಮೈಮರೆ ತಂತಾದನು. ಎಂಟು ಆರೆಗಾಲುಗಳಿಂದ ಕೂಡಿದ, ಎಣ್ಣೆಯಲ್ಲಿ ತೊಳೆದ, ಯುದ್ಧ ದಲ್ಲಿ ಶತ್ರುಗಳನ್ನು ನಾಶಗೊಳಿಸುವ ಚಕ್ರವನ್ನು ಕೈಗೆತ್ತಿಕೊಂಡು, ಅದರಿಂದ ಅಶ್ವಿನಿ ದೇವತೆಗಳ ರಥದ ನೊಗವನ್ನು ಕತ್ತರಿಸಿದನು.

೧೯೬. ಬಳಿಕ ದೈತ್ಯನು ಬಿಲ್ಲನ್ನೂ ಸರ್ಪಸದೃಶಗಳಾದ ಬಾಣಗಳನ್ನೂ ತೆಗೆದುಕೊಂಡು ಅಶ್ವಿನೀದೇವತೆಗಳ ತಲೆಯಮೇಲೆ ಬಾಣದ ಮಳೆಗರೆದನು. ಅದರಿಂದ ಆಕಾಶವೂ ಅಲ್ಲಿ ಗೋಚರಿಸುವ ಗ್ರಹಗಳೂ ಮರೆಯಾದುವು.

ತಾವಪ್ಯಸ್ತ್ರೈಶ್ಛಿಚ್ಛಿದತುಃ ಶಿತೈಸ್ತೈರ್ದೈತ್ಯಸಾಯಕಾನ್ ।
ತಚ್ಚ ಕರ್ಮ ತಯೋರ್ದೃಷ್ಟ್ವಾ ವಿಸ್ಮಿತಃ ಕೋಪಮಾವಿಶತ್ ॥೧೯೭॥

ಮಹತಾ ಸ ತು ಕೋಪೇನ ಸರ್ವಾಯೋಮಯಸಾದನಂ ।
ಜಗ್ರಾಹ ಮುದ್ಗರಂ ಭೀಮಂ ಕಾಲದಂಡವಿಭೀಷಣಂ ॥೧೯೮॥

ಸ ತತೋ ಭ್ರಾಮ್ಯ ವೇಗೇನ ಚಿಕ್ಷೇಪಾಶ್ವಿರಥಂ ಪ್ರತಿ ।
ತಂ ತು ಮುದ್ಗರಮಾಯಾಂತಮಾಲೋಕ್ಯಾಂಬರಗೋಚರಂ ॥೧೯೯॥

ತ್ಯಕ್ತ್ವಾ ರಥೌ ತು ತೌ ವೇಗಾದಾಪ್ಲುತೌ ತರಸಾಶ್ವಿನೌ ।
ತೌ ರಥೌ ಸ ತು ನಿಷ್ಪಿಷ್ಯ ಮುದ್ಗರೋಽಚಲಸನ್ನಿಭಃ ॥೨೦೦॥

ದಾರಯಾಮಾಸ ಧರಣೀಂ ಹೇಮಜಾಲಪರಿಷ್ಕೃತಃ ।
ತಸ್ಯ ಕರ್ಮಾಶ್ವಿನೌ ದೃಷ್ಟ್ವಾ ಭಿಷಜೌ ಚಿತ್ರಯೋಧಿನೌ ।
ವಜ್ರಾಸ್ತ್ರಂ ತು ಪ್ರಕುರ್ವಾತೇ ದಾನವೇಂದ್ರನಿವಾರಣಂ ॥೨೦೧॥

---

೧೯೭. ಅವರೂ ಸಹ ತೀಕ್ಷ್ಣವಾದ ಅಸ್ತ್ರಗಳಿಂದ ಆ ದೈತ್ಯನ ಬಾಣಗಳನ್ನು ಕತ್ತರಿಸಿದರು. ಅವರ ಆ ಕಾರ್ಯವನ್ನು ಕಂಡು ಅವನು ಆಶ್ಚರ್ಯಭರಿತನಾದನು. ಬಳಿಕ ಅವನಿಗೆ ಕೋಪವೂ ಬಂದಿತು.

೧೯೮. ಅಳತೆ ಮೀರಿದ ಕೋಪವು ಉಕ್ಕಿಬರುತ್ತಿರಲು ಅವನು ಬರಿಯ ಕಬ್ಬಿಣದಿಂದಲೇ ಮಾಡಿದ, ವಿನಾಶಕಾರಿಯಾದ, ಕಾಲದಂಡದಂತೆ ಭಯಂಕರವಾದ ಮುದ್ಗರವನ್ನು ತೆಗೆದುಕೊಂಡನು.

೧೯೯. ಅವನು ಬಳಿಕ ಅದನ್ನು ವೇಗವಾಗಿ ತಿರುಗಿಸಿ ಅಶ್ವಿನೀದೇವತೆಗಳ ರಥದ ಕಡೆಗೆ ಎಸೆದನು. ಆ ಮುದ್ಗರವು ಆಕಾಶದಲ್ಲಿ ಬರುತ್ತಿರುವುದನ್ನು ನೋಡಿ ಥಟ್ಟನೆ ಅವರು ರಥವನ್ನು ಬಿಟ್ಟು ಹಾರಿದರು.

೨೦೦. ಪರ್ವತಸಮಾನವಾಗಿ ಸುವರ್ಣದಿಂದ ಅಲಂಕೃತವಾದ ಆ ಮುದ್ಗರವಾದರೋ ಅವೆರಡು ರಥಗಳನ್ನೂ ಪುಡಿಪುಡಿಮಾಡಿ ನೆಲವನ್ನು ಸೀಳಿತು.

೨೦೧. ಬಳಿಕ ದೇವವೈದ್ಯರೂ ಅದ್ಭುತಯೋಧರೂ ಆದ ಅಶ್ವಿನೀದೇವತೆಗಳು ಅವನ ಕೆಲಸವನ್ನು ನೋಡಿ ದಾನವೇಂದ್ರನ ಸಂಹಾರಕ್ಕೋಸ್ಕರವಾಗಿ ವಜ್ರಾಸ್ತ್ರವನ್ನು ತೊಟ್ಟರು.

**ತತೋ ವಜ್ರಮಯಂ ವರ್ಷಂ ಪ್ರಾವರ್ತದತಿದಾರುಣಂ ||೨೦೨||**

**ಘೋರವಜ್ರಪ್ರಹಾರೈಸ್ತು ದೈತ್ಯೇಂದ್ರಃ ಸ ಪರಿಷ್ಕೃತಃ |**
**ರಥೋ ಧ್ವಜೋ ಧನುಶ್ಚಕ್ರಂ ಕವಚಂ ಚಾಪಿ ಕಾಂಚನಂ ||೨೦೩||**

**ಕ್ಷಣೇನ ತಿಲಶೋ ಜಾತಂ ಸರ್ವಸೈನ್ಯಸ್ಯ ಪಶ್ಯತಃ |**
**ತದ್ದೃಷ್ಟ್ವಾ ದುಷ್ಕೃತಂ ಕರ್ಮ ಸೋಽಶ್ವಿಭ್ಯಾಂ ಭೀಮವಿಕ್ರಮಃ ||೨೦೪||**

**ನಾರಾಯಣಾಸ್ತ್ರಂ ಬಲವಾನ್ ಮುಮೋಚ ರಣಮೂರ್ಧನಿ |**
**ವಜ್ರಾಸ್ತ್ರಂ ಶಮಯಾಮಾಸ ದಾನವೇಂದ್ರೋಽಸ್ತ್ರತೇಜಸಾ ||೨೦೫||**

**ತಸ್ಮಿನ್ ಪ್ರಶಾಂತೇ ವಜ್ರಾಸ್ತ್ರೇ ಕಾಲನೇಮಿರನಂತರಂ |**
**ಜೀವಗ್ರಾಹಂ ಗ್ರಾಹಯಿತುಮಶ್ವಿನೌ ತು ಪ್ರಚಕ್ರಮೇ ||೨೦೬||**

**ತಾವಶ್ವಿನೌ ರಣಾದ್ಭೀತೌ ಸಹಸ್ರಾಕ್ಷರಥಂ ಪ್ರತಿ |**
**ಪ್ರಯಾತೌ ವೇಪಮಾನೌ ತು ಪದಾ ಶಸ್ತ್ರವಿವರ್ಜಿತೌ ||೨೦೭||**

---

೨೦೨. ಬಳಿಕ ಅತಿತೀವ್ರವಾದ ವಜ್ರಾಯುಧದ ಮಳೆಯು ಪ್ರಾರಂಭವಾಯಿತು. ದೈತ್ಯೇಂದ್ರನ ಮೈಮೇಲೆಲ್ಲಾ ವಜ್ರಪ್ರಹಾರಗಳು ಬಿದ್ದವು.

೨೦೩. ತೇರು, ಬಾವುಟ, ಬಿಲ್ಲು, ಚಕ್ರ, ಚಿನ್ನದ ಕವಚ ಇವೆಲ್ಲವೂ ಕ್ಷಣಕಾಲದೊಳಗೆ ಎಳ್ಳಿನಂತೆ ಚೂರುಚೂರಾದುವು. ಸೈನ್ಯವೆಲ್ಲವೂ ಸುಮ್ಮನೆ ನೋಡುತ್ತಲೇ ಇದ್ದವು.

೨೦೪-೨೦೫. ಭಯಂಕರ ಪರಾಕ್ರಮಿಯಾದ ಆ ದೈತ್ಯನು ಅಶ್ವಿನೀ ದೇವತೆಗಳ ಆ ಸಾಹಸವನ್ನು ಕಂಡು ಅವರ ಮೇಲೆ ನಾರಾಯಣಾಸ್ತ್ರವನ್ನು ಬಿಟ್ಟನು. ಹೀಗೆ ಅವನು ತನ್ನ ಅಸ್ತ್ರದ ತೇಜಸ್ಸಿನಿಂದ ವಜ್ರಾಸ್ತ್ರವನ್ನು ಅಡಗಿಸಿದನು.

೨೦೬. ಆ ವಜ್ರಾಸ್ತ್ರವು ಶಾಂತವಾದ ಬಳಿಕ ಕಾಲನೇಮಿಯು ಅಶ್ವಿನೀ ದೇವತೆಗಳನ್ನು ಸಜೀವವಾಗಿ ಹಿಡಿಯಲು ಪ್ರಯತ್ನಿಸಿದನು.

೨೦೭. ಆ ಅಶ್ವಿನೀ ದೇವತೆಗಳು ಹೆದರಿ ನಡುಗುತ್ತ ಶಸ್ತ್ರಗಳನ್ನು ಬಿಟ್ಟು ದೇವೇಂದ್ರನ ತೇರಿನ ಕಡೆಗೆ ಬರಿಗಾಲಿನಲ್ಲೇ ನಡೆದರು.

ತಯೋರನುಗತೋ ದೈತ್ಯಃ ಕಾಲನೇಮಿರ್ಮಹಾಬಲಃ ।
ಪ್ರಾಪ್ಯೇಂದ್ರಸ್ಯ ರಥಂ ಕ್ರೂರೋ ದೈತ್ಯಾನೀಕಪದಾನುಗಃ ॥೨೦೮॥

ತಂ ದೃಷ್ಟ್ವಾ ಸರ್ವಭೂತಾನಿ ವಿತ್ರೇಸುರ್ವಿಹ್ವಲಾನಿ ತು ।
ದೃಷ್ಟ್ವಾ ದೈತ್ಯಸ್ಯ ತತ್ ಕ್ರೌರ್ಯಂ ಸರ್ವಭೂತಾನಿ ಮೇನಿರೆ ॥೨೦೯॥

ಪರಾಜಯಂ ಮಹೇಂದ್ರಸ್ಯ ಸರ್ವಲೋಕಕ್ಷಯಾವಹಂ ।
ಚೇಲುಃ ಶಿಖರಿಣೋ ಮುಖ್ಯಾಃ ಪೇತುರುಲ್ಕಾ ನಭಸ್ತಲಾತ್ ॥೨೧೦॥

ಜಗರ್ಜುರ್ಜಲದಾ ದಿಕ್ಷು ಹ್ಯುದ್ಭೂತಾಶ್ಚ ಮಹಾರ್ಣವಾಃ ।
ತಾಂ ಭೂತವಿಕೃತಿಂ ದೃಷ್ಟ್ವಾ ಭಗವಾನ್ ಗರುಡಧ್ವಜಃ ॥೨೧೧॥

ವ್ಯಬುಧ್ಯತಾಹಿಪರ್ಯಂಕೇ ಯೋಗನಿದ್ರಾಂ ವಿಹಾಯ ತು ।
ಲಕ್ಷ್ಮೀಕರಯುಗಾಜಸ್ರಲಾಲಿತಾಂಘ್ರಿಸರೋರುಹಃ ॥೨೧೨॥

---

೨೦೮. ಕ್ರೂರಿಯೂ ಮಹಾಬಲಶಾಲಿಯೂ ಆದ ಕಾಲನೇಮಿಯು ದೈತ್ಯಸೈನ್ಯವು ತನ್ನ ಹಿಂದೆ ಬರುತ್ತಿರಲು ಅವರಿಬ್ಬರನ್ನೂ ಬೆನ್ನಟ್ಟಿಕೊಂಡು ಇಂದ್ರನ ತೇರಿನ ಹತ್ತಿರಕ್ಕೆ ಹೋದನು.

೨೦೯. ಆ ದೈತ್ಯನನ್ನು ನೋಡಿ ಸಕಲ ಪ್ರಾಣಿಗಳೂ ಕಳವಳಗೊಂಡು ಹೆದರಿದುವು. ಅವನ ಕ್ರೌರ್ಯವನ್ನು ಕಂಡು ಎಲ್ಲ ಜಂತುಗಳೂ ದೇವೇಂದ್ರನು ಸೋಲುವನೆಂದೂ ಲೋಕಗಳಿಗೆಲ್ಲ ಭಯವೊದಗುವುದೆಂದೂ ತಿಳಿದುವು.

೨೧೦. ಕುಲಪರ್ವತಗಳು ನಡುಗಿದುವು. ಆಕಾಶದಿಂದ ಧೂಮಕೇತುಗಳು ಬಿದ್ದುವು. ದಿಕ್ಕುಗಳಲ್ಲಿ ಮೋಡಗಳು ಘರ್ಜಿಸಿದುವು. ಮಹಾಸಮುದ್ರಗಳು ಅಲ್ಲೋಲ ಕಲ್ಲೋಲಗಳಾದುವು.

೨೧೧-೨೧೨. ಪ್ರಪಂಚದಲ್ಲುಂಟಾದ ಈ ವೈಪರೀತ್ಯವನ್ನು ನೋಡಿ ಆದಿಶೇಷಶಾಯಿಯೂ ಷಡ್ಗುಣಪರಿಪೂರ್ಣನೂ ಆದ ವಿಷ್ಣುವು ಯೋಗನಿದ್ರೆಯಿಂದೆಚ್ಚೆತ್ತನು. ಲಕ್ಷ್ಮೀದೇವಿಯು ತನ್ನ ಎರಡು ಕೈಗಳಿಂದಲೂ ಆತನ ಪಾದ ಪದ್ಮಗಳನ್ನು ಒತ್ತುತ್ತಿದ್ದಳು. ಶರತ್ಕಾಲದ ಆಕಾಶವನ್ನೂ ಕನ್ನೈದಿಲೆಯನ್ನೂ

**ಶರದಂಬರನೀಲಾಬ್ಜ ಕಾಂತದೇಹಚ್ಛವಿರ್ವಿಭುಃ।**
**ಕೌಸ್ತುಭೋದ್ಭಾಸಿತೋರಸ್ಕೋ ಕಾಂತಕೇಯೂರಭಾಸ್ವರಃ ॥೨೧೩॥**

**ವಿಮೃಶ್ಯ ಸುರಸಂಕ್ಷೋಭಂ ವೈನತೇಯಂ ಸಮಾಹ್ವಯತ್।**
**ಆಹೂತೇಽವಸ್ಥಿತೇ ತಸ್ಮಿನ್ ನಾಗಾವಸ್ಥಿತವರ್ಷ್ಮಣಿ ॥೨೧೪॥**

**ದಿವ್ಯನಾನಾಸ್ತ್ರ ತೀಕ್ಷ್ಣಾರ್ಚಿರಾರುಹ್ಯಾಗಾತ್ ಸುರಾನ್ ಸ್ವಯಂ।**
**ತತ್ರಾಪಶ್ಯತ ದೇವೇಂದ್ರಮಭಿದ್ರುತಮಭಿಪ್ಲುತೈಃ ॥೨೧೫॥**

**ದಾನವೇಂದ್ರೈರ್ನವಾಂಭೋದಸಚ್ಛಾಯೈಃ ಪೌರುಷೋತ್ಕಟೈಃ।**
**ಯಥಾ ಹಿ ಪುರುಷಂ ಘೋರೈರಭಾಗ್ಯೈರ್ವಂಶಶಾಲಿಭಿಃ ॥೨೧೬॥**

---

ಹೊಳೆಯುತ್ತ ಅವನ ದೇಹಕಾಂತಿ ಶೋಭಿಸುತ್ತಿತ್ತು. ಆತನ ವಕ್ಷಃಸ್ಥಳದಲ್ಲಿ ಕೌಸ್ತುಭ ರತ್ನವು ಹೊಳೆಯುತ್ತಿತ್ತು. ಸುಂದರವಾದ ತೋಳುಬಳೆಗಳಿಂದ ಆತನು ಪ್ರಕಾಶಿಸುತ್ತಿದ್ದನು.

೨೧೪. ದೇವತೆಗಳಿಗೊದಗಿದ ಕಷ್ಟವನ್ನು ಆಲೋಚಿಸಿ ಆ ಭಗವಂತನು ಗರುಡನನ್ನು ಕರೆದನು. ಕೂಗಿದ ಕೂಡಲೇ ಸರ್ಪಾಲಂಕೃತದೇಹನಾಗಿ ಆತನು ಬಂದು ನಿಂತನು. ಬಗೆ ಬಗೆಯ ದಿವ್ಯಾಸ್ತ್ರಗಳ ಕಾಂತಿಯು ಬೆಳಗುತ್ತಿರಲು ವಿಷ್ಣುವು ಗರುತ್ಮಂತನನ್ನೇರಿ ದೇವತೆಗಳ ಬಳಿಗೆ ತಾನೇ ಹೋದನು.

೨೧೫. ಪುಂಡರೀಕಾಕ್ಷನು ರಣಭೂಮಿಯಲ್ಲಿ ದೇವೇಂದ್ರನನ್ನು ನೋಡಿದನು. ಅತಿ ಸಾಹಸವಂತರೂ ಕಾರ್ಮೋಡದಂತಹ ಮೈಬಣ್ಣದವರೂ ಆದ ದಾನವೇಂದ್ರರು ಅವನನ್ನು ಸುತ್ತುವರಿದು ಹಿಂಸೆಪಡಿಸುತ್ತಿದ್ದರು.

೨೧೬. ಪುಣ್ಯಕ್ಷೇತ್ರದಲ್ಲಿ ಆಚರಿಸಿದ ಪುಣ್ಯಕರ್ಮವು ವಂಶಾನುಗತವಾಗಿ ಬಂದು ಭಯಂಕರವಾದ ವಿಪತ್ತುಗಳಿಂದ ಪುರುಷನನ್ನು ಕಾಪಾಡುವುದಕ್ಕಾಗಿ ಸಮಯದಲ್ಲಿ ಒದಗುವಂತೆ, ದೈತ್ಯಪೀಡಿತರಾದ ದೇವತೆಗಳನ್ನು ರಕ್ಷಿಸುವುದಕ್ಕಾಗಿ ಮಹಾವಿಷ್ಣುವು ಬಂದನು.

ಪರಿತ್ರಾಣಾಯಾಶು ಕೃತಂ ಸುಕ್ಷೇತ್ರೇ ಕರ್ಮ ನಿರ್ಮಲಂ ।
ಅಥಾಪಶ್ಯಂತ ದೈತೇಯಾ ವಿಯತಿ ಜ್ಯೋತಿಮಂಡಲಂ ॥೨೧೭॥

ಸ್ಫುರಂತಮುದಯಾದ್ರಿಸ್ಥಂ ಸೂರ್ಯಮುಷ್ಣತ್ವಿಷಾ ಇವ ।
ಪ್ರಭಾವಂ ಜ್ಞಾತುಮಿಚ್ಛಂತೋ ದಾನವಾಸ್ತಸ್ಯ ತೇಜಸಃ ॥೨೧೮॥

ಗುರುತ್ಮಂತಮಪಶ್ಯಂತ ಕಲ್ಪಾಂತಾನಲಸನ್ನಿಭಂ ।
ತಮಾಸ್ಥಿತಂ ಚ ಮೇಘೌಘದ್ಯುತಿಮುತ್ಕ್ಷಯಮಚ್ಯುತಂ ॥೨೧೯॥

ತಮಾಲೋಕ್ಯಾಸುರೇಂದ್ರಾಸ್ತು ಹರ್ಷಸಂಪೂರ್ಣಮಾನಸಾಃ ।
ಅಯಂ ವೈ ದೇವ ಸರ್ವಸ್ವಂ ಜಿತೇಽಸ್ಮಿನ್ ನಿರ್ಜಿತಾಃ ಸುರಾಃ ॥೨೨೦॥

ಅಯಂ ಸ ದೈತ್ಯಚಕ್ರಾಣಾಂ ಕೃತಾಂತಃ ಕೇಶವೋಽರಿಹಾ ।
ಏನಮಾಶ್ರಿತ್ಯ ಲೋಕೇಷು ಯಜ್ಞಭಾಗಭುಜೋಽಮರಾಃ ॥೨೨೧॥

---

೨೧೭-೨೧೮. ಉದಯಪರ್ವತದ ಮೇಲೆ ಉಷ್ಣಕಿರಣದಿಂದ ಕೂಡಿ ಹೊಳೆಯುತ್ತಿರುವ ಸೂರ್ಯನಂತೆ, ಆಕಾಶದಲ್ಲಿ ಕಾಂತಿಮಂಡಲವೊಂದು ಬೆಳಗುತ್ತಿದ್ದುದನ್ನು ದೈತ್ಯರು ನೋಡಿದರು. ಆ ತೇಜಸ್ಸಿನ ಪ್ರಭಾವವೇನೆಂದು ತಿಳಿಯಲು ಅವರಿಗೆ ಅಪೇಕ್ಷೆಯಾಯಿತು.

೨೧೯. ಪ್ರಳಯಕಾಲದ ಅಗ್ನಿಗೆ ಸಮಾನನಾದ ಗರುತ್ಮಂತನನ್ನೂ ಅವನ ಮೇಲೆ ಕುಳಿತ, ಮೇಘರಾಶಿಯಂತೆ ಕಾಂತಿಯುಕ್ತನಾದ ಅಚ್ಯುತನನ್ನೂ ಅವರು ಮೊದಲು ಕಾಣದೆ ಹೋದರು.

೨೨೦-೨೨೧. ಬಳಿಕ ರಾಕ್ಷಸೇಶ್ವರರು ಅವನನ್ನು ಕಂಡು ಸಂತೋಷದಿಂದ ತುಂಬಿಹೋದರು. "ಇವನೇ ದೇವತೆಗಳೆಲ್ಲರ ಮುಖಂಡ; ಇವನನ್ನು ಸೋಲಿಸಿದರೆ ದೇವತೆಗಳು ಸೋತಂತೆಯೇ ಸರಿ. ಶತ್ರುನಾಶಕನಾದ ಈ ಕೇಶವನು ದೈತ್ಯರನ್ನೆಲ್ಲಾ ಸಂಹಾರಮಾಡತಕ್ಕವನು. ಇವನನ್ನು ಆಶ್ರಯಿಸಿಕೊಂಡು ದೇವತೆಗಳು ಲೋಕಗಳಲ್ಲಿ ಯಜ್ಞಭಾಗಗಳನ್ನು ಪಡೆಯುತ್ತಿರುವರು."

ಇತ್ಯುಕ್ತ್ವಾ ದಾನವಾಃ ಸರ್ವೇ ಪರಿವಾರ್ಯ ಸಮಂತತಃ ।
ನಿಜಘ್ನುರ್ವಿವಿಧೈರಸ್ತ್ರೈಸ್ತೇ ತಮಾಯಾಂತಮಾಹವೇ ॥೨೨೨॥
ಕಾಲನೇಮಿಪ್ರಭೃತಯೋ ದಶ ದೈತ್ಯಾ ಮಹಾಬಲಾಃ ।
ಷಷ್ಟ್ಯಾ ವಿವ್ಯಾಧ ಬಾಣಾನಾಂ ಕಾಲನೇಮಿರ್ಜನಾರ್ದನಂ ॥೨೨೩॥
ನಿಮಿಃ ಶತೇನ ಬಾಣಾನಾಂ ಮಥನೋಽಶೀತಿಭಿಃ ಶರೈಃ ।
ಜಂಭಕಶ್ಚೈವ ಸಪ್ತತ್ಯಾ ಶುಂಭೋ ದಶಭಿರೇವ ಚ ॥೨೨೪॥
ಶೇಷಾ ದೈತ್ಯೇಶ್ವರಾಃ ಸರ್ವೇ ವಿಷ್ಣುಮೇಕೈಕಶಃ ಶರೈಃ ।
ದಶಭಿಶ್ಚೈವ ಯತ್ನಾತ್ತೇ ಜಘ್ನುಃ ಸಗರುಡಂ ರಣೇ ॥೨೨೫॥
ತೇಷಾಮಮೃಷ್ಯ ತತ್ಕರ್ಮ ವಿಷ್ಣುರ್ದಾನವಸೂದನಃ ।
ಏಕೈಕಂ ದಾನವಂ ಜಘ್ನೇ ಷಡ್ಭಿಃ ಷಡ್ಭಿರಜಿಹ್ಮಗೈಃ ॥೨೨೬॥
ಆಕರ್ಣಕೃಷ್ಟೈರ್ಭೂಯಶ್ಚ ಕಾಲನೇಮಿ ಸ್ತ್ರಿಭಿಃ ಶರೈಃ ।
ವಿಷ್ಣುಂ ವಿವ್ಯಾಧ ಹೃದಯೇ ಕ್ರೋಧಾದ್ರಕ್ತವಿಲೋಚನಃ ॥೨೨೭॥

---

೨೨೨. ಹೀಗೆ ಹೇಳಿ ದಾನವರೆಲ್ಲರೂ ಸುತ್ತಲೂ ಮುತ್ತಿದರು. ಯುದ್ಧಕ್ಕೆ ಬರುತ್ತಿರುವ ಆತನನ್ನು ಕಾಲನೇಮಿ ಮೊದಲಾದ ಹತ್ತುಜನ ಮಹಾಬಲರು ಬಗೆಬಗೆಯ ಅಸ್ತ್ರಗಳಿಂದ ಹೊಡೆದರು.

೨೨೩-೨೨೪. ಕಾಲನೇಮಿಯು ಅರವತ್ತು ಬಾಣಗಳಿಂದಲೂ. ನಿಮಿಯು ನೂರು ಬಾಣಗಳಿಂದಲೂ, ಮಥನನು ಎಂಬತ್ತರಿಂದಲೂ, ಜಂಭಕನು ಎಪ್ಪತ್ತ ರಿಂದಲೂ ಮತ್ತು ಶುಂಭನು ಹತ್ತು ಬಾಣಗಳಿಂದಲೂ ವಿಷ್ಣುವನ್ನು ನೋಯಿಸಿದರು.

೨೨೫. ಉಳಿದ ದೈತ್ಯಪ್ರಮುಖರೆಲ್ಲರೂ ಒಬ್ಬೊಬ್ಬರೂ ಹತ್ತು ಹತ್ತು ಬಾಣಗಳಿಂದ ಗರುಡಸಮೇತನಾದ ವಿಷ್ಣುವನ್ನು ಪ್ರಯತ್ನದಿಂದ ಪ್ರಹರಿಸಿದರು.

೨೨೬. ದಾನವಾಂತಕನಾದ ವಿಷ್ಣು ಅವರ ಕಾರ್ಯವನ್ನು ಸೈರಿಸಲಾರದೆ ಒಬ್ಬೊಬ್ಬ ದಾನವನನ್ನೂ ಆರಾರು ಬಾಣಗಳಿಂದ ಗುರಿ ತಪ್ಪಿದಂತೆ ಪ್ರಹರಿಸಿದನು.

೨೨೭. ಮತ್ತೆ ಕಾಲನೇಮಿಯು ಕೋಪದಿಂದ ಕಣ್ಣುಗಳು ಕೆಂಪಾಗಿರಲು, ಮೂರು ಬಾಣಗಳನ್ನು ಕಿವಿಯವರೆಗೆ ಸೆಳೆದು ವಿಷ್ಣುವಿನ ಎದೆಗೆ ನಾಟಿಕೊಳ್ಳು ವಂತೆ ಬಿಟ್ಟನು.

ತಸ್ಯಾಶೋಭಂತ ತೇ ಬಾಣಾ ಹೃದಯೇ ತಪ್ತಕಾಂಚನಾಃ ।
ಮಯೂಖಾನೀವ ದೀಪ್ತಾನಿ ಕೌಸ್ತುಭಸ್ಯ ಸ್ಫುಟತ್ವಿಷಃ ॥೨೨೮॥

ತೈರ್ಬಾಣೈಃ ಕಿಂಚಿದಾಯಸ್ತೋ ಹರಿರ್ಜಗ್ರಾಹ ಮುದ್ಗರಂ ।
ಸತತಂ ಭ್ರಾಮ್ಯ ವೇಗೇನ ದಾನವಾಯ ವ್ಯಸರ್ಜಯುತ್ ॥೨೨೯॥

ದಾನವೇಂದ್ರಸ್ತಮುಪ್ರಾಪ್ತಂ ವಿಯತ್ಯೇವ ಶತೈಃ ಶರೈಃ ।
ಚಿಚ್ಛೇದ ತಿಲಶಃ ಕ್ರುದ್ಧೋ ದರ್ಶಯನ್ ಪಾಣಿಲಾಘವಂ ॥೨೩೦॥

ತತೋ ವಿಷ್ಣುಃ ಪ್ರಕುಪಿತಃ ಪ್ರಾಸಂ ಜಗ್ರಾಹ ಭೈರವಂ ।
ತೇನ ದೈತ್ಯಸ್ಯ ಹೃದಯಂ ತಾಡಯಾಮಾಸ ಗಾಢತಃ ॥೨೩೧॥

ಕ್ಷಣೇನ ಲಬ್ಧಸಂಜ್ಞಸ್ತು ಕಾಲನೇಮಿರ್ಮಹಾಸುರಃ ।
ಶಕ್ತಿಂ ಜಗ್ರಾಹ ತೀಕ್ಷ್ಣಾಗ್ರಾಂ ಹೇಮಘಂಟಾಟ್ಟಹಾಸಿನೀಂ ॥೨೩೨॥

---

೨೨೮. ಪುಟಹಾಕಿದ ಚಿನ್ನದಿಂದ ಅಲಂಕೃತವಾದ ಆ ಬಾಣಗಳು ಅವನ ಎದೆಯಲ್ಲಿ ಕೌಸ್ತುಭರತ್ನದ ಹೊಳೆಹೊಳೆವ ಕಿರಣಗಳಂತೆ ಪ್ರಕಾಶಿಸಿದುವು.

೨೨೯. ಆ ಬಾಣಗಳಿಂದ ಸ್ವಲ್ಪ ಆಯಾಸಪಟ್ಟವನಾಗಿ ವಿಷ್ಣುವು ಮುದ್ಗರಾಯುಧವನ್ನೆತ್ತಿಕೊಂಡು, ಚೆನ್ನಾಗಿ ತಿರುಗಿಸಿ ವೇಗವಾಗಿ ದಾನವನ ಮೇಲೆ ಅದನ್ನು ಬಿಟ್ಟನು.

೨೩೦. ದಾನವೇಂದ್ರನಾದ ಕಾಲನೇಮಿಯು ಕ್ರುದ್ಧನಾಗಿ ತನ್ನ ಬಳಿಗೆ ಬರುವುದಕ್ಕಿಂತ ಮೊದಲೇ ಆ ಶಸ್ತ್ರವನ್ನು ಆಕಾಶದಲ್ಲಿ ನೂರು ಬಾಣಗಳಿಂದ ಎಳ್ಳಿನಂತೆ ಚೂರುಚೂರಾಗಿ ಕತ್ತರಿಸಿ ತನ್ನ ಕೈ ಚಟುವಟಿಕೆಯನ್ನು ತೋರಿಸಿದನು.

೨೩೧. ಬಳಿಕ ವಿಷ್ಣುವು ಬಹಳ ಸಿಟ್ಟಾಗಿ ಭಯಂಕರವಾದ ಪ್ರಾಸಾಯುಧವನ್ನೆತ್ತಿಕೊಂಡು ಅದರಿಂದ ದೈತ್ಯನ ಹೃದಯವನ್ನು ಬಲವಾಗಿ ಹೊಡೆದನು.

೨೩೨. ಮಹಾಸುರನಾದ ಕಾಲನೇಮಿಗೆ ಕ್ರಮವಾಗಿ ಎಚ್ಚರಿಕೆ ಬಂದಿತು. ಅವನು ಅಗ್ರಭಾಗವು ತೀಕ್ಷ್ಣವಾಗಿ ಚಿನ್ನದ ಘಂಟೆಗಳಿಂದ ಅಟ್ಟಹಾಸಮಾಡುತ್ತಿರುವ ಶಕ್ತಿಯನ್ನು ಹಿಡಿದುಕೊಂಡನು.

ತಯಾ ವಾಮಭುಜಂ ವಿಷ್ಣೋರ್ಬಿಭೇದ ದಿತಿನಂದನಃ ।
ಭಿನ್ನಃ ಶಕ್ತ್ಯಾ ಭುಜಸ್ತಸ್ಯ ಸ್ರುತಶೋಣಿತ ಆಬಭೌ ॥೨೩೩॥

ಪದ್ಮರಾಗಮಯೇನೇವ ಕೇಯೂರೇಣ ವಿಭೂಷಿತಃ ।
ತತೋ ವಿಷ್ಣುಃ ಪ್ರಕುಪಿತೋ ಜಗ್ರಾಹ ವಿಪುಲಂ ಧನುಃ ॥೨೩೪॥

ಸಪ್ತದಶ ಚ ನಾರಾಚಾಂಸ್ತೀಕ್ಷ್ಣಾನ್ಮರ್ಮ ವಿಭೇಧಿನಃ ।
ದೈತ್ಯಸ್ಯ ಹೃದಯಂ ಷಡ್ಭಿರ್ವಿವ್ಯಾಧ ಚ ತ್ರಿಭಿಃ ಶರೈಃ ॥೨೩೫॥

ಚತುರ್ಭಿಃ ಸಾರಥಿಂ ಚಾಸ್ಯ ಧ್ವಜಂ ಚೈಕೇನ ಪತ್ರಿಣಾ ।
ದ್ವಾಭ್ಯಾಂ ಜ್ಯಾಧನುಷೀ ಚಾಪಿ ಭುಜಂ ಸವ್ಯಂ ಚ ಪತ್ರಿಣಾ ॥೨೩೬॥

ಸ ವಿದ್ಧೋ ಹೃದಯೇ ಗಾಢಂ ದೈತ್ಯೋ ಹರಿಶಿಲೀಮುಖೈಃ ।
ಸ್ರುತರಕ್ತಾರುಣಪ್ರಾಂಶುಃ ಪೀಡಾಕುಲಿತಮಾನಸಃ ॥೨೩೭॥

---

೨೩೩. ದೈತ್ಯನು ಅದರಿಂದ ವಿಷ್ಣುವಿನ ಎಡದ ತೋಳನ್ನು ಇರಿದನು. ಶಕ್ತ್ಯಾಯುಧದ ಪೆಟ್ಟಿನಿಂದ ಗಾಯಹೊಂದಿ ರಕ್ತ ಸುರಿಯುತ್ತಿದ್ದ ಆ ಬಾಹುವು ಪದ್ಮರಾಗ ರತ್ನದಿಂದ ಮಾಡಿದ ತೋಳುಬಳೆಯಿಂದ ಅಲಂಕೃತವಾದಂತೆ ಕಂಡಿತು.

೨೩೪-೨೩೫. ಬಳಿಕ ವಿಷ್ಣುವು ಬಹಳ ಕ್ರುದ್ಧನಾಗಿ ದೊಡ್ಡ ಬಿಲ್ಲನ್ನೂ ತೀಕ್ಷ್ಣವೂ ಮರ್ಮಭೇದಿಯೂ ಆದ ಹದಿನೇಳು ಬಾಣಗಳನ್ನೂ ತೆಗೆದುಕೊಂಡನು. ಅವುಗಳಲ್ಲಿ ದೈತ್ಯನ ಹೃದಯವನ್ನು ಆರು ಬಾಣಗಳಿಂದಲೂ ಮರಳಿ ಮೂರು ಬಾಣಗಳಿಂದಲೂ ಇರಿದನು.

೨೩೬. ನಾಲ್ಕು ಬಾಣಗಳಿಂದ ಸಾರಥಿಯನ್ನೂ, ಒಂದು ಬಾಣದಿಂದ ಧ್ವಜವನ್ನೂ, ಎರಡರಿಂದ ಬಿಲ್ಲುಹೆದೆಗಳನ್ನೂ, ಇನ್ನೊಂದರಿಂದ ಎಡದ ತೋಳನ್ನೂ ಪ್ರಹರಿಸಿದನು.

೨೩೭. ವಿಷ್ಣುವಿನ ಬಾಣಗಳಿಂದ ಎದೆಯಮೇಲೆ ಬಲವಾಗಿ ಪೆಟ್ಟುಬಿದ್ದು ಗಾಯವಾಗಲು ರಕ್ತವು ಸುರಿಯತೊಡಗಿತು. ಕಾಲನೇಮಿಯ ಮನಸ್ಸು ಬಹಳ ಬಾಧೆಗೊಳಗಾಯಿತು. ಗಾಳಿಗೆ ಅಲುಗಾಡುವ ಮುತ್ತುಗದ ಮರದಂತೆ ಅವನು ನಡುಗುತ್ತಿದ್ದನು.

ಚಕಂಪೇ ಮಾರುತೇನೇವ ನೋದಿತಃ ಕಿಂಶುಕದ್ರುಮಃ ।
ತಮಾಕಂಪಿತಮಾಲಕ್ಷ್ಯ ಗದಾಂ ಜಗ್ರಾಹ ಕೇಶವಃ ॥೨೩೮॥

ತಾಂ ಚ ವೇಗೇನ ಚಿಕ್ಷೇಪ ಕಾಲನೇಮಿರಥಂ ಪ್ರತಿ ।
ಸಾ ಪಪಾತ ಶಿರಸ್ಯುಗ್ರಾ ವಿಪುಲಾ ಕಾಲನೇಮಿನಃ ॥೨೩೯॥

ಸಂಚೂರ್ಣಿತೋತ್ತಮಾಂಗಸ್ತು ನಿಷ್ಪಿಷ್ಟಮುಕುಟೋಽಸುರಃ ।
ಸ್ರುತರಕ್ತೌಘರಂಧ್ರಸ್ತು ಸ್ರುತಧಾತುರಿವಾಚಲಃ ॥೨೪೦॥

ಪ್ರಾಪತತ್ಸ್ವೇ ರಥೇ ಭಗ್ನೇ ವಿಸಂಜ್ಞಃ ಶಿಷ್ಟಜೀವಿತಃ ।
ಪತಿತಸ್ಯ ರಥೋಪಸ್ಥೇ ದಾನವಸ್ಯಾಚ್ಯುತೋಽರಿಹಾ ॥೨೪೧॥

ಸ್ಮಿತಪೂರ್ವಮುವಾಚೇದಂ ವಾಕ್ಯಂ ಚಕ್ರಾಯುಧಂ ಪ್ರಭುಃ ।
ಗಚ್ಛಾಸುರ ವಿಮುಕ್ತೋಽಸಿ ಸಾಂಪ್ರತಂ ಜೀವ ನಿರ್ಭಯಃ ॥೨೪೨॥

---

೨೩೮-೨೩೯. ಅವನು ನಡುಗುತ್ತಿದ್ದುದನ್ನು ಕಂಡು ವಿಷ್ಣುವು ಗದೆಯನ್ನೆತ್ತಿಕೊಂಡನು. ಅದನ್ನು ಕಾಲನೇಮಿಯ ರಥದ ಕಡೆಗೆ ವೇಗವಾಗಿ ಬಿಸುಟನು. ಅತ್ಯುಗ್ರವಾದ ಆ ದೊಡ್ಡ ಗದೆಯು ಕಾಲನೇಮಿಯ ತಲೆಯ ಮೇಲೆ ಬಿದ್ದಿತು.

೨೪೦. ಅಸುರನ ತಲೆಯು ಪುಡಿಯಾಯಿತು. ಕಿರೀಟವು ಜಜ್ಜಿಹೋಯಿತು. ನವರಂಧ್ರಗಳಿಂದಲೂ ರಕ್ತವು ಹರಿಯುತ್ತಿತ್ತು. ಆಗ ಅವನು ಧಾತುರಸವು ಪ್ರವಹಿಸುತ್ತಿರುವ ಬೆಟ್ಟದಂತಿದ್ದನು.

೨೪೧. ಕಾಲನೇಮಿಯು ತನ್ನ ಒಡಕಲು ತೇರಿನಲ್ಲಿ ಮೂರ್ಛೆಹೋಗಿ ಬಿದ್ದನು. ಅವನ ಪ್ರಾಣಮಾತ್ರ ಉಳಿದಿತ್ತು. ಚಕ್ರಧಾರಿಯೂ ಶತ್ರುನಾಶಕನೂ ಆದ ವಿಷ್ಣುವು ರಥದಲ್ಲಿ ಬಿದ್ದಿದ್ದ ಆ ದಾನವನಿಗೆ ಮುಗುಳುನಗೆಯೊಡನೆ ಇಂತೆಂದನು.

೨೪೨-೨೪೩. "ಎಲೈ ಅಸುರನೇ ಹೋಗು. ಈಗ ನಿನ್ನನ್ನು ಬಿಟ್ಟಿದ್ದೇನೆ. ನಿರ್ಭಯವಾಗಿ ಬದುಕು. ಸ್ವಲ್ಪ ಕಾಲಾನಂತರ ನಾನೇ ನಿನ್ನನ್ನು ಸಂಹರಿಸುವೆನು."

**ತತಃ ಸ್ವಲ್ಪೇನ ಕಾಲೇನ ಅಹಮೇವ ತವಾಂತಕಃ ।**
**ಏತಚ್ಛ್ರುತ್ವಾ ವಚಸ್ತಸ್ಯ ಸಾರಥಿಃ ಕಾಲನೇಮಿನಃ ।**
**ಅಪವಾಹ್ಯ ರಥಂ ದೂರಮುನಯತ್ಕಾಲನೇಮಿನಃ ॥೨೪೩॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದೇವಾಸುರಸಂಗ್ರಾಮೇ ಕಾಲನೇಮಿಪರಾಜಯೋ ನಾಮ ಪಂಚಾಶದಧಿಕಶತತಮೋಽಧ್ಯಾಯಃ**

---

ವಿಷ್ಣುವಿನ ಈ ಮಾತನ್ನು ಕೇಳಿ ಕಾಲನೇಮಿಯ ಸಾರಥಿಯು ರಥವನ್ನು ದೂರವಾಗಿ ತೆಗೆದುಕೊಂಡು ಹೋದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕಾಲನೇಮಿಯ ಪರಾಜಯವನ್ನು ಹೇಳಿದೆ.

ದೇವಾಸುರರಿಗೆ ಭಯಂಕರವಾದ ಯುದ್ಧವು ಮುಂದುವರಿಯಿತು. ಗ್ರಸನ, ಜಂಭ, ಶುಂಭ ಮುಂತಾದ ಅಸುರವೀರರು ಯಮ, ಕುಬೇರ, ಇಂದ್ರ ಮೊದಲಾದ ದೇವವೀರರೊಡನೆ ಅತಿಸಾಹಸದಿಂದ ಹೋರಾಡಿದರು. ಯಮನು ಗ್ರಸನನ ಪ್ರಹಾರವನ್ನು ತಾಳಲಾರದೆ ರಕ್ತವನ್ನು ಕಾರಿದನು. ಕುಬೇರನ ತೇರು ಎಳ್ಳಿನಂತೆ ಚೂರುಚೂರಾಯಿತು. ಆದರೆ ಅವನು ಪ್ರಯೋಗಿಸಿದ ಗದೆಯು ಜಂಭನನ್ನು ಮೂರ್ಛೆಗೊಳಿಸಿ ಕೆಡವಿತು. ಬಳಿಕ ಕುಜಂಭನೆಂಬವನು ಯುದ್ಧಕ್ಕೆ ಬಂದನು. ಅವನಿಗೂ ನಿರಋತಿಗೂ ಘೋರವಾದ ಯುದ್ಧವಾಯಿತು. ಈ ವೇಳೆಗೆ ಜಂಭನು ಮೂರ್ಛೆಯಿಂದೆಚ್ಚೆತ್ತು ಕುಬೇರನ ಮೇಲೆ ಏರಿಹೋದನು. ಬಳಿಕ ಚಂದ್ರನು ಯುದ್ಧಕ್ಕಿಳಿದನು. ಅವನ ಶೌರ್ಯದಿಂದ ದೈತ್ಯರು ಕಂಗೆಟ್ಟರು. ಕಾಲನೇಮಿಯು ಅವರಿಗೆ ಉತ್ಸಾಹವನ್ನು ಹುಟ್ಟಿಸಿ ಮತ್ತೆ ಘೋರಯುದ್ಧವನ್ನು ಮಾಡಿದನು. ಸೂರ್ಯನ ಮಾಯಾಸಮರದಿಂದ ದೈತ್ಯಬಲವು ಬಹಳ ನಷ್ಟವಾಯಿತು. ಕಾಲನೇಮಿಗೂ ದುಸ್ಸಹವಾದ ಕ್ರೋಧವು ಹುಟ್ಟಿತು. ಅವನು ತನ್ನ ಮಾಯೆಯ ಬಲದಿಂದ ದೇವತೆಗಳನ್ನು ಧ್ವಂಸಮಾಡಿದನು. ಅಶ್ವಿನೀ ದೇವತೆಗಳೂ ದೇವೇಂದ್ರನೂ ಬಂದು ಎಷ್ಟೋ ಪರಾಕ್ರಮದಿಂದ ಹೋರಾಡಿದರು. ಆದರೂ ಕಾಲನೇಮಿಯ

ಮುಂದೆ ಅವರ ಸಾಹಸವು ನಡೆಯಲಿಲ್ಲ. ದೇವತೆಗಳಿಗೆ ಉಂಟಾದ ಈ ಪರಾಭವ ವನ್ನು ಕಂಡು ಶ್ರೀಮನ್ನಾರಾಯಣನು ಕನಿಕರದಿಂದ ಗರುಡವಾಹನನಾಗಿ ರಣ ರಂಗಕ್ಕೆ ಬಂದನು. ಅವನಿಗೂ ಕಾಲನೇಮಿಗೂ ಘೋರ ಸಂಗ್ರಾಮವು ನಡೆಯಿತು. ದೈತ್ಯನು ಮೂರ್ಛಿತನಾಗಿ ಬಿದ್ದನು. ವಿಷ್ಣುವು ಅವನನ್ನು ಜೀವದೊಡನೆ ಉಳಿಸಿ ಮುಂದೆ ತಾನೇ ಅವನನ್ನು ಕೊಲ್ಲುವುದಾಗಿ ತಿಳಿಸಿದನು. ಕಾಲನೇಮಿಯ ಸಾರಥಿಯು ರಥವನ್ನು ದೂರವಾಗಿ ತೆಗೆದುಕೊಂಡು ಹೋದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದೇವಾಸುರ ಸಂಗ್ರಾಮದಲ್ಲಿ ಕಾಲನೇಮಿ
ಪರಾಜಯವೆಂಬ ನೂರೈವತ್ತನೆಯ ಅಧ್ಯಾಯವು ಮುಗಿದುದು.



## ಅಥೈಕಪಂಚಾಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತಂ ದೃಷ್ಟ್ವಾ ದಾನವಾಃ ಕ್ರುದ್ಧಾಶ್ಚೇರುಃ ಸ್ವೈಸ್ಸ್ವೈರ್ಬಲೈರ್ವೃತಾಃ ।
ಸರಘಾ ಇವ ಮಾಕ್ಷೀಕಹರಣೇ ಸರ್ವತೋದಿಶಂ ॥ ೧ ॥

ಕೃಷ್ಣಚಾಮರಜಾಲಾಢ್ಯೇ ಸುಧಾವಿರಚಿತಾಂಕುರೇ ।
ಚಿತ್ರಪಂಚಪತಾಕೇ ತು ಪ್ರಭಿನ್ನಕರಟಾಮುಖೇ ॥ ೨ ॥

ಪರ್ವತಾಭೇ ಗಜೇ ಭೀಮೇ ಮದಸ್ರಾವಿಣಿ ದುರ್ಧರೇ ।
ಆರುಹ್ಯಾಜೌ ನಿಮಿರ್ದೈತ್ಯೋ ಹರಿಂ ಪ್ರತ್ಯುದ್ಯಯೌ ಬಲೀ ॥ ೩ ॥

ತಸ್ಯಾಸನ್ದಾನವಾ ರೌದ್ರಾ ಗಜಸ್ಯ ಪದರಕ್ಷಿಣಃ ।
ಸಪ್ತವಿಂಶಂತಿಸಾಹಸ್ರಾಃ ಕಿರೀಟಕವಚೋಜ್ಜ್ವಲಾಃ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ವಿಷ್ಣುವನ್ನು ಕಂಡು ದಾನವರೆಲ್ಲರಿಗೂ ಬಹಳ ಕೋಪ ಬಂದಿತು. ಅವರು ತಮ್ಮತಮ್ಮ ಸೈನ್ಯದೊಡಗೂಡಿ ಜೇನನ್ನು ಅಪಹರಿಸಲು ತವಕಪಡುವ ಜೇನುಹುಳುಗಳಂತೆ ಎಲ್ಲಾ ದಿಕ್ಕುಗಳಲ್ಲಿಯೂ ಓಡಾಡಿದರು.

೨-೩. ದೈತ್ಯಮುಖ್ಯನಾದ ನಿಮಿಯು ಪರ್ವತಾಕಾರವಾದ, ಮದವು ಸುರಿಯುತ್ತಿರುವ, ಭಯಂಕರವಾದ ಆನೆಯನ್ನೇರಿ ವಿಷ್ಣುವಿನ ಮೇಲೆ ಯುದ್ಧಕ್ಕೆ ಹೋದನು. ಆ ಆನೆಯನ್ನು ಕರಿಯ ಚಾಮರದ ಕುಚ್ಚುಗಳಿಂದ ಅಲಂಕರಿಸಿದ್ದರು. ಅದರ ಕೊಂಬುಗಳು ಅಮೃತದ ಮೊಳಕೆಯಂತಿದ್ದುವು. ಚಿತ್ರವರ್ಣದ ಐದು ಬಾವುಟಗಳು ಅದರ ಮೇಲೆ ಹಾರಾಡುತ್ತಿದ್ದುವು. ಅದರ ಗಂಡಸ್ಥಲದಿಂದ ಮದಜಲವು ಸುರಿಯುತ್ತಿತ್ತು.

೪. ಕ್ರೂರರಾದ ಇಪ್ಪತ್ತೇಳು ಸಾವಿರ ಜನ ದಾನವವೀರರು ಕಿರೀಟಗಳನ್ನೂ ಕವಚಗಳನ್ನೂ ಧರಿಸಿಕೊಂಡು ಆ ಆನೆಯ ಬೆಂಗಾವಲಿಗಾಗಿ ಸಿದ್ಧರಾಗಿದ್ದರು.

ಅಶ್ವಾರೂಢಶ್ಚ ಮಥನೋ ಜಂಭಕಶ್ಚೋಷ್ಟ್ರವಾಹನಃ ।
ಶುಂಭೋಽಪಿ ವಿಪುಲಂ ಮೇಷಂ ಸಮಾರುಹ್ಯಾವ್ರಜದ್ರಣಂ ॥ ೫ ॥

ಅಪರೇ ದಾನವೇಂದ್ರಾಸ್ತು ಯತ್ತಾ ನಾನಾಸ್ತ್ರಪಾಣಯಃ ।
ಆಜಘ್ನುಃ ಸಮರೇ ಕ್ರುದ್ಧಾ ವಿಷ್ಣುಮಕ್ಲಿಷ್ಟಕಾರಿಣಂ ॥ ೬ ॥

ಪರಿಘೇಣ ನಿಮಿರ್ದೈತ್ಯೋ ಮಥನೋ ಮುದ್ಗರೇಣ ತು ।
ಶುಂಭಃ ಶೂಲೇನ ತೀಕ್ಷ್ಣೇನ ಪ್ರಾಸೇನ ಗ್ರಸನಸ್ತಥಾ ॥ ೭ ॥

ಚಕ್ರೇಣ ಮಹಿಷಃ ಕ್ರುದ್ಧೋ ಜಂಭಃ ಶಕ್ತ್ಯಾ ಮಹಾರಣೇ ।
ಜಘ್ನುರ್ನಾರಾಯಣಂ ಸರ್ವೇ ಶೇಷಾಸ್ತೀಕ್ಷ್ಣೈಶ್ಚ ಮಾರ್ಗಣೈಃ ॥ ೮ ॥

ತಾನ್ಯಸ್ತ್ರಾಣಿ ಪ್ರಯುಕ್ತಾನಿ ಶರೀರಂ ವಿವಿಶುರ್ಹರೇಃ ।
ಗುರೂಕ್ತಾನ್ಯುಪದಿಷ್ಟಾನಿ ಸಚ್ಛಿಷ್ಯಸ್ಯ ಶ್ರುತಾವಿವ ॥ ೯ ॥

---

೫. ಮಥನನು ಕುದುರೆಯನ್ನೂ, ಜಂಭಕನೂ ಒಂಟೆಯನ್ನೂ, ಶುಂಭನು ದೊಡ್ಡ ಮೇಕೆಯನ್ನೂ ಏರಿ ಯುದ್ಧಕ್ಕೆ ಹೊರಟರು.

೬. ಉಳಿದ ದಾನವವೀರರಾದರೋ ಜಾಗರೂಕರಾಗಿ ನಾನಾ ಬಗೆಯ ಅಸ್ತ್ರಗಳನ್ನು ಹಿಡಿದು ಮಹಾಪರಾಕ್ರಮಶಾಲಿಯಾದ ವಿಷ್ಣುವನ್ನು ಯುದ್ಧದಲ್ಲಿ ಕೋಪದಿಂದ ಪ್ರಹರಿಸಿದರು.

೭-೮. ನಿಮಿಯು ಪರಿಘದಿಂದಲೂ, ಮಥನನು ಮುದ್ಗರದಿಂದಲೂ, ಶುಂಭನು ತೀಕ್ಷ್ಣವಾದ ಶೂಲದಿಂದಲೂ, ಗ್ರಸನನು ಪ್ರಾಸದಿಂದಲೂ, ಮಹಿಷನು ಚಕ್ರದಿಂದಲೂ, ಇನ್ನುಳಿದವರೆಲ್ಲರೂ ಮೊನೆಯಾದ ಬಾಣಗಳಿಂದಲೂ ನಾರಾಯಣನನ್ನು ಪ್ರಹರಿಸಿದರು.

೯. ಗುರುವು ಮಾಡಿದ ಉಪದೇಶಗಳು ಒಳ್ಳೆಯ ಶಿಷ್ಯನ ಕಿವಿಯಲ್ಲಿ ಪ್ರವೇಶಿಸುವಂತೆ ದೈತ್ಯರು ಬಿಟ್ಟ ಆ ಅಸ್ತ್ರಗಳು ವಿಷ್ಣುವಿನ ಶರೀರದಲ್ಲಿ ಹೊಕ್ಕವು.

ಅಸಂಭ್ರಾಂತೋ ರಣೇ ವಿಷ್ಣುರಥ ಜಗ್ರಾಹ ಕಾರ್ಮುಕಂ ।
ಶರಾಂಶ್ಚಾಶೀವಿಷಾಕಾರಾಂಸ್ತೈಲಧೌತಾನಜಿಹ್ಮಗಾನ್ ॥೧೦॥

ತತೋಽಭಿಸಂಧ್ಯ ದೈತ್ಯಾಂಸ್ತಾನಾಕರ್ಣಾಕೃಷ್ಟಕಾರ್ಮುಕಃ ।
ಅಭ್ಯದ್ರವದ್ರಣೇ ಕ್ರುದ್ಧೋ ದೈತ್ಯಾನೀಕೇ ತು ಪೌರುಷಾತ್ ॥೧೧॥

ನಿಮಿಂ ವಿವ್ಯಾಧ ವಿಂಶತ್ಯಾ ಬಾಣಾನಾಮಗ್ನಿವರ್ಚಸಾಂ ।
ಮಥನಂ ದಶಭಿರ್ಬಾಣೈಃ ಶುಂಭಂ ಪಂಚಭಿರೇವ ಚ ॥೧೨॥

ಏಕೇನ ಮಹಿಷಂ ಕ್ರುದ್ಧೋ ವಿವ್ಯಾಧೋರಸಿ ಪತ್ರಿಣಾ ।
ಜಂಭಂ ದ್ವಾದಶಭಿಸ್ತೀಕ್ಷ್ಣೈಃ ಸರ್ವಾಂಶ್ಚೈಕೈಕಶೋಽಷ್ಟಭಿಃ ॥೧೩॥

ತಸ್ಯ ತಲ್ಲಾಘವಂ ದೃಷ್ಟ್ವಾ ದಾನವಾಃ ಕ್ರೋಧಮೂರ್ಛಿತಾಃ ।
ನರ್ದಮಾನಾಃ ಪ್ರಯತ್ನೇನ ಚಕ್ರುರತ್ಯದ್ಭುತಂ ರಣಂ ॥೧೪॥

---

೧೦. ತರುವಾಯ ವಿಷ್ಣುವು ಗಾಬರಿಗೊಳ್ಳದೆ ಬಿಲ್ಲನ್ನೂ ಸರ್ಪಸಮಾನವಾದ, ಎಣ್ಣೆಯಲ್ಲಿ ಅದ್ದಿದ ಮತ್ತು ಗುರಿತಪ್ಪದೆ ಹೋಗಬಲ್ಲ ಬಾಣಗಳನ್ನೂ ತೆಗೆದುಕೊಂಡನು.

೧೧. ಕ್ರುದ್ಧನಾದ ವಿಷ್ಣುವು ಬಳಿಕ ಬಾಣಗಳನ್ನು ಹೂಡಿ, ಕಿವಿಯವರೆಗೂ ಬಿಲ್ಲನ್ನೆಳೆದು, ತನ್ನ ಪೌರುಷದಿಂದ ದೈತ್ಯಸೈನ್ಯವನ್ನು ಬೆನ್ನಟ್ಟಹೋದನು.

೧೨. ಅಗ್ನಿಯಂತೆ ತೇಜೋಯುಕ್ತಗಳಾದ ಇಪ್ಪತ್ತು ಬಾಣಗಳಿಂದ ನಿಮಿಯನ್ನೂ, ಹತ್ತು ಬಾಣಗಳಿಂದ ಮಥನನನ್ನೂ, ಐದು ಬಾಣಗಳಿಂದ ಶುಂಭನನ್ನೂ ಇರಿದನು.

೧೩. ಒಂದು ಬಾಣದಿಂದ ಮಹಿಷನನ್ನು ಹೊಡೆದನು. ಜಂಭನನ್ನು ತೀಕ್ಷ್ಣವಾದ ಹನ್ನೆರಡು ಬಾಣಗಳಿಂದಲೂ, ಮಿಕ್ಕವರಲ್ಲಿ ಒಬ್ಬೊಬ್ಬರನ್ನು ಎಂಟೆಂಟು ಬಾಣಗಳಿಂದಲೂ ಪ್ರಹರಿಸಿದನು.

೧೪. ಆತನ ಯುದ್ಧಕೌಶಲವನ್ನು ನೋಡಿ ದಾನವರು ಕೋಪದಿಂದ ಮೈಮರೆತರು. ಅವರು ಅಬ್ಬರಿಸುತ್ತ ಅತ್ಯದ್ಭುತವಾದ ಯುದ್ಧವನ್ನು ಪ್ರಯತ್ನಪಟ್ಟು ನಡೆಸಿದರು.

ಚಿಚ್ಛೇದಾಥ ಧನುರ್ವಿಷ್ಣೋರ್ನಿಮಿರ್ಭಲ್ಲೇನ ದಾನವಃ ।
ಸಂಧ್ಯಮಾನಂ ಶರಂ ಹಸ್ತೇ ಚಿಚ್ಛೇದ ಮಹಿಷಾಸುರಃ ॥೧೫॥

ಪೀಡಯಾಮಾಸ ಗರುಡಂ ಜಂಭಸ್ತೀಕ್ಷ್ಣೈಸ್ತು ಸಾಯಕೈಃ ।
ಭುಜಂ ತಸ್ಯಾಹನದ್ಗಾಢಂ ಶುಂಭೋ ಭೂಧರಸನ್ನಿಭಃ ॥೧೬॥

ಭಿನ್ನೇ ಧನುಷಿ ಗೋವಿಂದೋ ಗದಾಂ ಜಗ್ರಾಹ ಭೀಷಣಾಂ ।
ತಾಂ ಪ್ರಾಹಿಣೋತ್ಸ ವೇಗೇನ ಮಥನಾಯ ಮಹಾಹವೇ ॥೧೭॥

ತಾಮಪ್ರಾಪ್ತಾಂ ನಿಮಿರ್ಬಾಣೈಃ ಚಿಚ್ಛೇದ ಶಿಲಶೋ ರಣೇ ।
ತಾಂ ನಾಶಮಾಗತಾಂ ದೃಷ್ಟ್ವಾ ಹೀನಾಗ್ರೇ ಪ್ರಾರ್ಥನಾಮಿವ ॥೧೮॥

ಜಗ್ರಾಹ ಮುದ್ಗರಂ ಘೋರಂ ದಿವ್ಯರತ್ನಪರಿಷ್ಕೃತಂ ।
ತಂ ಮುಮೋಚಾಥ ವೇಗೇನ ನಿಮಿಮುದ್ದಿಶ್ಯ ದಾನವಂ ॥೧೯॥

---

೧೫. ಬಳಿಕ ದಾನವವೀರನಾದ ನಿಮಿಯು ವಿಷ್ಣುವಿನ ಬಿಲ್ಲನ್ನು ಭಲ್ಲಾಯುಧದಿಂದ ಕತ್ತರಿಸಿದನು. ಹೂಡಬೇಕೆಂದು ವಿಷ್ಣುವು ಕೈಯಲ್ಲಿಟ್ಟುಕೊಂಡಿದ್ದ ಬಾಣವನ್ನು ಮಹಿಷಾಸುರನು ತುಂಡು ಮಾಡಿದನು.

೧೬. ಜಂಭನು ಮೊನಚಾದ ಬಾಣಗಳಿಂದ ಗರುಡನನ್ನು ಪೀಡಿಸಿದನು. ಪರ್ವತಸಮಾನನಾದ ಶುಂಭನು ಅವನ ದೃಢವಾದ ಭುಜಕ್ಕೆ ಹೊಡೆದನು.

೧೭. ಆ ದೊಡ್ಡ ಯುದ್ಧದಲ್ಲಿ ಬಿಲ್ಲು· ಕತ್ತರಿಸಿಹೋಗಲು, ವಿಷ್ಣುವು ಭಯಂಕರವಾದ ಗದೆಯನ್ನು ತೆಗೆದುಕೊಂಡು ಮಥನನ ಮೇಲೆ ವೇಗವಾಗಿ ಎಸೆದನು.

೧೮-೧೯. ತನ್ನ ಬಳಿಗೆ ಬರುವುದಕ್ಕೆ ಮೊದಲೇ ಅದನ್ನು ನಿಮಿಯು ಬಾಣಗಳಿಂದ ಎಳ್ಳಿನಂತೆ ಚೂರು ಚೂರು ಮಾಡಿದನು. ಹೀನನ ಮುಂದೆ ಮಾಡಿದ ಪ್ರಾರ್ಥನೆಯ ಹಾಗೆ ಅದು ನಾಶವಾದುದನ್ನು ಕಂಡು, ವಿಷ್ಣುವು ಶ್ರೇಷ್ಠವಾದ ರತ್ನಗಳಿಂದ ಅಲಂಕೃತವಾದ, ಭಯಂಕರವಾದ ಮುದ್ಗರವನ್ನೆತ್ತಿಕೊಂಡನು. ದೈತ್ಯ ಮುಖ್ಯನಾದ ನಿಮಿಯನ್ನುದ್ದೇಶಿಸಿ ಅದನ್ನು ವೇಗವಾಗಿ ಎಸೆದನು.

ತಮಾಯಾಂತಂ ವಿಯತ್ಯೇವ ತ್ರಯೋ ದೈತ್ಯಾ ನ್ಯವಾರಯನ್ ।
ಗದಯಾ ಜಂಭದೈತ್ಯಸ್ತು ಗ್ರಸನಃ ಪಟ್ಟಿಶೇನ ತು ॥೨೦॥

ಶಕ್ತ್ಯಾ ಚ ಮಹಿಷೋ ದೈತ್ಯಃ ಸ್ವಪಕ್ಷಜಯಕಾಂಕ್ಷಯಾ ।
ನಿರಾಕೃತಂ ತಮಾಲೋಕ್ಯ ದುರ್ಜನೇ ಪ್ರಣಯಂ ಯಥಾ ॥೨೧॥

ಜಗ್ರಾಹ ಶಕ್ತಿಮತ್ಯುಗ್ರಾಮಷ್ಟಘಂಟೋತ್ಕಟಸ್ವನಾಂ ।
ಜಂಭಾಯ ತಾಂ ಸಮುದ್ದಿಶ್ಯ ಪ್ರಾಹಿಣೋದ್ರಣಭೀಷಣಃ ॥೨೨॥

ತಾಮಂಬರಸ್ಥಾಂ ಜಗ್ರಾಹ ಗಜೋ ದಾನವನಂದನಃ ।
ಗೃಹೀತಾಂ ತಾಂ ಸಮಾಲೋಕ್ಯ ಶಿಕ್ಷಾಮಿವ ವಿವೇಕಿಭಿಃ ॥೨೩॥

ದೃಢಂ ಭಾರಸಹಂ ಸಾರಮನ್ಯದಾದಾಯ ಕಾರ್ಮುಕಂ ।
ರೌದ್ರಾಸ್ತ್ರಮಭಿಸಂಧಾಯ ತಸ್ಮಿನ್ ಬಾಣಂ ಮುಮೋಚ ಹ ॥೨೪॥

---

೨೦. ಅದು ಬರುತ್ತಿರಲು ಆಕಾಶದಲ್ಲೇ ಅದನ್ನು ಮೂವರು ದೈತ್ಯರೂ ಸೇರಿ ತಡೆದರು. ಜಂಭನು ಗದೆಯಿಂದಲೂ,ಗ್ರಸನನು ಪಟ್ಟಿಶದಿಂದಲೂ, ಮಹಿಷನು ಶಕ್ತಿಯಿಂದಲೂ ತಡೆದು ನಿಲ್ಲಿಸಿ ತಾವು ಜಯಪಡೆಯಬೇಕೆಂದು ಇಚ್ಛಿಸಿದರು.

೨೧-೨೨. ದುರ್ಜನನಲ್ಲಿ ಇಟ್ಟ ಸ್ನೇಹದಂತೆ ಆ ಶಕ್ತಿಯು ತಿರಸ್ಕೃತವಾದುದನ್ನು ಕಂಡು, ವಿಷ್ಣು ಎಂಟು ಘಂಟೆಗಳಿಂದ ಕೂಡಿ ಉತ್ಕಟವಾಗಿ ಧ್ವನಿಮಾಡುತ್ತಿರುವ, ಅತ್ಯುಗ್ರವಾದ ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡನು. ರಣಭಯಂಕರನಾದ ಆ ಭಗವಂತನು ಅದನ್ನು ಜಂಭನ ಮೇಲೆ ಪ್ರಯೋಗಿಸಿದನು.

೨೩-೨೪. ದಾನವನಂದನನಾದ ಗಜನು ಆಕಾಶದಲ್ಲಿ ಬರುತ್ತಿದ್ದ ಆ ಶಕ್ತಿಯನ್ನು ಹಿಡಿದುಕೊಂಡನು. ವಿವೇಕಿಗಳು ಜ್ಞಾನವನ್ನು ಗ್ರಹಿಸಿದಂತೆ ಅದನ್ನವನು ಹಿಡಿದುದನ್ನು ನೋಡಿ ವಿಷ್ಣುವು ದೃಢವೂ ಪ್ರಶಸ್ತವೂ ಆದ ಬಿಲ್ಲನ್ನೆತ್ತಿಕೊಂಡನು. ಅದರಲ್ಲಿ ಬಾಣವನ್ನು ಹೂಡಿ ರೌದ್ರಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಮಾಡಿದನು.

ತತೋಽಸ್ತ್ರತೇಜಸಾ ಸರ್ವಂ ವ್ಯಾಪ್ತಂ ಲೋಕಂ ಚರಾಚರಂ ।
ತತೋ ಬಾಣಮಯಂ ಸರ್ವಮಾಕಾಶಂ ಸಮದೃಶ್ಯತ ॥೨೫॥

ಭೂರ್ದಿಶೋ ವಿದಿಶಶ್ಚೈವ ಬಾಣಜಾಲಮಯಂ ಬಭುಃ ।
ದೃಷ್ಟ್ವಾ ತದಸ್ತ್ರಮಾಹಾತ್ಮ್ಯಂ ಸೇನಾನೀರ್ಗ್ರಸನೋಽಸುರಃ ॥೨೬॥

ಬ್ರಾಹ್ಮಮಸ್ತ್ರಂ ಚಕಾರಾಸೌ ಸರ್ವಾಸ್ತ್ರವಿನಿವಾರಣಂ ।
ತೇನ ತತ್ಪ್ರಶಮಂ ಯಾತಂ ರೌದ್ರಾಸ್ತ್ರಂ ಲೋಕಘಸ್ಮರಂ ॥೨೭॥

ಅಸ್ತ್ರೇ ಪ್ರತಿಹತೇ ತಸ್ಮಿನ್ ವಿಷ್ಣುರ್ದಾನವಸೂದನಃ ।
ಕಾಲದಂಡಾಸ್ತ್ರಮಕರೋತ್ ಸರ್ವಲೋಕಭಯಂಕರಂ ॥೨೮॥

ಸಂಧೀಯಮಾನೇ ತಸ್ಮಿಂಸ್ತು ಮಾರುತಃ ಪರುಷೋ ವವೌ ।
ಚಕಂಪೇ ಚ ಮಹೀ ದೇವೀ ದೈತ್ಯಾ ಭಿನ್ನಧಿಯೋಽಭವನ್ ॥೨೯॥

ತದಸ್ತ್ರಮುಗ್ರಂ ದೃಷ್ಟ್ವಾ ತು ದಾನವಾ ಯುದ್ಧದುರ್ಮದಾಃ ।
ಚಕ್ರುರಸ್ತ್ರಾಣಿ ದಿವ್ಯಾನಿ ನಾನಾರೂಪಾಣಿ ಸಂಯುಗೇ ॥೩೦॥

---

೨೫. ಬಳಿಕ ಚರಾಚರಾತ್ಮಕವಾದ ಲೋಕವೆಲ್ಲವೂ ಆ ಅಸ್ತ್ರದ ತೇಜಸ್ಸಿನಿಂದ ವ್ಯಾಪ್ತವಾಯಿತು. ಆಕಾಶವೆಲ್ಲ ಬಾಣಮಯವಾದಂತೆ ತೋರಿತು.

೨೬-೨೭. ಭೂಮಿ, ದಿಕ್ಕುಗಳು, ದಿಕ್ಕುಗಳ ಮೂಲೆಗಳು ಇವೆಲ್ಲವೂ ಬಾಣಗಳಿಂದ ತುಂಬಿಹೋದುವು. ಆ ಅಸ್ತ್ರದ ಮಹಿಮೆಯನ್ನು ಕಂಡು ಸೇನಾಪತಿಯಾದ ಗ್ರಸನಾಸುರನು ಸರ್ವಾಸ್ತ್ರನಿವಾರಕವಾದ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಲೋಕನಾಶಕವಾದ ಆ ರೌದ್ರಾಸ್ತ್ರವು ಅಡಗಿತು.

೨೮. ಆ ಅಸ್ತ್ರವು ಭಗ್ನವಾಗಲು, ದಾನವಾಂತಕನಾದ ವಿಷ್ಣುವು ಸರ್ವಲೋಕ ಭಯಂಕರವಾದ ಕಾಲದಂಡಾಸ್ತ್ರವನ್ನು ಪ್ರಯೋಗಿಸಿದನು.

೨೯. ಆ ಅಸ್ತ್ರವನ್ನು ಹೂಡಿದಾಗ ಗಾಳಿ ಬಿರುಸಾಗಿ ಬೀಸಿತು. ಭೂದೇವಿ ನಡುಗಿದಳು. ದೈತ್ಯರ ಬುದ್ಧಿ ಕೆಟ್ಟಿತು.

೩೦. ಆ ಉಗ್ರವಾದ ಅಸ್ತ್ರವನ್ನು ಕಂಡು ಯುದ್ಧದ ಮದವೇರಿದ ದಾನವರು ಬಗೆಬಗೆಯ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು.

ನಾರಾಯಣಾಸ್ತ್ರಂ ಗ್ರಸನೋ ಗೃಹೀತ್ವಾ
ಚಕ್ರಂ ನಿಮಿಃ ಸ್ವಾಸ್ತ್ರವರಂ ಮುಮೋಚ ।
ಐಷೀಕಮಸ್ತ್ರಂ ಚ ಚಕಾರ ಜಂಭ
ಸ್ತತ್ಕಾಲದಂಡಾಸ್ತ್ರನಿವಾರಣಾಯ ॥೩೧॥
ಯಾವನ್ನ ಸಂಧಾನದಶಾಂ ಪ್ರಯಾಂತಿ
ದೈತ್ಯೇಶ್ವರಾಶ್ಚಾಸ್ತ್ರನಿವಾರಣಾಯ ।
ತಾವತ್ಕ್ಷಣೇನೈವ ಜಘಾನ ಕೋಟೀ
ರ್ದೈತ್ಯೇಶ್ವರಾಣಾಂ ಸಗಜಾಃ ಸಹಾಶ್ವಾಃ ॥೩೨॥
ಅನಂತರಂ ಶಾಂತಮಭೂತ್ತದಸ್ತ್ರಂ
ದೈತ್ಯಾಸ್ತ್ರಯೋಗೇನ ತು ಕಾಲದಂಡಂ ।
ಶಾಂತಂ ತದಾಲೋಕ್ಯ ಹರಿಃ ಸ್ವಶಸ್ತ್ರಂ
ಸ್ವವಿಕ್ರಮೋ ಮನ್ಯುಪರೀತಮೂರ್ತಿಃ ॥೩೩॥
ಜಗ್ರಾಹ ಚಕ್ರಂ ತಪನಾಯುತಾಭ
ಮುಗ್ರಾರಮಾತ್ಮಾನಮಿವ ದ್ವಿತೀಯಂ ।

---

೩೧. ಆ ಕಾಲದಂಡಾಸ್ತ್ರವನ್ನು ತಡೆಯುವುದಕ್ಕಾಗಿ ಗ್ರಸನನು ನಾರಾಯಣಾಸ್ತ್ರವನ್ನೂ, ನಿಮಿಯು ಉತ್ತಮವಾದ ಚಕ್ರಾಸ್ತ್ರವನ್ನೂ ಜಂಭನು ಐಷೀಕಾಸ್ತ್ರವನ್ನೂ ಬಿಟ್ಟರು.

೩೨. ಕಾಲದಂಡಾಸ್ತ್ರದ ನಿವಾರಣೆಗಾಗಿ ದೈತ್ಯೇಶ್ವರರು ತಮ್ಮ ತಮ್ಮ ಅಸ್ತ್ರಗಳನ್ನು ಹೂಡುವುದರೊಳಗಾಗಿಯೇ ವಿಷ್ಣುವು ಒಂದು ಕ್ಷಣಕಾಲದಲ್ಲಿ ಅವರ ಆನೆಗಳನ್ನೂ ಕುದುರೆಗಳನ್ನೂ ಕೋಟಿಗಟ್ಟಲೆಯಾಗಿ ಸಂಹರಿಸಿದನು.

೩೩. ಬಳಿಕ ದೈತ್ಯರು ಪ್ರಯೋಗಿಸಿದ ಅಸ್ತ್ರಗಳಿಂದ ವಿಷ್ಣುವಿನ ಕಾಲದಂಡಾಸ್ತ್ರವು ಶಾಂತವಾಯಿತು. ತನ್ನ ಅಸ್ತ್ರವು ನಿಸ್ತೇಜವಾದುದನ್ನು ನೋಡಿ ವಿಷ್ಣುವಿಗೆ ಬಹಳ ಕೋಪ ಬಂದಿತು.

೩೪. ಅವನು ಹತ್ತುಸಾವಿರ ಸೂರ್ಯರಷ್ಟು ತೇಜೋಯುಕ್ತವಾಗಿ ತೀಕ್ಷ್ಣವಾದ ಅರಗಳಿಂದ ಕೂಡಿ, ತನ್ನ ಬೇರೊಂದು ರೂಪವೋ ಎಂಬಂತಿರುವ ಚಕ್ರವನ್ನು

ಚಿಕ್ಷೇಪ ಸೇನಾಪತಯೇಽಭಿಸಂಧ್ಯ
ಕಂಠಸ್ಥಲಂ ವಜ್ರಕಠೋರಮುಗ್ರಂ ||೩೪||

ಚಕ್ರಂ ತದಾಕಾಶಗತಂ ವಿಲೋಕ್ಯ
ಸರ್ವಾತ್ಮನಾ ದೈತ್ಯವರಾಃ ಸ್ವವೀರ್ಯೈಃ ।
ನಾಶಕ್ನುವನ್ ವಾರಯಿತುಂ ಪ್ರಚಂಡಂ
ದೈವಂ ಯಥಾ ಕರ್ಮ ಮುಧಾ ಪ್ರಪನ್ನಂ ||೩೫||

ತಮಪ್ರತರ್ಕ್ಯಂ ಜನಯನ್ನಜಯ್ಯಂ
ಚಕ್ರಂ ಪಪಾತ ಗ್ರಸನಸ್ಯ ಕಂಠೇ ।
ದ್ವಿಧಾ ತು ಕೃತ್ವಾ ಗ್ರಸನಸ್ಯ ಕಂಠಂ
ತದ್ರಕ್ತಧಾರಾರುಣಘೋರನಾಮಿ ||
ಜಗಾಮ ಭೂಯೋಽಪಿ ಜನಾರ್ದನಸ್ಯ
ಪಾಣಿಂ ಪ್ರವೃದ್ಧಾನಲತುಲ್ಯದೀಪ್ತಿ ||೩೬||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದೇವಾಸುರ ಸಂಗ್ರಾಮೇ
ಗ್ರಸನವಧೋ ನಾಮೈಕ ಪಂಚಾಶದಧಿಕ ಶತತಮೋಽಧ್ಯಾಯಃ

---

ತೆಗೆದುಕೊಂಡನು. ವಜ್ರಾಯುಧದಂತೆ ಕಠೋರವಾಗಿಯೂ ಭಯಂಕರವಾಗಿಯೂ ಇರುವ ಅದನ್ನು ಹೂಡಿ ಸೇನಾಪತಿಯ ಕುತ್ತಿಗೆಗೆ ಗುರಿಯಿಟ್ಟು ಎಸೆದನು.

೩೫. ಆಕಾಶದಲ್ಲಿ ಆ ಚಕ್ರವು ಬರುತ್ತಿರಲು ದೈತ್ಯರು ಅದನ್ನು ತಡೆಯಲು ತಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿದರು. ಆದರೂ ದೈವಸಂಕಲ್ಪವನ್ನು ಪುರುಷ ಪ್ರಯತ್ನವು ಗೆಲ್ಲಲು ಅಶಕ್ತವಾಗುವಂತೆ ಅದನ್ನು ತಡೆದು ನಿಲ್ಲಿಸಲು ಅವರಿಂದಾಗಲಿಲ್ಲ.

೩೬. ಜಯಿಸಲಸಾಧ್ಯವೂ, ಊಹಾತೀತವೂ ಆದ ಆ ಚಕ್ರವು ಗ್ರಸನನ ಕುತ್ತಿಗೆಗೆ ಬಿದ್ದು ಅದನ್ನು ಎರಡು ತುಂಡಾಗಿ ಕತ್ತರಿಸಿತು. ಅದರ ತುದಿಪಟ್ಟಿಯು ಅವನ ರಕ್ತಧಾರೆಯಿಂದ ಕೆಂಪಾಯಿತು. ಬಳಿಕ ಅದು ಜ್ವಲಿಸುತ್ತಿರುವ ಅಗ್ನಿಯಂತೆ ತೇಜೋಯುಕ್ತವಾಗಿ ಪುನಃ ಜನಾರ್ದನನ ಕೈಸೇರಿತು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಗ್ರಸನನ ವಧವು ವರ್ಣಿತವಾಗಿದೆ.

ಕಾಲನೇಮಿಯು ಪರಾಜಿತನಾದುದನ್ನು ಕಂಡು ನಿಮಿ, ಜಂಭ, ಗ್ರಸನ, ಮಹಿಷ ಮುಂತಾದ ದೈತ್ಯಮುಖ್ಯರು ತಮ್ಮ ತಮ್ಮ ಬಲದೊಡನೆ ವಿಷ್ಣುವನ್ನು ಎದುರಿಸಿದರು. ಬಗೆಬಗೆಯ ಅಸ್ತ್ರಗಳು ಎರಡು ಕಡೆಯಿಂದಲೂ ಪ್ರಯೋಗಿಸಲ್ಪಟ್ಟುವು. ವಿಷ್ಣುವಿನ ರೌದ್ರಾಸ್ತ್ರವು ಗ್ರಸನನ ಬ್ರಹ್ಮಾಸ್ತ್ರದಿಂದ ನಿಸ್ತೇಜವಾಯಿತು. ಅದನ್ನು ನೋಡಿ ಕುಪಿತನಾಗಿ ಜನಾರ್ದನನು ಕಾಲದಂಡಾಸ್ತ್ರವನ್ನು ಬಿಟ್ಟನು. ದೈತ್ಯರ ನಾರಾಯಣಾದ್ಯಸ್ತ್ರಗಳಿಂದ ಅದೂ ಪರಾಜಿತವಾಯಿತು. ಕೊನೆಗೆ ವಿಷ್ಣುವು ಅತಿ ಕುಪಿತನಾಗಿ ಚಕ್ರವನ್ನು ಪ್ರಯೋಗಿಸಿ ಗ್ರಸನನ ಕಂಠವನ್ನು ಕತ್ತರಿಸಿ ಹಾಕಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದೇವಾಸುರ ಸಂಗ್ರಾಮದಲ್ಲಿ ಗ್ರಸನ ವಧೆಯೆಂಬ ನೂರೈವತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಿಪಂಚಾಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತಸ್ಮಿನ್ವಿನಿಹತೇ ದೈತ್ಯೇ ಗ್ರಸನೇ ಲೋಕನಾಯಕೇ ।
ನಿರ್ಮರ್ಯಾದಮಯುಧ್ಯಂತ ಹರಿಣಾ ಸಹ ದಾನವಾಃ ॥ ೧ ॥

ಪಟ್ಟಿಶೈರ್ಮುಸಲೈಃ ಪಾಶೈರ್ಗದಾಭಿಃ ಕುಣಪೈರಪಿ ।
ತೀಕ್ಷ್ಣಾನನೈಶ್ಚ ನಾರಾಚೈಃ ಚಕ್ರೈಃ ಶಕ್ತಿಭಿರೇವ ಚ ॥ ೨ ॥

ತಾನಸ್ತ್ರಾನ್ದಾನವೈರ್ಮುಕ್ತಾಂಶ್ಚಿಚ್ಛೇದ ತ್ರಯೋಽಧೀ ಜನಾರ್ದನಃ ।
ಏಕೈಕಂ ಶತಶಶ್ಚಕ್ರೇ ಬಾಣೈರಗ್ನಿಶಿಖೋಪಮೈಃ ॥ ೩ ॥

ತತಃ ಕ್ಷೀಣಾಯುಧಪ್ರಾಯಾ ದಾನವಾ ಭ್ರಾಂತಚೇತಸಃ ।
ಅಸ್ತ್ರಾಣ್ಯಾದಾತುಮಭವನ್ನಸಮರ್ಥಾ ಯದಾ ರಣೇ ॥ ೪ ॥

---

೧. ಸೂತಪೌರಾಣಿಕನು ಹೇಳಿದನು.—ಲೋಕನಾಯಕನೂ ದೈತ್ಯ ಮುಖ್ಯನೂ ಆದ ಆ ಗ್ರಸನನು ಹತನಾಗಲು ದಾನವರು ವಿಷ್ಣುವಿನೊಡನೆ ಶಕ್ತಿ ಮೀರಿ ಹೋರಾಡಿದರು.

೨. ಅವರು ಪಟ್ಟಿಶ, ಮುಸಲ, ಪಾಶ, ಗದೆ, ಕುಣಪ, ಮೊದಲಾದ ಆಯುಧಗಳಿಂದಲೂ ಮೊನೆಯಾದ ಬಾಣಗಳಿಂದಲೂ ಯುದ್ಧಮಾಡಿದರು.

೩. ಅತ್ಯಾಶ್ಚರ್ಯಕರವಾಗಿ ಯುದ್ಧಮಾಡುವ ವಿಷ್ಣುವು ದೈತ್ಯರು ಬಿಟ್ಟ ಆ ಅಸ್ತ್ರಗಳಲ್ಲೊಂದೊಂದನ್ನೂ ಅಗ್ನಿಜ್ವಾಲೆಗೆ ಸದೃಶವಾದ ಬಾಣಗಳಿಂದ ನೂರು ನೂರು ತುಂಡುಗಳಾಗಿ ಮಾಡಿದನು.

೪. ಬಳಿಕ ದಾನವರ ಆಯುಧಗಳೆಲ್ಲವೂ ಮುಗಿದು ಹೋದುವು. ಅವರಿಗೆ ಮುಂದೇನು ಮಾಡಬೇಕೆಂದು ತೋರಲಿಲ್ಲ ಯುದ್ಧದಲ್ಲಿ ಬೇರೆ ಅಸ್ತ್ರಗಳನ್ನು ತೆಗೆದು ಕೊಳ್ಳುವುದಕ್ಕೆ ಅವರಿಗೆ ಸಾಮರ್ಥ್ಯವಿಲ್ಲದೆ ಹೋಯಿತು.

ತದಾ ವ್ಯತ್ತೈರ್ಗಜೈರಶ್ವೈರ್ಜನಾರ್ದನಮಯೋಧಯನ್ ।
ಸಮಂತಾತ್ಕೋಟಿಶೋ ದೈತ್ಯಾಃ ಸರ್ವತಃ ಪ್ರತ್ಯಯೋಧಯನ್ ॥ ೫ ॥

ಬಹು ಕೃತ್ವಾ ವಪುರ್ವಿಷ್ಣುಃ ಕಿಂಬಿಚ್ಛಾಂತಭುಜೋಽಭವತ್ ।
ಉವಾಚ ಚ ಗರುತ್ಮಂತಂ ತಸ್ಮಿನ್ ಸುತುಮುಲೇ ರಣೇ ॥ ೬ ॥

ಗರುತ್ಮನ್ ಕಚ್ಚಿದಶ್ರಾಂತಸ್ತ್ವಮಸ್ಮಿನ್ನಪಿ ಸಾಂಪ್ರತಂ ।
ಯದ್ಯಶ್ರಾಂತೋಽಸಿ ತದ್ಯಾಹಿ ಮಥನಸ್ಯ ರಥಂ ಪ್ರತಿ ॥ ೭ ॥

ಶ್ರಾಂತೋಽಸ್ಯಥ ಮುಹೂರ್ತ್ತಂ ತ್ವಂ ರಣಾದಪಸೃತೋ ಭವ ।
ಇತ್ಯುಕ್ತೋ ಗರುಡಸ್ತೇನ ವಿಷ್ಣುನಾ ಪ್ರಭವಿಷ್ಣುನಾ ॥ ೮ ॥

ಆಸಸಾದ ರಣೇ ದೈತ್ಯಂ ಮಥನಂ ಘೋರದರ್ಶನಂ ।
ದೈತ್ಯಸ್ತ್ವಭಿಮುಖಂ ದೃಷ್ಟ್ವಾ ಶಂಖಚಕ್ರಗದಾಧರಂ ॥ ೯ ॥

---

೫. ಆಗ ದೈತ್ಯರು ಸತ್ತುಬಿದ್ದಿದ್ದ ಆನೆಗಳನ್ನೂ ಕುದುರೆಗಳನ್ನೂ ವಿಷ್ಣುವಿನ ಮೇಲೆ ಎಸೆದು ಕಾಳಗವನ್ನು ಮಾಡಿದರು. ಅವರು ಕೋಟಿಲೆಕ್ಕದಲ್ಲಿ ಎಲ್ಲ ಕಡೆಯೂ ತೀವ್ರವಾಗಿ ಪ್ರತಿಯುದ್ಧವನ್ನು ನಡೆಸಿದರು.

೬. ಆ ತುಮುಲ ಯುದ್ಧದಲ್ಲಿ ವಿಷ್ಣುವು ಹಲವು ರೂಪವನ್ನು ತಾಳಿ ತನ್ನ ತೋಳುಗಳಿಗೆ ಸ್ವಲ್ಪ ವಿಶ್ರಾಂತಿಯಿತ್ತನು. ಮತ್ತೆ ತನ್ನ ವಾಹನನಾದ ಗರುತ್ಮಂತನಿಗೆ ಇಂತೆಂದನು.

೭. "ಓ ಗರುತ್ಮಂತಾ, ನೀನೇನೂ ಈಗ ಯುದ್ಧದಿಂದ ಆಯಾಸ ಗೊಂಡಿಲ್ಲವಷ್ಟೆ! ಶ್ರಮವಿಲ್ಲದಿದ್ದರೆ ಮಥನನ ತೇರಿನ ಕಡೆಗೆ ನಡೆ.

೮. ಹಾಗಲ್ಲದೆ ಬಳಲಿದ್ದರೆ ಸ್ವಲ್ಪಹೊತ್ತು ಯುದ್ಧವನ್ನು ಬಿಟ್ಟು ದೂರ ನಡೆ." ಸಾಮರ್ಥ್ಯಶಾಲಿಯಾದ ವಿಷ್ಣುವು ಹೀಗೆಂದು ಹೇಳಲು ಗರುಡನು ಭಯಂಕರ ದರ್ಶನನಾದ ಮಥನನ್ನೆದುರಿಸಲು ಹೋದನು.

೯. ದೈತ್ಯನಾದರೋ, ಶಂಖಚಕ್ರಗದಾಧರನಾದ ವಿಷ್ಣುವು ಎದುರಿಗೆ ಬಂದು ದನ್ನು ನೋಡಿ ತೀಕ್ಷ್ಣವಾದ ಬಾಣದೊಡಗೂಡಿದ ಭಿಂದಿಪಾಲವೆಂಬ ಆಯುಧ ದಿಂದ ಅವನ ಎದೆಯ ಮೇಲೆ ಹೊಡೆದನು.

ಜಘಾನ ಭಿಂದಿಪಾಲೇನ ಶಿತಬಾಣೇನ ವಕ್ಷಸಿ ।
ತತ್ಪ್ರಹಾರಮಚಿಂತ್ಯೈವ ವಿಷ್ಣುಸ್ತಸ್ಮಿನ್ ಮಹಾಹವೇ ॥೧೦॥

ಜಘಾನ ಪಂಚಭಿರ್ಬಾಣೈರ್ಮಾರ್ಜಿತೈಶ್ಚ ಶಿಲಾಶಿತೈಃ ।
ಪುನರ್ದಶಭಿರಾಕೃಷ್ಟೈಸ್ತಂ ತತಾಡ ಸ್ತನಾಂತರೇ ॥೧೧॥

ವಿದ್ಧೋ ಮರ್ಮಸು ದೈತ್ಯೇಂದ್ರೋ ಹರಿಬಾಣೈರಕಂಪತ ।
ಸ ಮುಹೂರ್ತಂ ಸಮಾಶ್ವಾಸ್ಯ ಜಗ್ರಾಹ ಪರಿಘಂ ತದಾ ॥೧೨॥

ಜಘ್ನೇ ಜನಾರ್ದನಂ ಚಾಪಿ ಪರಿಘೇಣಾಗ್ನಿವರ್ಚಸಾ ।
ವಿಷ್ಣುಸ್ತೇನ ಪ್ರಹಾರೇಣ ಕಿಂಚಿದಾಘೂರ್ಣಿತೋಽಭವತ್ ॥೧೩॥

ತತಃ ಕ್ರೋಧವಿವೃತ್ತಾಕ್ಷೋ ಗದಾಂ ಜಗ್ರಾಹ ಮಾಧವಃ ।
ಮಥನಂ ಸರಥಂ ರೋಷಾನ್ನಿಷ್ಪಿಪೇಷಾಥ ರೋಷತಃ ॥೧೪॥

---

೧೦-೧೧. ಆ ಘೋರಯುದ್ಧದಲ್ಲಿ ವಿಷ್ಣುವು ಆ ಪ್ರಹಾರವನ್ನು ಲೆಕ್ಕಿಸದೆ ಸಾಣೆಹಿಡಿದು ಮೊನೆಗಲ್ಲಿನಂತೆ ಹರಿತಮಾಡಿದ ಐದು ಬಾಣಗಳಿಂದ ಮಥನನನ್ನು ಪ್ರಹರಿಸಿದನು. ಪುನಃ ಹತ್ತು ಬಾಣಗಳನ್ನು ಕಿವಿಯವರೆಗೆ ಎಳೆದು ಅವನ ಎದೆಗೆ ಗುರಿಯಿಟ್ಟು ಹೊಡೆದನು.

೧೨. ವಿಷ್ಣುವಿನ ಬಾಣಗಳು ಮರ್ಮಸ್ಥಾನಗಳಿಗೆ ನಾಟಿಕೊಳ್ಳಲು ದೈತ್ಯನು ನಡುಗಿದನು. ಆದರೆ ಸ್ವಲ್ಪಕಾಲ ಚೇತರಿಸಿಕೊಂಡು ಪರಿಘಾಯುಧವನ್ನೆತ್ತಿ ಕೊಂಡನು.

೧೩. ಅಗ್ನಿಯಂತೆ ಜ್ವಲಿಸುವ ಆ ಪರಿಘದಿಂದ ವಿಷ್ಣುವನ್ನು ಹೊಡೆದನು. ಅದರಿಂದ ಅವನ ತಲೆ ಸ್ವಲ್ಪ ತಿರುಗಿತು.

೧೪. ಬಳಿಕ ಲಕ್ಷ್ಮೀಲೋಲನಾದ ವಿಷ್ಣು ಕೋಪದಿಂದ ಕಣ್ಣುಗಳು ತಿರುಗುತ್ತಿರಲು, ಗದೆಯನ್ನೆತ್ತಿಕೊಂಡು ರಥಸಹಿತವಾಗಿ ಮಥನನನ್ನು ಬಲವಾಗಿ ಜಜ್ಜಿದನು.

ಸ ಪಪಾತಾಥ ದೈತ್ಯೇಂದ್ರಃ ಕ್ಷಯಕಾಲೇಽಚಲೋ ಯಥಾ ।
ತಸ್ಮಿನ್ ನಿಪತಿತೇ ಭೂಮೌ ದಾನವೇ ವೀರ್ಯಶಾಲಿನಿ ॥೧೫॥

ಅವಸಾದಂ ಯಯುರ್ದೈತ್ಯಾಃ ಕರ್ದಮೇ ಕರಿಣೋ ಯಥಾ ।
ತತಸ್ತೇಷು ವಿಪನ್ನೇಷು ದಾನವೇಷ್ವತಿಮಾನಿಷು ॥೧೬॥

ಪ್ರಕೋಪಾದ್ರಕ್ತನಯನೋ ಮಹಿಷೋ ದಾನವೇಶ್ವರಃ ।
ಪ್ರತ್ಯುದ್ಯಯೌ ಹರಿಂ ರೌದ್ರಃ ಸ್ವಬಾಹುಬಲಮಾಸ್ಥಿತಃ ॥೧೭॥

ತೀಕ್ಷ್ಣಧಾರೇಣ ಶೂಲೇನ ಮಹಿಷೋ ಹರಿಮರ್ದಯತ್ ।
ಶಕ್ತ್ಯಾ ಚ ಗರುಡಂ ವೀರೋ ಮಹಿಷೋಽಭ್ಯಹನದ್ಧೃದಿ ॥೧೮॥

ತತೋ ವ್ಯಾವೃತ್ಯ ವದನಂ ಮಹಾಚಲಗುಹಾನಿಭಂ ।
ಗ್ರಸ್ತುಮೈಚ್ಛದ್ರಣೇ ದೈತ್ಯಃ ಸಗರುತ್ಮಂತಮಚ್ಯುತಂ ॥೧೯॥

---

೧೫. ಪ್ರಳಯಕಾಲದಲ್ಲಿನ ಬೆಟ್ಟದಂತೆ ದೈತ್ಯೇಂದ್ರನಾದ ಆ ಮಥನನು ಬಿದ್ದನು. ಮಹಾವೀರನಾದ ಆತನು ನೆಲಕ್ಕುರುಳಲು ಕೆಸರಿನಲ್ಲಿ ಸಿಕ್ಕಿಕೊಂಡ ಆನೆಗಳಂತೆ ದೈತ್ಯರು ನಷ್ಟರಾದರು.

೧೬-೧೭. ಆ ದಾನವರು ಹತರಾದುದನ್ನು ಕಂಡು ಅವರ ಅಧಿಪತಿಯಾದ ಮಹಿಷನು ಕೋಪದಿಂದ ಕಣ್ಣು ಕೆಂಪಗಿರಲು, ತನ್ನ ಬಾಹುಬಲವನ್ನು ಮುಂದಿಟ್ಟು ಕೊಂಡು ಭಯಂಕರ ರೂಪದಿಂದ ವಿಷ್ಣುವಿನೆದುರಿಗೆ ಬಂದನು.

೧೮. ವೀರನಾದ ಆ ಮಹಿಷನು ಅಲಗು ಹರಿತವಾಗಿದ್ದ ಶೂಲದಿಂದ ವಿಷ್ಣುವನ್ನೂ, ಶಕ್ತ್ಯಾಯುಧದಿಂದ ಗರುಡನನ್ನೂ ಪ್ರಹರಿಸಿದನು.

೧೯. ದೊಡ್ಡ ಬೆಟ್ಟದ ಗುಹೆಯಂತಿದ್ದ ತನ್ನ ಬಾಯನ್ನು ತೆರೆದುಕೊಂಡು ವಿಷ್ಣುವನ್ನೂ ಗರುಡನನ್ನೂ ನುಂಗಲು ಆ ದೈತ್ಯನು ಬಯಸಿದನು.

ಅಥಾಚ್ಯುತೋಽಪಿ ವಿಜ್ಞಾಯ ದಾನವಸ್ಯ ಚಿಕೀರ್ಷಿತಂ ।
ವದನಂ ಪೂರಯಾಮಾಸ ದಿವ್ಯೈರಸ್ತ್ರೈರ್ಮಹಾಬಲಃ ॥೨೦॥

ಮಹಿಷಸ್ಯಾಥ ಸಸೃಜೇ ಬಾಣೌಘಂ ಗರುಡಧ್ವಜಃ ।
ಪಿಧಾಯ ವದನಂ ದಿವ್ಯೈರ್ದಿವ್ಯಾಸ್ತ್ರಪರಿಮಂತ್ರಿತೈಃ ॥೨೧॥

ಸ ತೈರ್ಬಾಣೈರಭಿಹತೋ ಮಹಿಷೋಽಚಲಸನ್ನಿಭಃ ।
ಪರಿವರ್ತಿತಕಾಯೋಽಧಃ ಪಪಾತ ನ ಮಮಾರ ಚ ॥೨೨॥

ಮಹಿಷಂ ಪತಿತಂ ದೃಷ್ಟ್ವಾ ಭೂಮೌ ಪ್ರೋವಾಚ ಕೇಶವಃ ।
ಮಹಿಷಾಸುರ ಮತ್ತಸ್ತ್ವಂ ವಧಂ ನಾಸ್ತ್ರೈರಿಹಾರ್ಹಸಿ ॥೨೩॥

ಯೋಷಿದ್ವಧ್ಯಃ ಪುರೋಕ್ತೋಽಸಿ ಸಾಕ್ಷಾತ್ಕಮಲಯೋನಿನಾ ।
ಉತ್ತಿಷ್ಠ ಜೀವಿತಂ ರಕ್ಷ ಗಚ್ಛಾಶು ಸ್ಮತ್ಸಂಗರಾದ್ದ್ರುತಂ ॥೨೪॥

---

೨೦. ಮಥನನ ಆಲೋಚನೆಯು ವಿಷ್ಣುವಿಗೆ ಗೊತ್ತಾಯಿತು. ಮಹಾಬಲಿಷ್ಠನಾದ ಆತನು ಅವನ ಬಾಯಿಯನ್ನು ದಿವ್ಯಾಸ್ತ್ರಗಳಿಂದ ತುಂಬಿಸಿದನು.

೨೧. ದಿವ್ಯಾಸ್ತ್ರಗಳನ್ನಭಿಮಂತ್ರಿಸಿ ಬಾಣಗಳಿಂದ ಮಹಿಷನ ಬಾಯನ್ನು ಮುಚ್ಚಿದ ಬಳಿಕ ವಿಷ್ಣುವು ಅವನ ಮೇಲೆ ಬಾಣಗಳ ಪರಂಪರೆಯನ್ನು ಬಿಟ್ಟನು.

೨೨. ಆ ಬಾಣಗಳ ಪೆಟ್ಟಿಗೆ ತುತ್ತಾಗಿ ಪರ್ವತ ಸದೃಶನಾದ ಮಹಿಷನು ತಲೆಕೆಳಕಾಗಿ ಬಿದ್ದನು. ಆದರೆ ಸಾಯಲಿಲ್ಲ.

೨೩. ಮಹಿಷನು ನೆಲದಲ್ಲಿ ಬಿದ್ದುದನ್ನು ಕಂಡು ವಿಷ್ಣುವು ಇಂತೆಂದನು. ಎಲೈ ಮಹಿಷಾಸುರನೇ, ನೀನು ಮತ್ತನಾಗಿರುವೆ. ನನ್ನ ಅಸ್ತ್ರಗಳಿಂದ ನೀನು ಈಗ ಸಾಯಕೂಡದು.

೨೪. ನೀನು ಹೆಂಗಸಿನ ಕೈಯಲ್ಲಿ ಸಾಯಬೇಕೆಂದು ಬ್ರಹ್ಮನೇ ಹಿಂದೆ ಹೇಳಿರುವನು. ಆದುದರಿಂದ ಏಳು. ಪ್ರಾಣವನ್ನುಳಿಸಿಕೋ. ಈ ಯುದ್ಧವನ್ನು ಬಿಟ್ಟು ಬೇಗ ಹೋಗು."

ತಸ್ಮಿನ್ ಪರಾಙ್ಮುಖೇ ದೈತ್ಯೇ ಮಹಿಷೇ ಶುಂಭದಾನವಃ ।
ಸಂದಷ್ಟೌಷ್ಠಪುಟಃ ಕೋಪಾದ್ಭ್ರುಕುಟೀಕುಟಿಲಾನನಃ ॥೨೫॥

ನಿರ್ಮಥ್ಯ ಪಾಣಿನಾ ಪಾಣಿಂ ಧನುರಾದಾಯ ಭೈರವಂ ।
ಸಜ್ಯಂ ಚಕಾರ ಸ ಧನುಃ ಶರಾಂಶ್ಚಾಶೀವಿಷೋಪಮಾನ್ ॥೨೬॥

ಸ ಚಿತ್ರಯೋಧೀ ದೃಢಮುಷ್ಟಿಪಾತ
ಸ್ತತಸ್ತು ವಿಷ್ಣುಂ ಗರುಡಂ ಚ ದೈತ್ಯಃ ।
ಬಾಣೈರ್ಜ್ವಲದ್ವಹ್ನಿಶಿಖಾನಿಕಾಶೈಃ
ಕ್ಷಿಪ್ತೈರಸಂಖ್ಯೈಃ ಪರಿಘಾತಹೀನೈಃ ॥೨೭॥

ವಿಷ್ಣುಶ್ಚ ದೈತ್ಯೇಂದ್ರಶರಾಹತೋಽಪಿ
ಮುಶುಂಡಿಮಾದಾಯ ಕೃತಾಂತತುಲ್ಯಾಂ ।
ತಯಾ ಮುಶುಂಡ್ಯಾ ಚ ಪಿಪೇಷ ಮೇಷಂ
ಶುಂಭಸ್ಯ ಪತ್ರಂ ಧರಣೀಧರಾಭಂ ॥೨೮॥

---

೨೫-೨೬. ಆ ಮಹಿಷಾಸುರನು ಸೋತುಹೋಗಲು ಶುಂಭನೆಂಬ ದೈತ್ಯನು ತುಟಿಯನ್ನು ಕಚ್ಚಿಕೊಂಡು, ಕೋಪದಿಂದ ಹುಬ್ಬುಗಳ ಗಂಟು ಮುಖದಲ್ಲಿ ಕಾಣುತ್ತಿರಲು, ಕೈ ಕೈ ಹೊಸೆಯುತ್ತ, ಭಯಂಕರವಾದ ಬಿಲ್ಲನ್ನೆತ್ತಿ ಹೆದೆಯೇರಿಸಿದನು. ಸರ್ಪಗಳಂತಿದ್ದ ಬಾಣಗಳನ್ನೂ ತೆಗೆದುಕೊಂಡನು.

೨೭. ಆಶ್ಚರ್ಯವಾಗುವಂತೆ ಯುದ್ಧಮಾಡುವ ಆ ಶುಂಭನು ಮುಷ್ಟಿಯನ್ನು ಬಲವಾಗಿ ಬಿಗಿದು, ಮುಂದೆ ನುಗ್ಗಿ, ಜ್ವಲಿಸುತ್ತಿರುವ ಬೆಂಕಿಯ ಉರಿಯಂತಿರುವ ಬಾಣಗಳನ್ನು ಅಸಂಖ್ಯಾತವಾಗಿ ವಿಷ್ಣುಗರುಡರಿಬ್ಬರ ಮೇಲೆಯೂ ಬಿಟ್ಟನು. ಆ ಬಾಣಗಳು ಪ್ರತಿಭಟನೆಯನ್ನೇ ಕಂಡಿರಲಿಲ್ಲ.

೨೮. ದೈತ್ಯೇಂದ್ರನ ಬಾಣಗಳ ಪೆಟ್ಟನ್ನು ತಿಂದರೂ ವಿಷ್ಣುವು ಯಮದಂಡ ಸದೃಶವಾದ ಮುಶುಂಡಿಯನ್ನೆತ್ತಿಕೊಂಡು, ಆದರಿಂದ ಶುಂಭನ ವಾಹನವಾದ, ಬೆಟ್ಟದಂತಿದ್ದ ಆಡನ್ನು ಜಜ್ಜಿಹಾಕಿದನು.

ತಸ್ಮಾದವಪ್ಲುತ್ಯ ಹತಾಚ್ಚ ಮೇಷಾ
ದ್ಭೂಮೌ ಪದಾತಿಃ ಸ ತು ದೈತ್ಯನಾಥಃ ।
ತತೋ ಮಹೀಸ್ಥಸ್ಯ ಹರಿಃ ಶರೌಘಾ
ಮುಮೋಚ ಕಾಲಾನಲತುಲ್ಯಭಾಸಃ ॥೨೯॥

ಶರೈಸ್ತ್ರಿಭಿಸ್ತಸ್ಯ ಭುಜಂ ಬಿಭೇದ
ಷಡ್ಭಿಶ್ಚ ಶೀರ್ಷಂ ದಶಭಿಶ್ಚ ಕೇತುಂ ।
ವಿಷ್ಣುರ್ವಿಕೃಷ್ಟೈಃ ಶ್ರವಣಾವಸಾನಂ
ದೈತ್ಯಸ್ಯ ವಿವ್ಯಾಧ ವಿವೃತ್ತನೇತ್ರಃ ॥೩೦॥

ಸ ತೇನ ವಿದ್ಧೋ ವ್ಯಥಿತೋ ಬಭೂವ
ದೈತ್ಯೇಶ್ವರೋ ವಿಸ್ರುತಶೋಣಿತೌಘಃ ।
ತತೋಽಸ್ಯ ಕಿಂಚಿಚ್ಚಲಿತಸ್ಯ ಧೈರ್ಯಾ
ದುವಾಚ ಶಂಖಾಂಬುಜಶಾರ್ಙ್ಗಪಾಣಿಃ ॥೩೧॥

---

೨೯. ಆ ಆಡು ಸತ್ತುಹೋಗಲು ದೈತ್ಯಪ್ರವರನಾದ ಶುಂಭನು ಅದರಿಂದಿಳಿದು ನೆಲದ ಮೇಲೆ ನಿಂತನು. ಬಳಿಕ ವಿಷ್ಣುವು ಪ್ರಳಯಾಗ್ನಿಯಂತೆ ತೇಜೋಯುಕ್ತಗಳಾದ ಬಾಣರಾಶಿಗಳನ್ನು ಅವನ ಮೇಲೆ ಬಿಟ್ಟನು.

೩೦. ಕಿವಿಯವರೆಗೂ ಎಳೆದು ಬಿಟ್ಟ ಮೂರು ಬಾಣಗಳಿಂದ ಅವನ ಭುಜವನ್ನೂ, ಆರರಿಂದ ತಲೆಯನ್ನೂ, ಹತ್ತರಿಂದ ಧ್ವಜವನ್ನೂ, ಗುರಿಯಿಟ್ಟು ಭೇದಿಸಿ ವಿಷ್ಣುವು ಕೋಪದಿಂದ ಕಣ್ಣುತಿರುಗುತ್ತಿರಲು, ದೈತ್ಯನ ತುದಿಗಿವಿಯನ್ನು ಇರಿದನು.

೩೧. ಬಾಣಗಳು ಬಂದು ಇರಿಯಲು ದೈತ್ಯೇಶ್ವರನ ದೇಹದಿಂದ ರಕ್ತವು ಹರಿಯತೊಡಗಿತು. ಅವನಿಗೆ ವ್ಯಥೆಯಾಯಿತು. ಧೈರ್ಯವು ಸ್ವಲ್ಪ ಕುಗ್ಗಿತು. ಬಳಿಕ ಶಂಖ, ಪದ್ಮ ಮತ್ತು ಶಾರ್ಙ್ಗಗಳನ್ನು ಧರಿಸಿದ್ದ ವಿಷ್ಣುವು ಅವನಿಗಿಂತೆಂದನು.

ಕುಮಾರಿವಧ್ಯೋಽಸಿ ರಣಂ ವಿಮುಂಚ
ಶುಂಭಾಸುರ ಸ್ವಲ್ಪತರೈರಹೋಭಿಃ ।
ವಧಂ ನ ಮತ್ತೋಽರ್ಹಸಿ ಚೇಹ ಮೂಢ
ವೃಥೈವ ಕಿಂ ಯುದ್ಧಸಮುತ್ಸುಕೋಽಸಿ ॥೩೨॥

ಜಂಭೋ ವಚೋ ವಿಷ್ಣುಮುಖಾನ್ನಿಶಮ್ಯ ।
ನಿಮಿಶ್ಚ ನಿಷ್ಪೇಷ್ಟುಮಿಯೇಷ ವಿಷ್ಣುಂ ।
ಗದಾಮಘೋದ್ಯಮ್ಯ ನಿಮಿಃ ಪ್ರಚಂಡಾಂ
ಜಘಾನ ಗಾಢಾಂ ಗರುಡಂ ಶಿರಸ್ತಃ ॥೩೩॥

ಶುಂಭೋಽಪಿ ವಿಷ್ಣುಂ ಪರಿಘೇಣ ಮೂರ್ಧ್ನಿ
ಪ್ರಮೃಷ್ಟರತ್ನೌಘವಿಚಿತ್ರಭಾಸಾ ।
ತೌ ದಾನವಾಭ್ಯಾಂ ವಿಷಮೈಃ ಪ್ರಹಾರೈ
ರ್ನಿಪೇತುರುರ್ವ್ಯಾಂ ಘನಪಾವಕಾಭೌ ॥೩೪॥

---

೩೨. "ಎಲೈ ಶುಂಭಾಸುರನೇ, ನೀನು ಇನ್ನು ಕೆಲವು ದಿನಗಳಲ್ಲೇ ಒಬ್ಬ ಕುಮಾರಿಯಿಂದ ಹತನಾಗುವೆ. ನನ್ನಿಂದ ನಿನಗೆ ಮರಣವಿಲ್ಲ. ಮೂಢಾ! ಏಕೆ ವ್ಯರ್ಥವಾಗಿ ಯುದ್ಧಾಸಕ್ತನಾಗಿರುವೆ?"

೩೩. ವಿಷ್ಣುವಿನ ಮಾತನ್ನು ಕೇಳಿ ಜಂಭನೂ ನಿಮಿಯೂ ಅವನನ್ನು ಕುಟ್ಟಿ ಪುಡಿಮಾಡಬೇಕೆಂದು ಬಯಸಿದರು. ನಿಮಿಯು ಪ್ರಚಂಡವಾದ ಗದೆಯನ್ನೆತ್ತಿ ಗರುಡನಿಗೆ ತಲೆಯ ಮೇಲೆ ಹೊಡೆದನು.

೩೪. ಶುಂಭನೂ ಸಹ ಸಾಣೆಗೆ ಕೊಟ್ಟ ರತ್ನಗಳಂತೆ ವಿಚಿತ್ರವಾಗಿ ಹೊಳೆಯುವ ಪರಿಘದಿಂದ ವಿಷ್ಣುವಿನ ತಲೆಯ ಮೇಲೆ ಕುಕ್ಕಿದನು. ಮೋಡದಂತೆಯೂ ಅಗ್ನಿಯಂತೆಯೂ ಪ್ರಕಾಶಿಸುವ ವಿಷ್ಣು ಗರುಡರಿಬ್ಬರೂ ಆ ದಾನವರ ತೀಕ್ಷ್ಣ ಪ್ರಹಾರಗಳಿಂದ ನೆಲದ ಮೇಲೆ ಬಿದ್ದರು.

ತತ್ಕರ್ಮ ದೃಷ್ಟ್ವಾ ದಿತಿಜಾಸ್ತು ಸರ್ವೇ
ಜಗರ್ಜುರುಚ್ಚೈಃ ಕೃತಸಿಂಹನಾದಾಃ ।
ಧನೂಂಷಿ ಚಾಽಽಸ್ಫೋಟ್ಯ ಖುರಾಭಿಘಾತೈ
ರ್ವ್ಯದಾರಯನ್ ಭೂಮಿಮಪಿ ಪ್ರಚಂಡಾಃ ।
ವಾಸಾಂಸಿ ಚೈವಾದುಧುವುಃ ಪರೇ ತು
ದಧ್ಮುಶ್ಚ ಶಂಖಾನಕಗೋಮುಖೌಘಾನ್ ॥೩೫॥

ಅಥ ಸಂಜ್ಞಾಮವಾಪ್ಯಾಽಽಶು ಗರುಡೋಽಪಿ ಸಕೇಶವಃ ।
ಪರಾಙ್ಮುಖೋ ರಣಾತ್ತಸ್ಮಾತ್ಪಲಾಯತ ಮಹಾಜವಃ ॥೩೬॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದೇವಾಸುರ ಸಂಗ್ರಾಮೇ
ಮಥನಾದಿಸಂಗ್ರಾಮೋ ನಾಮ ದ್ವಿಪಂಚಾಶದಧಿಕಶತತಮೋಽಧ್ಯಾಯಃ

---

೩೫. ಆ ಸಾಹಸಕಾರ್ಯವನ್ನು ನೋಡಿ ಪ್ರಚಂಡರಾದ ದೈತ್ಯರೆಲ್ಲರೂ ಸಿಂಹನಾದ ಮಾಡಿ ಗಟ್ಟಿಯಾಗಿ ಅಬ್ಬರಿಸಿದರು. ಬಿಲ್ಲುಗಳನ್ನು ಮಿಡಿದರು. ನೆಲವನ್ನು ಒದೆದು ಸೀಳಿದರು. ಬಟ್ಟೆಗಳನ್ನು ಬಿಸಾಡಿದರು. ಇನ್ನು ಕೆಲವರು ಶಂಖ, ತಮಟೆ, ಗೋಮುಖ ಮುಂತಾದ ವಾದ್ಯಗಳನ್ನು ಬಾರಿಸಿದರು.

೩೬. ಬಳಿಕ ಗರುಡನೂ ವಿಷ್ಣುವೂ ಬೇಗನೆ ಮೂರ್ಛೆ ತಿಳಿದೆಚ್ಚೆತ್ತು ಬಹು ವೇಗದಿಂದ ಯುದ್ಧವನ್ನು ತೊರೆದು ಪಲಾಯನಮಾಡಿದರು.

## ಅಧ್ಯಾಯದ ಸಾರಾಂಶ

ಮಥನ, ಮಹಿಷ ಮುಂತಾದ ದೈತ್ಯರ ಯುದ್ಧ ಕೌಶಲವನ್ನು ಈ ಅಧ್ಯಾಯದಲ್ಲಿ ಹೇಳಿದೆ.

ಗ್ರಸನನ ಮರಣಾನಂತರ ಉಳಿದ ದೈತ್ಯರು ವಿಷ್ಣುವಿನೊಡನೆ ಬಹು ಘೋರವಾಗಿ ಕಾದಿದರು. ಮಥನನು ಖಡಾಖಡಿಯಾಗಿ ಹೋರಾಡಿ ಮೃತನಾದನು. ಮಹಿಷ, ಶುಂಭ ಇವರಿಬ್ಬರೂ ಒಬ್ಬೊಬ್ಬರಾಗಿ ಬಂದು ಕಾಳಗವನ್ನು ಕೊಟ್ಟರು. ಹೆಂಗಸಿನಿಂದಲೂ, ಹುಡುಗಿಯಿಂದಲೂ ಅವರಿಗೆ ವಧವಾಗಬೇಕೆಂಬುದು ಬ್ರಹ್ಮನ ವರವೆಂದೂ, ತನ್ನಿಂದ ಅವರಿಗೆ ಮರಣವೊದಗದೆಂದೂ ವಿಷ್ಣುವು ಹೇಳಿದನು. ಆದರೂ ಜಂಭ, ಶುಂಭ ಮುಂತಾದವರು ಬಿಡದೆ ಮತ್ತೆ ಧೈರ್ಯದಿಂದ ಪ್ರತಿಭಟಿಸಿದರು. ಅವರ ಶಸ್ತ್ರಪ್ರಹಾರಗಳಿಂದ ವಿಷ್ಣುಗರುಡರು ನಿಸ್ಸಂಜ್ಞರಾಗಿ ಬಿದ್ದರು. ದೈತ್ಯರ ಸಂತೋಷಕ್ಕೆ ಪಾರವೇ ಇರಲಿಲ್ಲ. ಸ್ವಲ್ಪ ಹೊತ್ತಿನೊಳಗಾಗಿ ಗರುತ್ಮಂತನೂ ಕೇಶವನೂ ಮೂರ್ಛೆಯಿಂದೆದ್ದು ಯುದ್ಧವನ್ನು ಬಿಟ್ಟು ಓಡಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದೇವಾಸುರ ಸಂಗ್ರಾಮದಲ್ಲಿ ಮಥನಾದಿ ಸಂಗ್ರಾಮವೆಂಬ ನೂರೈವತ್ತೆರಡನೆಯ ಅಧ್ಯಾಯವು ಮುಗಿದುದು.



## ಅಥ ತ್ರಿಪಂಚಾಶದಧಿಕಶತತಮೋಽಧ್ಯಾಯಃ

॥ ಸೂತ ಉವಾಚ ॥

ತಮಾಲೋಕ್ಯ ಪಲಾಯಂತಂ ವಿಭ್ರಷ್ಟಧ್ವಜಕಾರ್ಮುಕಂ ।
ಹರಿಂ ದೇವಃ ಸಹಸ್ರಾಕ್ಷೋ ಮೇನೇ ಭಗ್ನಂ ದುರಾಹವೇ ॥ ೧ ॥

ದೈತ್ಯಾಂಶ್ಚ ಮುದಿತಾನ್ ದೃಷ್ಟ್ವಾ ಕರ್ತವ್ಯಂ ನಾಧ್ಯಗಚ್ಛತ ।
ಅಥಾಯಾನ್ನಿಕಟೇ ವಿಷ್ಣೋಃ ಸುರೇಶಃ ಪಾಕಶಾಸನಃ ॥ ೨ ॥

ಉವಾಚ ಚೈನಂ ಮಧುರಂ ಪ್ರೋತ್ಸಾಹಪರಿಬೃಂಹಕಂ ।
ಕಿಮೇಭಿಃ ಕ್ರೀಡಸೇ ದೇವ ದಾನವೈರ್ದುಷ್ಟಮಾನಸೈಃ ॥ ೩ ॥

---

೧. ಸೂತಪೌರಾಣಿಕನು ಹೇಳಿದನು.—ಭಯಂಕರವಾದ ಆ ಯುದ್ಧದಲ್ಲಿ ವಿಷ್ಣುವು ಧ್ವಜವನ್ನೂ ಧನುಸ್ಸನ್ನೂ ಕಳೆದುಕೊಂಡು ಓಡಿಹೋಗುತ್ತಿರುವುದನ್ನು ನೋಡಿ ದೇವೇಂದ್ರನು "ಓಹೋ! ವಿಷ್ಣುವು ಸೋತನು" ಎಂದು ತಿಳಿದುಕೊಂಡನು.

೨. ದೈತ್ಯರು ಆನಂದದಲ್ಲಿದ್ದರು. ಅದನ್ನು ಕಂಡು ಆ ದೇವೇಶ್ವರನಿಗೆ ಮುಂದೇನು ಮಾಡಬೇಕೆಂಬುದೇ ತೋಚಲಿಲ್ಲ. ಅವನು ನೆಟ್ಟಗೆ ವಿಷ್ಣುವಿನ ಬಳಿಗೆ ಬಂದನು.

೩. ಮೃದುಮಧುರವಾಗಿ ಪ್ರೋತ್ಸಾಹವನ್ನು ಕೊಡುವ ಮಾತುಗಳಿಂದ ಹೀಗೆ ಹೇಳಿದನು. "ದೇವಾ, ಈ ದಾನವರು ದುರಾಲೋಚನೆಯುಳ್ಳವರು. ಇವರೊಡನೆ ನಿನಗೆ ಹುಡುಗಾಟವೇಕೆ?

ದುರ್ಜನೈರ್ಲಬ್ಧರಂಧ್ರಸ್ಯ ಪುರುಷಸ್ಯ ಕುತಃ ಕ್ರಿಯಾಃ ।
ಶಕ್ತೇನೋಪೇಕ್ಷಿತೋ ನೀಚೋ ಮನ್ಯತೇ ಬಲಮಾತ್ಮನಃ ॥ ೪ ॥

ತಸ್ಮಾನ್ನ ನೀಚಂ ಮತಿಮಾನ್ ದುರ್ಗಹೀನಂ ಹಿ ಸಂತ್ಯಜೇತ್ ।
ಅಥಾಗ್ರೇಸರಸಂಪತ್ತ್ಯಾ ರಥಿನೋ ಜಯಮಾಪ್ನುಯುಃ ॥ ೫ ॥

ಕಸ್ತೇ ಸಖಾಽಭವಚ್ಚಾಗ್ರೇ ಹಿರಣ್ಯಾಕ್ಷವಧೇ ವಿಭೋ ।
ಹಿರಣ್ಯಕಶಿಪುರ್ದೈತ್ಯೋ ವೀರ್ಯಶಾಲೀ ಮದೋದ್ಧತಃ ॥ ೬ ॥

ತ್ವಾಂ ಪ್ರಾಪ್ಯಾಪಶ್ಯದಸುರೋ ವಿಷಮಂ ಸ್ಮೃತಿವಿಭ್ರಮಂ ।
ಪೂರ್ವೇಽಪ್ಯತಿಬಲಾ ಯೇ ಚ ದೈತ್ಯೇಂದ್ರಾಃ ಸುರವಿದ್ವಿಷಃ ॥ ೭ ॥

---

೪. ದುರ್ಜನರಿಗೆ ತನ್ನ ದೌರ್ಬಲ್ಯವನ್ನು ತೋರಿಸಿಕೊಂಡ ಮನುಷ್ಯನು ಯಾವ ಕಾರ್ಯವನ್ನೂ ಸಾಧಿಸಲಾರನು. ಏಕೆಂದರೆ ಶಕ್ತನಾದವನು ಅಲ್ಪನನ್ನು ಲೆಕ್ಕಿಸದೆ ಉಪೇಕ್ಷೆಮಾಡಿದರೆ ಆ ನೀಚನು ತಾನು ಮಹಾಬಲಿಷ್ಠನೆಂದೇ ತಿಳಿದು ಕೊಳ್ಳುವನು. ಆದುದರಿಂದ ವಿವೇಕಶಾಲಿಯು ದುರ್ಗದ ಹೊರಗಡೆ ಕೈಗೆ ಸಿಕ್ಕಿರುವ ನೀಚನನ್ನೆಂದಿಗೂ ಸುಮ್ಮನೆ ಬಿಡಬಾರದು.

೫. ರಥಿಕರು ಜಯವನ್ನು ಪಡೆಯುವುದು ತಮಗೆ ಸಹಾಯಕರಾಗಿ ಮುಂದೆ ನಡೆಯುವ ವೀರರ ಬಲದಿಂದ ಎಂದು ನೀನು ಹೇಳಬಹುದು. ಆದರೆ, ಓ ದೇವಾ, ಹಿರಣ್ಯಾಕ್ಷನನ್ನು ಹಿಂದೆ ನೀನು ಸಂಹರಿಸಿದೆಯಲ್ಲಾ! ಆಗ ನಿನಗೆ ಸಹಾಯ ವಾಗಿದ್ದವರು ಯಾರು?

೬. ಮಹಾವೀರನೂ, ಮದೋನ್ಮತ್ತನೂ, ದೈತ್ಯೇಂದ್ರನೂ ಆದ ಹಿರಣ್ಯ ಕಶಿಪುವಿಗೆ ನಿನ್ನನ್ನು ಕಂಡ ಕೂಡಲೆ ಸ್ಮೃತಿಯೇ ತಪ್ಪಿಹೋಯಿತಲ್ಲವೆ?

೭-೮. ಇನ್ನೂ ಹಿಂದೆ ಬದುಕಿದ್ದ ದೇವಕಂಟಕರೂ, ಅತಿಬಲಿಷ್ಠರೂ ಆದ ಎಷ್ಟೋ ಜನ ದೈತ್ಯವೀರರು ಬೆಂಕಿಯಲ್ಲಿ ಬಿದ್ದ ಪತಂಗಗಳಂತೆ ನಿನ್ನ ತೇಜಸ್ಸಿಗೆ ಸಿಕ್ಕಿ ಹತರಾದರಷ್ಟೆ! ಓ ಹರೀ, ಒಂದೊಂದು ಯುಗದಲ್ಲಿಯೂ ಲೋಕಹಿಂಸಕರಾದ

ವಿನಾಶಮಾಗತಾಃ ಪ್ರಾಪ್ಯ ಶಲಭಾ ಇವ ಪಾವಕಂ ।
ಯುಗೇ ಯುಗೇ ಚ ದೈತ್ಯಾನಾಂ ತ್ವಮೇವಾಂತಕರೋ ಹರೇ ॥ ೮ ॥
ತಥೈವಾದ್ಯೇಹ ಮಗ್ನಾನಾಂ ಭವ ವಿಷ್ಣೋ ಸುರಾಶ್ರಯಃ ।
ಏವಮುಕ್ತಸ್ತತೋ ವಿಷ್ಣುರ್ವ್ಯವರ್ಧತ ಮಹಾಭುಜಃ ॥ ೯ ॥
ಋಧ್ಯಾ ಪರಮಯಾ ಯುಕ್ತಃ ಸರ್ವಭೂತಾಶ್ರಯೋಽರಿಹಾ ।
ಅಥೋವಾಚ ಸಹಸ್ರಾಕ್ಷಂ ಕಾಲಜ್ಞಮಧೋಕ್ಷಜಃ ॥೧೦॥
ದೈತ್ಯೇಂದ್ರಾಃ ಸ್ವೈರ್ವಧೋಪಾಯೈಃ ಶಕ್ಯಾ ಹಂತುಂ ಹಿ ನಾನ್ಯತಃ ।
ದುರ್ಜಯಸ್ತಾರಕೋ ದೈತ್ಯೋ ಮುಕ್ತ್ವಾ ಸಪ್ತದಿನಂ ಶಿಶುಂ ॥೧೧॥
ಕಶ್ಚಿತ್ಸ್ತ್ರೀವಧ್ಯತಾಂ ಪ್ರಾಪ್ತೋ ವಧೋಽನ್ಯಸ್ಯ ಕುಮಾರಿಕಾ ।
ಜಂಭಸ್ತು ವಧ್ಯತಾಂ ಪ್ರಾಪ್ತೋ ದಾನವಃ ಕ್ರೂರವಿಕ್ರಮಃ ॥೧೨॥

---

ಅಸುರರನ್ನು ಸಂಹಾರಮಾಡಿದವನು ನೀನೇ ಆಗಿರುವೆ. ಈಗಲೂ ಕೂಡ ಕಷ್ಟದಲ್ಲಿ ಮುಳುಗಿರುವ ದೇವತೆಗಳಿಗೆ ಆಶ್ರಯವನ್ನು ಕೊಡು."

೯-೧೦. ಇಂದ್ರನು ಹೀಗೆ ಬೇಡಿಕೊಳ್ಳಲು ಮಹಾಬಲಶಾಲಿಯೂ, ಶತ್ರುನಾಶಕನೂ, ಸಕಲ ಜೀವಸಂರಕ್ಷಕನೂ ಆದ ಮಹಾವಿಷ್ಣುವು ತನ್ನ ಆಕಾರವನ್ನು ಬೆಳೆಸಿಕೊಂಡನು. ಅವನ ತೇಜಸ್ಸೂ, ಪರಾಕ್ರಮವೂ ಅಪರಿಮಿತವಾದುವು. ಅತೀಂದ್ರಿಯಜ್ಞಾನಿಯಾದ ಆ ಪರಮಾತ್ಮನು ಸಮಯೋಚಿತವಾಗಿ ಇಂದ್ರನಿಗೆ ಉತ್ತರವಿತ್ತನು.

೧೧. "ದೈತ್ಯಾಧಿಪತಿಗಳನ್ನು ಕೊಲ್ಲಬೇಕಾದರೆ ಅವರವರಿಗೆ ತಕ್ಕ ಉಪಾಯಗಳಿಂದ ಮಾತ್ರವೇ ಸಾಧ್ಯ. ಬೇರೆ ರೀತಿಯಿಂದ ಆಗದು. ಏಳುದಿವಸದ ಮಗುವನ್ನು ಹೊರತು ಮತ್ತಾರಿಂದಲೂ ತಾರಕಾಸುರನನ್ನು ಗೆಲ್ಲುವುದಕ್ಕೆ ಆಗುವುದಿಲ್ಲ.

೧೨. ಹೆಂಗಸಿನ ಕೈಯಲ್ಲಿ ತಾನು ಸಾಯಬೇಕೆಂದು ಒಬ್ಬನೂ, ಹುಡುಗಿಯಿಂದ ತನಗೆ ವಧವಾಗಬೇಕೆಂದು ಮತ್ತೊಬ್ಬನೂ ವರವನ್ನು ಪಡೆದುಕೊಂಡಿರುವರು. ಮಹಾಕ್ರೂರಿಯೂ ಸಾಹಸಿಯೂ ಆದ ಜಂಭನಿಗೆ ಇಗೋ! ಸಾವು ಸಮೀಪಿಸಿದೆ.

**ತಸ್ಮಾದ್ವೀರ್ಯೇಣ ದಿವ್ಯೇನ ಜಹಿ ಜಂಭಂ ಜಗಜ್ಜ್ವರಂ ।**
**ಅವಧ್ಯಃ ಸರ್ವಭೂತಾನಾಂ ತ್ವಾಂ ವಿನಾ ಸ ತು ದಾನವಃ ॥೧೩॥**

**ಮಯಾ ಗುಪ್ತೋ ರಣೇ ಜಂಭಂ ಜಗತ್ಕಂಟಕಮುದ್ಧರ ।**
**ತದ್ವೈಕುಂಠವಚಃ ಶ್ರುತ್ವಾ ಸಹಸ್ರಾಕ್ಷೋಽಮರಾರಿಹಾ ॥೧೪॥**

**ಸಮಾದಿಶತ್ಸುರಾನ್ ಸರ್ವಾನ್ ಸೈನ್ಯಸ್ಯ ರಚನಾಂ ಪ್ರತಿ ।**
**ಯತ್ಸಾರಂ ಸರ್ವಲೋಕೇಷು ವೀರ್ಯಸ್ಯ ತಪಸೋಽಪಿ ಚ ॥೧೫॥**

**ತದೇಕಾದಶರುದ್ರಾಂಸ್ತು ಚಕಾರಾಗ್ರೇಸರಾನ್ ಹರಿಃ ।**
**ವ್ಯಾಲಭೋಗಾಂಗಸನ್ನದ್ಧಾ ಬಲಿನೋ ನೀಲಕಂಧರಾಃ ॥೧೬॥**

**ಚಂದ್ರಖಂಡನ್ಯಮುಂಡಾಲೀಮಂಡಿತೋರುಶಿಖಂಡಿನಃ ।**
**ಶೂಲಜ್ವಾಲಾವಲಿಸ್ತಾಂಗಾ ಭುಜಮಂಡಲಭೈರವಾಃ ॥೧೭॥**

---

೧೩. ಆದುದರಿಂದ ಲೋಕಸಂತಾಪಕನಾದ ಜಂಭಾಸುರನನ್ನು ಅಮಾನುಷ ಪರಾಕ್ರಮದಿಂದ ಸಂಹರಿಸು. ನಿನ್ನನ್ನು ಬಿಟ್ಟರೆ ಅವನನ್ನು ವಧಿಸಬಲ್ಲ ಪ್ರಾಣಿ ಮತ್ತೊಂದಿಲ್ಲ. ನಾನು ನಿನಗೆ ಬೆಂಗಾವಲಾಗಿರುವೆನು. ಯುದ್ಧದಲ್ಲಿ ಅವನನ್ನು ವಧಿಸಿ ಲೋಕಕ್ಕೆ ಒದಗಿರುವ ಬಾಧೆಯನ್ನು ಪರಿಹರಿಸು.

೧೪. ಅಸುರನಾಶಕನಾದ ದೇವೇಂದ್ರನು ವಿಷ್ಣುವಿನ ಮಾತನ್ನು ಕೇಳಿ ಸೈನ್ಯವನ್ನು ಸಜ್ಜುಗೊಳಿಸುವಂತೆ ದೇವತೆಗಳಿಗೆಲ್ಲ ಅಪ್ಪಣೆಯಿತ್ತನು.

೧೫. ಸಕಲ ಲೋಕಗಳಲ್ಲಿರುವ ತಪಸ್ಸಿನ ಮತ್ತು ವೀರ್ಯದ ಸಾರಾಂಶ ಭೂತರೆನಿಸಿದ ಏಕಾದಶರುದ್ರರು ಸೇನೆಯ ಮುಂದಾಳುಗಳಾಗಿರುವಂತೆ ವಿಷ್ಣುವು ಏರ್ಪಡಿಸಿದನು.

೧೬-೧೮. ಕಪಾಲಿ, ಈಶ ಮೊದಲಾದ ಹನ್ನೊಂದು ಜನ ರುದ್ರರು ಸುರ ಸೈನ್ಯದ ಅಗ್ರೇಸರರಾಗಿ ದೈತ್ಯವೀರರನ್ನು ಹಿಂದಕ್ಕೆ ಓಡಿಸುತ್ತಿದ್ದರು. ಅವರು ಸರ್ಪ ಗಳನ್ನು ಧರಿಸಿದ್ದರು. ಬಲದಿಂದ ಕೊಬ್ಬಿದ್ದರು. ಅವರ ಕಂಠಗಳು ನೀಲವರ್ಣ ವಾಗಿದ್ದುವು. ಅವರು ಜಟಾಗ್ರದಲ್ಲಿ ಬಾಲಚಂದ್ರನನ್ನು ಮುಡಿದು ರುಂಡಮಾಲೆ

ಪಿಂಗೋತ್ತುಂಗಜಟಾಜೂಟಾಃ ಸಿಂಹಚರ್ಮಾನುಷಂಗಿಣಃ ।
ಕಪಾಲೀಶಾದಯೋ ರುದ್ರಾ ವಿದ್ರಾವಿತಮಹಾಸುರಾಃ ॥೧೮॥

ಕಪಾಲೀ ಪಿಂಗಲೋ ಭೀಮೋ ವಿರೂಪಾಕ್ಷೋ ವಿಲೋಹಿತಃ ।
ಅಜೇಶಃ ಶಾಸನಃ ಶಾಸ್ತಾ ಶಂಭುಶ್ಚಂಡೋ ಧ್ರುವಸ್ತಥಾ । ॥೧೯॥

ಏತೇ ಏಕಾದಶಾನಂತಬಲಾ ರುದ್ರಾಃ ಪ್ರಭಾವಿಣಃ ।
ಪಾಲಯಂತೋ ಬಲಸ್ಯಾಗ್ರೇ ದಾರಯಂತಶ್ಚ ದಾನವಾನ್ ॥೨೦॥

ಆಪ್ಯಾಯಯಂತಸ್ತ್ರಿದಶಾನ್ ಗರ್ಜಂತ ಇವ ಚಾಂಬುದಾಃ ।
ಹಿಮಾಚಲಾಭೇ ಮಹತಿ ಕಾಂಚನಾಂಬುರುಹಸ್ರಜಿ ॥೨೧॥

ಪ್ರಚಲಚ್ಚಾಮರೇ ಹೇಮಘಂಟಾಸಂಘಾತಮಂಡಿತೇ ।
ಐರಾವತೇ ಚತುರ್ದಂತೇ ಮಾತಂಗೇಽಚಲಸಂಸ್ಥಿತೇ ॥೨೨॥

---

ಯನ್ನು ಧರಿಸಿದ್ದರು. ಕೈಯಲ್ಲಿ ಹಿಡಿದಿದ್ದ ತ್ರಿಶೂಲದ ಭೀಷಣಜ್ವಾಲೆಯು ಅವರ ದೇಹವನ್ನೆಲ್ಲ ವ್ಯಾಪಿಸಿದ್ದಿತು. ಅವರ ತೋಳುಗಳು ಬಹು ಭಯಂಕರವಾಗಿದ್ದುವು. ಜಟೆಗಳು ವಿಸ್ತಾರವಾಗಿ ಹೊಂಬಣ್ಣದಿಂದ ಕಂಗೊಳಿಸುತ್ತಿದ್ದುವು. ಅವರು ಸಿಂಹದ ಚರ್ಮವನ್ನು ಉಟ್ಟಿದ್ದರು.

೧೯. ಕಪಾಲಿ, ಪಿಂಗಲ, ಭೀಮ, ವಿರೂಪಾಕ್ಷ, ವಿಲೋಹಿತ, ಅಜೇಶ, ಶಾಸನ, ಶಾಸ್ತ್ರ, ಶಂಭು, ಚಂಡ, ಧ್ರುವ ಎಂಬ ಈ ಹನ್ನೊಂದು ಜನರೇ ಏಕಾದಶ ರುದ್ರರು. ಅಪರಿಮಿತವಾದ ಬಲದಿಂದಲೂ ಮಹಿಮೆಯಿಂದಲೂ ಕೂಡಿದವರು.

೨೦. ಅವರು ಸೇನಾಮುಖವನ್ನು ರಕ್ಷಿಸುತ್ತ, ದಾನವರನ್ನು ಸೀಳುತ್ತ, ದೇವತೆಗಳಿಗೆ ಆನಂದವನ್ನು ಬೀರುತ್ತ ಮೋಡಗಳಂತೆ ಗರ್ಜಿಸುತ್ತಿದ್ದರು.

೨೧-೨೩. ಹಿಮಗಿರಿಯ ಶಿಖರದಲ್ಲಿ ಹೊಳೆಹೊಳೆವ ಸೂರ್ಯನ ಹಾಗೆ ದೇವೇಂದ್ರನು ಹಿಮಾಚಲದಂತೆ ಶುಭ್ರವರ್ಣದ, ಪರ್ವತಾಕಾರದ, ನಾಲ್ಕು ಕೊಂಬಿನ ಐರಾವತವೆಂಬ ಆನೆಯ ಮೇಲೆ ವಿರಾಜಿಸುತ್ತಿದ್ದನು. ಅದಕ್ಕೆ ಹೊಂದಾವರೆಯ ಮಾಲೆಯನ್ನು ಮುಡಿಸಿದ್ದರು. ಚಿನ್ನದ ಘಂಟೆಗಳ ಸರವನ್ನು ಹಾಕಿದ್ದರು.

ಮಹಾಮದಜಲಸ್ರಾವೇ ಕಾಮರೂಪೇ ಶತಕ್ರತುಃ ।
ತಸ್ಥೌ ಹಿಮಗಿರೇಃ ಶೃಂಗೇ ಭಾನುಮಾನಿವ ದೀಪ್ತಿಮಾರ್ನ ॥೨೩॥

ತಸ್ಯಾರಕ್ಷತ್ಪದಂ ಸವ್ಯಂ ಮಾರುತೋಽಮಿತವಿಕ್ರಮಃ ।
ಜುಗೋಪಾಪರಮಗ್ನಿಸ್ತು ಜ್ವಾಲಾಪೂರಿತದಿಙ್ಮುಖಃ ॥೨೪॥

ಪೃಷ್ಠರಕ್ಷೋಽಭವದ್ವಿಷ್ಣುಃ ಸಸೈನ್ಯಸ್ಯ ಶತಕ್ರತೋಃ ।
ಆದಿತ್ಯಾ ವಸವೋ ವಿಶ್ವೇ ಮರುತಶ್ಚಾಶ್ವಿನಾವಪಿ ॥೨೫॥

ಗಂಧರ್ವಾ ರಾಕ್ಷಸಾ ಯಕ್ಷಾಃ ಸಕಿನ್ನರಮಹೋರಗಾಃ ।
ನಾನಾವಿಧಾಯುಧಾಶ್ಚಿತ್ರಾ ದಧಾನಾ ಹೇಮಭೂಷಣಾಃ ॥೨೬॥

ಕೋಟಿಶಃ ಕೋಟಿಶಃ ಕೃತ್ವಾ ವೃಂದಂ ಚಿಹ್ನೋಪಲಕ್ಷಿತಂ ।
ವಿಶ್ರಾಮಯಂತಃ ಸ್ವಾಂ ಕೀರ್ತಿಂ ಬಂದಿವೃಂದಪುರಸ್ಸರಾಃ ।
ಚೇರುರ್ದೈತ್ಯವಧೇ ಹೃಷ್ಟಾಃ ಸಹೇಂದ್ರಾಃ ಸುರಜಾತಯಃ ॥೨೭॥

---

ಅಲಂಕಾರಕ್ಕೋಸ್ಕರ ಅದಕ್ಕೆ ಕಟ್ಟಿದ್ದ ಚಾಮರವು ಓಲಾಡುತ್ತಿತ್ತು. ಅದು ಸ್ವೇಚ್ಛಾ ರೂಪವನ್ನು ತಾಳಬಲ್ಲುದಾಗಿತ್ತು. ಮದಜಲದ ಹೊಳೆಯನ್ನು ಹರಿಸುತ್ತಿತ್ತು.

೨೪. ಸೈನ್ಯಸಮೇತನಾಗಿ ದೇವೇಂದ್ರನು ಪ್ರಯಾಣಮಾಡುತ್ತಿರಲು ಅವನ ಎಡಪಕ್ಕವನ್ನು ಬಹು ಪರಾಕ್ರಮಿಯಾದ ವಾಯು ರಕ್ಷಿಸುತ್ತಿದ್ದನು. ಬಲಭಾಗವನ್ನು ಅಗ್ನಿಯು ಕಾಯುತ್ತಿದ್ದನು. ಅವನ ಜ್ವಾಲೆಯು ದಿಕ್ಕುಗಳಲ್ಲೆಲ್ಲ ವ್ಯಾಪಿಸುತ್ತಿತ್ತು. ವಿಷ್ಣುವು ಆ ಮಹಾಸೈನ್ಯದ ಹಿಂಗಡೆಯಲ್ಲಿ ಬೆಂಗಾವಲಾಗಿದ್ದನು.

೨೫-೨೭. ಆದಿತ್ಯರು, ವಸುಗಳು ವಿಶ್ವೇದೇವರು, ಅಶ್ವಿನೀದೇವತೆಗಳು, ಗಂಧರ್ವರು, ರಾಕ್ಷಸರು, ಯಕ್ಷರು, ಕಿನ್ನರರು, ಮಹೋರಗರು ಮೊದಲಾದವ ರೆಲ್ಲರೂ ಬಗೆಬಗೆಯ ಆಯುಧಗಳನ್ನು ಧರಿಸಿ, ತಮ್ಮತಮ್ಮ ಅಸಾಧಾರಣ ಲಕ್ಷಣ ಗಳಿಂದ ಕೂಡಿ ಕೋಟಿಗಟ್ಟಲೆಯಾಗಿ ಗುಂಪುಕಟ್ಟಿಕೊಂಡು, ತಮ್ಮ ಕೀರ್ತಿಯನ್ನು ಪ್ರಕಟಗೊಳಿಸುತ್ತ ಹೊಗಳುಭಟ್ಟರಿಂದ ಹೊಗಳಿಸಿಕೊಳ್ಳುತ್ತ ದೈತ್ಯರ ಸಂಹಾರಕ್ಕಾಗಿ ಹಿಗ್ಗುತ್ತ ಇಂದ್ರನೊಡನೆ ನಡೆದರು.

ಶತಕ್ರತೋರಮರನಿಕಾಯಪಾಲಿತಾ
ಪತಾಕಿನೀ ಗಜಶತವಾಜಿನಾದಿತಾ ।
ಸಿತಾತಪತ್ರಧ್ವಜಪಟಕೋಟಿಮಂಡಿತಾ
ಬಭೂವ ಸಾ ದಿತಿಸುತಶೋಕವರ್ಧಿನೀ ॥೨೮॥

ಆಯಾಂತೀಮವಲೋಕ್ಯಾಥ ಸುರಸೇನಾಂ ಗಜಾಸುರಃ ।
ಗಜರೂಪೀ ಮಹಾಂಭೋದಸಂಘಾತೋ ಭಾತಿ ಭೈರವಃ ॥೨೯॥

ಪರಶ್ವಧಾಯುಧೋ ದೈತ್ಯೋ ದಂಶಿತೋಷ್ಠಕಸಂಪುಟಃ ।
ಮಮರ್ದ ಚರಣೇ ದೇವಾಂಶ್ಚಿಕ್ಷೇಪಾನ್ಯಾನ್ ಕರೇಣ ತು ॥೩೦॥

ಪರಾನ್ ಪರಶುನಾ ಜಘ್ನೇ ದೈತ್ಯೇಂದ್ರೋ ರೌದ್ರವಿಕ್ರಮಃ ।
ತಸ್ಯ ಪಾತಯತಃ ಸೇನಾಂ ಯಕ್ಷಗಂಧರ್ವಕಿನ್ನರಾಃ ॥೩೧॥

ಮುಮುಚುಃ ಸಂಹತಾಃ ಸರ್ವೇ ಚಿತ್ರಶಸ್ತ್ರಾಸ್ತ್ರಸಂಹತಿಂ ।
ಪಾಶಾನ್ ಪರಶ್ವಧಾಂಶ್ಚಕ್ರಾನ್ ಭಿಂಧಿಪಾಲಾನ್ಸಮುದ್ಗರಾನ್ ॥೩೨॥

---

೨೮. ದೇವಗಣಗಳು ಕಾವಲುಕಾಯುತ್ತಿರಲು, ಲೆಕ್ಕವಿಲ್ಲದಷ್ಟು ಆನೆ ಕುದುರೆಗಳು ಕೂಗುತ್ತಿರಲು, ಪತಾಕೆಗಳು ಹಾರಾಡುತ್ತಿರಲು, ಬೆಳ್ಗೊಡೆಗಳೂ ಧ್ವಜಪಟಗಳೂ ಚೆಲುವನ್ನು ಬೀರುತ್ತಿರಲು ಆ ದೇವಸೇನೆಯು ದೈತ್ಯರ ಶೋಕವನ್ನು ಮತ್ತಷ್ಟು ಹೆಚ್ಚಿಸುತ್ತಿತ್ತು.

೨೯. ಗಜಾಸುರನು ದೇವಸೈನ್ಯವು ಬರುತ್ತಿರುವುದನ್ನು ನೋಡಿ, ಆನೆಯ ರೂಪವನ್ನು ತಾಳಿ ಪ್ರಳಯಕಾಲದ ಮೋಡದಂತೆ ಅತಿ ಭಯಂಕರವಾಗಿ ಅಬ್ಬರಿಸಿದನು.

೩೦. ಆ ದೈತ್ಯನು ಕೊಡಲಿಯನ್ನು ಹಿಡಿದು, ಕೋಪದಿಂದ ತುಟಿಗಳನ್ನು ಕಚ್ಚಿಕೊಂಡು ದೇವತೆಗಳಲ್ಲಿ ಹಲವರನ್ನು ಕಾಲಿನಿಂದ ತುಳಿದುಹಾಕಿದನು. ಕೆಲವರನ್ನು ಸೊಂಡಲಿನಲ್ಲೆತ್ತಿ ಬಿಸಾಡಿದನು.

೩೧-೩೨. ಭಯಂಕರಪರಾಕ್ರಮಿಯಾದ ಆ ದೈತ್ಯೇಂದ್ರನು ಮಿಕ್ಕವರನ್ನು ಕೊಡಲಿಯಿಂದ ಹೊಡೆದನು. ಅವನು ದೇವಸೇನೆಯನ್ನು ನೆಲಕ್ಕುರುಳಿಸುತ್ತಿರಲು ಯಕ್ಷರು, ಗಂಧರ್ವರು, ಕಿನ್ನರರು ಇವರೆಲ್ಲ ಒಟ್ಟುಗೂಡಿ ಬಗೆಬಗೆಯ ಶಸ್ತ್ರಗಳನ್ನು ಪ್ರಯೋಗಿಸಿದರು. ಪಾಶ, ಪರಶ್ವಧ, ಚಕ್ರ, ಭಿಂದಿಪಾಲ, ಮುದ್ಗರ, ಕುಂತ, ಪ್ರಾಸ,

ಕುಂತಾನ್ ಪ್ರಾಸಾನಸೀಂಸ್ತೀಕ್ಷ್ಣಾನ್ಮುದ್ಗರಾಂಶ್ಚಾಪಿ ದುಃಸಹಾನ್ ।
ತಾನ್ಸರ್ವಾನ್ ಸೋಽಗ್ರಸದ್ದೈತ್ಯಃ ಕವಲಾನಿವ ಯೂಥಪಃ ॥೩೩॥

ಕೋಪಾಸ್ಫಾಲಿತದೀರ್ಘಾಗ್ರಕರಾಸ್ಫೋಟೇನ ಪಾತಯನ್ ।
ವಿಚಚಾರ ರಣೇ ದೇವಾನ್ ದುಷ್ಪ್ರೇಕ್ಷ್ಯೋ ಗಜದಾನವಃ ॥೩೪॥

ಯಸ್ಮಿನ್ಯಸ್ಮಿನ್ನಿಪತತಿ ಸುರವೃಂದೇ ಗಜಾಸುರಃ ।
ತಸ್ಮಿಂಸ್ತಸ್ಮಿನ್ ಮಹಾಶಬ್ದೋ ಹಾಹಾಕಾರಕೃತೋಽಭವತ್ ॥೩೫॥

ಅಥ ವಿದ್ರವಮಾಣಂ ತದ್ಬಲಂ ಪ್ರೇಕ್ಷ್ಯ ಸಮಂತತಃ ।
ರುದ್ರಾಃ ಪರಸ್ಪರಂ ಪ್ರೋಚುರಹಂಕಾರೋತ್ಥಿತಾರ್ಚಿಷಃ । ॥೩೬॥

ಭೋ ಭೋ ಗೃಹ್ಣೀತ ದೈತ್ಯೇಂದ್ರಂ ಮರ್ದತೈನಂ ಹತಾಶ್ರಯಂ ।
ಕರ್ಷತೈನಂ ಶಿತೈಃ ಶೂಲೈರ್ಭಂಜತೈನಂ ಚ ಮರ್ಮಸು ॥೩೭॥

---

ತೀಕ್ಷ್ಣವಾದ ಖಡ್ಗ, ದುಸ್ಸಹವಾದ ಮುದ್ಗರ, ಮುಂತಾದುವು ಅವರು ಪ್ರಯೋಗಿಸಿದ ಆಯುಧಗಳು. ಸಲಗನು ತನ್ನ ತಿಂಡಿಯ ತುತ್ತುಗಳನ್ನು ನುಂಗುವಂತೆ ಆ ದೈತ್ಯನು ಅವುಗಳನ್ನೆಲ್ಲ ನುಂಗಿದನು.

೩೪. ಗಜಾಸುರನು ಕೋಪಗೊಂಡು, ತನ್ನ ಉದ್ದವಾದ ಸೊಂಡಿಲನ್ನು ಚಾಚಿ ದೇವತೆಗಳನ್ನು ಹೊಡೆದು ನೆಲಕ್ಕೆ ಉರುಳಿಸಿದನು. ನೋಡುವುದಕ್ಕೆ ಆಗದಷ್ಟು ಭಯಂಕರವಾದ ರೂಪದಿಂದ ಅವನು ಯುದ್ಧಭೂಮಿಯಲ್ಲಿ ಓಡಾಡಿದನು.

೩೫. ಗಜಾಸುರನು ದೇವಸ್ಸೈನ್ಯದ ಮೇಲೆ ಎಲ್ಲೆಲ್ಲಿ ಬೀಳುತ್ತಾನೆಯೋ ಅಲ್ಲಲ್ಲಿ ಹಾಹಾಕಾರವೂ ಗೋಳಾಟವೂ ಏಳುತ್ತಿದ್ದುವು.

೩೬. ಬಳಿಕ ದೇವತೆಗಳ ಸೇನೆಯು ದಿಕ್ಕುಪಾಲಾಗಿ ಚದುರಿ ಓಡಿತು. ಅದನ್ನು ಕಂಡು ಏಕಾದಶರುದ್ರರ ಬಲದ ಗರ್ವವು ಉಕ್ಕೇರಿತು. ತೇಜಸ್ಸು ಮಿಗಿಲಾಯಿತು. ಅವರು ಒಬ್ಬರಿಗೊಬ್ಬರು ಇಂತೆಂದರು.

೩೭. "ಎಲ್ಲೈ ಎಲ್ಲೈ ವೀರರೇ, ಗಜಾಸುರನನ್ನು ಹಿಡಿಯಿರಿ. ನಿರಾಶ್ರಯನಾದ ಅವನನ್ನು ಜಜ್ಜಿಹಾಕಿರಿ. ಅವನನ್ನೆಳೆಯಿರಿ· ಮೊನೆಯಾದ ಭರ್ಜಿಗಳಿಂದ ಅವನ ಮರ್ಮಸ್ಥಾನಗಳನ್ನು ಚುಚ್ಚಿರಿ."

ಕಪಾಲೀ ವಾಕ್ಯಮಾಕರ್ಣ್ಯ ಶೂಲಂ ಶಿತಶಿಖಾಮುಖಂ ।
ಸಂಮಾರ್ಜ್ಯ ವಾಮಹಸ್ತೇನ ಸಂರಂಭವಿವೃತೇಕ್ಷಣಃ ॥೩೮॥

ಅಥಾವದ್ಭ್ರುಕುಟೀವಕ್ರೋ ದೈತ್ಯೇಂದ್ರಾಭಿಮುಖೋ ರಣೇ ।
ದೃಢೇನ ಮುಷ್ಟಿಬಂಧೇನ ಶೂಲಂ ವಿಷ್ಟಭ್ಯ ನಿರ್ಮಲಂ ॥೩೯॥

ಜಘಾನ ಕುಂಭದೇಶೇ ತು ಕಪಾಲೀ ಗಜದಾನವಂ ।
ತತೋ ದಶಾಪಿ ತೇ ರುದ್ರಾ ನಿರ್ಮಲಾಯೋಮಯೈ ರಣೇ ॥೪೦॥

ಜಘ್ನುಃ ಶೂಲೈಶ್ಚ ದೈತ್ಯೇಂದ್ರಂ ಶೈಲವರ್ಷ್ಮಾಣಮಾಹವೇ ।
ಸ್ರುತಶೋಣಿತರಂಧ್ರಸ್ತು ಶಿತಶೂಲಮುಖಾರ್ದಿತಃ ॥೪೧॥

ಬಭೌ ಕೃಷ್ಣಚ್ಛವಿರ್ದೈತ್ಯಃ ಶರದೀವಾಮಲಂ ಸರಃ ।
ಪ್ರೋತ್ಫುಲ್ಲಾರುಣನೀಲಾಬ್ಜಸಂಘಾತಂ ಸರ್ವತೋದಿಶಂ ॥೪೨॥

---

೩೮. ಕಪಾಲಿಯು ಈ ಮಾತನ್ನು ಕೇಳಿ, ಬಲು ಮೊನಚಾದ ಶೂಲಾಯುಧವನ್ನು ಎತ್ತಿಕೊಂಡು ಎಡಗೈಯಿಂದ ಸವರಿದನು. ಅವನ ಕಣ್ಣುಗಳು ಸಡಗರದಿಂದ ತೊಳಲುತ್ತಿದ್ದುವು. ಹುಬ್ಬು ಗಂಟುಗಂಟಾಗಿದ್ದಿತು. ಅವನು ಗಜಾಸುರನಿಗೆ ಅಭಿಮುಖವಾಗಿ ಓಡಿದನು.

೩೯-೪೦. ಕಪಾಲಿಯು ಮುಷ್ಟಿಯನ್ನು ಬಲವಾಗಿ ಬಿಗಿದು, ಹೊಳೆಹೊಳೆವ ಶೂಲವನ್ನೆತ್ತಿ ಗಜದಾನವನ ಕುಂಭಸ್ಥಳದಲ್ಲಿ ಹೊಡೆದನು. ಉಳಿದ ಹತ್ತು ಜನ ರುದ್ರರೂ ಸೇರಿ ಜಗಜಗಿಸುವ ಉಕ್ಕಿನ ಶೂಲಗಳಿಂದ ಬೆಟ್ಟದಂತಹ ದೇಹದ ಆ ಅಸುರನನ್ನು ಪ್ರಹರಿಸಿದರು.

೪೧-೪೨. ಗಜಾಸುರನ ಮೈಬಣ್ಣವು ಕಪ್ಪಗಿತ್ತು. ಹರಿತವಾದ ಶೂಲ ಮೊದಲಾದ ಆಯುಧಗಳಿಂದಾದ ಗಾಯದಿಂದ ರಕ್ತವು ಸೋರುತ್ತಿತ್ತು. ಕನ್ನೈದಿಲೆಗಳೂ ಕೆಂದಾವರೆಗಳೂ ವಿಶೇಷವಾಗಿ ಅರಳಿದ ಶರತ್ಕಾಲದ ನಿರ್ಮಲವಾದ ಸರೋವರವನ್ನು ಅವನು ಹೋಲುತ್ತಿದ್ದನು. ವಿಭೂತಿಯ ಲೇಪನದಿಂದ ಮೈ ಬೆಳ್ಳಗಿದ್ದ ಏಕಾದಶರುದ್ರರು ಹಂಸಗಳಂತಿದ್ದರು.

ಭಸ್ಮಶುಭ್ರತನುಚ್ಛಾಯೈ ರುದ್ರೈರ್ಹಂಸೈರಿವಾವೃತಃ ।
ಉಪಸ್ಥಿತಾರ್ತಿದೈತ್ಯೋಽಥ ಪ್ರಚಲತ್ಕರ್ಣಪಲ್ಲವಃ ॥೪೩॥

ಶಂಭುಂ ಬಿಭೇದ ದಶನೈರ್ನಾಭಿದೇಶೇ ಗಜಾಸುರಃ ।
ದೃಷ್ಟ್ವಾ ಸಕ್ತಂ ತು ರುದ್ರಾಭ್ಯಾಂ ನವ ರುದ್ರಾಸ್ತತೋ ದ್ರುತಂ ॥೪೪॥

ತತಸ್ತುರ್ವಿವಿಧೈಃ ಶಸ್ತ್ರೈಃ ಶರೀರಮಮರದ್ವಿಷಃ ।
ನಿರ್ಭಯಾ ಬಲಿನೋ ಯುದ್ಧೇ ರಣಭೂಮೌ ವ್ಯವಸ್ಥಿತಾಃ ॥೪೫॥

ಮೃತಂ ಮಹಿಷಮಾಸಾದ್ಯ ವನೇ ಗೋಮಾಯುವೋ ಯಥಾ ।
ಕಪಾಲಿನಂ ಪರಿತ್ಯಜ್ಯ ಗತಶ್ಚಾಸುರಪುಂಗವಃ ॥೪೬॥

ವೇಗೇನ ಕುಪಿತೋ ದೈತ್ಯೋ ನವ ರುದ್ರಾನುಪಾದ್ರವತ್ ।
ಮಮರ್ದ ಚರಣಾಘಾತೈರ್ದಂತೈಶ್ಚಾಪಿ ಕರೇಣ ಚ ॥೪೭॥

---

೪೩-೪೫. ಬಳಿಕ ಗಜಾಸುರನಿಗೆ ದುಃಖವಾಯಿತು. ಅಲಂಕಾರಕ್ಕೆಂದು ಕಿವಿಯಲ್ಲಿ ಧರಿಸಿದ್ದ ಚಿಗುರು ಅಲುಗಾಡುತ್ತಿರಲು, ಅವನು ಶಂಭುವಿನ ಹೊಕ್ಕುಳನ್ನು ತನ್ನ ದಂತಗಳಿಂದ ತಿವಿದನು. ರುದ್ರರಿಬ್ಬರು ಅವನೊಡನೆ ಹೋರಾಡುತ್ತಿರುವುದನ್ನು ನೋಡಿ ಮಹಾವೀರರಾದ ಉಳಿದ ಒಂಬತ್ತು ಜನರು ನಾನಾವಿಧವಾದ ಆಯುಧಗಳಿಂದ ದೇವಶತ್ರುವಾದ ಆ ಗಜಾಸುರನ ದೇಹವನ್ನು ಕತ್ತಿದರು ; ನಿರ್ಭಯರಾಗಿ ರಣಭೂಮಿಯಲ್ಲಿ ಯುದ್ಧಕ್ಕೆ ಸಿದ್ಧರಾಗಿ ಕಾದಿದ್ದರು.

೪೬. ಕಾಡಿನಲ್ಲಿ ಸತ್ತುಬಿದ್ದಿರುವ ಕೋಣನನ್ನು ಕಂಡ ನರಿಯಂತೆ ಗಜಾಸುರನು ಕಪಾಲಿಯನ್ನು ಬಿಟ್ಟು ಆ ರುದ್ರರ ಕಡೆಗೆ ನಡೆದನು.

೪೭. ಆ ದೈತ್ಯನು ಸಿಟ್ಟುಗೊಂಡು ಮಹಾವೇಗದಿಂದ ಒಂಬತ್ತು ಮಂದಿ ರುದ್ರರ ಬಳಿಗೆ ಓಡಿದನು. ಅವರನ್ನು ಕಾಲಿನಲ್ಲಿ ಮೆಟ್ಟಿ ತುಳಿದನು. ಕೊಂಬುಗಳಿಂದ ತಿವಿದನು. ಸೊಂಡಲಿನಿಂದ ಬಡಿದನು.

ಸ ತೈಸ್ತುಮುಲಯುದ್ಧೇನ ಶ್ರಮಮಾಸಾದಿತೋ ಯದಾ ।
ತದಾ ಕಪಾಲೀ ಜಗ್ರಾಹ ಕರಂ ತಸ್ಯಾಮರದ್ವಿಷಃ ॥೪೮॥

ಭ್ರಾಮಯಾಮಾಸ ವೇಗೇನ ಹ್ಯತೀವ ಚ ಗಜಾಸುರಂ ।
ದೃಷ್ಟ್ವಾ ಶ್ರಮಾತುರಂ ದೈತ್ಯಂ ಕಿಂಚಿತ್ಸ್ಫುರಿತಜೀವಿತಂ ॥೪೯॥

ನಿರುತ್ಸಾಹಂ ರಣೇ ತಸ್ಮಿನ್ ಗತಯುದ್ಧೋತ್ಸವೋದ್ಯಮಂ ।
ತತಃ ಸ ತತ ಏವಾಸ್ಯ ಚರ್ಮ ಚೋತ್ಕೃತ್ಯ ಭೈರವಂ ॥೫೦॥

ಸ್ರವತ್ಸರ್ವಾಂಗರಕ್ತೌಘಂ ಚಕಾರಾಂಬರಮಾತ್ಮನಃ ।
ದೃಷ್ಟ್ವಾ ವಿನಿಹತಂ ದೈತ್ಯಂ ದಾನವೇಂದ್ರಾ ಮಹಾಬಲಾಃ ॥೫೧॥

ವಿತ್ರೇಸುರ್ದುದ್ರುವುರ್ಜಗ್ಮುರ್ನಿಪೇತುಶ್ಚ ಸಹಸ್ರಶಃ ।
ದೃಷ್ಟ್ವಾ ಕಪಾಲಿನೋ ರೂಪಂ ಗಜಚರ್ಮಾಂಬರಾವೃತಂ ॥೫೨॥

---

೪೮. ಅವರೊಡನೆ ತುಮುಲ ಯುದ್ಧವನ್ನು ಮಾಡಿ ಗಜಾಸುರನು ಆಯಾಸಗೊಂಡ ಸಮಯದಲ್ಲಿ ಕಪಾಲಿಯು ಬಂದು ಅವನ ಸೊಂಡಿಲನ್ನು ಹಿಡಿದುಕೊಂಡನು.

೪೯-೫೦. ಬಹು ವೇಗದಿಂದ ಆ ಅಸುರನನ್ನು ಗರಗರನೆ ತಿರುಗಿಸಿದನು. ದೈತ್ಯನಿಗೆ ಆಯಾಸವು ಹೆಚ್ಚಿತು. ಪ್ರಾಣವು ಇನ್ನೇನು ಹೋಗುವುದರಲ್ಲಿತ್ತು. ಯುದ್ಧದಲ್ಲಿ ಅವನಿಗೆ ಉತ್ಸಾಹವು ಅಡಗಿತು. ರಣಸನ್ನಾಹವು ನಿಂತುಹೋಯಿತು. ಅವನು ನೆಲದ ಮೇಲೆ ಬಿದ್ದುಬಿಟ್ಟನು. ಆಗ ಕಪಾಲಿಯು ಅವನ ಚರ್ಮವನ್ನು ಸುಲಿದು ಅದನ್ನು ಉತ್ತರೀಯದಂತೆ ಹೊದೆದುಕೊಂಡನು. ಅವನ ಮೈಮೇಲೆಲ್ಲ ರಕ್ತವು ಹರಿಯಿತು.

೫೧. ಗಜಾಸುರನು ಹತನಾದುದನ್ನು ಕಂಡು ಮಹಾ ಬಲಿಷ್ಠರೆನಿಸಿಕೊಂಡಿದ್ದ ದಾನವವೀರರೆಲ್ಲರೂ ಹೆದರಿ ಓಡಿಹೋದರು. ತಮ್ಮತಮ್ಮ ಸ್ಥಳಗಳಿಗೆ ಹೋಗಿ ಅವಿತುಕೊಂಡರು. ಸಾವಿರಗಟ್ಟಲೆಯಾಗಿ ನೆಲದ ಮೇಲೆ ಬಿದ್ದರು.

೫೨. ಗಜಾಸುರನ ಚರ್ಮವನ್ನು ಹೊದೆದುಕೊಂಡಿದ್ದ ಕಪಾಲಿಯ ಭಯಂಕರವಾದ ರೂಪವನ್ನು ಕಂಡು ಹೆದರಿ ದೈತ್ಯರು ಎಲ್ಲ ದಿಕ್ಕುಗಳಲ್ಲಿಯೂ ಎಲ್ಲ ಕಡೆಯಲ್ಲಿಯೂ ಆ ಘೋರಾಕೃತಿಯನ್ನೇ ಕಣ್ಣಿನಲ್ಲಿ ಕಾಣುತ್ತಿದ್ದರು.

ದಿಕ್ಷು ಭೂಮೌ ತಮೇವೋಗ್ರಂ ರುದ್ರಂ ದೈತ್ಯಾ ವ್ಯಲೋಕಯರ್ನ್ |
ಏವಂ ವಿಲುಲಿತೇ ತಸ್ಮಿನ್ ದಾನವೇಂದ್ರೇ ಮಹಾಬಲೇ ||೫೩||

ದ್ವಿಪಾಧಿರೂಢೋ ದೈತ್ಯೇಂದ್ರೋ ಹತದುಂದುಭಿನಾ ತತಃ |
ಕಲ್ಪಾಂತಾಂಬುಧರಾಭೇಣ ದುರ್ಧರೇಣಾಪಿ ದಾನವಃ ||೫೪||

ನಿಮಿರಭ್ಯಪತತ್ತೂರ್ಣಂ ಸುರಸೈನ್ಯಾನಿ ಲೋಡಯರ್ನ್ |
ಯಾಂ ಯಾಂ ನಿಮಿಗಜೋ ಯಾತಿ ದಿಶಂ ತಾಂ ತಾಂ ಸವಾಹನಾಃ ||೫೫||

ಸಂತ್ಯಜ್ಯ ದುದ್ರುವುರ್ದೇವಾ ಭಯಾರ್ತಾಸ್ತ್ಯಕ್ತಹೇತಯಃ |
ಗಂಧೇನ ಸುರಮಾತಂಗಾ ದುದ್ರುವುಸ್ತಸ್ಯ ಹಸ್ತಿನಃ ||೫೬||

ಪಲಾಯಿತೇಷು ಸೈನ್ಯೇಷು ಸುರಾಣಾಂ ಪಾಕಶಾಸನಃ |
ತಸ್ಥೌ ದಿಕ್ಪಾಲಕೈಃ ಸಾರ್ಧಮಷ್ಟಭಿಃ ಕೇಶವೇನ ಚ ||೫೭||

---

೫೩-೫೪. ಬಹು ಬಲಶಾಲಿಯೂ ದಾನವ ಮುಖ್ಯನೂ ಆದ ಗಜಾಸುರನು ಹೀಗೆ ಹೆಸರಿಲ್ಲದಂತೆ ಅಳಿಯಲು, ದೈತ್ಯವೀರನಾದ ನಿಮಿಯು ತಡಮಾಡದೆ ಆನೆಯನ್ನೇರಿ ಯುದ್ಧಕ್ಕೆ ಬಂದನು. ನಗಾರಿಯು ಭೋರ್ಗರೆಯುತ್ತಿತ್ತು. ಪ್ರಳಯಕಾಲದ ಮೋಡದಂತೆ ಭಯಂಕರಾಕಾರನಾದ ದುರ್ಧರನೂ ಕೂಡ ಅವನೊಡನೆ ಬಂದನು. ದೇವತೆಗಳ ಸೈನ್ಯವು ದಿಕ್ಕುಪಾಲಾಗಿ ಚದುರಿಹೋಯಿತು.

೫೫-೫೬. ನಿಮಿಯ ಆನೆಯು ಯಾವಯಾವ ದಿಕ್ಕಿಗೆ ಹೋಯಿತೋ ಆಯಾದಿಕ್ಕಿನಲ್ಲಿ ದೇವತೆಗಳು ಭೀತಿಯಿಂದ ಆಯುಧಗಳನ್ನು ಬಿಸುಟು ತಮ್ಮ ತಮ್ಮ ವಾಹನಗಳನ್ನೇರಿ ಪಲಾಯನಮಾಡುತ್ತಿದ್ದರು. ಅದರ ಮದಜಲದ ವಾಸನೆಯಿಂದಲೇ ದೇವತೆಗಳ ಆನೆಗಳು ಚೆಲ್ಲಾಪಿಲ್ಲಿಯಾದುವು.

೫೭. ಸುರಸೈನ್ಯವು ಓಡಿಹೋಗಲು ಇಂದ್ರನೊಬ್ಬನೇ ಯುದ್ಧಭೂಮಿಯಲ್ಲಿ ನಿಂತನು. ಅವನೊಡನೆ ಎಂಟು ಜನ ದಿಕ್ಪಾಲಕರೂ ವಿಷ್ಣುವೂ ಉಳಿದುಕೊಂಡರು.

ಸಂಪ್ರಾಪ್ತೋ ನಿಮಿಮಾತಂಗೋ ಯಾವಚ್ಛಕ್ರಗಜಂ ಪ್ರತಿ ।
ತಾವಚ್ಛಕ್ರಗಜೋ ಯಾತೋ ಮುಕ್ತ್ವಾ ನಾದಂ ಸ ಭೈರವಂ ॥೫೮॥

ಧ್ರಿಯಮಾಣೋಽಪಿ ಯತ್ನೇನ ಸ ರಣೇ ನೈವ ತಿಷ್ಠತಿ ।
ಪಲಾಯಿತೇ ಗಜೇ ತಸ್ಮಿನ್ನಾರೂಢಃ ಪಾಕಶಾಸನಃ ॥೫೯॥

ವಿಪರೀತಮುಖೋಽಯುಧ್ಯದ್ದಾನವೇಂದ್ರಬಲಂ ಪ್ರತಿ ।
ಶತಕ್ರತುಸ್ತು ವಜ್ರೇಣ ನಿಮಿಂ ವಕ್ಷಸ್ಯತಾಡಯತ್ ॥೬೦॥

ಗದಯಾ ದಂತಿನಶ್ಚಾಸ್ಯ ಗಂಡದೇಶೇಽಹನದ್ದೃಢಂ ।
ತತ್ಪ್ರಹಾರಮಚಿಂತ್ಯೈವ ನಿಮಿರ್ನಿರ್ಭಯಪೌರುಷಃ ॥೬೧॥

ಐರಾವಣಂ ಕಟೀದೇಶೇ ಮುದ್ಗರೇಣಾಭ್ಯತಾಡಯತ್ ।
ಸ ಹತೋ ಮುದ್ಗರೇಣಾಥ ಶಕ್ರಕುಂಜರ ಆಹವೇ ॥೬೨॥

---

೫೮. ನಿಮಿಯು ಏರಿದ್ದ ಆನೆಯು ಇಂದ್ರನ ಐರಾವತದ ಕಡೆಗೆ ಹೋಯಿತೋ ಇಲ್ಲವೋ, ಆ ಸುರಗಜವು ಭಯಂಕರವಾಗಿ ಕೂಗುತ್ತ ರಣಭೂಮಿಯನ್ನು ಬಿಟ್ಟೋಡಿತು.

೫೯. ಎಷ್ಟು ಪ್ರಯತ್ನದಿಂದ ಹಿಡಿದು ನಿಲ್ಲಿಸಿದರೂ ಅದು ನಿಲ್ಲಲೇ ಇಲ್ಲ. ಹೀಗೆ ಆನೆ ಓಡುತ್ತಿರಲು ಅದನ್ನೇರಿದ್ದ ಇಂದ್ರನು ಹಿಂದುಗಡೆಗೆ ತಿರುಗಿಕೊಂಡು ದಾನವಸೈನ್ಯದೊಡನೆ ಯುದ್ಧಮಾಡಿದನು.

೬೦. ದೇವರಾಜನು ವಜ್ರಾಯುಧದಿಂದ ನಿಮಿಯ ಎದೆಗೂ, ಗದೆಯಿಂದ ಅವನ ಆನೆಯ ಗಂಡಸ್ಥಲಕ್ಕೂ ಬಲವಾಗಿ ಪ್ರಹರಿಸಿದನು.

೬೧. ಆ ಏಟಿನಿಂದ ನಿಮಿ ಹೆದರಲಿಲ್ಲ; ಅವನ ಪರಾಕ್ರಮವು ಕುಗ್ಗಲಿಲ್ಲ. ಅವನು ಮುದ್ಗರದಿಂದ ಐರಾವತದ ಸೊಂಟಕ್ಕೆ ಹೊಡೆದನು.

೬೨. ಮುದ್ಗರದ ಪೆಟ್ಟನ್ನು ತಿಂದು ಇಂದ್ರನ ಐರಾವತವು ಹಿಂಗಾಲುಗಳ ಮೇಲೆ ನಿಂತು ಹಾಗೆಯೇ ಪರ್ವತಾಕಾರವಾಗಿ ನೆಲದ ಮೇಲೆ ಉರುಳಿತು.

ಜಗಾಮ ಪಶ್ಚಾಚ್ಚರಣೈರ್ಧರಣೀಂ ಭೂಧರಾಕೃತಿಃ ।
ಲಾಘವಾತ್ ಕ್ಷಿಪ್ರಮುತ್ಥಾಯ ತತೋಽಮರಮಹಾಗಜಃ ||೬೩||

ರಣಾದಪಸಸರ್ಪಾಶು ಭೀಷಿತೋ ನಿಮಿಹಸ್ತಿನಾ ।
ತತೋ ವಾಯುರ್ವವೌ ರೂಕ್ಷೋ ಬಹುಶರ್ಕರಪಾಂಸುಲಃ ||೬೪||

ಸಂಮುಖೋ ನಿಮಿಮಾತಂಗೋ ಜವನಾಚಲಸಂನಿಭಃ ।
ಸ್ರುತರಕ್ತೋ ಬಭೌ ಶೈಲೋ ಘನಧಾತುಹ್ರದೋ ಯಥಾ ||೬೫||

ಧನೇಶೋಽಪಿ ಗದಾಂ ಗುರ್ವೀಂ ತಸ್ಯ ದಾನವಹಸ್ತಿನಃ ।
ಚಿಕ್ಷೇಪ ವೇಗಾದ್ದೈತ್ಯೇಂದ್ರೋ ನಿಪಪಾತಾಸ್ಯ ಮೂರ್ಧನಿ ||೬೬||

ಗಜೋ ಗದಾನಿಪಾತೇನ ಸ ತೇನ ಪರಿಮೂರ್ಛಿತಃ ।
ದಂತೈರ್ಭಿತ್ವಾ ಧರಾಂ ವೇಗಾತ್ಪಪಾತಾಚಲಸಂನಿಭಃ ||೬೭||

---

೬೩-೬೪. ಬಳಿಕ ದೇವೇಂದ್ರನ ಆ ವಾಹನವು ಚಟುವಟಿಕೆಯಿಂದ ಬೇಗನೆ ಎದ್ದು, ನಿಮಿಯ ಆನೆಗೆ ಹೆದರಿಕೊಂಡು ಯುದ್ಧದಿಂದ ಹಿಮ್ಮೆಟ್ಟಿತು. ತರುವಾಯ ಧೂಳಿನಿಂದಲೂ ನೊರಜುಕಲ್ಲುಗಳಿಂದಲೂ ತುಂಬಿ ಗಾಳಿಯು ಬಲು ಒರಟಾಗಿ ಬೀಸಿತು.

೬೫. ತಲೆಯನ್ನು ಎತ್ತಿಕೊಂಡು ವೇಗಶಾಲಿಯೂ ಪರ್ವತಸದೃಶವೂ ಆಗಿದ್ದ ನಿಮಿಯ ಆನೆಯು, ದೇಹದಿಂದ ರಕ್ತವು ಸುರಿಯುತ್ತಿರಲು, ಸಾಂದ್ರವಾದ ಗೈರಿಕಾದಿ ಧಾತುರಸದ ಮಡುವಿನಿಂದ ತುಂಬಿದ ಬೆಟ್ಟದ ಹಾಗೆ ಪ್ರಕಾಶಿಸುತ್ತಿತ್ತು.

೬೬. ಕುಬೇರನಾದರೋ ಒಂದು ದೊಡ್ಡ ಗದೆಯನ್ನು ಬೀಸಿ ನಿಮಿಯ ಆನೆಯ ಮೇಲೆ ಎಸೆದನು. ದೈತ್ಯಪ್ರಮುಖನಾದ ನಿಮಿಯು ತನ್ನ ವೇಗವೆಲ್ಲವನ್ನೂ ತೋರಿಸುತ್ತ ಕುಬೇರನ ತಲೆಯ ಮೇಲೆ ದುಮುಕಿದನು.

೬೭. ಪರ್ವತಾಕಾರವಾದ ಆ ಆನೆಯು ಗದೆಯ ಪ್ರಹಾರದಿಂದ ಮೂರ್ಛೆ ಹೋಯಿತು. ಅದು ವೇಗದಿಂದ ಬೀಳುವಾಗ ಅದರ ಕೊಂಬುಗಳು ನೆಲಕ್ಕೆ ನಾಟಿಕೊಂಡು ಭೂಮಿಯು ಸೀಳಿತು.

ಪತಿತೇ ತು ಗಜೇ ತಸ್ಮಿನ್ ಸಿಂಹನಾದೋ ಮಹಾನಭೂತ್ ।
ಸರ್ವತಃ ಸುರಸೈನ್ಯಾನಾಂ ಗಜಬೃಂಹಿತಬೃಂಹಿತೈಃ ॥೬೮॥

ಹೇಷಾರವೇಣ ಚಾಶ್ವಾನಾಂ ಗುಣಾಸ್ಫೋಟೈಶ್ಚ ಧನ್ವಿನಾಂ ।
ಗಜಂ ತಂ ನಿಹತಂ ದೃಷ್ಟ್ವಾ ನಿಮಿಂ ಚಾಪಿ ಪರಾಙ್ಮುಖಂ ॥೬೯॥

ಶ್ರುತ್ವಾ ಚ ಸಿಂಹನಾದಂ ಚ ಸುರಾಣಾಮತಿಕೋಪನಃ ।
ಜಂಭೋ ಜಜ್ವಾಲ ಕೋಪೇನ ಸೀತಾಜ್ಯ ಇವ ಪಾವಕಃ ॥೭೦॥

ಸ ಸುರಾನ್ ಕೋಪರಕ್ತಾಕ್ಷೋ ಧನುಷ್ಯಾರೋಪ್ಯ ಸಾಯಕಂ ।
ತಿಷ್ಠತೇತ್ಯಬ್ರವೀತ್ತಾವತ್ಸಾರಥಿಂ ಚಾಪ್ಯಚೋದಯತ್ ॥೭೧॥

ವೇಗೇನ ಚಲತಸ್ತಸ್ಯ ತದ್ರಥಸ್ಯಾಭವದ್ದ್ಯುತಿಃ ।
ಯಥಾದಿತ್ಯಸಹಸ್ರಸ್ಯಾಭ್ಯುದಿತಸ್ಯೋದಯಾಚಲೇ ॥೭೨॥

---

೬೮. ಆ ಮಹಾಗಜವು ಕೆಳಗೆ ಬಿದ್ದಿತೋ ಇಲ್ಲವೋ ದೇವತೆಗಳ ಸೈನ್ಯದಲ್ಲಿ ಎತ್ತೆತ್ತಲೂ ಬಲವಾದ ಸಿಂಹನಾದವು ಹುಟ್ಟಿತು. ಆನೆಗಳು ಘರ್ಜಿಸಿದುವು; ಕುದುರೆಗಳು ಕೆನೆದುವು; ಯೋಧರು ಬಿಲ್ಲಿನ ಹೆದೆಗಳನ್ನು ಮಿಡಿದರು.

೬೯-೭೦. ಆ ದೊಡ್ಡ ಆನೆಯ ಮರಣವನ್ನೂ, ನಿಮಿಯ ಪರಾಜಯವನ್ನೂ, ದೇವತೆಗಳ ಸಿಂಹನಾದವನ್ನೂ ಕಂಡು ಜಂಭನಿಗೆ ಬಹು ಕೋಪ ಬಂದಿತು. ತುಪ್ಪವನ್ನು ಸುರಿದ ಬೆಂಕಿಯಂತೆ ಅವನು ಉರಿದೆದ್ದನು.

೭೧. ಕೋಪದಿಂದ ಕಣ್ಣು ಕೆಂಪೇರಿರಲು, ಬಿಲ್ಲಿನಲ್ಲಿ ಬಾಣವನ್ನು ಹೂಡಿ "ನಿಲ್ಲಿ ನಿಲ್ಲಿ; ಇಗೋ ಬಂದೆನು" ಎಂದು ದೇವತೆಗಳಿಗೆ ಹೇಳುತ್ತ ಬೇಗನೆ ರಥವನ್ನು ನಡೆಸುವಂತೆ ಅವನು ಸಾರಥಿಗೆ ಹೇಳಿದನು.

೭೨. ವೇಗದಿಂದ ಚಲಿಸುವ ಆ ರಥದ ಕಾಂತಿಯು ಉದಯಪರ್ವತದಲ್ಲಿ ಒಟ್ಟಿಗೆ ಹುಟ್ಟಿದ ಸಾವಿರಾರು ಸೂರ್ಯರ ತೇಜಸ್ಸನ್ನು ಹೋಲುತ್ತಿತ್ತು.

**ಪತಾಕಿನಾ ರಥೇನಾಜೌ ಕಿಂಕಿಣೀಜಾಲಮಾಲಿನಾ ।**
**ಶಶಿಶುಭ್ರಾತಪತ್ರೇಣ ಸ ತೇನ ಸ್ಯಂದನೇನ ತು ॥೭೩॥**

**ಘಟ್ಟಯನ್ ಸುರಸೈನ್ಯಾನಾಂ ಹೃದಯಂ ಸಮದೃಶ್ಯತ ।**
**ತಮಾಯಾಂತಮಭಿಪ್ರೇಕ್ಷ್ಯ ಧನುಷ್ಯಾಹಿತಸಾಯಕಂ ॥೭೪॥**

**ಶತಕ್ರತುರದೀನಾತ್ಮಾ ದೃಢಮಾಧತ್ತ ಕಾರ್ಮುಕಂ ।**
**ಬಾಣಂ ಚ ತೈಲಧೌತಾಗ್ರಮರ್ಧಚಂದ್ರಮಜಿಹ್ಮಗಂ ॥೭೫॥**

**ತೇನಾಸ್ಯ ಸಶರಂ ಚಾಪಂ ರಣೇ ಚಿಚ್ಛೇದ ವೃತ್ರಹಾ ।**
**ಕ್ಷಿಪ್ರಂ ಸಂತ್ಯಜ್ಯ ತಚ್ಚಾಪಂ ಜಂಭೋ ದಾನವನಂದನಃ ॥೭೬॥**

**ಅನ್ಯತ್ಕಾರ್ಮುಕಮಾದಾಯ ವೇಗವದ್ಭಾರಸಾಧನಂ ।**
**ಶರಾಂಶ್ಚಾಶೀವಿಷಾಕಾರಾಂಸ್ತೈಲಧೌತಾನಜಿಹ್ಮಗಾನ್ ॥೭೭॥**

**ಶಕ್ರಂ ವಿವ್ಯಾಧ ದಶಭಿರ್ಜತ್ರುದೇಶೇ ತು ಪತ್ರಿಭಿಃ ।**
**ಹೃದಯೇ ಚ ತ್ರಿಭಿಶ್ಚಾಪಿ ದ್ವಾಭ್ಯಾಂ ಚ ಸ್ಕಂಧಯೋರ್ದ್ವಯೋಃ ॥೭೮॥**

---

೭೩. ಜಂಭಾಸುರನ ತೇರಿಗೆ ಬಾವುಟವನ್ನು ಕಟ್ಟಿ ಕಿರುಗೆಜ್ಜೆಗಳ ಸರದಿಂದ ಅಲಂಕಾರಮಾಡಿದ್ದರು. ಅದರ ಬಿಳಿಯ ಕೊಡೆಯು ಚಂದ್ರನಂತೆ ಪ್ರಕಾಶಿಸುತ್ತಿತ್ತು. ಆ ದೈತ್ಯನು ಸೈನ್ಯದ ಮುಂದೆ ಬಂದು ನಿಂತಾಗ ದೇವತೆಗಳ ಎದೆ ಒಡೆದು ಹೋಯಿತು.

೭೪-೭೫. ಬಿಲ್ಲಿಗೆ ಬಾಣವನ್ನು ಹೂಡಿ ಶತ್ರುವು ಬರುತ್ತಿರುವುದನ್ನು ಇಂದ್ರನು ನೋಡಿದನು. ಅವನಿಗೆ ಗಾಬರಿಯೇನೂ ಆಗಲಿಲ್ಲ. ಬಲವಾದ ಬಿಲ್ಲನ್ನೂ, ಗುರಿಯನ್ನು ತಪ್ಪದೆ ಮುಟ್ಟುವ, ಅರ್ಧಚಂದ್ರಾಕಾರವಾದ, ವಿಷದ ತೈಲದಲ್ಲಿ ಅದ್ದಿದ ತೀಕ್ಷ್ಣವಾದ ಬಾಣವನ್ನೂ ಕೈಗೆ ಎತ್ತಿಕೊಂಡನು.

೭೬-೭೮. ಇಂದ್ರನು ಆ ಬಾಣದಿಂದ ವೈರಿಯ ಬಿಲ್ಲುಬಾಣಗಳನ್ನು ಕತ್ತರಿಸಿದನು. ದೈತ್ಯಪುತ್ರನಾದ ಜಂಭನು ಬೇಗನೆ ಆ ಮುರುಕುಬಿಲ್ಲನ್ನು ಬಿಸುಟು ಮತ್ತೊಂದನ್ನು ಎತ್ತಿಕೊಂಡನು. ಅದು ಬಲವಾಗಿಯೂ ವೇಗವಾಗಿಯೂ ಇದ್ದಿತು. ಅವನ ಅಂಬುಗಳು ಎಣ್ಣೆಯಲ್ಲಿ ನೆನೆದು, ಗುರಿಯನ್ನು ನೇರವಾಗಿ ಮುಟ್ಟತಕ್ಕುವಾಗಿ ಸರ್ಪಗಳಂತೆ ಕ್ರೂರವಾಗಿದ್ದುವು. ಅವನು ಅಂತಹ ಹತ್ತು ಬಾಣಗಳಿಂದ ಇಂದ್ರನ ಹೆಗ್ಗತ್ತನ್ನೂ, ಮೂರರಿಂದ ಎದೆಯನ್ನೂ, ಎರಡರಿಂದ ಹೆಗಲನ್ನೂ ಹೊಡೆದನು.

ಶಕ್ರೋಽಪಿ ದಾನವೇಂದ್ರಾಯ ಬಾಣಜಾಲಮಪೀದೃಶಂ ।
ಅಸ್ರಾಕ್ಷೀತ್ ದಾನವೇಂದ್ರಸ್ತು ಶರಾಞ್ಛಕ್ರಭುಜೇರಿತಾನ್ ॥೭೯॥
ಚಿಚ್ಛೇದ ದಶಧಾಕಾಶೇ ಶರೈರಗ್ನಿಶಿಖೋಪಮೈಃ ।
ತತಸ್ತು ಶರಜಾಲೇನ ದೇವೇಂದ್ರೋ ದಾನವೇಶ್ವರಂ ॥೮೦॥
ಆಚ್ಛಾದಯತ ಯತ್ನೇನ ವರ್ಷಾಸ್ವಿವ ಘನೈರ್ನಭಃ ।
ದೈತ್ಯೋಽಪಿ ಬಾಣಜಾಲಂ ತದ್ವ್ಯಧಮತ್ಸಾಯಕೈಃ ಶಿತೈಃ ॥೮೧॥
ಯಥಾ ವಾಯುರ್ಘನಾಟೋಪಂ ಪರಿವಾರ್ಯ ದಿಶೋ ಮುಖೇ ।
ಶಕ್ರೋಽಥ ಕ್ರೋಧಸಂರಂಭಾನ್ನ ವಿಶೇಷಯತೇ ಯದಾ । ॥೮೨॥
ದಾನವೇಂದ್ರಂ ತದಾ ಚಕ್ರೇ ಗಂಧರ್ವಾಸ್ತ್ರಂ ಮಹಾದ್ಭುತಂ ।
ತದುತ್ಥತೇಜಸಾ ವ್ಯಾಪ್ತಮಭೂದ್ಗಗನಗೋಚರಂ ॥೮೩॥

---

೭೯. ಇಂದ್ರನು ಸುಮ್ಮನಿರಲಿಲ್ಲ. ಅವನೂ ಕೂಡ ಜಂಭಾಸುರನ ಮೇಲೆ ಇಂತಹ ಬಾಣಗಳನ್ನೇ ಬಿಟ್ಟನು. ಆದರೆ ಅವು ಇಂದ್ರನ ಕೈಯನ್ನು ಬಿಟ್ಟು ತನ್ನ ಬಳಿಗೆ ಬರುವುದರೊಳಗಾಗಿ ಜಂಭನು ಅವುಗಳನ್ನು ಅಗ್ನಿಜ್ವಾಲೆಯಂತಿರುವ ತನ್ನ ಬಾಣಗಳಿಂದ ನಡುದಾರಿಯಲ್ಲಿಯೇ ಕತ್ತರಿಸಿದನು. ಅವು ಹತ್ತು ತುಂಡಾಗಿ ಬಿದ್ದುವು.

೮೦. ಬಳಿಕ ದೇವೇಂದ್ರನು ಮಳೆಗಾಲದಲ್ಲಿ ಆಕಾಶವನ್ನು ಮೋಡಗಳಿಂದ ಮುಚ್ಚುವಂತೆ ದಾನವೇಶ್ವರನನ್ನು ಬಾಣಗಳ ಪರಂಪರೆಯಿಂದ ಮುತ್ತಿದನು.

೮೧. ಜಂಭಾಸುರನೂ ಸಹ ತೀಕ್ಷ್ಣವಾದ ಬಾಣಗಳಿಂದ, ವಾಯುವು ದಿಗಂತದಲ್ಲೆಲ್ಲ ಸಂಚರಿಸಿ ಮೋಡಗಳ ಆರ್ಭಟವನ್ನು ತೊಲಗಿಸುವಂತೆ, ಇಂದ್ರನ ಬಾಣಪಙ್ಕ್ತಿಯನ್ನು ಧ್ವಂಸಗೊಳಿಸಿದನು.

೮೨. ದಾನವನನ್ನು ಯುದ್ಧಕೌಶಲದಲ್ಲಿ ಮೀರಿಸುವುದಕ್ಕೆ ಆಗದೆ ಹೋಗಲು ದೇವೇಂದ್ರನಿಗೆ ತಡೆಯುವುದಕ್ಕಾಗದಷ್ಟು ಕೋಪ ಬಂದಿತು. ಆಗ ಅವನು ಅತ್ಯದ್ಭುತ ಶಕ್ತಿಯುಳ್ಳ ಗಂಧರ್ವಾಸ್ತ್ರವನ್ನು ಪ್ರಯೋಗಿಸಿದನು.

೮೩-೮೪. ಅದರಿಂದ ಹುಟ್ಟಿದ ತೇಜಸ್ಸು ಆಕಾಶವನ್ನೆಲ್ಲ ವ್ಯಾಪಿಸಿತು. ಬಗೆ ಬಗೆಯ ಪ್ರಾಕಾರಗಳಿಂದಲೂ ತೋರಣಗಳಿಂದಲೂ ಕೂಡಿದ ಅದ್ಭುತವಾದ

ಗಂಧರ್ವನಗರೈಶ್ಚಾಪಿ ನಾನಾಪ್ರಾಕಾರತೋರಣೈಃ ।
ಮುಂಚದ್ಭಿರದ್ಭುತಾಕಾರೈರಸ್ತ್ರವೃಷ್ಟಿಂ ಸಮಂತತಃ ||೮೪||

ಅಥಾಸ್ತ್ರವೃಷ್ಟ್ಯಾ ದೈತ್ಯಾನಾಂ ಹನ್ಯಮಾನಾ ಮಹಾಚಮೂಃ ।
ಜಂಭಂ ಶರಣಮಾಗಚ್ಛದಪ್ರಮೇಯಪರಾಕ್ರಮಂ ||೮೫||

ವ್ಯಾಕುಲೋಽಪಿ ಸ್ವಯಂ ದೈತ್ಯಃ ಸಹಸ್ರಾಕ್ಷಾಸ್ತ್ರಪೀಡಿತಃ ।
ಸ್ಮರ್ರ ಸಾಧುಸಮಾಚಾರಂ ಭೀತತ್ರಾಣಪರೋಽಭವತ್ ||೮೬||

ಆಥಾಸ್ತ್ರಂ ಮೌಸಲಂ ನಾಮ ಮುಮೋಚ ದಿತಿನಂದನಃ ।
ತತೋಽಯೋಮುಸಲೈಃ ಸರ್ವಮಭವತ್ಪೂರಿತಂ ಜಗತ್ ||೮೭||

ಏಕಪ್ರಕಾರಕರಣೈರಪಧೃಷ್ಯೈಃ ಸಮಂತತಃ ।
ಗಂಧರ್ವನಗರಂ ತೇಷು ಗಂಧರ್ವಾಸ್ತ್ರವಿನಿರ್ಮಿತಂ ||೮೮||

---

ಗಂಧರ್ವ ನಗರಗಳು ವಿರಾಜಿಸಿದುವು. ಅವು ಎಲ್ಲ ಕಡೆಗಳಲ್ಲಿಯೂ ಅಸ್ತ್ರಗಳ ಮಳೆಯನ್ನು ಕರೆದುವು.

೮೫. ಎಡೆಬಿಡದೆ ಸುರಿಯುವ ಆ ಅಸ್ತ್ರಗಳ ಮಳೆಯಿಂದ ದೈತ್ಯರ ದೊಡ್ಡ ಸೇನೆಯು ನಜ್ಜುಗುಜ್ಜಾಯಿತು. ಅದು ದಿಕ್ಕುತೋರದೆ ಅಪರಿಮಿತ ಬಲಶಾಲಿಯೆಂದೆನಿಸಿದ್ದ ಜಂಭನ ಬಳಿಗೆ ಹೋಗಿ ಅವನನ್ನು ಮರೆಹೊಕ್ಕಿತು.

೮೬. ಇಂದ್ರನ ಅಸ್ತ್ರದಿಂದ ನೊಂದು ತಾನೇ ಕೊರಗುತ್ತಿದ್ದರೂ, ಸಜ್ಜನನ ನಡೆವಳಿಕೆಯನ್ನು ಮನಸ್ಸಿಗೆ ತಂದುಕೊಂಡು ಜಂಭನು ಭೀತರಾದ ತನ್ನ ಸೈನಿಕರನ್ನು ರಕ್ಷಿಸಲು ಆಸಕ್ತನಾದನು.

೮೭-೮೮. ತರುವಾಯ ಆ ದೈತ್ಯವೀರನು ಮೌಸಲವೆಂಬ ಪ್ರಸಿದ್ಧವಾದ ಅಸ್ತ್ರವನ್ನು ಪ್ರಯೋಗಿಸಿದನು. ಅದರ ಪ್ರಭಾವದಿಂದ ಕಬ್ಬಿಣದ ಒನಕೆಗಳು ಜಗತ್ತಿನಲ್ಲೆಲ್ಲ ತುಂಬಿಹೋದುವು. ಅವು ಒಂದೇ ಸಮನಾಗಿ ಸಿಕ್ಕಿದುದನ್ನೆಲ್ಲ ಜಜ್ಜಿ ಹಾಕತೊಡಗಿದುವು. ಅವುಗಳನ್ನು ಅಡಗಿಸುವುದು ಶತ್ರುಗಳಿಗೆ ಅಸಾಧ್ಯವಾಯಿತು. ಇಂದ್ರನ ಗಂಧರ್ವಾಸ್ತ್ರದಿಂದ ನಿರ್ಮಿತವಾಗಿದ್ದ ಗಂಧರ್ವನಗರವೂ ಕೂಡ ಅವುಗಳಲ್ಲಿ ಮುಳುಗಿಹೋಯಿತು.

ಗಾಂಧರ್ವಮಸ್ತ್ರಂ ಸಂಧಾಯ ಸುರಸೈನ್ಯೇಷು ಚಾಪರಂ ।
ಏಕೈಕೇನ ಪ್ರಹಾರೇಣ ಗಜಾನಶ್ವಾನ್ ಮಹಾರಥಾನ್ ॥೮೯॥

ರಥಾಶ್ವಾನ್ ಸೋಽಹನತ್ಕ್ಷಿಪ್ರಂ ಶತಶೋಽಥ ಸಹಸ್ರಶಃ ।
ತತಃ ಸುರಾಧಿಪಸ್ತ್ವಾಷ್ಟ್ರಮಸ್ತ್ರಂ ಚ ಸಮುದೀರಯತ್ ॥೯೦॥

ಸಂಧ್ಯಮಾನೇ ತತಸ್ತ್ವಾಷ್ಟ್ರೇ ನಿಶ್ಚೇರುಃ ಪಾವಕಾರ್ಚಿಷಃ ।
ತತೋ ಯಂತ್ರಮಯಾನ್ ದಿವ್ಯಾನಾಯುಧಾನ್ ದುಷ್ಪ್ರಧರ್ಷಿಣಃ ॥೯೧॥

ತೈರ್ಯಂತ್ರೈರಭವದ್ಬದ್ಧಮಂತರಿಕ್ಷೇ ವಿತಾನಕಂ ।
ವಿತಾನಕೇನ ತೇನಾಥ ಪ್ರಶಮಂ ಮೌಸಲೇ ಗತೇ ॥೯೨॥

ಶೈಲಾಸ್ತ್ರಂ ಮುಮುಚೇ ಜಂಭೋ ಯಂತ್ರಸಂಘಾತತಾಡನಂ ।
ವ್ಯಾಮಪ್ರಮಾಣೈರುಪಲೈಸ್ತತೋ ವರ್ಷಮವರ್ತತ ॥೯೩॥

---

೮೯. ಜಂಭಾಸುರನು ಮತ್ತೊಂದು ಗಾಂಧರ್ವಾಸ್ತ್ರವನ್ನು ತೊಟ್ಟು ದೇವ ಸೈನ್ಯಗಳ ಮೇಲೆ ಬಿಟ್ಟನು. ಅದು ಒಂದೊಂದು ಪೆಟ್ಟಿಗೂ ಆನೆಗಳು, ಕುದುರೆಗಳು, ಮಹಾರಥರು, ರಥದ ಕುದುರೆಗಳು ಇವುಗಳನ್ನು ನೂರುಗಟ್ಟಲೆಯಾಗಿಯೂ ಸಾವಿರ ಗಟ್ಟಲೆಯಾಗಿಯೂ ಸಂಹರಿಸಿತು.

೯೦. ತರುವಾಯ ದೇವೇಂದ್ರನು ತ್ವಾಷ್ಟ್ರವೆಂಬ ಅಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಹೂಡುತ್ತಿರುವಾಗಲೇ ಬೆಂಕಿಯ ಉರಿಗಳು ಹೊರಟು ದಿಕ್ಕು ದಿಕ್ಕಿಗೂ ವ್ಯಾಪಿಸಿದುವು.

೯೧. ಅದರ ಹಿಂದೆಯೇ ಅವನು ಯಂತ್ರಮಯವಾದ ದಿವ್ಯಾಯುಧಗಳನ್ನೂ ಬಿಟ್ಟನು. ಅವುಗಳನ್ನು ನಿವಾರಿಸುವುದು ಶತ್ರುಗಳಿಗೆ ಅಸಾಧ್ಯವಾಗಿತ್ತು. ಅಂತರಿಕ್ಷದಲ್ಲಿ ಅವು ಮೇಲ್ಕಟ್ಟನ್ನು ಕಟ್ಟಿದಂತೆ ಒತ್ತಾಗಿ ಹೆಣೆದುಕೊಂಡುವು.

೯೨-೯೩. ಆ ಮೇಲ್ಕಟ್ಟಿನಿಂದ ಮೌಸಲಾಸ್ತ್ರವು ಶಾಂತವಾಯಿತು. ಆಗ ಜಂಭನು ಯಂತ್ರಾಯುಧಗಳನ್ನೆಲ್ಲ ನಾಶಪಡಿಸಬೇಕೆಂದು ಶೈಲಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಎರಡು ಕೈಗಳಿಂದಲೂ ತಬ್ಬುವುದಕ್ಕಾಗದಷ್ಟು ದಪ್ಪ ದಪ್ಪವಾದ ಕಲ್ಲುಗಳು ಮಳೆಯಂತೆ ಸುರಿಯತೊಡಗಿದುವು.

ತ್ವಾಷ್ಟ್ರಸ್ಯ ನಿರ್ಮಿತಾನ್ಯಾಶು ಯಂತ್ರಾಣಿ ತದನಂತರಂ ।
ತೇನೋಪಲನಿಪಾತೇನ ಗತಾನಿ ತಿಲಶಸ್ತತಃ ॥೯೪॥

ಯಂತ್ರಾಣಿ ತಿಲಶಃ ಕೃತ್ವಾ ಶೈಲಾಸ್ತ್ರಂ ಪರಮೂರ್ಧಸು ।
ನಿಪಪಾತಾತಿವೇಗೇನಾದಾರಯತ್ಪೃಥಿವೀಂ ತತಃ ॥೯೫॥

ತತೋ ವಜ್ರಾಸ್ತ್ರಮಕರೋತ್ಸಹಸ್ರಾಕ್ಷಃ ಪುರಂದರಃ ।
ತದೋಪಲಮಹಾವರ್ಷಂ ವ್ಯಶೀರ್ಯತ ಸಮಂತತಃ ॥೯೬॥

ತತಃ ಪ್ರಶಾಂತೇ ಶೈಲಾಸ್ತ್ರೇ ಜಂಭೋ ಭೂಧರಸನ್ನಿಭಃ ।
ಐಷೀಕಮಸ್ತ್ರಮಕರೋದಭೀತೋಽತಿಪರಾಕ್ರಮಃ ॥೯೭॥

ಐಷೀಕೇಣಾಗಮನ್ನಾಶಂ ವಜ್ರಾಸ್ತ್ರಂ ಶಕ್ರವಲ್ಲಭಂ ।
ವಿಜೃಂಭತ್ಯಥ ಚೈಷೀಕೇ ಪರಮಾಸ್ತ್ರೇಽತಿದುರ್ಧರೇ ॥೯೮॥

---

೯೪. ಆ ಶಿಲಾವರ್ಷದಿಂದ ತ್ವಷ್ಟ್ರಾಸ್ತ್ರನಿರ್ಮಿತಗಳಾದ ಯಂತ್ರಗಳೆಲ್ಲ ಎಳ್ಳಿನಂತೆ ಚೂರುಚೂರಾದುವು.

೯೫. ಶೈಲಾಸ್ತ್ರವು ಯಂತ್ರಗಳನ್ನು ಪುಡಿಮಾಡಿ ಶತ್ರುಗಳ ತಲೆಯ ಮೇಲೆ ಬಹುವೇಗದಿಂದ ಎರಗಿತು. ಅಲ್ಲಿಂದ ನೆಲದ ಮೇಲೆ ಬಿದ್ದಿತು. ಅದರ ರಭಸಕ್ಕೆ ಭೂಮಿಯು ಸೀಳಿಹೋಯಿತು.

೯೬. ಬಳಿಕ ದೇವೇಂದ್ರನು ವಜ್ರಾಸ್ತ್ರವನ್ನು ಪ್ರಯೋಗಿಸಿದನು. ಅದು ಶೈಲಾಸ್ತ್ರವನ್ನು ಅಡಗಿಸಿತು. ಎಲ್ಲ ಕಡೆಗಳಲ್ಲಿಯೂ ಆಗುತ್ತಿದ್ದ ಕಲ್ಲಗಳ ಬಿರುಮಳೆಯು ಥಟ್ಟನೆ ನಿಂತಿತು.

೯೭. ಶೈಲಾಸ್ತ್ರವು ತಣ್ಣಗಾದ ಬಳಿಕ ಪರ್ವತಾಕಾರನೂ, ನಿರ್ಭೀತನೂ, ಅತಿಪರಾಕ್ರಮಿಯೂ ಆದ ಜಂಭನು ಐಷೀಕಾಸ್ತ್ರವನ್ನು ತೊಟ್ಟನು.

೯೮. ದೇವೇಂದ್ರನಿಗೆ ಅಚ್ಚುಮೆಚ್ಚಾಗಿದ್ದ ವಜ್ರಾಸ್ತ್ರವು ಆ ಐಷೀಕಾಸ್ತ್ರದಿಂದ ನಾಶವಾಯಿತು. ಅಮೋಘವಾದ ಆ ಅಸ್ತ್ರದ ತೇಜಸ್ಸನ್ನು ಸೈರಿಸುವುದು ದೇವತೆಗಳಿಗೆ ಅಸಾಧ್ಯವಾಯಿತು. ಅವರ ಸೈನ್ಯವೂ, ತೇರುಗಳೂ, ಆನೆಗಳೂ ಉರಿದುಹೋದುವು.

ಜಜ್ವಲುರ್ದೇವಸೈನ್ಯಾನಿ ಸಸ್ಯಂದನಗಜಾನಿ ತು ।
ದಹ್ಯಮಾನೇಷ್ವನೀಕೇಷು ತೇಜಸಾ ಸುರಸತ್ತಮಃ ॥೯೯॥

ಆಗ್ನೇಯಮಸ್ತ್ರಮಕರೋದ್ಜ್ವಲನ್ ಪಾಕಶಾಸನಃ ।
ತೇನಾಸ್ತ್ರೇಣ ತದಸ್ತ್ರಂ ಚ ಬಭ್ರಂಶೇ ತದನಂತರಂ ॥೧೦೦॥

ತಸ್ಮಿನ್ ಪ್ರತಿಹತೇ ಚಾಸ್ತ್ರೇ ಪಾವಕಾಸ್ತ್ರಂ ವ್ಯಜೃಂಭತ ।
ಜಜ್ವಾಲ ಕಾಯಂ ಜಂಭಸ್ಯ ಸರಥಂ ಚ ಸಸಾರಥಿಂ ॥೧೦೧॥

ತತಃ ಪ್ರತಿಹತಃ ಸೋಽಥ ದೈತ್ಯೇಂದ್ರಃ ಪ್ರತಿಭಾನವಾನ್ ।
ವಾರುಣಾಸ್ತ್ರಂ ಮುಮೋಚಾಥ ಶಮನಂ ಪಾವಕಾರ್ಚಿಷಾಂ ॥೧೦೨॥

ತತೋ ಜಲಧರೈರ್ವ್ಯೋಮ ಸ್ಫುರದ್ವಿದ್ಯುಲ್ಲತಾಕುಲೈಃ ।
ಗಂಭೀರಮುರಜಧ್ವಾನೈರಾಪೂರಿತಮಿವಾಂಬರೈಃ ॥೧೦೩॥

---

೯೯-೧೦೦. ಶತ್ರುವಿನ ಅಸ್ತ್ರದ ತೇಜಸ್ಸಿನಿಂದ ತನ್ನ ಸೈನ್ಯವು ದಗ್ಧವಾಗುತ್ತಿರುವುದನ್ನು ಕಂಡು ದೇವರಾಜನಾದ ಇಂದ್ರನು ಆಗ್ನೇಯಾಸ್ತ್ರವನ್ನು ಹೂಡಿದನು. ಅದು ಜಂಭಾಸುರನ ಅಸ್ತ್ರವನ್ನು ನಿರ್ವೀರ್ಯವಾಗಿ ಮಾಡಿತು.

೧೦೧. ಐಷೀಕಾಸ್ತ್ರವು ಅಡಗಿತು; ಆಗ್ನೇಯಾಸ್ತ್ರವು ತಾನೇ ತಾನಾಗಿ ಮೆರೆಯಿತು. ಜಂಭನ ಮೈ ಬೆಂದುಹೋಯಿತು. ಅವನ ಸಾರಥಿಯೂ ತೇರೂ ಉರಿದುಬಿದ್ದುವು.

೧೦೨. ಬಳಿಕ ಸಾಹಸಿಯೂ ರಣಪಂಡಿತನೂ ಆದ ಜಂಭಾಸುರನು ಪಾವಕಾಸ್ತ್ರದಿಂದ ಬೆಂದು, ಅಗ್ನಿಜ್ವಾಲೆಗಳನ್ನು ಅಡಗಿಸುವುದಕ್ಕಾಗಿ ವಾರುಣಾಸ್ತ್ರವನ್ನು ಪ್ರಯೋಗಿಸಿದನು.

೧೦೩. ಕೂಡಲೇ ಮೋಡಗಳು ಆಕಾಶವನ್ನೆಲ್ಲ ಮುತ್ತಿದುವು. ಮಿಂಚಿನ ಬಳ್ಳಿಗಳು ಹೊಳೆಹೊಳೆದುವು. ಮೃದಂಗನಾದದಂತೆ ಗಂಭೀರವಾಗಿ ಗುಡುಗು ಕೇಳಿಸಿತು.

ಕರೀಂದ್ರಕರತುಲ್ಯಾಭಿರ್ಜಲಧಾರಾಭಿರಂಬರಾತ್ ।
ಪತಂತೀಭಿರ್ಜಗತ್ಸರ್ವಂ ಕ್ಷಣೇನಾಪೂರಿತಂ ಬಭೌ ॥೧೦೪॥

ಶಾಂತಮಾಗ್ನೇಯಮಸ್ತ್ರಂ ತತ್ತ್ವವಿಲೋಕ್ಯ ಸುರಾಧಿಪಃ ।
ವಾಯವ್ಯಮಸ್ತ್ರಮಕರೋನ್ಮೇಘಸಂಘಾತನಾಶನಂ ॥೧೦೫॥

ವಾಯವ್ಯಾಸ್ತ್ರಬಲೇನಾಥ ನಿರ್ಧೂತೇ ಮೇಘಮಂಡಲೇ ।
ಬಭೂವ ವಿಮಲಂ ವ್ಯೋಮ ನೀಲೋತ್ಪಲದಲಪ್ರಭಂ ॥೧೦೬॥

ವಾಯುನಾ ಚಾತಿಘೋರೇಣ ಕಂಪಿತಾಸ್ತೇ ತು ದಾನವಾಃ ।
ನ ಶೇಕುಸ್ತತ್ರ ತೇ ಸ್ಥಾತುಂ ರಣೇऽತಿಬಲಿನೋऽಪಿ ಯೇ ॥೧೦೭॥

ತದಾ ಜಂಭೋऽಭವಚ್ಛೈಲೋ ದಶಯೋಜನವಿಸ್ತೃತಃ ।
ಮಾರುತಪ್ರತಿಘಾತಾರ್ಥಂ ದಾನವಾನಾಂ ಭಯಾವಹಃ ॥೧೦೮॥

---

೧೦೪. ಸಲಗನ ಸೊಂಡಲಿನಂತೆ ದಪ್ಪನಾದ ಜಲಧಾರೆಗಳು ಆಕಾಶದಿಂದ ಬೀಳುತ್ತಿದ್ದುವು. ಸ್ವಲ್ಪಹೊತ್ತಿನಲ್ಲಿಯೇ ಜಗತ್ತೆಲ್ಲವೂ ಜಲಮಯವಾಯಿತು.

೧೦೫. ತಾನು ಪ್ರಯೋಗಿಸಿದ ಆಗ್ನೇಯಾಸ್ತ್ರವೂ ತಣ್ಣಗಾದುದನ್ನು ಕಂಡು ಇಂದ್ರನು ಮೋಡಗಳ ಗಡಣವನ್ನು ಚೆದುರಿಸಬೇಕೆಂದು ವಾಯವ್ಯಾಸ್ತ್ರವನ್ನು ಹೂಡಿದನು.

೧೦೬. ವಾಯವ್ಯಾಸ್ತ್ರದ ಬಲದಿಂದ ಮೇಘರಾಶಿಯೆಲ್ಲ ಮಾಯವಾಯಿತು. ಆಕಾಶವು ಕನ್ನೈದಿಲೆಯ ಎಸಳಿನಂತೆ ನಿರ್ಮಲವಾಯಿತು.

೧೦೭. ಬಹು ಭೀಕರವಾದ ಆ ಬಿರುಗಾಳಿಯಿಂದ ದಾನವರು ಗಡಗಡನೆ ನಡುಗಿದರು. ಸಾಮಾನ್ಯರ ಮಾತಿರಲಿ; ಯುದ್ಧದಲ್ಲಿ ಮಹಾಶೂರರೆಂದು ಪ್ರಸಿದ್ಧಿ ಪಡೆದವರೂ ಕೂಡ ಎದೆಗೊಟ್ಟು ನಿಲ್ಲಲಾರದೆ ಹೋದರು.

೧೦೮. ಆಗ ಜಂಭಾಸುರನು ದಾನವರಿಗೆ ವಾಯುವಿನ ಬಾಧೆಯುಂಟಾಗದಂತೆ ತಡೆಯುವುದಕ್ಕಾಗಿ ಹತ್ತುಯೋಜನ ವಿಸ್ತಾರವಾದ ದೊಡ್ಡ ಪರ್ವತದ ರೂಪವನ್ನು ತಾಳಿದನು. ಅದನ್ನು ಕಂಡು ದೈತ್ಯರೂ ಕೂಡ ಹೆದರಿಬಿಟ್ಟರು. ಇಂದ್ರನು ಪ್ರಯೋಗಿಸಿದ ಬಗೆಬಗೆಯ ಅಸ್ತ್ರಗಳ ತೀವ್ರತೇಜಸ್ಸಿನಿಂದ ಅಲ್ಲಿದ್ದ ಮರಗಳು ಸುಟ್ಟುಹೋದುವು.

ಮುಕ್ತನಾನಾಯುಧೋದಗ್ರತೇಜೋಽಭಿಜ್ವಲಿತದ್ರುಮಃ ।
ತತಃ ಪ್ರಶಮಿತೇ ವಾಯೌ ದೈತ್ಯೇಂದ್ರೇ ಪರ್ವತಾಕೃತೌ ॥೧೦೯॥

ಮಹಾಶನೀಂ ವಜ್ರಮಯೀಂ ಮುಮೋಚಾಶು ಶತಕ್ರತುಃ ।
ತಯಾಶನ್ಯಾ ಪತಿತಯಾ ದೈತ್ಯಸ್ಯಾಚಲರೂಪಿಣಃ ॥೧೧೦॥

ಕಂದರಾಣಿ ವ್ಯಶೀರ್ಯಂತ ಸಮಂತಾನ್ನಿರ್ಝರಾಣಿ ತು ।
ತತಃ ಸಾ ದಾನವೇಂದ್ರಸ್ಯ ಶೈಲಮಾಯಾ ನ್ಯವರ್ತತ ॥೧೧೧॥

ನಿವೃತ್ತಶೈಲಮಾಯೋಽಥ ದಾನವೇಂದ್ರೋ ಮದೋತ್ಕಟಃ ।
ಬಭೂವ ಕುಂಜರೋ ಭೀಮೋ ಮಹಾಶೈಲಸಮಾಕೃತಿಃ ॥೧೧೨॥

ಸ ಮಮರ್ದ ಸುರಾನೀಕಂ ದಂತೈಶ್ಚಾಪ್ಯಹನತ್ಸುರಾನ್ ।
ಬಭಂಜ ಪೃಷ್ಠತಃ ಕಾಂಶ್ಚಿತ್ಕರೇಣಾವೇಷ್ಟ್ಯ ದಾನವಃ ॥೧೧೩॥

---

೧೦೯-೧೧೧. ದೈತ್ಯವೀರನಾದ ಜಂಭನು ಪರ್ವತರೂಪವನ್ನು ತಾಳಿದ ಕೂಡಲೆ ವಾಯುವಿನ ಆರ್ಭಟವು ಅಡಗಿತು. ಕೂಡಲೆ ಇಂದ್ರನು ತಡಮಾಡದೆ ವಜ್ರದ ಸಿಡಿಲನ್ನು ಬಿಟ್ಟನು. ಅದರಿಂದ ದೈತ್ಯಪರ್ವತದ ಗುಹೆಗಳು ಕುಸಿದು ಬಿದ್ದುವು. ಸುತ್ತಮುತ್ತಲಿನ ಜಲಪ್ರವಾಹಗಳು ಬತ್ತಿದುವು. ಜಂಭಾಸುರನ ಮಾಯಾಶಕ್ತಿ ಅಡಗಿತು. ಅವನ ಪರ್ವತರೂಪವೂ ಹೋಯಿತು.

೧೧೨. ಮಾಯಾಪರ್ವತದ ರೂಪವು ಅಡಗಿದ ಕೂಡಲೆ ಜಂಭನು ಸೊಕ್ಕೇರಿದ ದೊಡ್ಡ ಆನೆಯ ಆಕೃತಿಯನ್ನು ತಾಳಿದನು. ಅದು ಗಾತ್ರದಲ್ಲಿ ಉನ್ನತವಾದ ಪರ್ವತವನ್ನು ಹೋಲುತ್ತಿತ್ತು.

೧೧೩. ಅವನು ದೇವತೆಗಳ ಸೈನ್ಯವನ್ನು ತುಳಿದುಹಾಕಿದನು. ಅವರಲ್ಲಿ ಕೆಲವರನ್ನು ಕೊಂಬುಗಳಿಂದ ತಿವಿದು ಕೊಂದನು. ಕೆಲವರನ್ನು ಸೊಂಡಲಿನಿಂದ ಸುತ್ತಿ ಬೆನ್ನುಕೆಳಗಾಗಿ ಬಿಸುಟು ಜಜ್ಜಿದನು.

ತತಃ ಕ್ಷಪಯುತಸ್ತಸ್ಯ ಸುರಸೈನ್ಯಾನಿ ವೃತ್ರಹಾ ।
ಅಸ್ತ್ರಂ ತ್ರೈಲೋಕ್ಯದುರ್ಧರ್ಷಂ ನಾರಸಿಂಹಂ ಮುಮೋಚ ಹ ॥೧೧೪॥

ತತಃ ಸಿಂಹಸಹಸ್ರಾಣಿ ನಿಶ್ಚೇರುರ್ಮಂತ್ರತೇಜಸಾ ।
ಕೃಷ್ಣದಂಷ್ಟ್ರಾಟ್ಟಹಾಸಾನಿ ಕ್ರಕಚಾಭನಖಾನಿ ಚ ॥೧೧೫॥

ತೈರ್ವಿಪಾಟಿತಗಾತ್ರೋಽಸೌ ಗಜಮಾಯಾಂ ವ್ಯಪೋಥಯತ್ ।
ತತಶ್ಚಾಶೀವಿಷೋ ಘೋರೋಽಭವತ್ಫಣಶತಾಕುಲಃ ॥೧೧೬॥

ವಿಷನಿಶ್ವಾಸನಿರ್ದಗ್ಧಂ ಸುರಸೈನ್ಯಂ ಮಹಾರಥಃ ।
ತತೋಽಸ್ತ್ರಂ ಗಾರುಡಂ ಚಕ್ರೇ ಶಕ್ರಶ್ಚಾರುಭುಜಸ್ತದಾ ॥೧೧೭॥

---

೧೧೪. ದೇವೇಂದ್ರನು ತನ್ನ ಸೇನೆಯು ಹಾಳಾಗುತ್ತಿರುವುದನ್ನು ನೋಡಿ ದೈತ್ಯನ ಮೇಲೆ ನಾರಸಿಂಹಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಎದುರಿಸ ಬಲ್ಲ ವೀರರು ಮೂರುಲೋಕದಲ್ಲಿ ಯಾರೂ ಇರಲಿಲ್ಲ.

೧೧೫. ಆ ಮಹಾಮಂತ್ರದ ತೇಜಸ್ಸಿನಿಂದ ಸಾವಿರಾರು ಸಿಂಹಗಳು ಉತ್ಪನ್ನವಾಗಿ ರಣರಂಗದಲ್ಲಿ ಸಂಚರಿಸತೊಡಗಿದುವು. ಅವು ಕೋರೆಹಲ್ಲುಗಳನ್ನು ಬಿಟ್ಟುಕೊಂಡು ಅಟ್ಟಹಾಸಮಾಡುತ್ತಿದ್ದುವು. ಅವುಗಳ ಉಗುರು ಗರಗಸ ದಂತಿದ್ದುವು.

೧೧೬. ಅವು ಜಂಭನ ಶರೀರವನ್ನು ಸೀಳಿದುವು. ಅವನ ಗಜಮಾಯೆ ಹೋಯಿತು. ಬಳಿಕ ಆತನು ನೂರಾರು ಹೆಡೆಯ ಭಯಂಕರವಾದ ಸರ್ಪದ ರೂಪವನ್ನೆತ್ತಿದನು.

೧೧೭. ಅದು ಉಸಿರಿನ ವಿಷವನ್ನು ಕಾರುತ್ತಿತ್ತು. ಅದರ ವೇಗದಿಂದ ದೇವತೆಗಳ ದಳವು ಬೆಂದುಹೋಯಿತು. ಆಗ ಮಹಾರಥನೂ ಬಹುಪರಾಕ್ರಮ ಶಾಲಿಯೂ ಆದ ದೇವೇಂದ್ರನು ಅದರ ಪರಿಹಾರಕ್ಕಾಗಿ ಗಾರುಡಾಸ್ತ್ರವನ್ನು ತೊಟ್ಟನು.

ತತೋ ಗುರುತ್ಮತಸ್ತಸ್ಮಾತ್ಸಹಸ್ರಾಣಿ ವಿನಿರ್ಯಯುಃ ।
ತೈರ್ಗರುತ್ಮದ್ಭಿರಾಸಾದ್ಯ ಜಂಭೋ ಭುಜಗರೂಪವಾನ್ ॥೧೧೮॥

ಕೃತಸ್ತು ಖಂಡಶೋ ದೈತ್ಯಃ ಸಾಸ್ಯ ಮಾಯಾ ವ್ಯನಶ್ಯತ ।
ಪ್ರನಷ್ಟಾಯಾಂ ತು ಮಾಯಾಯಾಂ ತತೋ ಜಂಭೋ ಮಹಾಸುರಃ ॥

ಚಕಾರ ರೂಪಮತುಲಂ ಚಂದ್ರಾದಿತ್ಯಪಥಾನುಗಂ ।
ವಿವೃತ್ತವದನೋ ಗ್ರಸ್ತುಮಿಯೇಷ ಸುರಪುಂಗವಾನ್ ॥೧೨೦॥

ತತೋಽಸ್ಯ ವಿವಿಶುರ್ವಕ್ತ್ರಂ ಸಮಹಾರಥಕುಂಜರಾಃ ।
ಸುರಸೇನಾವಿಶದ್ಭೀಮಂ ಪಾತಾಲೋತ್ತಾನತಾಲುಕಂ ॥೧೨೧॥

ಸೈನ್ಯೇಷು ಗ್ರಸ್ಯಮಾನೇಷು ದಾನವೇನ ಬಲೀಯಸಾ ।
ಶಕ್ರೋ ದೈನ್ಯಂ ಸಮಾಪನ್ನಃ ಶ್ರಾಂತಬಾಹುಃ ಸವಾಹನಃ ॥೧೨೨॥

---

೧೧೮. ಆ ದಿವ್ಯಾಸ್ತ್ರದಿಂದ ಸಾವಿರಾರು ಗರುಡಪಕ್ಷಿಗಳು ಉತ್ಪನ್ನವಾಗಿ ಸರ್ಪರೂಪದಲ್ಲಿದ್ದ ಜಂಭನನ್ನು ತುಂಡು ತುಂಡಾಗಿ ಕತ್ತರಿಸಿದುವು. ಅಲ್ಲಿಗೆ ಅವನ ಸರ್ಪಮಾಯೆ ಅಡಗಿತು.

೧೧೯-೧೨೦. ಹೀಗೆ ತನ್ನ ಮಾಯಾಶಕ್ತಿಯು ನಷ್ಟವಾಗಲು ಅಸುರ ವೀರನಾದ ಆ ಜಂಭನು ಅತ್ಯದ್ಭುತವಾದ ಮಹಾರೂಪವನ್ನು ತಾಳಿದನು. ಚಂದ್ರ ಸೂರ್ಯರ ಮಾರ್ಗವನ್ನು ತಡೆಯುವಷ್ಟು ಉನ್ನತವಾಗಿ ಬೆಳೆದನು. ಬಾಯನ್ನು ತೆರೆದುಕೊಂಡು ಸುರನಾಯಕರನ್ನು ನುಂಗಲೆಳಸಿದನು.

೧೨೧. ದವಡೆಗಳೆರಡನ್ನೂ ತೆರೆದಿದ್ದಾಗ ಅವನ ಬಾಯಿ ಪಾತಾಳದಂತೆ ಬಹು ಭಯಂಕರವಾಗಿ ಕಾಣುತ್ತಿತ್ತು. ಮಹಾರಥರೂ ಮದದಾನೆಗಳೂ ಅದರೊಳಗೆ ಇಳಿದುವು. ದೇವತೆಗಳ ಸೈನ್ಯವೆಲ್ಲ ಅದರಲ್ಲಿ ಹೊಕ್ಕಿತು.

೧೨೨. ಅತ್ಯಂತ ಬಲಶಾಲಿಯಾದ ಜಂಭಾಸುರನು ಸೈನ್ಯವೆಲ್ಲವನ್ನೂ ನುಂಗಿದುದನ್ನು ಕಂಡು ಇಂದ್ರನು ಗಾಬರಿಗೊಂಡನು. ಆವನ ತೋಳಿನ ಶಕ್ತಿ ಕುಗ್ಗಿತು. ಅವನ ವಾಹನವಾದ ಐರಾವತವೂ ಬಳಲಿತು.

ಕರ್ತವ್ಯತಾಂ ನಾಧ್ಯಗಚ್ಛತ್ತ್ರೋವಾಚೇದಂ ಜನಾರ್ದನಂ ।
ಕಿಮನಂತರಮತ್ರಾಸ್ತಿ ಕರ್ತವ್ಯಸ್ಯಾವಶೇಷಿತಂ ॥೧೨೩॥

ಯದಾಶ್ರಿತ್ಯ ಘಟಾಮೋಽಸ್ಯ ದಾನವಸ್ಯ ಯುಯುತ್ಸವಃ ।
ತತೋ ಹರಿರುವಾಚೇದಂ ವಜ್ರಾಯುಧಮುದಾರಧೀಃ ॥೧೨೪॥

ನ ಸಾಂಪ್ರತಂ ರಣಂ ತ್ಯಕ್ತುಂ ಶಕ್ಯಂ ಕಾತರಭೀತವತ್ ।
ವರ್ಧಸ್ವಾಶು ಮಹಾಮಾಯಾಂ ಪುರಂದರ ರಿಪುಂ ಪ್ರತಿ ॥೧೨೫॥

ಮಯ್ಯೈಷ ಲಕ್ಷಿತೋ ದೈತ್ಯೋಽಧಿಷ್ಠಿತಃ ಪ್ರಾಪ್ತಪೌರುಷಃ ।
ಮಾ ಶಕ್ರ ಮೋಹಮಾಗಚ್ಛ ಕ್ಷಿಪ್ರಮಸ್ತ್ರಂ ಸ್ಮರ ಪ್ರಭೋ ॥೧೨೬॥

ತತಃ ಶಕ್ರಃ ಪ್ರಕುಪಿತೋ ದಾನವಂ ಪ್ರತಿ ದೇವರಾಟ್ ।
ನಾರಾಯಣಾಸ್ತ್ರಂ ಪ್ರಯತೋ ಮುಮೋಚಾಸುರವಕ್ಷಸಿ ॥೧೨೭॥

---

೧೨೩. ಮುಂದೇನು ಮಾಡಬೇಕೆಂಬುದೇ ತಿಳಿಯದೆ ಅವನು ವಿಷ್ಣುವಿಗಿಂತೆಂದನು. "ದೇವಾ, ಇನ್ನೇನು ಮಾಡೋಣ? ನಮ್ಮ ಕರ್ತವ್ಯದಲ್ಲಿ ಉಳಿದಿರುವುದೇನು? ಏತರ ಬಲದಿಂದ ಈ ದಾನವನೊಡನೆ ಯುದ್ಧಮಾಡೋಣ?"

೧೨೪-೧೨೫. ಸರ್ವಜ್ಞನಾದ ಹರಿಯು ಇಂದ್ರನಿಗೆ ಹೇಳಿದನು. "ದೇವರಾಜಾ, ಅಂಜುಬುರುಕನಂತೆ ಯುದ್ಧವನ್ನು ಬಿಟ್ಟೋಡುವುದು ಯುಕ್ತವಲ್ಲ. ಶತ್ರುವಿನ ಮೇಲೆ ನಿನ್ನ ಮಾಯಾಬಲವನ್ನು ಚೆನ್ನಾಗಿ ತೋರಿಸು.

೧೨೬. ಇವನು ತಕ್ಕಷ್ಟು ಬಲವನ್ನು ಸಂಪಾದಿಸಿಕೊಂಡು ಧೈರ್ಯದಿಂದ ನಿಂತಿದ್ದಾನೆ. ಇಂದ್ರಾ, ಮೋಹಗೊಳ್ಳಬೇಡ. ಪ್ರಭೂ, ಅಸ್ತ್ರವನ್ನು ಸ್ಮರಿಸಿಕೊ."

೧೨೭. ಉತ್ಸಾಹಜನಕವಾದ ವಿಷ್ಣುವಿನ ಮಾತನ್ನು ಕೇಳಿದ ಬಳಿಕ ಇಂದ್ರನಿಗೆ ದೈತ್ಯನ ಮೇಲೆ ರೋಷ ಹುಟ್ಟಿತು. ಅವನು ನಾರಾಯಣಾಸ್ತ್ರವನ್ನು ಹೂಡಿ ಜಂಭಾಸುರನ ಎದೆಗೆ ಹೊಡೆದನು.

ಏತಸ್ಮಿನ್ನಂತರೇ ದೈತ್ಯೋ ವಿವೃತಾಸ್ಯೋಽಗ್ರಸತ್ಕ್ಷಣಾತ್ ।
ತ್ರೀಣಿ ಲಕ್ಷಾಣಿ ಗಂಧರ್ವಕಿನ್ನರೋರಗರಾಕ್ಷಸಾನ್ ॥೧೨೮॥

ತತೋ ನಾರಾಯಣಾಸ್ತ್ರಂ ತತ್ಪಪಾತಾಸುರವಕ್ಷಸಿ ।
ಮಹಾಸ್ತ್ರಭಿನ್ನಹೃದಯಃ ಸುಸ್ರಾವ ರುಧಿರಂ ಚ ಸಃ ॥೧೨೯॥

ರಣಾಂಗಾರಮಿವೋದ್ಗಾರಂ ತತ್ಯಾಜಾಸುರನಂದನಃ ।
ತದಸ್ತ್ರತೇಜಸಾ ತಸ್ಯ ರೂಪಂ ದೈತ್ಯಸ್ಯ ನಾಶಿತಂ ॥೧೩೦॥

ತತಶ್ಚಾಂತರ್ದಧೇ ದೈತ್ಯೋ ವಿಯತ್ಯನುಪಲಕ್ಷಿತಃ ।
ಗಗನಸ್ಥಃ ಸ ದೈತ್ಯೇಂದ್ರಃ ಶಸ್ತ್ರಾಸನಮತೀಂದ್ರಿಯಂ ॥೧೩೧॥

ಮುಮೋಚ ಸುರಸೈನ್ಯಾನಾಂ ಸಂಹಾರೇ ಕಾರಣಂ ಪರಂ ।
ಪ್ರಾಸಾನ್ ಪರಶ್ವಧಾಂಶ್ಚಕ್ರಾನ್ ಬಾಣವಜ್ರಾನ್ ಸಮುದ್ಗರಾನ್ ॥೧೩೨॥

---

೧೨೮. ಇಷ್ಟರೊಳಗೆ ಆ ದಾನವವೀರನು ಗಂಧರ್ವರು, ಕಿನ್ನರರು, ಉರಗರು, ರಾಕ್ಷಸರು ಮೊದಲಾದ ಮೂರು ಲಕ್ಷಮಂದಿ ಸೈನಿಕರನ್ನು ತನ್ನ ಬಾಯಿಯೊಳಗೆ ಹಾಕಿಕೊಂಡುಬಿಟ್ಟನು.

೧೨೯. ಬಳಿಕ ನಾರಾಯಣಾಸ್ತ್ರವು ಜಂಭಾಸುರನ ಎದೆಯಲ್ಲಿ ನಾಟಿಕೊಂಡಿತು. ಅವನ ಹೃದಯವು ಒಡೆಯಿತು. ರಕ್ತದ ಹೊಳೆ ಹರಿಯಿತು.

೧೩೦. ದೈತ್ಯರಿಗೆ ಆನಂದವನ್ನು ಹುಟ್ಟಿಸುತ್ತಿದ್ದ ಜಂಭಾಸುರನು ರಕ್ತವನ್ನು ಕಾರುತ್ತ ಯುದ್ಧರಂಗವನ್ನು ಬಿಟ್ಟೋಡಿದನು. ಅಸ್ತ್ರದ ತೇಜಸ್ಸಿನಿಂದ ಅವನ ರೂಪವು ನಾಶವಾಯಿತು.

೧೩೧. ಅನಂತರ ಅವನು ಯಾರಿಗೂ ಕಾಣದಂತೆ ಅಂತರಿಕ್ಷದಲ್ಲಿ ಮರೆಯಾದನು. ದೇವಸೈನ್ಯಗಳನ್ನು ನಾಶಮಾಡಬೇಕೆಂದು ಬಗೆಬಗೆಯ ಆಯುಧಗಳನ್ನು ಪ್ರಯೋಗಿಸಿದನು. ಅವನ ಸುಳಿವನ್ನು ತಿಳಿಯುವುದೇ ದೇವತೆಗಳಿಗೆ ಅಶಕ್ಯವಾಯಿತು.

೧೩೨-೧೩೩. ಉಗ್ರರೂಪನಾದ ಆ ದಾನವನು ಪ್ರಾಸ, ಪರಶ್ವಧ, ಚಕ್ರ, ಬಾಣ, ವಜ್ರ, ಮುದ್ಗರ, ಕುಠಾರ, ಖಡ್ಗ, ಭಿಂದಿಪಾಲ, ಕಬ್ಬಿಣದ ಗುಂಡು

**ಕುಠಾರಾನ್ ಸಹ ಖಡ್ಗೈಶ್ಚ ಭಿಂದಿಪಾಲಾನಯೋಗುಡಾನ್ ।**
**ವವರ್ಷ ದಾನವೋ ರೌದ್ರೋ ಹ್ಯವಂಧ್ಯಾನಕ್ಷಯಾನಪಿ ॥೧೩೩॥**

**ತೈರಸ್ತ್ರೈರ್ದಾನವೈರ್ಮುಕ್ತೈರ್ದೇವಾನೀಕೇಷು ಭೀಷಣೈಃ ।**
**ಬಾಹುಭಿರ್ಧರಣಿಃ ಪೂರ್ಣಾ ಶಿರೋಭಿಶ್ಚ ಸಕುಂಡಲೈಃ ॥೧೩೪॥**

**ಊರುಭಿರ್ಗಜಹಸ್ತಾಭೈಃ ಕರೀಂದ್ರೈರ್ವಾಚಲೋಪಮೈಃ ।**
**ಭಗ್ನೇಷಾದಂಡಚಕ್ರಾಕ್ಷೈ ರಥೈಃ ಸಾರಥಿಭಿಃ ಸಹ ॥೧೩೫॥**

**ದುಃಸಂಚಾರಾಭವತ್ಪೃಥ್ವೀ ಮಾಂಸಶೋಣಿತಕರ್ದಮಾ ।**
**ರುಧಿರೌಘಹ್ರದಾವರ್ತಾ ಶವರಾಶಿಶಿಲೋಚ್ಚಯೈಃ ॥೧೩೬॥**

**ಕಬಂಧನೃತ್ಯಸಂಕುಲೇ ಪ್ರವದ್ವಸಾಸ್ರಕರ್ದಮೇ**
**ಜಗತ್ತ್ರಯೋಪಸಂಹೃತೌ ಸಮೇ ಸಮಸ್ತದೇಹಿನಾಂ ।**

---

ಮೊದಲಾದ ಆಯುಧಗಳ ಮಳೆಯನ್ನು ಕರೆದನು. ಅವು ಅಕ್ಷಯವಾಗುತ್ತಿದ್ದುವು. ಗುರಿಯನ್ನು ತಪ್ಪದೆ ಮುಟ್ಟುತ್ತಿದ್ದುವು.

೧೩೪-೧೩೫. ದಾನವರು ದೇವತೆಗಳ ಸೈನ್ಯದ ಮೇಲೆ ಪ್ರಯೋಗಿಸಿದ ಅತ್ಯುಗ್ರವಾದ ಅಸ್ತ್ರಗಳಿಂದ ತೋಳುಗಳು, ಕುಂಡಲಸಹಿತವಾದ ಶಿರಸ್ಸುಗಳು, ಆನೆಯ ಸೊಂಡಲಿನಂತಿರುವ ತೊಡೆಗಳು, ಬೆಟ್ಟದಂತಹ ಆನೆಗಳು, ಮುರಿದು ಬಿದ್ದ ಮೂಕಿಮರಗಳು, ಚಕ್ರಗಳು, ಅಚ್ಚುಗಳು, ಸಾರಥಿಗಳು, ರಥಗಳು ಇವೆಲ್ಲ ರಣಭೂಮಿಯಲ್ಲಿ ಎರಚಾಡಿ ಬಿದ್ದಿದ್ದುವು.

೧೩೬. ರಕ್ತಮಾಂಸಗಳು ಚೆಲ್ಲಿ ಕೆಸರಾಗಿರಲು, ರಕ್ತದ ಮಡುಗಳಲ್ಲಿ ಸುಳಿಯೇಳುತ್ತಿರಲು, ಹೆಣಗಳ ರಾಶಿ ಬೆಟ್ಟದಂತೆ ಬಿದ್ದಿರಲು, ನೆಲದ ಮೇಲೆ ಸಂಚರಿಸುವುದೇ ಕಷ್ಟವಾಯಿತು.

೧೩೭. ಆ ಸಮರಭೂಮಿಯಲ್ಲಿ ಮುಂಡಗಳು ಕುಣಿದಾಡುತ್ತಿದ್ದುವು. ಮೇದಸ್ಸೂ ರಕ್ತವೂ ಹರಿದು ನೆಲವೆಲ್ಲ ಕೆಸರಾಯಿತು. ಆಗ ಮೂರುಲೋಕವೂ ಹಾಳಾಗುವ ಕಾಲ ಬಂದಿತೋ ಎನ್ನುವಂತೆ ತೋರುತ್ತಿತ್ತು. ಸಕಲ ಪ್ರಾಣಿಗಳಿಗೂ ಒಂದೇ ಸಮನಾಗಿ ಭೀತಿ ಹುಟ್ಟಿತು. ನರಿ, ಹದ್ದು ಮತ್ತು ಕಾಗೆಗಳಿಗೆ ಉಂಟಾದ

ಶೃಗಾಲಗೃಧ್ರವಾಯಸಾಃ ಪರಂ ಪ್ರಮೋದಮಾದಧುಃ
ಕ್ವಚಿದ್ವಿಕೃಷ್ಟಲೋಚನಃ ಶವಸ್ಯ ರೌತಿ ವಾಯಸಃ ||೧೩೭||

ವಿಕೃಷ್ಟಪೀವರಾಂತ್ರಕಾಃ ಪ್ರಯಾಂತಿ ಜಂಬುಕಾಃ ಕ್ವಚಿತ್
ಕ್ವಚಿತ್ಸ್ಥಿತೋಽತಿಭೀಷಣಃ ಶ್ವಚಂಚುಚರ್ವಿತೋ ಬಕಃ ।
ಮೃತಸ್ಯ ಮಾಂಸಮಾಹರಂಶ್ಚ ಜಾತಯಶ್ಚ ಸಂಸ್ಥಿತಾಃ
ಕ್ವಚಿನ್ವೃಕೋ ಗಜಾಸೃಜಂ ಪಪೌ ನಿಲೀಯತಾಂತ್ರತಃ ||೧೩೮||

ಕ್ವಚಿತ್ತುರಂಗಮಂಡಲೀ ವಿಕೃಷ್ಯತೇ ಶ್ವಜಾತಿಭಿಃ
ಕ್ವಚಿತ್ಪಿಶಾಚಜಾತಕೈಃ ಪ್ರಪೀತಶೋಣಿತಾಸವೈಃ ।
ಸ್ವಕಾಮಿನೀಯುತೈರ್ದ್ರುತಂ ಪ್ರಮೋದಮತ್ತಸಂಭ್ರಮೈ
ರ್ಮಮೈತದಾನಯಾನನಂ ಖುರೋಽಯಮುಸ್ತ ಮೇ ಪ್ರಿಯಃ ||೧೩೯||

---

ಆನಂದಕ್ಕೆ ಪಾರವೇ ಇರಲಿಲ್ಲ. ಒಂದು ಕಾಗೆಯು ಹೆಣದ ಕಣ್ಣುಗಳನ್ನು ಕುಕ್ಕಿ ಎಳೆದು ತನ್ನ ಒಡನಾಡಿಗಳನ್ನು ಕೂಗಿ ಕರೆಯುತ್ತಿತ್ತು.

೧೩೮. ಒಂದು ಕಡೆ ನರಿಗಳು ಕರುಳುಗಳನ್ನೆಳೆದುಕೊಂಡು ಹೋಗುತ್ತಿದ್ದುವು. ಇನ್ನೊಂದು ಕಡೆ ಬಕಪಕ್ಷಿಯು ನೋಡಿದವರಿಗೆ ಭೀತಿಯನ್ನು ಹುಟ್ಟಿಸುತ್ತ ಕುಳಿತಿದ್ದಿತು. ಅದರ ಕೊಕ್ಕನ್ನು ನಾಯಿ ನೆಕ್ಕುತ್ತಿತ್ತು. ಮತ್ತೊಂದು ಕಡೆ ನಾನಾಜಾತಿಯ ನಾಯಿಗಳು ಗುಂಪುಕೂಡಿ ಹೆಣದ ಮಾಂಸವನ್ನು ಕಿತ್ತು ತಿನ್ನುತ್ತಿದ್ದುವು. ಬೇರೊಂದು ಕಡೆಯಲ್ಲಿ ತೋಳವು ಆನೆಯ ರಕ್ತವನ್ನು ಕುಡಿದು ಅವರ ಕರುಳುಗಳೊಳಗೆ ಅಡಗಿಕೊಂಡಿತು.

೧೩೯. ಒಂದೆಡೆಯಲ್ಲಿ ನಾಯಿಗಳು ಕುದುರೆಗಳ ಗುಂಪನ್ನು ಎಳೆಯುತ್ತಿದ್ದುವು. ಇನ್ನೊಂದೆಡೆಯಲ್ಲಿ ಪಿಶಾಚಗಳು ಹಿಂಡುಹಿಂಡಾಗಿ ನೆರೆದು, ರಕ್ತವನ್ನು ಚೆನ್ನಾಗಿ ಕುಡಿದು, ತಮ್ಮ ಪತ್ನಿಯರೊಡಗೂಡಿ "ಈ ಮುಖವು ನನಗೆ ಬೇಕು; ಅದನ್ನು ಇಲ್ಲಿ ತಾ. ಅಗೋ! ಆ ಗೊರಸು ನನಗೆ ಬಹಳ ಇಷ್ಟ" ಎಂದು ಬಲು ಸಡಗರದಿಂದ ಹೇಳುತ್ತಿದ್ದುವು.

ಕರೋಽಯಮಬ್ಜಸಂನಿಭೋ ಮಮಾಸ್ತು ಕರ್ಣಪೂರಕಃ
ಸರೋಷಮೀಕ್ಷತೇಽಪರಾ ದಯಾಂ ವಿನಾ ಪ್ರಿಯಂ ತದಾ ।
ಪರಾ ಪ್ರಿಯಾ ಹ್ಯವಾಪ ಯದ್ಧೃತೋಷ್ಣಶೋಣಿತಾಸವಂ
ವಿಕೃಷ್ಯ ಶವಚರ್ಮ ತತ್ರಬದ್ಧಸಾಂದ್ರಪಲ್ಲವಂ ||೧೪೦||

ಚಕಾರ ಯಕ್ಷಕಾಮಿನೀ ತರುಂ ಕುಠಾರಪಾಟಿತಂ ।
ಗಜಸ್ಯ ದಂತಮಾತ್ಮಜಂ ಪ್ರಗೃಹ್ಯ ಕುಂಭಸಂಪುಟಂ ||
ವಿಪಾಟ್ಯ ಮೌಕ್ತಿಕಂ ಪರಂ ಪ್ರಿಯಪ್ರಸಾದಮಿಚ್ಛತೇ ।
ಸಮಾಂಸಶೋಣಿತಾಸವಂ ಪಪುಶ್ಚ ಯಕ್ಷರಾಕ್ಷಸಾಃ ||೧೪೧||

ಮೃತಾಶ್ವಕೇಶವಾಸಿತಂ ರಸಂ ಪ್ರಗೃಹ್ಯ ಪಾಣಿನಾ
ಪ್ರಿಯಾವಿಮುಕ್ತಜೀವಿತಾತ್ಸಮಾನಯಾಸೃಗಾಸವಂ ।

---

೧೪೦. "ಈ ಕೈ ತಾವರೆಯಂತಿದೆ. ಇದು ನನಗೆ ಕರ್ಣಾಭರಣವಾಗಲಿ" ಎನ್ನುತ್ತ ನಿರ್ದಯಳಾದ ಪಿಶಾಚಿಯೊಬ್ಬಳು ತನ್ನ ಪ್ರಿಯನನ್ನು ಸಿಡುಕಿನಿಂದ ನೋಡಿದಳು. ಇನ್ನೊಬ್ಬ ಪ್ರೇಯಸಿಯು ಅಲಂಕಾರಕ್ಕೋಸ್ಕರ ಚಿಗರುಗಳನ್ನು ದಟ್ಟವಾಗಿ ಸುತ್ತಿಕೊಂಡಿದ್ದ ವೀರನೊಬ್ಬನ ಮೃತದೇಹದ ಚರ್ಮವನ್ನು ಸುಲಿದು, ಬಿಸಿಬಿಸಿ ರಕ್ತವನ್ನು ಕುಡಿದು ಮದ್ಯಪಾನಮಾಡಿದವಳಂತೆ ತೃಪ್ತಳಾದಳು.

೧೪೧. ಯಕ್ಷಸ್ತ್ರೀಯೊಬ್ಬಳು ಒಂದು ಮರವನ್ನು ಕೊಡಲಿಯಿಂದ ಕಡಿದು ಅದನ್ನು ಊರೆಗಂಬವಾಗಿ ಮಾಡಿದಳು. ಆನೆಯ ಕುಂಭದ ಚಿಪ್ಪು ತೊಟ್ಟಿಲಾಯಿತು. ದಂತವೇ ಮಗುವಾಯಿತು. ಬಳಿಕ ಇನ್ನೊಂದು ಆನೆಯ ಕುಂಭಸ್ಥಳವನ್ನು ಸೀಳಿ ಅಲ್ಲಿದ್ದ ಮುತ್ತುಗಳನ್ನು ತನ್ನ ಪ್ರಿಯನಿಗೊಪ್ಪಿಸಿ ಅವನಿಂದ ಸನ್ಮಾನವನ್ನು - ಅಪೇಕ್ಷಿಸಿದಳು. ತರುವಾಯ ಯಕ್ಷರಾಕ್ಷಸರೆಲ್ಲರೂ ಒಟ್ಟುಗೂಡಿ ಮಾಂಸವನ್ನು ತಿಂದು ರಕ್ತವನ್ನು ಕುಡಿದು ಮತ್ತರಾದರು.

೧೪೨. "ಆಗೋ! ತನ್ನ ಪ್ರಿಯಳಿಗಾಗಿ ಪ್ರಾಣವನ್ನು ತೆತ್ತ ಕಿನ್ನರನ ದೇಹದಿಂದ ಸ್ರವಿಸುವ ರಕ್ತವನ್ನು ಕೈತುಂಬ ತೆಗೆದುಕೊಂಡು ಬಾ. ಅದು ನನಗೆ ಮದವನ್ನು ಹುಟ್ಟಿಸುತ್ತದೆ. ಸತ್ತ ಕುದುರೆಯ ಕೂದಲಿನಿಂದ ಅದರ ವಾಸನೆ

ನ ಪಥ್ಯತಾಂ ಪ್ರಯಾತಿ ಮೇ ಗತಂ ಶ್ಮಶಾನಗೋಚರಂ
  ನರಸ್ಯ ತಜ್ಜಹಾತ್ಯಸೌ ಪ್ರಶಸ್ಯ ಕಿನ್ನರಾನನಂ ||೧೫೨||

ಸ ನಾಗ ಏಷ ನೋ ಭಯಂ ದಧಾತಿ ಮುಕ್ತಜೀವಿತೋ
  ನ ದಾನವಸ್ಯ ಶಕ್ಯತೇ ಮಯಾ ತದೇಕಯಾಽಽನನಂ ।
ಇತಿ ಪ್ರಿಯಾಯ ವಲ್ಲಭಾ ವದಂತಿ ಯಕ್ಷಯೋಷಿತಃ
  ಪರೇ ಕಪಾಲಪಾಣಯಃ ಪಿಶಾಚಯಕ್ಷರಾಕ್ಷಸಾಃ ||೧೫೩||

ವದಂತಿ ದೇಹಿ ದೇಹಿ ಮೇ ಮಮಾತಿಭಕ್ಷ್ಯಚಾರಿಣಃ
  ಪರೇಽವತೀರ್ಯ ಶೋಣಿತಾಪಗಾಸು ಧೌತಮೂರ್ತಯಃ ।
ಪಿತೄನ್ ಪ್ರತರ್ಪ್ಯ ದೇವತಾಃ ಸಮರ್ಚಯಂತಿ ಚಾಮಿಷೈಃ
  ಗಜೋಡುಪೇ ಸುಸಂಸ್ಥಿತಾಸ್ತರಂತಿ ಶೋಣಿತಂ ಹ್ರದಂ ||೧೫೪||

---

ಮತ್ತಷ್ಟು ಹೆಚ್ಚಿದೆ. ಶ್ಮಶಾನದಲ್ಲಿ ಬಿದ್ದಿರುವ ತಲೆಬುರುಡೆ ನನಗೆ ಸೇರುವುದಿಲ್ಲ" ಎಂದು ಕಿನ್ನರನ ಮುಖವನ್ನು (ತಲೆಯನ್ನು) ಮೆಚ್ಚುತ್ತ ಒಂದು ಪಿಶಾಚವು ಮನುಷ್ಯನ ತಲೆಯನ್ನು ಬಿಸುಟಿತು.

೧೫೩. "ಆ ಆನೆಯು ಸತ್ತುಹೋಗಿದೆ. ಅದರಿಂದ ನಮಗೇನೂ ಭಯವಿಲ್ಲ" "ನಾನೊಬ್ಬಳೇ ಆ ದಾನವನ ಮುಖವನ್ನು ತಿನ್ನಲಾರೆ" ಮುಂತಾದ ರೀತಿಯಲ್ಲಿ ಯಕ್ಷಸ್ತ್ರೀಯರು ತಮ್ಮ ವಲ್ಲಭರಿಗೆ ಹೇಳುತ್ತಿದ್ದರು. ಉಳಿದ ಪಿಶಾಚ, ಯಕ್ಷ ಮತ್ತು ರಾಕ್ಷಸರು ತಮ್ಮ ತಮ್ಮ ಕೈಗಳಲ್ಲಿ ತಲೆಯ ಚಿಪ್ಪುಗಳನ್ನು ಹಿಡಿದುಕೊಂಡಿದ್ದರು.

೧೫೪. "ನಾನು ಹೊಟ್ಟೆಬಾಕ; ನನಗೆ ಹೆಚ್ಚು ತಿಂಡಿ ಬೇಕು. ಕೊಡು ಕೊಡು" ಎಂದು ಅವರು ಕಾದಾಡುತ್ತಿದ್ದರು. ಇನ್ನು ಕೆಲವರು ರಕ್ತದ ನದಿಗಳಲ್ಲಿ ಇಳಿದು ಸ್ನಾನಮಾಡಿ ಪಿತೃದೇವತೆಗಳಿಗೆ ತರ್ಪಣವನ್ನು ಕೊಟ್ಟು ಮಾಂಸಗಳಿಂದ ಅವರನ್ನು ಆರಾಧಿಸಿದರು. ಆನೆಯ ದೇಹವನ್ನು ತೆಪ್ಪದಂತೆ ಮಾಡಿಕೊಂಡು ಅದರ ಸಹಾಯದಿಂದ ರಕ್ತದ ಮಡುಗಳನ್ನು ದಾಟಿದರು.

ಇತಿ ಪ್ರಗಾಢಸಂಕಟೇ ಸುರಾಸುರೇ ಸುಸಂಗರೇ ।
ಭಯಂ ಸಮುಜ್ಝ್ಯ ದುರ್ಜಯಾ ಭಟಾಃ ಸ್ಫುಟಂತಿ ಮಾನಿನಃ ॥೧೪೫॥

ತತಃ ಶಕ್ರೋ ಧನೇಶಶ್ಚ ವರುಣಃ ಪವನೋಽನಲಃ ।
ಯಮೋಽಪಿ ನಿರ್ಋತಿಶ್ಚಾಪಿ ದಿವ್ಯಾಸ್ತ್ರಾಣಿ ಮಹಾಬಲಾಃ ॥೧೪೬॥

ಆಕಾಶೇ ಮುಮುಚುಃ ಸರ್ವೇ ದಾನವಾನಭಿಸಂಧ್ಯ ತೇ ।
ಅಸ್ತ್ರಾಣಿ ವ್ಯರ್ಥತಾಂ ಜಗ್ಮುರ್ದೇವಾನಾಂ ದಾನವಾನ್ ಪ್ರತಿ ॥೧೪೭॥

ಸಂರಂಭೇಣಾಪ್ಯಯುಧ್ಯಂತ ಸಂಹತಾಸ್ತುಮುಲೇನ ಚ ।
ಗತಿಂ ನ ವಿವಿದುಶ್ಚಾಪಿ ಶ್ರಾಂತಾ ದೈತ್ಯಸ್ಯ ದೇವತಾಃ ॥೧೪೮॥

ದೈತ್ಯಾಸ್ತ್ರಭಿನ್ನಸರ್ವಾಂಗಾ ಹ್ಯಕಿಂಚಿತ್ಕರತಾಂ ಗತಾಃ ।
ಪರಸ್ಪರಂ ವ್ಯಲೀಯಂತ ಗಾವಃ ಶೀತಾರ್ದಿತಾ ಇವ ॥೧೪೯॥

---

೧೪೫. ಹೀಗೆ ಅತಿವಿಷಮವಾದ ಆ ದೇವಾಸುರ ಯುದ್ಧದಲ್ಲಿ ದುರ್ಜಯರೂ ಅಭಿಮಾನಿಶಾಲಿಗಳೂ ಆದ ಭಟರು ನಿರ್ಭೀತರಾಗಿ ಉತ್ಸಾಹದಿಂದ ಮೆರೆಯುತ್ತಿದ್ದರು.

೧೪೬-೧೪೭. ಬಳಿಕ ಇಂದ್ರ, ಕುಬೇರ, ವರುಣ, ವಾಯು, ಯಮ, ನಿರ್ಋತಿ ಮುಂತಾದ ಮಹಾಬಲಿಷ್ಠರಾದ ದೇವತೆಗಳೆಲ್ಲ ಆಕಾಶದಲ್ಲಿ ನಿಂತು, ದಾನವರನ್ನು ವಂಚಿಸಿ ಅವರ ಮೇಲೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು. ಆದರೆ ಅವೆಲ್ಲವೂ ವ್ಯರ್ಥವಾದುವು.

೧೪೮. ದೇವತೆಗಳು ಸಂಭ್ರಮದಿಂದ ಒಟ್ಟುಗೂಡಿ ತುಮುಲಯುದ್ಧವನ್ನು ಮಾಡಿದರು. ಅವರಿಗೆ ಆಯಾಸವು ಬಹಳವಾಯಿತು. ತಮ್ಮ ಶತ್ರುವಾದ ದೈತ್ಯನಾಯಕನು ಎಲ್ಲಿ ಹೋದನೆಂಬುದು ಕೂಡ ಅವರಿಗೆ ತಿಳಿಯದೆ ಹೋಯಿತು.

೧೪೯. ಜಂಭಾಸುರನ ಅಸ್ತ್ರಗಳಿಂದ ಅವರ ಮೈಯೆಲ್ಲ ಗಾಯವಾಯಿತು. ಅವರಿಗೆ ಏನುಮಾಡುವುದಕ್ಕೂ ಆಗಲಿಲ್ಲ. ಚಳಿಯ ಕೋಟಲೆಗೆ ತುತ್ತಾದ ಹಸುಗಳಂತೆ ಅವರು ಒಬ್ಬರಲ್ಲೊಬ್ಬರು ಅಡಗಿಕೊಂಡರು.

ತದವಸ್ಥಾಂ ಹರಿರ್ದೃಷ್ಟ್ವಾ ದೇವಾಞ್ಛಕ್ರಮುವಾಚ ಹ ।
ಬ್ರಹ್ಮಾಸ್ತ್ರಂ ಸ್ಮರ ದೇವೇಂದ್ರ ಯಸ್ಯಾವಧ್ಯೋ ನ ವಿದ್ಯತೇ ।
ವಿಷ್ಣುನಾ ಚೋದಿತಃ ಶಕ್ರಃ ಸಸ್ಮಾರಾಸ್ತ್ರಂ ಮಹೌಜಸಂ ॥೧೫೦॥

ಸಂಪೂಜಿತಂ ನಿತ್ಯಮರಾತಿನಾಶನಂ
ಸಮಾಹಿತಂ ಬಾಣಮಮಿತ್ರಘಾತನೇ ।
ಧನುಷ್ಯಜಯ್ಯೇ ವಿನಿಯೋಜ್ಯ ಬುದ್ಧಿಮಾ
ನಭೂತ್ತತೋ ಮಂತ್ರಸಮಾಧಿಮಾನಸಃ ॥೧೫೧॥

ಸ ಮಂತ್ರಮುಚ್ಚಾರ್ಯ ಯತಾಂತರಾಶಯೋ
ವಧಾಯ ದೈತ್ಯಸ್ಯ ಧಿಯಾಭಿಸಂಧ್ಯ ತು ।
ವಿಕೃಷ್ಯ ಕರ್ಣಾಂತಮಕುಂಠದೀಧಿತಿಂ
ಮುಮೋಚ ವೀಕ್ಷ್ಯಾಂಬರಮಾರ್ಗಮುನ್ಮುಖಃ ॥೧೫೨॥

---

೧೫೦. ದೇವತೆಗಳ ಆ ಅವಸ್ಥೆಯನ್ನು ನೋಡಿ ಇಂದ್ರನಿಗೆ ವಿಷ್ಣು ಹೀಗೆಂದನು "ಓ ದೇವೇಂದ್ರಾ, ಬ್ರಹ್ಮಾಸ್ತ್ರವನ್ನು ಸ್ಮರಿಸಿಕೋ, ಅದರಿಂದ ಹತನಾಗದವನು ಯಾರೂ ಇಲ್ಲ." ವಿಷ್ಣುವಿನ ಈ ಸಲಹೆಯನ್ನು ಕೇಳಿ ಇಂದ್ರನು ಅತಿತೇಜಸ್ವಿಯಾದ ಆ ದಿವ್ಯಾಸ್ತ್ರವನ್ನು ಧ್ಯಾನಮಾಡಿದನು.

೧೫೧. ದಿನದಿನವೂ ಪೂಜೆಯನ್ನು ಸ್ವೀಕರಿಸಿ, ಹಗೆಗಳನ್ನು ನಾಶಮಾಡುವ ಸಾಮರ್ಥ್ಯವನ್ನು ಪಡೆದು, ಶತ್ರು ಸಂಹಾರಕಾರ್ಯದಲ್ಲಿ ನಿರತವಾದ ಆ ಅಸ್ತ್ರವನ್ನು ಧನುರ್ವಿದ್ಯಾಪ್ರವೀಣನಾದ ಇಂದ್ರನು ಅಮೋಘವಾದ ತನ್ನ ಬಿಲ್ಲಿನಲ್ಲಿ ಹೂಡಿದನು. ಏಕಾಗ್ರಚಿತ್ತನಾಗಿ ಮಂತ್ರವನ್ನು ಜಪಿಸಿದನು.

೧೫೨. ಅವನು ಜಿತಮನಸ್ಕನಾಗಿ ಮಂತ್ರವನ್ನು ಉಚ್ಚರಿಸಿ, ದೈತ್ಯನ ವಧವನ್ನು ಉದ್ದೇಶಿಸಿ, ಮುಖವೆತ್ತಿ ಆಕಾಶಮಾರ್ಗವನ್ನು ನೋಡುತ್ತ, ಕಿವಿಯವರೆಗೆ ಹೆದೆಯನ್ನೆಳೆದು ಜಾಜ್ವಲ್ಯಮಾನವಾದ ಆ ಅಸ್ತ್ರವನ್ನು ಬಿಟ್ಟನು.

ಅಥಾಸುರಃ ಪ್ರೇಕ್ಷ್ಯ ಮಹಾಸ್ತ್ರಮಾಹಿತಂ
ವಿಹಾಯ ಮಾಯಾಮವನೌ ವ್ಯತಿಷ್ಠತ ।
ಪ್ರವೇಪಮಾನೇನ ಮುಖೇನ ಶುಷ್ಯತಾ
ಬಲೇನ ಗಾತ್ರೇಣ ಚ ಸಂಭ್ರಮಾಕುಲಃ ॥೧೫೩॥

ತತಸ್ತು ತಸ್ಯಾಸ್ತ್ರವರಾಭಿಮಂತ್ರಿತಃ
ಶಿರೋಽರ್ಧಚಂದ್ರಪ್ರತಿಮೋ ಮಹಾರಣೇ ।
ಪುರಂದರಸ್ಯಾಸನಬಂಧುತಾಂ ಗತೋ
ನವಾರ್ಕಬಿಂಬಂ ವಪುಷಾ ವಿಡಂಬಯನ್ ॥೧೫೪॥

ಕಿರೀಟಕೋಟಿಸ್ಫುಟಕಾಂತಿಸಂಕಟಂ
ಸುಗಂಧಿ ನಾನಾಕುಸುಮಾಧಿವಾಸಿತಂ ।
ಪ್ರಕೀರ್ಣಧೂಮಜ್ವಲನಾಭಮೂರ್ಧಜಂ
ಪಪಾತ ಜಂಭಸ್ಯ ಶಿರಃ ಸಕುಂಡಲಂ ॥೧೫೫॥

---

೧೫೩. ಇಂದ್ರನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದುದನ್ನು ಕಂಡು ಜಂಭಾಸುರನು ಮಾಯೆಯನ್ನು ಬಿಟ್ಟು ನೆಲದಮೇಲೆ ಬಂದು ನಿಂತನು. ಅವನ ಮೈ ನಡುಗಿತು. ಬಾಯಿ ಒಣಗಿತು. ಬಲವು ಕುಗ್ಗಿತು. ಗಾಬರಿ ಹೆಚ್ಚಿತು.

೧೫೪. ಬಿಡುವಿಲ್ಲದೆ ನಡೆದ ಆ ಘೋರ ಯುದ್ಧದಲ್ಲಿ ದೇವೇಂದ್ರನು ಮಹಾಮಂತ್ರವನ್ನಭಿಮಂತ್ರಿಸಿ ಅರ್ಧಚಂದ್ರಾಕಾರವಾದ ಬಾಣವನ್ನು ಬಿಟ್ಟನಷ್ಟೆ! ಅದರ ಪ್ರಹಾರದಿಂದ ಜಂಭಾಸುರನ ಮೈ ರಕ್ತಮಯವಾಗಿ ಬಾಲಸೂರ್ಯನನ್ನು ಹೋಲುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಅವನು ದೇವೇಂದ್ರನ ಅರ್ಧಾಸನದ ಪಾಲುಗಾರನಾದನು (ಮೃತನಾಗಿ ವೀರಸ್ವರ್ಗವನ್ನು ಸೇರಿದನೆಂದು ಅಭಿಪ್ರಾಯ.)

೧೫೫. ಕುಂಡಲಗಳಿಂದ ಅಲಂಕೃತವಾದ ಜಂಭಾಸುರನ ಶಿರಸ್ಸು ಕೆಳಗುರುಳಿತು. ಕಿರೀಟಾಗ್ರದ ದಿವ್ಯರತ್ನಗಳ ಕಾಂತಿಯಿಂದ ಅದು ಕಂಗೊಳಿಸುತ್ತಿತ್ತು. ಬಗೆಬಗೆಯ ಹೂಗಳನ್ನು ಮುಡಿದು ದಿವ್ಯಪರಿಮಳದಿಂದ ಶೋಭಿಸುತ್ತಿತ್ತು. ಕೆದರಿದ ಕೂದಲಿನಿಂದ ಅದು ಹೊಗೆಯೊಡಗೂಡಿದ ಬೆಂಕಿಯಂತೆ ತೋರುತ್ತಿತ್ತು.

ತಸ್ಮಿನ್ ವಿನಿಹತೇ ಜಂಭೇ ದಾನವೇಂದ್ರಾಃ ಪರಾಙ್ಮುಖಾಃ ।
ತತಸ್ತೇ ಭಗ್ನಸಂಕಲ್ಪಾಃ ಪ್ರಯಯುರ್ಯತ್ರ ತಾರಕಃ ॥೧೫೬॥

ತಾಂಸ್ತು ತ್ರಸ್ತಾನ್ ಸಮಾಲೋಕ್ಯ ಶ್ರುತ್ವಾ ರೋಷಮಗಾತ್ಪರಂ ।
ಸ ಜಂಭದಾನವೇಂದ್ರಂ ತು ಸುರೈ ರಣಮುಖೇ ಹತಂ ॥೧೫೭॥

ಸಾವಲೇಪಂ ಸಸಂರಂಭಂ ಸಗರ್ವಂ ಸಪರಾಕ್ರಮಂ ।
ಸಾವಿಷ್ಕಾರಮನಾಕಾರಂ ತಾರಕೋ ಭಾವಮಾವಿಶತ್ ॥೧೫೮॥

ಸ ಚೈತ್ರಂ ರಥಮಾಸ್ಥಾಯ ಸಹಸ್ರೇಣ ಗರುತ್ಮತಾಂ ।
ಸಂರಂಭಾದ್ದಾನವೇಂದ್ರಸ್ತು ಸುರೈ ರಣಮುಖೇ ಗತಃ ॥೧೫೯॥

ಸರ್ವಾಯುಧಪರಿಷ್ಕಾರಃ ಸರ್ವಾಸ್ತ್ರಪರಿರಕ್ಷಿತಃ ।
ತ್ರೈಲೋಕ್ಯಋದ್ಧಿಸಂಪನ್ನಃ ಸುವಿಸ್ತೃತಮಹಾನನಃ ॥೧೬೦॥

---

೧೫೬. ದೈತ್ಯಸೇನಾಪತಿಯಾದ ಆ ಜಂಭನು ಹತನಾಗಲು ಉಳಿದ ದಾನವ ವೀರರೆಲ್ಲ ಹಿಮ್ಮೆಟ್ಟಿದರು. ಅವರು ಭಗ್ನಸಂಕಲ್ಪರಾಗಿ ತಾರಕಾಸುರನಿದ್ದ ಬಳಿಗೆ ಹೋದರು.

೧೫೭. ಅವರು ಹೆದರಿದ್ದುದನ್ನು ನೋಡಿಯೂ, ದೇವತೆಗಳಿಂದ ಜಂಭಾಸುರನು ಹತನಾದುದನ್ನು ಕೇಳಿಯೂ ತಾರಕಾಸುರನಿಗೆ ಮಿತಿಮೀರಿದ ಕೋಪವು ಹುಟ್ಟಿತು.

೧೫೮. ಅವನ ಮನೋಭಾವವು ವಿಲಕ್ಷಣವಾದ ಸ್ಥಿತಿಯನ್ನು ತಾಳಿತು. ಮದ, ಸಡಗರ, ಗರ್ವ, ಪರಾಕ್ರಮ ಇವೆಲ್ಲವೂ ಅದರಲ್ಲಿ ವ್ಯಕ್ತವಾದುವು. ಅವನ ಆಕಾರವೇ ವ್ಯತ್ಯಾಸವಾಯಿತು.

೧೫೯. ಆ ದೈತ್ಯರಾಜನು ದಿಗ್ವಿಜಯಮಾಡಿಕೊಂಡು ಬಂದಿದ್ದ ತನ್ನ ರಥವನ್ನೇರಿ ದೇವತೆಗಳೊಡನೆ ಯುದ್ಧಮಾಡಬೇಕೆಂದು ಸಂಭ್ರಮದಿಂದ ಹೊರಟನು. ಒಂದು ಸಾವಿರ ಗರುಡಪಕ್ಷಿಗಳನ್ನು ಆ ತೇರಿಗೆ ಹೂಡಿದ್ದಿತು.

೧೬೦. ತಾರಕಾಸುರನು ಎಲ್ಲ ಆಯುಧಗಳನ್ನೂ ಸಜ್ಜುಗೊಳಿಸಿಕೊಂಡು, ಸರ್ವಾಸ್ತ್ರಗಳಿಂದಲೂ ರಕ್ಷಿತನಾಗಿ, ಮೂರು ಲೋಕದ ಸಕಲಸಂಪತ್ತಿನಿಂದ ಪೂರ್ಣನಾಗಿ, ದೊಡ್ಡ ಸೈನ್ಯದೊಡಗೂಡಿ ಬೇಗನೆ ಯುದ್ಧಕ್ಕೆ ಬಂದಿಳಿದನು. ಅವನ ಮುಖವು ಹರ್ಷದಿಂದ ಅರಳಿ ವಿಶಾಲವಾಗಿ ಕಂಗೊಳಿಸುತ್ತಿತ್ತು.

ರಣಾಯಾಭ್ಯಪತತ್ತೂರ್ಣಂ ಸೈನ್ಯೇನ ಮಹತಾ ವೃತಃ ।
ಜಂಭಾಸ್ತ್ರಕ್ಷತಸರ್ವಾಂಗಂ ತ್ಯಕ್ತ್ವೈರಾವತದಂತಿನಂ ॥೧೬೧॥

ಸಜ್ಜಂ ಮಾತಲಿನಾ ಗುಪ್ತಂ ರಥಮಿಂದ್ರಸ್ಯ ತೇಜಸಾ ।
ತಪ್ತಹೇಮಪರಿಷ್ಕಾರಂ ಮಹಾರತ್ನಸಮನ್ವಿತಂ ॥೧೬೨॥

ಚತುರ್ಯೋಜನವಿಸ್ತೀರ್ಣಂ ಸಿದ್ಧಸಂಘಪರಿಷ್ಕೃತಂ ।
ಗಂಧರ್ವಕಿನ್ನರೋದ್ಗೀತಮಪ್ಸರೋನೃತ್ಯಸಂಕುಲಂ ॥೧೬೩॥

ಸರ್ವಾಯುಧಮಸಂಬಾಧಂ ವಿಚಿತ್ರರಚನೋಜ್ಜ್ವಲಂ ।
ತಂ ರಥಂ ದೇವರಾಜಸ್ಯ ಪರಿವಾರ್ಯ ಸಮಂತತಃ ॥೧೬೪॥

ದಂಶಿತಾ ಲೋಕಪಾಲಾಸ್ತು ತಸ್ಥುಃ ಸಗರುಡಧ್ವಜಾಃ ।
ತತಶ್ಚಚಾಲ ವಸುಧಾ ತತೋ ರೂಕ್ಷೋ ಮರುದ್ವವೌ ॥೧೬೫॥

ತತೋಽಂಬುಧಯ ಉದ್ಭೂತಾಸ್ತತೋ ನಷ್ಟಾ ರವಿಪ್ರಭಾ ।
ತತಸ್ತಮಃ ಸಮುದ್ಭೂತಂ ನಾತೋಽದೃಶ್ಯಂತ ತಾರಕಾಃ ॥೧೬೬॥

---

೧೬೧-೧೬೨. ಜಂಭಾಸುರನು ಪ್ರಯೋಗಿಸಿದ ಬಗೆಬಗೆಯ ಅಸ್ತ್ರಗಳಿಂದ ಐರಾವತದ ಮೈಯೆಲ್ಲ ಗಾಯವಾಗಿತ್ತು. ತಾರಕಾಸುರನು ಅದನ್ನು ಬಿಟ್ಟು ತೇಜಸ್ಸಿನಿಂದ ದೇದೀಪ್ಯಮಾನವಾಗಿ ಬೆಳಗುತ್ತಿದ್ದ ಇಂದ್ರನ ರಥದ ಕಡೆಗೆ ನುಗ್ಗಿದನು. ಅದು ಪುಟವಿಟ್ಟ ಚಿನ್ನದ ಅಲಂಕಾರಗಳಿಂದ ಕಂಗೊಳಿಸುತ್ತಿತ್ತು. ನವರತ್ನಗಳಿಂದ ಖಚಿತವಾಗಿತ್ತು. ಮಾತಲಿಯು ಅದನ್ನು ನಡೆಸುತ್ತಿದ್ದನು.

೧೬೩. ಅದು ನಾಲ್ಕುಯೋಜನ ವಿಸ್ತಾರವಾಗಿತ್ತು. ಅದರಲ್ಲಿ ಸಿದ್ಧರು ಸುಖಾಸೀನರಾಗಿದ್ದರು. ಗಂಧರ್ವರೂ, ಕಿನ್ನರರೂ ಹಾಡುತ್ತಿದ್ದರು. ಅಪ್ಸರಸ್ತ್ರೀಯರು ನರ್ತನಮಾಡುತ್ತಿದ್ದರು. ಅದು ಎಲ್ಲ ಬಗೆಯ ಆಯುಧಗಳಿಂದಲೂ ಪೂರ್ಣವಾಗಿ, ಆಶ್ಚರ್ಯಕರವಾದ ರಚನಾಕೌಶಲದಿಂದ ಕೂಡಿ ಅತಿ ವಿಶಾಲವಾಗಿತ್ತು.

೧೬೪. ದೇವೇಂದ್ರನ ಆ ರಥವನ್ನು ಸುತ್ತುವರಿದು ವಿಷ್ಣುವೂ ಲೋಕಪಾಲಕರೂ ಕವಚಾಯುಧಧಾರಿಗಳಾಗಿ ನಿಂತಿದ್ದರು.

೧೬೫-೧೬೬. ತರುವಾಯ ಭೂಮಿ ನಡುಗಿತು. ಬಿರುಗಾಳಿ ಬೀಸಿತು. ಸಮುದ್ರಗಳು ಅಲ್ಲೋಲಕಲ್ಲೋಲವಾದುವು. ಸೂರ್ಯನ ಕಾಂತಿ ಅಡಗಿತು. ಕತ್ತಲು ಕವಿಯಿತು. ಕೊನೆಗೆ ನಕ್ಷತ್ರಗಳೂ ಕಾಣದಂತಾದುವು.

ತತೋ ಜಜ್ವಲುರಸ್ತ್ರಾಣಿ ತತೋಽಕಂಪತ ವಾಹಿನೀ ।
ಏಕತಸ್ತಾರಕೋ ದೈತ್ಯಃ ಸುರಸಂಘಸ್ತು ಚೈಕತಃ ॥೧೬೭॥

ಲೋಕಾವಸಾದಮೇಕತ್ರ ಜಗತ್ಪಾಲನಮೇಕತಃ ।
ಚರಾಚರಾಣಿ ಭೂತಾನಿ ಸುರಾಸುರವಿಭೇದತಃ ॥೧೬೮॥

ತದ್ದ್ವಿಧಾಪ್ಯೇಕತಾಂ ಯಾತಂ ದದೃಶುಃ ಪ್ರೇಕ್ಷಕಾ ಇವ ।
ಯದ್ವಸ್ತು ಕಿಂಚಿಲ್ಲೋಕೇಷು ತ್ರಿಷು ಸತ್ತಾಸ್ವರೂಪಕಂ ।
ತತ್ತತ್ರಾದೃಶ್ಯದಖಿಲಂ ಖಿಲೀಭೂತವಿಭೀತಿಕಂ ॥೧೬೯॥

ಅಸ್ತ್ರಾಣಿ ತೇಜಾಂಸಿ ಧನಾನಿ ಧೈರ್ಯಂ
ಸೇನಾಬಲಂ ವೀರ್ಯಪರಾಕ್ರಮೌ ಚ ।
ಸತ್ವೌಜಸಾಂ ತನ್ನಿಕರಂ ಬಭೂವ
ಸುರಾಸುರಾಣಾಂ ತಪಸೋ ಬಲೇನ ॥೧೭೦॥

---

೧೬೭. ಆಮೇಲೆ ಅಸ್ತ್ರಗಳು ಬೆಳಗಿದುವು. ಸೈನ್ಯವು ನಡುಗಿತು. ಒಂದು ಕಡೆ ತಾರಕಾಸುರನೂ, ಇನ್ನೊಂದು ಕಡೆ ದೇವತೆಗಳೂ ಯುದ್ಧಕ್ಕೆ ಸಿದ್ಧರಾದರು.

೧೬೮. ಒಂದು ಪಕ್ಷದ ಗುರಿ ಲೋಕದ ನಾಶ; ಮತ್ತೊಂದರದು ಲೋಕದ ರಕ್ಷಣೆ. ಪ್ರಪಂಚದಲ್ಲಿದ್ದ ಸ್ಥಾವರಜಂಗಮಗಳೆಂಬ ಸಕಲ ಜಂತುಗಳೂ ದೇವಪಕ್ಷ, ಅಸುರಪಕ್ಷ ಎಂಬ ಎರಡರಲ್ಲಿ ಒಂದಕ್ಕೆ ಸೇರಿ ಆ ಮಹಾಯುದ್ಧವನ್ನು ನೋಡಬೇಕೆಂಬ ಒಂದೇ ಅಭಿಲಾಷೆಯಿಂದ ಅಲ್ಲಿ ಬಂದು ಸೇರಿದ್ದುವು.

೧೬೯. ಮೂರುಲೋಕಗಳಲ್ಲಿಯೂ ಸಜೀವವೆನಿಸಿದ ಪ್ರಾಣಿ, ಯಾವ ಯಾವುದುಂಟೋ ಅದೆಲ್ಲವೂ ನಿರ್ಭಯವಾಗಿ ಬಂದು ಅಲ್ಲಿ ಇದ್ದುದನ್ನು ಕಾಣಬಹುದಾಗಿತ್ತು.

೧೭೦. ಸುರಾಸುರರ ಪಕ್ಷಗಳೆರಡರಲ್ಲಿಯೂ ಅಸ್ತ್ರಗಳು, ತೇಜಸ್ಸು, ಧನ, ಧೈರ್ಯ, ಸೇನಾಬಲ, ವೀರ್ಯ, ಪರಾಕ್ರಮ ಇವು ಸಮೃದ್ಧವಾಗಿದ್ದುವು. ಇವೆಲ್ಲ ಅವರ ತಪಸ್ಸಿನ ಬಲದಿಂದ ಬಂದುವು.

**ಅಥಾಭಿಮುಖಮಾಯಾಂತಂ ನವಭಿರ್ನತಪರ್ವಭಿಃ ।**
**ಬಾಣೈರನಲಕಲ್ಪಾಗ್ರೈರ್ಬಿಭಿದುಸ್ತಾರಕಂ ಹೃದಿ ॥೧೭೧॥**

**ಸ ತಾನಚಿಂತ್ಯ ದೈತ್ಯೇಂದ್ರಃ ಸುರಬಾಣಾನ್ ಗತಾನ್ ಹೃದಿ ।**
**ನವಭಿರ್ನವಭಿರ್ಬಾಣೈಃ ಸುರಾನ್ ವಿವ್ಯಾಧ ದಾನವಃ ॥೧೭೨॥**

**ಜಗದ್ಧರಣಸಂಭೂತೈಃ ಶಲ್ಯೈರಿವ ಪುರಃಸರೈಃ ।**
**ತತೋಽಚ್ಛಿನ್ನಂ ಶರವ್ರಾತಂ ಸಂಗ್ರಾಮೇ ಮುಮುಚುಃ ಸುರಾಃ ॥೧೭೩॥**

**ಅನಂತರಂ ಚ ಕಾಂತಾನಾಮಶ್ರುಪಾತಮಿವಾನಿಶಂ ।**
**ತದಪ್ರಾಪ್ತಂ ವಿಯತ್ಯೇವ ನಾಶಯಾಮಾಸ ದಾನವಃ ॥೧೭೪॥**

---

೧೭೧. ಅನಂತರ ತಮಗೆ ಅಭಿಮುಖವಾಗಿ ತಾರಕಾಸುರನು ಬರುತ್ತಿರುವುದನ್ನು ನೋಡಿ, ದೇವತೆಗಳು ಕಿವಿಯ ವರೆಗೆ ಹೆದೆಯನ್ನೆಳೆದು ಒಂಬತ್ತು ಬಾಣಗಳನ್ನು ಅವನ ಎದೆಗೆ ಹೊಡೆದರು. ಅವುಗಳ ಮೊನೆಗಳು ಅಗ್ನಿಯಂತೆ ತೀಕ್ಷ್ಣವಾಗಿದ್ದುವು.

೧೭೨. ಆ ಬಾಣಗಳು ತನ್ನ ಎದೆಗೆ ನಾಟಿದುದನ್ನು ಆ ದೈತ್ಯರಾಜನು ಗಮನಿಸಲೇ ಇಲ್ಲ. ಅದಕ್ಕೆ ಪ್ರತಿಯಾಗಿ ಒಬ್ಬೊಬ್ಬರ ಮೇಲೆ ಒಂಬತ್ತರಂತೆ ಪ್ರತಿಬಾಣಗಳನ್ನು ಶತ್ರುಗಳಿಗೆ ಪ್ರಯೋಗಿಸಿದನು.

೧೭೩. ತಾರಕಾಸುರನು ಬಿಟ್ಟ ಬಾಣಗಳು ಜಗತ್ತನ್ನು ಕೊನೆಗಾಣಿಸುವುದಕ್ಕಾಗಿಯೇ ಉತ್ಪನ್ನವಾದುವೋ ಎನ್ನುವಂತೆ ಮಹಾವೇಗದಿಂದ ಮುಂದೆ ನುಗ್ಗುತ್ತಿದ್ದುವು. ಆದರೆ ಅವುಗಳಿಗೂ ಅಭೇದ್ಯವಾದ ಅಂಬುಗಳನ್ನು ದೇವತೆಗಳು ಪರಂಪರೆಯಾಗಿ ಬೀರುತ್ತಿದ್ದರು.

೧೭೪. ಕಾಂತೆಯರ ಕಣ್ಣುಗಳಿಂದ ನೀರು ಸುರಿಯುವುದಕ್ಕಿಂತ ಮೊದಲೇ ಪ್ರಿಯರು ಅದನ್ನು ಒರಸುವಂತೆ, ದೇವತೆಗಳ ಬಾಣಗಳು ತನ್ನ ಬಳಿಗೆ ಬರುವುದಕ್ಕೆ ಮುಂಚೆಯೇ ದೈತ್ಯೇಂದ್ರನು ಅವುಗಳನ್ನು ನಡುಹಾದಿಯಲ್ಲಿ ಕತ್ತರಿಸಿಹಾಕಿದನು.

ಶರೈರ್ಯಥಾ ಕುಚರಿತ್ರೈಃ ಪ್ರಖ್ಯಾತಾಂ ಪರಮಾಂ ಗತಿಂ ।
ಸುನಿರ್ಮಲಂ ಕ್ರಮಾಯಾತಂ ಕುಪುತ್ರಃ ಸ್ವಂ ಮಹಾಕುಲಂ ॥೧೭೫॥

ತತೋ ನಿವಾರ್ಯ ತದ್ಬಾಣಜಾಲಂ ಸುರಭುಜೇರಿತಂ ।
ಬಾಣೈರ್ವ್ಯೋಮ ದಿಶಃ ಪೃಥ್ವೀಂ ಪೂರಯಾಮಾಸ ದಾನವಃ ॥೧೭೬॥

ಚಿಚ್ಛೇದ ಪುಂಖದೇಶೇಷು ಸ್ವಕೇ ಸ್ಥಾನೇ ಚ ಲಾಘವಾತ್ ।
ಬಾಣಜಾಲೈಃ ಸುತೀಕ್ಷ್ಣಾಗ್ರೈಃ ಕಂಕಬರ್ಹಿಣವಾಜಿತೈಃ ॥೧೭೭॥

ಕರ್ಣಾಂತಕೃಷ್ಟೈರ್ವಿಮುಕ್ತೈಃ ಸುವರ್ಣರಜತೋಜ್ಜ್ವಲೈಃ ।
ಶಾಸ್ತ್ರಾರ್ಥೈಃ ಸಂಶಯಪ್ರಾಪ್ತಾರ್ ಯಥಾರ್ಥಾನ್ವೈ ವಿಕಲ್ಪಿತೈಃ ॥೧೭೮॥

---

೧೭೫. ಸಾಧುಜನರಿಗೆ ಮಾತ್ರವೇ ಲಭ್ಯವಾಗುವ ಸದ್ಗತಿಗೆ ದುರಾಚಾರಿಗಳು ಹೋಗಬಲ್ಲರೆ? ಪರಂಪರೆಯಿಂದ ಬಂದ ತನ್ನ ಮಹಾವಂಶದ ಕೀರ್ತಿಯನ್ನು ದುರ್ಮಾರ್ಗಿಯಾದ ಪುತ್ರನು ಉಳಿಸಬಲ್ಲನೆ? ಹಾಗೆಯೇ ದೇವತೆಗಳು ಬಿಟ್ಟ ಬಾಣಗಳು ದುರ್ಜಯನಾದ ತಾರಕಾಸುರನನ್ನು ಮುಟ್ಟಲಾರದೆ ಹೋದುವು.

೧೭೬. ಬಳಿಕ ತಾರಕಾಸುರನು ದೇವತೆಗಳು ಬಿಟ್ಟ ಬಾಣಗಳನ್ನು ತಡೆಗಡಿದು ತನ್ನ ಬಾಣಗಳಿಂದ ಆಕಾಶ, ದಿಕ್ಕು ಮತ್ತು ಭೂಮಿಯೆಲ್ಲವನ್ನೂ ಮುಚ್ಚಿಬಿಟ್ಟನು.

೧೭೭. ದೈತ್ಯರಾಜನು ತನ್ನ ಕೈಚಳಕವನ್ನು ತೋರುತ್ತ ನಿಂತಕಡೆಯಿಂದಲೇ ಕೂರಂಬುಗಳನ್ನು ಬೀರುತ್ತಿದ್ದನು. ಹದ್ದಿನ ರೆಕ್ಕೆಗಳನ್ನೂ ನವಿಲುಗರಿಗಳನ್ನೂ ಅವುಗಳಿಗೆ ಕಟ್ಟಿದ್ದರು. ಅವು ಶತ್ರುಗಳ ಬಾಣದ ಹಿಡಿಯನ್ನು ಕತ್ತರಿಸುತ್ತಿದ್ದುವು.

೧೭೮. ಸಂಶಯಗ್ರಸ್ತವಾದ ವಿಷಯಗಳನ್ನು ವೈಕಲ್ಪಿಕವಾದ ಶಾಸ್ತ್ರಾರ್ಥಗಳಿಂದ ನಿರ್ಣಯಿಸುವಂತೆ, ತಾರಕಾಸುರನು ಚಿನ್ನಬೆಳ್ಳಿಗಳ ಕಟ್ಟುಗಳಿಂದ ಹೊಳೆಹೊಳೆವ ತನ್ನ ಮೊನೆಯಂಬುಗಳನ್ನು ಕಿವಿಯವರೆಗೆ ಎಳೆದುಬಿಟ್ಟು ದೇವತೆಗಳ ಬಾಣಗಳನ್ನು ತುಂಡರಿಸಿದನು.

**ತತಃ ಶತೇನ ಬಾಣಾನಾಂ ಶಕ್ರಂ ವಿವ್ಯಾಧ ದಾನವಃ ।**
**ನಾರಾಯಣಂ ಚ ಸಪ್ತತ್ಯಾ ನವತ್ಯಾ ಚ ಹುತಾಶನಮ್ ॥೧೭೯॥**

**ದಶಭಿರ್ಮಾರುತಂ ಮೂರ್ಧ್ನಿ ಯಮಂ ದಶಭಿರೇವ ಚ ।**
**ಧನದಂ ಚೈವ ಸಪ್ತತ್ಯಾ ವರುಣಂ ಚ ತಥಾಷ್ಟಭಿಃ ॥೧೮೦॥**

**ವಿಂಶತ್ಯಾ ನಿರ್ಋತಿಂ ದೈತ್ಯಃ ಪುನಶ್ಚಾಷ್ಟಾಭಿರೇವ ಚ ।**
**ವಿವ್ಯಾಧ ಪುನರೇಕೈಕಂ ದಶಭಿಃ ದಶಭಿಃ ಶರೈಃ ॥೧೮೧॥**

**ತಥಾ ಚ ಮಾತಲಿಂ ದೈತ್ಯೋ ವಿವ್ಯಾಧ ತ್ರಿಭಿರಾಶುಗೈಃ ।**
**ಗರುಡಂ ದಶಭಿಶ್ಚೈವ ಸ ವಿವ್ಯಾಧ ಪತತ್ರಿಭಿಃ ॥೧೮೨॥**

**ಪುನಶ್ಚ ದೈತ್ಯೋ ದೇವಾನಾಂ ತಿಲಶೋ ನತಪರ್ವಭಿಃ ।**
**ಚಕಾರ ವರ್ಮಜಾತಾನಿ ಚಿಚ್ಛೇದ ಚ ಧನೂಂಷಿ ತು ।**
**ತತೋ ವಿಕವಚಾ ದೇವಾ ವಿಧನುಷ್ಕಾಃ ಶರೈಃ ಕೃತಾಃ ॥೧೮೩॥**

---

೧೭೯. ಬಳಿಕ ನೂರು ಬಾಣಗಳಿಂದ ಇಂದ್ರನನ್ನೂ, ಎಪ್ಪತ್ತರಿಂದ ನಾರಾಯಣನನ್ನೂ, ತೊಂಬತ್ತರಿಂದ ಅಗ್ನಿಯನ್ನೂ ಅವನು ಪ್ರಹರಿಸಿದನು.

೧೮೦. ವಾಯುವಿನ ತಲೆಗೆ ಹತ್ತು ಬಾಣಗಳನ್ನು ಗುರಿಯಿಟ್ಟು ಹೊಡೆದನು. ಹಾಗೆಯೇ ಯಮನಿಗೆ ಹತ್ತು, ಕುಬೇರನಿಗೆ ಎಪ್ಪತ್ತು ಮತ್ತು ವರುಣನಿಗೆ ಎಂಟು ಬಾಣಪ್ರಹಾರಗಳು ಆದುವು.

೧೮೧. ನಿರ್ಋತಿಯ ಮೇಲೆ ಮೊದಲು ಇಪ್ಪತ್ತು, ಬಳಿಕ ಎಂಟು ಹೀಗೆ ಇಪ್ಪತ್ತೆಂಟು ಬಾಣಗಳನ್ನು ಪ್ರಯೋಗಿಸಿದನು. ಮರಳಿ ಒಬ್ಬೊಬ್ಬರನ್ನೂ ಹತ್ತು ಹತ್ತು ಅಂಬುಗಳಿಂದ ನೋಯಿಸಿದನು.

೧೮೨. ಹಾಗೆಯೇ ಅವನು ವೇಗಶಾಲಿಗಳಾದ ಮೂರು ಬಾಣಗಳಿಂದ ಸಾರಥಿಯಾದ ಮಾತಲಿಯನ್ನೂ, ಹತ್ತು ಬಾಣಗಳಿಂದ ಗರುಡನನ್ನೂ ಭೇದಿಸಿದನು.

೧೮೩. ತಾರಕಾಸುರನು ಮತ್ತೆ ಶೀಘ್ರಗಾಮಿಗಳಾದ ಶರಗಳಿಂದ ದೇವತೆಗಳ ಕವಚಗಳನ್ನೂ ಬಿಲ್ಲುಗಳನ್ನೂ ಎಳ್ಳಿನಂತೆ ಚೂರುಚೂರಾಗಿ ಕತ್ತರಿಸಿದನು. ಆದರಿಂದ ಅವರು ಕವಚವೂ ಬಿಲ್ಲೂ ಇಲ್ಲದವರಾದರು.

ಅಥಾನ್ಯಾನಿ ಚಾಪಾನಿ ತಸ್ಮಿನ್ ಸರೋಷಾ
ರಣೇ ಲೋಕಪಾಲಾ ಗೃಹೀತ್ವಾ ಸಮಂತಾತ್ ।
ಶರೈರಕ್ಷಯ್ಯೈರ್ದಾನವೇಂದ್ರಂ ತತಕ್ಷು
ಸ್ತದಾ ದಾನವೋಽಮರ್ಷಸಂರಕ್ತನೇತ್ರಃ ॥೧೮೪॥

ಶರಾನಗ್ನಿಕಲ್ಪಾನ್ ವವರ್ಷಾಮರಾಣಾಂ
ತತೋ ಬಾಣಮಾದಾಯ ಕಲ್ಪಾನಲಾಭಂ ।
ಜಘಾನೋರಸಿ ಕ್ಷಿಪ್ರಮಿಂದ್ರಂ ಸುಬಾಹುಂ
ಮಹೇಂದ್ರೋಽಪ್ಯಕಂಪದ್ರಥೋಪಸ್ಥ ಏವ ॥೧೮೫॥

ವಿಲೋಕ್ಯಾಂತರಿಕ್ಷೇ ಸಹಸ್ರಾರ್ಕಬಿಂಬಂ
ಪುನರ್ದಾನವೋ ವಿಷ್ಣುಮುದ್ಭೂತವೀರ್ಯಂ ।
ಶರಾಭ್ಯಾಂ ಜಘಾನಾಂಸಮೂಲೇ ಸಲೀಲಂ
ತತಃ ಕೇಶವಸ್ಯಾಪತಚ್ಛಾರ್ಙ್ಗಮುಗ್ರೇ ॥೧೮೬॥

---

೧೮೪. ಬಳಿಕ ಲೋಕಪಾಲಕರಿಗೆ ಮಿತಿಮೀರಿದ ಕೋಪ ಬಂದಿತು. ಅವರು ಬೇರೆ ಬಿಲ್ಲುಗಳನ್ನು ಹಿಡಿದು, ಅಸಂಖ್ಯಾತವಾಗಿ ಬಾಣಗಳನ್ನು ಪ್ರಯೋಗಿಸುತ್ತ ಎಲ್ಲ ಕಡೆಗಳಿಂದಲೂ ತಾರಕಾಸುರನನ್ನು ಇರಿದರು. ಆಗ ಅವನ ಕಣ್ಣು ಕೋಪದಿಂದ ಕೆಂಪಾಯಿತು.

೧೮೫. ಅವನು ಬೆಂಕಿಯಂತೆ ಉರಿಯುನ್ನು ಕೆದರುವ ಬಾಣಗಳನ್ನು ದೇವತೆಗಳ ಮೇಲೆ ಎಡೆಬಿಡದೆ ಚೆಲ್ಲಿದನು. ಪ್ರಳಯಾಗ್ನಿಯಂತಹ ತೀಕ್ಷ್ಣಶರವೊಂದನ್ನು ತೊಟ್ಟು ಮಹಾಶೂರನಾದ ಇಂದ್ರನ ಎದೆಗೆ ಪ್ರಯೋಗಿಸಿದನು. ದೇವರಾಜನಾದರೋ ರಥದಲ್ಲಿ ಕುಳಿತಿದ್ದಂತೆಯೇ ಗಡಗಡನೆ ನಡುಗಿದನು.

೧೮೬. ದಾನವರಾಜನ ಕಣ್ಣಿಗೆ ಆಕಾಶದಲ್ಲಿ ಸಾವಿರ ಸೂರ್ಯಬಿಂಬಗಳು ಗೋಚರವಾದುವು. ವಿಷ್ಣು ಚೇತರಿಸಿಕೊಂಡು ಮರಳಿ ಎದ್ದುಬಂದನೆಂದು ತಿಳಿದು, ಹುರುಪುಗೊಂಡು ಎರಡು ಬಾಣಗಳಿಂದ ಅವನ ಹೆಗ್ಗತ್ತಿಗೆ ಹೊಡೆದನು. ಆ ಪ್ರಹಾರಕ್ಕೆ ವಿಷ್ಣುವಿನ ಕೈಯಲ್ಲಿದ್ದ ಶಾರ್ಙ್ಗವೆಂಬ ಬಿಲ್ಲು ನೆಲದ ಮೇಲೆ ಬಿದ್ದಿತು.

ತತಸ್ತಾರಕಃ ಪ್ರೇತನಾಥಂ ಪೃಷತ್ಕೈ
ರ್ವಸುಂ ತಸ್ಯಂ ಸವ್ಯೇ ಸ್ಮರ್ರ ಕ್ಷುದ್ರಭಾವಂ ।
ಶರೈರಗ್ನಿಕಲ್ಪೈರ್ಜಲೇಶಸ್ಯ ಕಾಯಂ
ರಣೇಽಶೋಷಯದ್ದುರ್ಜಯೋ ದೈತ್ಯರಾಜಃ ॥೧೮೭॥

ಶರೈರಗ್ನಿಕಲ್ಪೈಶ್ಚಕಾರಾಶು ದೈತ್ಯ
ಸ್ತಥಾ ರಾಕ್ಷಸಾರ್ ಭೀತಭೀತಾರ್ ದಿಶಾಸು ।
ಪೃಷತ್ಕೈಶ್ಚ ರೂಕ್ಷೈರ್ವಿಕಾರಪ್ರಯುಕ್ತಂ
ಚಕಾರಾನಿಲಂ ಲೀಲಯೈವಾಸುರೇಶಃ ॥೧೮೮॥

ಕ್ಷಣಾಲ್ಲಬ್ಧಚಿತ್ತಾಃ ಸ್ವಯಂ ವಿಷ್ಣುಶಕ್ರಾ
ನಲಾದ್ಯಾಃ ಸುಸಂಹತ್ಯ ತೀಕ್ಷ್ಣೈಃ ಪೃಷ್ಕತ್ಕೈಃ ।
ಪ್ರಚಕ್ರುಃ ಪ್ರಚಂಡೇನ ದೈತ್ಯೇನ ಸಾರ್ಧಂ
ಮಹಾಸಂಗರಂ ಸಂಗರಗ್ರಾಸಕಲ್ಪಂ ॥೧೮೯॥

---

೧೮೭. ತರುವಾಯ ಶತ್ರುಗಳಿಗೆ ಗೆಲ್ಲಲು ಅಸಾಧ್ಯನೂ ದೈತ್ಯರ ಅಧಿಪತಿಯೂ ಆದ ತಾರಕಾಸುರನು ಯಮನನ್ನು ಹಲವು ಬಾಣಗಳಿಂದ ಇರಿದನು. ಅವನ ಎಡಗಡೆಯಲ್ಲಿದ್ದ ವಸುವನ್ನು ಅಲಕ್ಷ್ಯವಾಗಿ ಕಂಡನು. ಅಗ್ನಿಯಂತೆ ಸುತೀಕ್ಷ್ಣವಾದ ಶರಗಳಿಂದ ವರುಣನ ದೇಹದ ಸಾರವನ್ನು ಹೀರಿದನು.

೧೮೮. ತಾರಕಾಸುರನು ನಿರ್ಋತಿಯ ಅನುಯಾಯಿಗಳಾದ ರಾಕ್ಷಸರನ್ನು ಅಗ್ನಿಸದೃಶವಾದ ಬಾಣಗಳಿಂದ ಹೆದರಿಸಿ ದಿಕ್ಕುದಿಕ್ಕಿಗೆ ಅಟ್ಟಿದನು. ಹಾಗೆಯೇ ಅತಿತೀಕ್ಷ್ಣವಾದ ಶರಗಳಿಂದ ವಾಯುವಿನ ಸ್ಥೈರ್ಯವನ್ನು ಕುಗ್ಗಿಸಿದನು. ಇದೆಲ್ಲವೂ ಅವನಿಗೆ ಆಟದಂತಿತ್ತು.

೧೮೯. ವಿಷ್ಣು, ಇಂದ್ರ, ಅಗ್ನಿ ಮೊದಲಾದ ದೇವತೆಗಳು ಸ್ವಲ್ಪ ಹೊತ್ತಿನಲ್ಲೇ ಮೂರ್ಛೆ ತಿಳಿದೆದ್ದು, ಒಟ್ಟಿಗೆ ಕೂಡಿ, ಕ್ರೂರವಾದ ಬಾಣಗಳನ್ನು ಪ್ರಯೋಗಿಸುತ್ತ ಪ್ರಚಂಡನಾದ ಆ ತಾರಕನೊಡನೆ ಮಹಾ ಸಂಗ್ರಾಮವನ್ನು ಹೂಡಿದರು. ಅಂತಹ ಯುದ್ಧವು ಮತ್ತೆಲ್ಲಿಯೂ ನಡೆದಿರಲಿಲ್ಲ.

ಅಥಾನನ್ಯ ಚಾಪಂ ಹರಿಸ್ತೀಕ್ಷ್ಣಬಾಣೈ
ರ್ಹನತ್ಸಾರಥಿಂ ದೈತ್ಯರಾಜಸ್ಯ ಹೃದ್ಯಂ।
ಧ್ವಜಂ ಧೂಮಕೇತುಃ ಕಿರೀಟಂ ಮಹೇಂದ್ರೋ
ಧನೇಶೋ ಧನುಃ ಕಾಂಚನಾನದ್ಧಪೃಷ್ಠಂ।
ಯಮೋ ಬಾಹುದಂಡಂ ರಥಾಂಗಾನಿ ವಾಯು
ರ್ನಿಶಾಚಾರಿಣಾಮೀಶ್ವರಸ್ಯಾಪಿ ವರ್ಮ ॥೧೯೦॥
ದೃಷ್ಟ್ವಾ ತದ್ಯುದ್ಧಮಮರ್ರೈರಕೃತ್ರಿಮಪರಾಕ್ರಮಂ।
ದೈತ್ಯನಾಥಃ ಕೃತಂ ಸಂಖ್ಯೇ ಸ್ವಬಾಹುಯುಗಬಾಂಧವಃ ॥೧೯೧॥
ಮುಮೋಚ ಮುದ್ಗರಂ ಭೀಮಂ ಸಹಸ್ರಾಕ್ಷಾಯ ಸಂಗರೇ।
ದೃಷ್ಟ್ವಾ ಮುದ್ಗರಮಾಯಾಂತಮನಿವಾರ್ಯಮಥಾಂಬರೇ ॥೧೯೨॥
ರಥಾದಾಪ್ಲುತ್ಯ ಧರಣೀಮಗಮತ್ಪಾಕಶಾಸನಃ।
ಮುದ್ಗರೋಽಪಿ ರಥೋಪಸ್ಥೇ ಪಪಾತ ಪರುಷಸ್ವನಃ ॥೧೯೩॥

---

೧೯೦. ಬಳಿಕ ವಿಷ್ಣು ಆಕರ್ಣಾಂತವಾಗಿ ಬಿಲ್ಲನ್ನೆಳೆದು, ತೀಕ್ಷ್ಣವಾದ ಬಾಣಗಳನ್ನು ಬಿಟ್ಟು ದೈತ್ಯರಾಜನ ಮೆಚ್ಚಿನ ಸಾರಥಿಯನ್ನು ಕೊಂದನು. ಧೂಮಕೇತು ಧ್ವಜವನ್ನೂ, ಇಂದ್ರನು ಕಿರೀಟವನ್ನೂ, ಕುಬೇರನು ಸುವರ್ಣಾಲಂಕೃತವಾದ ಧನುಸ್ಸನ್ನೂ, ಯಮನು ದೀರ್ಘವಾದ ಬಾಹುಗಳನ್ನೂ, ವಾಯುವು ತೇರಿನ ಚಕ್ರ ಮತ್ತು ದೈತ್ಯನ ಕವಚವನ್ನೂ ಹೊಡೆದು ಕೆಡವಿದರು.

೧೯೧. ಹೀಗೆ ದೇವತೆಗಳು ಅತ್ಯದ್ಭುತ ಪರಾಕ್ರಮದಿಂದ ಹೋರಾಡುತ್ತಿರುವುದನ್ನು ಕಂಡು ತಾರಕಾಸುರನು ಇತರ ವಿಧವಾದ ಯಾವ ಸಹಾಯವನ್ನೂ ಗಮನಿಸದೆ, ತನ್ನೆರಡು ತೋಳುಗಳ ಬಲದಲ್ಲೇ ನಂಬಿಕೆಯಿಟ್ಟು ಇಂದ್ರನ ಮೇಲೆ ಭಯಂಕರವಾದ ಮುದ್ಗರಾಯುಧವನ್ನು ಬಿಸುಟನು.

೧೯೨-೧೯೩. ಮುದ್ಗರವು ಅಂತರಿಕ್ಷಮಾರ್ಗದಲ್ಲಿ ಹಾಯ್ದು ಬರುತ್ತಿರುವುದನ್ನು ಇಂದ್ರನು ಕಂಡನು. ಅದನ್ನು ಅಡ್ಡಿಪಡಿಸುವುದಕ್ಕಾಗದೆ ರಥದಿಂದ ನೆಲಕ್ಕೆ ಧುಮುಕಿದನು. ಆ ಆಯುಧವು ಭಯಂಕರವಾಗಿ ಧ್ವನಿಮಾಡುತ್ತ ಅವನ ತೇರಿನೊಳಗೆ ಬಿದ್ದಿತು.

ಸ ರಥಂ ಚೂರ್ಣಯಾಮಾಸ ನ ಮಮಾರ ಚ ಮಾತಲಿಃ ।
ಗೃಹೀತ್ವಾ ಪಟ್ಟಿಶಂ ದೈತ್ಯೋ ಜಘಾನೋರಸಿ ಕೇಶವಮ್ ॥೧೯೪॥

ಸ್ಕಂಧೇ ಗರುತ್ಮತಃ ಸೋಽಪಿ ನಿಷಸಾದ ವಿಚೇತನಃ ।
ಖಡ್ಗೇನ ರಾಕ್ಷಸೇಂದ್ರಸ್ಯ ನಿಚಕರ್ತ ಚ ವಾಹನಮ್ ॥೧೯೫॥

ಯಮಂ ಚ ಪಾತಯಾಮಾಸ ಭೂಮೌ ದೈತ್ಯೋ ಮುಶುಂಡಿನಾ ।
ವಹ್ನಿಂ ಚ ಭಿಂದಿಪಾಲೇನ ತಾಡಯಾಮಾಸ ಮೂರ್ಧನಿ ॥೧೯೬॥

ವಾಯುಂ ಚ ದೋರ್ಭ್ಯಾಮುತ್ಕ್ಷಿಪ್ಯ ಪಾತಯಾಮಾಸ ಭೂತಲೇ ।
ಧನೇಶಂ ಚ ಧನುಷ್ಕೋಟ್ಯಾ ಕುಟ್ಟಯಾಮಾಸ ಕೋಪನಃ ॥೧೯೭॥

ತತೋ ದೇವನಿಕಾಯಾನಾಮೇಕೈಕಂ ಸಮರೇ ತತಃ ।
ಜಘಾನಾಸ್ತ್ರೈರಸಂಖ್ಯೇಯೈರ್ದೈತ್ಯೇಂದ್ರೋಽಮಿತವಿಕ್ರಮಃ ॥೧೯೮॥

---

೧೯೪. ಅದು ರಥವನ್ನು ಪುಡಿಪುಡಿಮಾಡಿತು. ಆದರೆ ಸಾರಥಿಯಾದ ಮಾತಲಿ ಮಾತ್ರ ಸಾಯಲಿಲ್ಲ. ಆಗ ತಾರಕಾಸುರನು ಪಟ್ಟಿಶವೆಂಬ ಶಸ್ತ್ರದಿಂದ ವಿಷ್ಣುವಿನ ಎದೆಗೆ ಹೊಡೆದನು.

೧೯೫. ಗರುಡನ ಹೆಗಲ ಮೇಲೆ ಕುಳಿತಿದ್ದಂತೆಯೇ ವಿಷ್ಣುವು ನಿಶ್ಚೇತನನಾದನು. ಬಳಿಕ ದೈತ್ಯರಾಜನು ಕತ್ತಿಯಿಂದ ನಿರ್ಋತಿಯ ವಾಹನವನ್ನು ಕತ್ತರಿಸಿದನು.

೧೯೬. ಮುಸುಂಡಿಯೆಂಬ ಆಯುಧದಿಂದ ಪ್ರಹರಿಸಿ ಯಮನನ್ನು ರಥದಿಂದ ಬೀಳಿಸಿದನು. ಅಗ್ನಿಯ ತಲೆಯ ಮೇಲೆ ಭಿಂದಿಪಾಲದಿಂದ ಹೊಡೆದನು.

೧೯೭. ವಾಯುವನ್ನು ತೋಳುಗಳಿಂದೆತ್ತಿ ನೆಲದ ಮೇಲೆ ಬಿಸುಟನು. ಸಿಟ್ಟುಗೊಂಡು ಕುಬೇರನ ತಲೆಯ ಮೇಲೆ ಬಿಲ್ಲಿನ ತುದಿಯಿಂದ ಕುಟ್ಟಿದನು.

೧೯೮. ಅನಂತರ ಅಪರಿಮಿತಪರಾಕ್ರಮಶಾಲಿಯಾದ ತಾರಕಾಸುರನು ಲೆಕ್ಕವಿಲ್ಲದಷ್ಟು ಅಸ್ತ್ರಗಳಿಂದ ದೇವತೆಗಳಲ್ಲಿ ಒಬ್ಬೊಬ್ಬನನ್ನೂ ಪ್ರಹರಿಸಿದನು.

ಲಬ್ಧ ಸಂಜ್ಞಃ ಕ್ಷಣಾದ್ವಿಷ್ಣುಶ್ಚಕ್ರಂ ಜಗ್ರಾಹ ದುರ್ಧರಂ ।
ದಾನವೇಂದ್ರವಸಾಸಿಕ್ತಂ ಪಿಶಿತಾಶನಕೋನ್ಮುಖಂ ॥೧೯೯॥

ಮುಮೋಚ ದಾನವೇಂದ್ರಸ್ಯ ದೃಢಂ ವಕ್ಷಸಿ ಕೇಶವಃ ।
ಪಪಾತ ಚಕ್ರಂ ದೈತ್ಯಸ್ಯ ಹೃದಯೇ ಭಾಸ್ಕರದ್ಯುತಿ ॥೨೦೦॥

ವ್ಯಶೀರ್ಯತ ತತಃ ಕಾಯೇ ನೀಲೋತ್ಪಲಮಿವಾಶ್ಮನಿ ।
ತತೋ ವಜ್ರಂ ಮಹೇಂದ್ರಸ್ತು ಪ್ರಮುಮೋಚಾರ್ಚಿತಂ ಚಿರಂ ॥೨೦೧॥

ಯಸ್ಮಿಞ್ಜಯಾಶಾ ಶಕ್ರಸ್ಯ ದಾನವೇಂದ್ರರಣೇ ತ್ವಭೂತ್ ।
ತಾರಕಸ್ಯ ಸುಸಂಪ್ರಾಪ್ಯ ಶರೀರಂ ಶೌರ್ಯಶಾಲಿನಃ ॥೨೦೨॥

ವ್ಯಶೀರ್ಯತ ವಿಕೀರ್ಣಾರ್ಚಿಃ ಶತಧಾ ಖಂಡತಾಂ ಗತಂ ।
ವಿನಾಶಮಗಮನ್ಮುಕ್ತಂ ವಾಯುನಾಸುರವಕ್ಷಸಿ ॥೨೦೩॥

---

೧೯೯-೨೦೦. ಸ್ವಲ್ಪ ಹೊತ್ತಿನಲ್ಲಿಯೇ ವಿಷ್ಣು ಚೇತರಿಸಿಕೊಂಡು ಭಯಂಕರ ವಾದ ಸುದರ್ಶನ ಚಕ್ರವನ್ನು ಎತ್ತಿಕೊಂಡನು. ಅದು ರಾಕ್ಷಸವೀರರ ಕೊಬ್ಬಿನಲ್ಲಿ ನೆನೆದಿತ್ತು. ದೈತ್ಯರ ಮೇಲೆ ಬೀಳಬೇಕೆಂದು ತವಕಪಡುತ್ತಿತ್ತು. ಅದನ್ನು ಆತನು ತಾರಕಾಸುರನ ಎದೆಗೆ ಗುರಿಯಿಟ್ಟು ಬಲವಾಗಿ ಬಿಸುಟನು. ಅದು ಸೂರ್ಯನಂತೆ ಜ್ವಲಿಸುತ್ತ ಆ ದೈತ್ಯನ ಹೃದಯದಲ್ಲಿ ಬಿದ್ದಿತು.

೨೦೧. ಕಲ್ಲಿನ ಮೇಲೆ ಬಿದ್ದ ಕನ್ನೈದಿಲೆಯಂತೆ ಆ ಚಕ್ರವು ದೈತ್ಯನ ಒರಟು ಮೈಮೇಲೆ ಬಿದ್ದು ಸೀಳಿಹೋಯಿತು. ಬಳಿಕ ದೇವೇಂದ್ರನು ಬಹು ಕಾಲದಿಂದ ಪೂಜಿಸಿ ರಕ್ಷಿಸುತ್ತಿದ್ದ ವಜ್ರಾಯುಧವನ್ನು ಪ್ರಯೋಗಿಸಿದನು.

೨೦೨. ಆ ಅಸ್ತ್ರದ ಸಹಾಯದಿಂದ ತಾರಕಾಸುರನನ್ನು ಯುದ್ಧದಲ್ಲಿ ಗೆಲ್ಲಬಹುದೆಂಬ ಭರವಸೆಯು ಆತನಿಗಿದ್ದಿತು. ಆದರೆ ಶೂರಾಗ್ರೇಸರನಾದ ದೈತ್ಯನ ಶರೀರವನ್ನು ಸೋಕಿತೋ ಇಲ್ಲವೋ ಅದು ಕಿಡಿಗಳನ್ನು ಕಾರುತ್ತ ನೂರಾರು ತುಂಡುಗಳಾಗಿ ಒಡೆಯಿತು.

೨೦೩. ಆ ಮೇಲೆ ತಾರಕಾಸುರನ ಎದೆಗೆ ವಾಯುವು ಅಂಕುಶವನ್ನು ಬಿಟ್ಟನು. ಅದೂ ಸಹ ಅಗ್ನಿಯಂತೆ ಜ್ವಾಲೆಗಳನ್ನು ಕೆದರುತ್ತ ನುಗ್ಗಿತು. ಆದರೆ ವಜ್ರಾಯುಧಕ್ಕೆ ಆದ ಗತಿಯೇ ಅದಕ್ಕೂ ಬಂದಿತು. ಅದೂ ನಷ್ಟವಾಯಿತು.

ಜ್ವಲಿತಂ ಜ್ವಲನಾಭಾಸಮಂಕುಶಂ ಕುಲಿಶಂ ಯಥಾ ।
ವಿನಾಶಮಾಗತಂ ದೃಷ್ಟ್ವಾ ವಾಯುಃಶ್ಚಾಂಕುಶಮಾಹವೇ ॥೨೦೪॥

ರುಷ್ಟಃ ಶೈಲೇಂದ್ರಮುತ್ಪಾಟ್ಯ ಪುಷ್ಪಿತದ್ರುಮಕಂದರಂ ।
ಚಿಕ್ಷೇಪ ದಾನವೇಂದ್ರಾಯ ಪಂಚಯೋಜನವಿಸ್ತೃತಂ ॥೨೦೫॥

ಮಹೀಧರಂ ತಮಾಯಾಂತಂ ದೈತ್ಯಃ ಸ್ಮಿತಮುಖಸ್ತದಾ ।
ಜಗ್ರಾಹ ವಾಮಹಸ್ತೇನ ಬಾಲಕಂದುಕಲೀಲಯಾ ॥೨೦೬॥

ತತೋ ದಂಡಂ ಸಮುದ್ಯಮ್ಯ ಕೃತಾಂತಃ ಕ್ರೋಧಮೂರ್ಛಿತಃ ।
ದೈತ್ಯೇಂದ್ರಂ ಮೂರ್ಧ್ನಿ ಚಿಕ್ಷೇಪ ಭ್ರಾಮ್ಯ ವೇಗೇನ ದುರ್ಜಯಃ ॥೨೦೭॥

ಸೋಽಸುರಸ್ಯಾಪತನ್ಮೂರ್ಧ್ನಿ ದೈತ್ಯಸ್ತಂ ಚ ನ ಬುದ್ಧವಾನ್ ।
ಕಲ್ಪಾಂತದಹನಾಲೋಕಾಮುಜಯ್ಯಾಂ ಜ್ವಲನಸ್ತತಃ ॥೨೦೮॥

---

೨೦೪-೨೦೫. ತನ್ನ ಅಂಕುಶವು ನಷ್ಟವಾದುದನ್ನು ಕಂಡು ವಾಯುವಿಗೆ ಕೋಪ ಬಂದಿತು. ಅವನು ಒಂದು ದೊಡ್ಡ ಬೆಟ್ಟವನ್ನು ಕಿತ್ತು ದಾನವರಾಜನ ಮೇಲೆ ಎಸೆದನು. ಅದು ಐದುಯೋಜನ ವಿಸ್ತಾರವಾಗಿತ್ತು. ಅದರ ಗುಹೆಗಳಲ್ಲಿ ಮರಗಳು ಬೆಳೆದು ಹೂಗಳಿಂದ ತುಂಬಿದ್ದುವು.

೨೦೬. ಆ ಮಹಾಪರ್ವತವು ತನ್ನ ಕಡೆಗೆ ಬರುತ್ತಿರಲು ದೈತ್ಯನು ಮುಗುಳು ನಗೆನಗುತ್ತ, ಹುಡುಗನು ಚೆಂಡನ್ನು ಆತುಕೊಳ್ಳುವಂತೆ ಎಡಗೈಯಿಂದ ಅದನ್ನು ಹಿಡಿದುಕೊಂಡನು.

೨೦೭. ಬಳಿಕ ಯಮನು ಕೋಪದಿಂದ ಮೈಮರೆತನು. ಅದುವರೆಗೆ ಯಾರಿಗೂ ಸೋಲದಿದ್ದ ಆತನು ತನ್ನ ದಂಡಾಯುಧವನ್ನು ಗರಗರನೆ ತಿರುಗಿಸಿ ದೈತ್ಯೇಂದ್ರನ ತಲೆಯ ಮೇಲೆ ಬಿಸುಟನು.

೨೦೮-೨೦೯. ಅದು ತಾರಕಾಸುರನ ತಲೆಯ ಮೇಲೆ ಬಿದ್ದಿತು. ಆದರೆ ಅವನಿಗೆ ಗೊತ್ತೇ ಆಗಲಿಲ್ಲ. ಬಳಿಕ ಅಗ್ನಿಯು ಪ್ರಳಯಾಗ್ನಿಯಂತೆ ಪ್ರಕಾಶಿಸುವ, ಗೆಲ್ಲುವುದಕ್ಕೆ ಯಾರಿಂದಲೂ ಸಾಧ್ಯವಾಗದ, ಅಸಮಾನವಾದ ಶಕ್ತ್ಯಾಯುಧವನ್ನು

ಶಕ್ತಿಂ ಚಿಕ್ಷೇಪ ದುರ್ಧರ್ಷಾಂ ದಾನವೇಂದ್ರಾಯ ಸಂಯುಗೇ।
ನವಾ ಶಿರೀಷಮಾಲೇವ ಸಾಸ್ಯ ವಕ್ಷಸ್ಯರಾಜತ ॥೨೦೯॥

ತತಃ ಖಡ್ಗಂ ಸಮಾಕೃಷ್ಯ ಕೋಶಾದಾಕಾಶನಿರ್ಮಲಂ।
ಭಾಸಿತಾಸಿತದಿಗ್ಭಾಗಂ ಲೋಕಪಾಲೋಽಪಿ ನಿರ್ಋತಿಃ ॥೨೧೦॥

ಚಿಕ್ಷೇಪ ದಾನವೇಂದ್ರಾಯ ತಸ್ಯ ಮೂರ್ಧ್ನಿ ಪಪಾತ ಚ।
ಪತಿತಶ್ಚಾಗಮತ್ಖಡ್ಗಃ ಸ ಶೀಘ್ರಂ ಶತಖಂಡತಾಂ ॥೨೧೧॥

ಜಲೇಶಸ್ತೂಗ್ರದುರ್ಧರ್ಷಂ ವಿಷಪಾವಕಭೈರವಂ।
ಮುಮೋಚ ಪಾಶಂ ದೈತ್ಯಸ್ಯ ಭುಜಬಂಧಾಭಿಲಾಷುಕಃ ॥೨೧೨॥

ಸ ದೈತ್ಯಭುಜಮಾಸಾದ್ಯ ಸರ್ಪಃ ಸದ್ಯೋ ವ್ಯಪದ್ಯತ।
ಸ್ಫುಟಿತಕ್ರಕಚಕ್ರೂರದಶನಾಲಿರ್ಮಹಾಹನುಃ ॥೨೧೩॥

---

ದಾನವೇಶ್ವರನ ಮೇಲೆ ಪ್ರಯೋಗಿಸಿದನು. ಅದು ಆಗ ತಾನೆ ಕಟ್ಟಿದ ಬಾಗೆಯ ಹೂವಿನ ಮಾಲೆಯಂತೆ ಅವನ ಎದೆಯ ಮೇಲೆ ಬಿದ್ದಿತು. ಯಾವ ಹಿಂಸೆಯೂ ಅದರಿಂದ ಅವನಿಗೆ ಆಗಲಿಲ್ಲ.

೨೧೦-೨೧೧. ಆಮೇಲೆ ಲೋಕಪಾಲಕನಾದ ನಿರ್ಋತಿಯೂ ಆಕಾಶದಂತೆ ನಿರ್ಮಲವಾದ ಕತ್ತಿಯನ್ನು ಒರೆಯಿಂದೆಳೆದನು. ದಿಕ್ಕುಗಳೆಲ್ಲ ಅದರ ಕಾಂತಿಯಿಂದ ನೀಲವರ್ಣವಾದುವು. ದೈತ್ಯರಾಜನ ಮೇಲೆ ಅದನ್ನು ಪ್ರಯೋಗಿಸಿದನು. ಅವನ ತಲೆಯ ಮೇಲೆ ಬಿದ್ದ ಕೂಡಲೆ ಅದು ನೂರಾರು ತುಂಡುಗಳಾಗಿ ಒಡೆದುಹೋಯಿತು.

೨೧೨. ಜಲಾಧಿಪತಿಯಾದ ವರುಣನು ದೈತ್ಯನ ತೋಳುಗಳನ್ನು ಕಟ್ಟಿ ಹಾಕಬೇಕೆಂದು ಬಯಸಿ ಉಗ್ರವೂ ದುಸ್ಸಹವೂ ಆದ ಪಾಶಾಯುಧವನ್ನು ಪ್ರಯೋಗಿಸಿದನು. ಅದು ವಿಷದಂತೆಯೂ ಅಗ್ನಿಯಂತೆಯೂ ಅತಿಭಯಂಕರವಾಗಿತ್ತು.

೨೧೩. ಸರ್ಪರೂಪವಾದ ಆ ಪಾಶವು ದೈತ್ಯನ ಭುಜವನ್ನು ಮುಟ್ಟಿದ ಕೂಡಲೆ ನಾಶವಾಯಿತು. ಗರಗಸದಂತೆ ತೀಕ್ಷ್ಣವಾದ ಅದರ ಹಲ್ಲುಗಳು ಮುರಿದುವು. ಬಲವಾದ ದವಡೆಗಳು ಸೀಳಿಹೋದುವು.

**ತತೋಽಶ್ವಿನೌ ಸಮರುತಃ ಸಸಾಧ್ಯಾಃ ಸಮಹೋರಗಾಃ ।**
**ಯಕ್ಷರಾಕ್ಷಸಗಂಧರ್ವಾ ದಿವ್ಯನಾನಾಸ್ತ್ರಪಾಣಯಃ ॥೨೧೪॥**

**ಜಘ್ನುರ್ದೈತ್ಯೇಶ್ವರಂ ಸರ್ವೇ ಸಂಭೂಯ ಸುಮಹಾಬಲಾಃ ।**
**ನ ಚಾಸ್ತ್ರಾಣ್ಯಸ್ಯ ಸಜ್ಜಂತ ಗಾತ್ರೇ ವಜ್ರಾಚಲೋಪಮೇ ॥೨೧೫॥**

**ತತೋ ರಥಾದವಪ್ಲುತ್ಯ ತಾರಕೋ ದಾನವಾಧಿಪಃ ।**
**ಜಘಾನ ಕೋಟಿಶೋ ದೇವಾನ್ ಕರಪಾರ್ಷ್ಣಿಭಿರೇವ ಚ ॥೨೧೬॥**

**ಹತಶೇಷಾಣಿ ಸೈನ್ಯಾನಿ ದೇವಾನಾಂ ವಿಪ್ರದುದ್ರುವುಃ ।**
**ದಿಶೋ ಭೀತಾನಿ ಸಂತ್ಯಜ್ಯ ರಣೋಪಕರಣಾನಿ ತು ॥೨೧೭॥**

**ಲೋಕಪಾಲಾಂಸ್ತತೋ ದೈತ್ಯೋ ಬಬಂಧೇಂದ್ರಮುಖಾನ್ ರಣೇ ।**
**ಸಕೇಶವಾನ್ ದೃಢೈಃ ಪಾಶೈಃ ಪಶುಮಾರಃ ಪಶೂನಿವ ॥೨೧೮॥**

---

೨೧೪-೨೧೫. ಬಳಿಕ ಅಶ್ವಿನೀದೇವತೆಗಳು, ಮರುತರು, ಸಾಧ್ಯರು, ಮಹೋರಗರು, ಯಕ್ಷರು, ರಾಕ್ಷಸರು, ಗಂಧರ್ವರು ಇವರೆಲ್ಲರೂ ಒಟ್ಟುಗೂಡಿ, ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ತೊಟ್ಟು ದೈತ್ಯೇಶ್ವರನನ್ನು ಪ್ರಹರಿಸಿದರು. ಆದರೆ ವಜ್ರದ ಬೆಟ್ಟದಂತಿದ್ದ ಅವನ ದೇಹದಲ್ಲಿ ಅವುಗಳೊಂದೂ ನಾಟಲಿಲ್ಲ.

೨೧೬. ಅನಂತರ ತಾರಕಾಸುರನು ರಥದಿಂದ ಧುಮುಕಿ, ಕೈಗಳಿಂದ ಬಡಿದು ಹಿಮ್ಮಡಿಗಳಿಂದ ತುಳಿದು ಕೋಟಿಲೆಕ್ಕದಲ್ಲಿ ದೇವತೆಗಳನ್ನು ಸಂಹರಿಸಿದನು.

೨೧೭. ದೇವಸೈನ್ಯದಲ್ಲಿ ಸತ್ತು ಉಳಿದವರು ಯುದ್ಧಸಾಮಗ್ರಿಗಳನ್ನು ಬಿಸುಟು ಹೆದರಿಕೆಯಿಂದ ದಿಕ್ಕುದಿಕ್ಕಿಗೆ ಪಲಾಯನಮಾಡಿದರು.

೨೧೮. ತರುವಾಯ ದೈತ್ಯೇಶ್ವರನು ವಿಷ್ಣು, ಇಂದ್ರ ಮುಂತಾದ ದೇವತೆಗಳನ್ನೆಲ್ಲ ಯುದ್ಧದಲ್ಲಿ ಸೆರೆಹಿಡಿದನು. ಪಶುಘಾತಕನು ಪಶುಗಳನ್ನು ಕಟ್ಟುವಂತೆ ಅವರನ್ನು ಹಗ್ಗಗಳಿಂದ ಬಲವಾಗಿ ಬಿಗಿದನು.

ಸ ಭೂಯೋ ರಥಮಾಸ್ಥಾಯ ಜಗಾಮ ಸ್ವಕಮಾಲಯಂ ।
ಸಿದ್ಧಗಂಧರ್ವಸಂಘುಷ್ಟವಿಪುಲಾಚಲಮಸ್ತಕಂ ॥೨೧೯॥

ಸ್ತೂಯಮಾನೋ ದಿತಿಸುತೈರಪ್ಸರೋಭಿರ್ವಿನೋದಿತಃ ।
ತ್ರೈಲೋಕ್ಯಲಕ್ಷ್ಮೀಸ್ತದ್ದೇಶೇ ಪ್ರಾವಿಶತ್ಸ್ವಪುರಂ ಯಥಾ ॥೨೨೦॥

ನಿಷಸಾದಾಸನೇ ಪದ್ಮರಾಗರತ್ನವಿನಿರ್ಮಿತೇ ।
ತತಃ ಕಿನ್ನರಗಂಧರ್ವನಾಗನಾರೀವಿನೋದಿತೈಃ ।
ಕ್ಷಣಂ ವಿನೋದ್ಯಮಾನಸ್ತು ಪ್ರಚಲನ್ಮಣಿಕುಂಡಲಃ ॥೨೨೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದೇವಾಸುರಸಂಗ್ರಾಮೇ
ತಾರಕಜಯಲಾಭೋ ನಾಮ ತ್ರಿಪಂಚಾಶದಧಿಕಶತತಮೋಽಧ್ಯಾಯಃ

---

೨೧೯. ಆವನು ಮರಳಿ ರಥವನ್ನೇರಿ, ಸಿದ್ಧಗಂಧರ್ವರಿಂದ ತನ್ನ ಕೀರ್ತಿಯನ್ನು ಹೊಗಳಿಸಿಕೊಳ್ಳುತ್ತ ಮಹಾಗಿರಿಯ ಶಿಖರಾಗ್ರದಲ್ಲಿದ್ದ ತನ್ನ ಮನೆಗೆ ಹೋದನು.

೨೨೦. ಅವನನ್ನು ದೈತ್ಯರು ಸ್ತುತಿಸುತ್ತಿದ್ದರು. ಅಪ್ಸರಸ್ತ್ರೀಯರು ಗಾನ ನರ್ತನಾದಿಗಳಿಂದ ವಿನೋದಪಡಿಸುತ್ತಿದ್ದರು. ಮೂರುಲೋಕದ ಸಂಪತ್ತಿನ ಅಧಿದೇವತೆಯು ತನ್ನ ನಗರವನ್ನು ಪ್ರವೇಶಿಸುವಂತೆ ಆತನು ರಾಜಧಾನಿಯನ್ನು ಹೊಕ್ಕನು.

೨೨೧. ತಾರಕಾಸುರನು ಪದ್ಮರಾಗಮಣಿ ನಿರ್ಮಿತವಾದ ದಿವ್ಯಾಸನದಲ್ಲಿ ಕುಳಿತನು. ಬಳಿಕ ಕಿನ್ನರಸ್ತ್ರೀಯರು, ಗಂಧರ್ವತರುಣಿಯರು ಮತ್ತು ನಾಗಕನ್ನಿಕೆಯರು ನೃತ್ಯ ಗೀತಗಳಿಂದ ಅವನಿಗೆ ಆನಂದವನ್ನು ಬೀರಿದರು. ಅದಕ್ಕೆ ಮೆಚ್ಚಿ ಅವನು ತಲೆದೂಗಿದನು. ಅವನ ರತ್ನ ಕುಂಡಲಗಳು ಅಲುಗಾಡಿದುವು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ತಾರಕಾಸುರನು ದೇವತೆಗಳೊಡನೆ ಯುದ್ಧಮಾಡಿ ಜಯವನ್ನು ಸಂಪಾದಿಸಿದ ವೃತ್ತಾಂತವನ್ನು ವರ್ಣಿಸಿದೆ.

ಇಂದ್ರನು ದೇವತೆಗಳ ರಕ್ಷಣೆಗಾಗಿ ವಿಷ್ಣುವಿನಲ್ಲಿ ಮೊರೆಯಿಟ್ಟನು. ಜಂಭಾಸುರನ ವಧೆಯು ಇಂದ್ರನಿಂದಲೇ ಆಗಬೇಕೆಂದೂ, ಅದಕ್ಕಾಗಿ ಸೈನ್ಯವನ್ನು ಸಿದ್ಧಪಡಿಸಬೇಕೆಂದೂ ವಿಷ್ಣು ಉತ್ತರಕೊಟ್ಟು ಅವನನ್ನು ಸಂತೈಸಿದನು. ಅದರಂತೆ ದೇವರಾಜನು ದೊಡ್ಡ ಸೈನ್ಯದೊಡನೆ ಯುದ್ಧಕ್ಕೆ ಹೋದನು. ಎರಡು ಪಕ್ಷದವರಿಗೂ ಘೋರವಾದ ಯುದ್ಧವು ನಡೆಯಿತು. ಶುಂಭ, ಗಜ, ನಿಮಿ ಮುಂತಾದ ದೈತ್ಯವೀರರು ದೇವತೆಗಳ ಸೈನ್ಯವನ್ನು ಸದೆಬಡಿದರು. ವಿಧವಿಧವಾದ ಅಸ್ತ್ರಗಳೂ ಪ್ರತ್ಯಸ್ತ್ರಗಳೂ ಪ್ರಯೋಗಿಸಲ್ಪಟ್ಟುವು. ಕೊನೆಗೆ ಇಂದ್ರನ ಮಹಾಸ್ತ್ರದಿಂದ ಜಂಭನು ಹತನಾದನು.

ತಾರಕಾಸುರನಿಗೆ ಈ ಸುದ್ದಿ ತಿಳಿಯಿತು. ಅವನು ಕೋಪಾವೇಶದಿಂದ ಸಕಲ ಸೈನ್ಯಸಮೇತನಾಗಿ ಕಾಳಗಕ್ಕೆ ಹೊರಟನು. ದಿಕ್ಪಾಲಕರೂ, ವಿಷ್ಣುವೂ ಇಂದ್ರನಿಗೆ ಸಹಾಯಕರಾದರು. ಅಸುರನ ಮೇಲೆ ಅವರು ನೂರಾರು ಅಸ್ತ್ರಗಳನ್ನು ಪ್ರಯೋಗಿಸಿದರು. ಆದರೆ ಅವನು ಯಾವುದಕ್ಕೂ ಜಗ್ಗಲಿಲ್ಲ. ತೇರಿನಿಂದ ಇಳಿದು, ಅವರೆಲ್ಲರನ್ನೂ ಪಾಶಗಳಲ್ಲಿ ಬಂಧಿಸಿ, ಜಯಶೀಲನಾಗಿ ಮಣಿರಥದಲ್ಲಿ ಕುಳಿತು ತನ್ನ ರಾಜಧಾನಿಗೆ ತೆರಳಿದನು. ವಂದಿಮಾಗಧರು ಅವನ ಕೀರ್ತಿಯನ್ನು ಕೊಂಡಾಡಿದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದೇವಾಸುರಸಂಗ್ರಾಮದೊಳಗೆ ತಾರಕಜಯ ಲಾಭವೆಂಬ ನೂರೈವತ್ತಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುಃಪಂಚಾಶದಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಪ್ರಾದುರಾಸೀತ್ಪ್ರತೀಹಾರಃ ಶುಭ್ರನೀಲಾಂಬುಜಾಂಬರಃ |
ಸ ಜಾನುಭ್ಯಾಂ ಮಹೀಂ ಗತ್ವಾ ಪಿಹಿತಾಸ್ಯಃ ಸ್ವಪಾಣಿನಾ || ೧ ||

ಉವಾಚಾನಾವಿಲಂ ವಾಕ್ಯಮಲ್ಪಾಕ್ಷರಪರಿಸ್ಫುಟಂ |
ದೈತ್ಯೇಂದ್ರಮರ್ಕವೃಂದಾನಾಂ ಬಿಭ್ರತಂ ಭಾಸ್ವರಂ ವಪುಃ || ೨ ||

ಕಾಲನೇಮಿಃ ಸುರಾನ್ ಬದ್ಧ್ವಾಂಶ್ಚಾದಾಯ ದ್ವಾರಿ ತಿಷ್ಠತಿ |
ಸ ವಿಜ್ಞಾಪಯತಿ ಸ್ಥೇಯಂ ಕ್ವ ಬಂದಿಭಿರಿತಿ ಪ್ರಭೋ || ೩ ||

ತನ್ನಿಶಮ್ಯಾಬ್ರವೀದ್ದೈತ್ಯಃ ಪ್ರತೀಹಾರಸ್ಯ ಭಾಷಿತಂ |
ಯಥೇಷ್ಟಂ ಸ್ಥೀಯತಾಮೇಭಿರ್ಗೃಹಂ ಮೇ ಭುವನತ್ರಯಂ || ೪ ||

---

೧-೨. ಸೂತಪೌರಾಣಿಕನು ಹೇಳಿದನು.—ದ್ವಾರಪಾಲಕನು ನಿರ್ಮಲವಾದ ನೀಲವರ್ಣದ ಬಟ್ಟೆಯನ್ನುಟ್ಟು, ಅನೇಕ ಸೂರ್ಯರ ತೇಜಸ್ಸಿನಿಂದ ಕೂಡಿದ ತಾರಕಾಸುರನ ಬಳಿಗೆ ಬಂದು, ವಿನಯದಿಂದ ನೆಲಮುಟ್ಟುವಂತೆ ನಮಸ್ಕಾರ ಮಾಡಿ, ಕೈಗಳಿಂದ ಬಾಯನ್ನು ಮುಚ್ಚಿಕೊಂಡು ಗಂಭೀರವಾದ ಮಿತವಚನಗಳಿಂದ ಸ್ಪಷ್ಟವಾಗಿ ಇಂತೆಂದನು.

೩. ಪ್ರಭೂ, ಕಾಲನೇಮಿಯು ಸೆರೆಸಿಕ್ಕಿದ ದೇವತೆಗಳನ್ನು ಕರೆತಂದು ಬಾಗಿಲಲ್ಲಿ ನಿಂತಿದ್ದಾನೆ. ಸೆರೆಯಾಳುಗಳನ್ನು ಎಲ್ಲಿರಿಸಬೇಕೆಂದು ಅವನು ವಿಜ್ಞಾಪಿಸುತ್ತಾನೆ.

೪. ದ್ವಾರಪಾಲಕನ ಮಾತನ್ನು ಕೇಳಿ ದೈತ್ಯನು ಇಂತೆಂದನು. ಇವರು ತಮಗೆ ತೋರಿದ ಕಡೆಗಳಲ್ಲಿರಬಹುದು. ಏಕೆಂದರೆ ಮೂರು ಲೋಕವೂ ನನ್ನ ಮನೆ. ಬೇಗನೆ ಇವರ ಪಾಶಬಂಧಗಳನ್ನು ಬಿಚ್ಚಿರಿ.

**ಕೇವಲಂ ಪಾಶಬಂಧೇನ ವಿಮುಕ್ತೈರವಿಲಂಬಿತಂ ।**
**ಏವಂ ಕೃತೇ ತತೋ ದೇವಾ ದೂಯಮಾನೇನ ಚೇತಸಾ ॥ ೫ ॥**

**ಜಗ್ಮುರ್ಜಗದ್ಗುರುಂ ದ್ರಷ್ಟುಂ ಶರಣಂ ಕಮಲೋದ್ಭವಂ ।**
**ನಿವೇದಿತಾಸ್ತೇ ಶಕ್ರಾದ್ಯಾಃ ಶಿರೋಭಿರ್ಧರಣಿಂ ಗತಾಃ ।**
**ತುಷ್ಟುವುಃ ಸ್ಪಷ್ಟವರ್ಣಾರ್ಥೈರ್ವಚೋಭಿಃ ಕಮಲಾಸನಂ ॥ ೬ ॥**

**॥ ದೇವಾ ಊಚುಃ ॥**

**ತ್ವಮೋಂಕಾರೋಽಸ್ಯಂಕುರಾಯ ಪ್ರಸೂತೋ**
**ವಿಶ್ವಸ್ಯಾತ್ಮಾನಂತಭೇದಸ್ಯ ಪೂರ್ವಂ ।**
**ಸಂಭೂತಸ್ಯಾನಂತರಂ ಸತ್ತ್ವಮೂರ್ತೇ**
**ಸಂಹಾರೇಚ್ಛೋಸ್ತೇ ನಮೋ ರುದ್ರಮೂರ್ತೇ ॥ ೭ ॥**

---

೫. ತಾರಕಾಸುರನ ಅಪ್ಪಣೆಯಂತೆ ದೇವತೆಗಳನ್ನು ಸೆರೆಯಿಂದ ಬಿಡಲು, ಅವರು ಮನಸ್ಸಿನಲ್ಲಿ ಕೊರಗುತ್ತ ತಮ್ಮ ರಕ್ಷಕನೂ ಜಗದ್ಗುರುವೂ ಆದ ಬ್ರಹ್ಮನನ್ನು ನೋಡುವುದಕ್ಕೆ ಹೋದರು.

೬. ಆ ಇಂದ್ರಾದಿ ದೇವತೆಗಳು ತಮ್ಮ ಆಗಮನವನ್ನು ಬ್ರಹ್ಮನಲ್ಲಿ ಅರಿಕೆ ಮಾಡಿ ಬಹು ವಿನಯದಿಂದ ತಲೆಯು ನೆಲಕ್ಕೆ ಮುಟ್ಟುವಂತೆ ನಮಸ್ಕಾರ ಮಾಡಿದರು. ಗಂಭೀರವಾದ ಅರ್ಥದಿಂದ ಕೂಡಿದ ಸ್ಪಷ್ಟ ವಚನಗಳಿಂದ ಅವನನ್ನು ಸ್ತುತಿಸಿದರು.

೭. ದೇವತೆಗಳು ಹೇಳಿದರು.—ಸಕಲವೇದಗಳ ಸಾರವೆನಿಸಿದ ಓಂಕಾರ ಸ್ವರೂಪನು ನೀನು. ದೇವಮನುಷ್ಯಾದ್ಯನಂತ ಭೇದಗಳಿಂದ ಕೂಡಿದ ಈ ಜಗತ್ತನ್ನು ನಿರ್ಮಾಣ ಮಾಡಲೋಸುಗ ನೀನು ವ್ಯಕ್ತನಾದೆ. ನೀನು ಅದರ ಆತ್ಮನೆನಿಸಿರುವೆ. ಸೃಷ್ಟಿಸಿದ ತರುವಾಯ ನೀನು ಸತ್ವಗುಣ ಮಯನಾಗಿ ಅದನ್ನು ರಕ್ಷಿಸುವೆ. ಕೊನೆಗೆ ನಿನಗೆ ತೋರಿದಾಗ ರುದ್ರನ ರೂಪವನ್ನು ತಾಳಿ ಅದನ್ನು ಸಂಹರಿಸುವೆ. ಸೃಷ್ಟಿ, ಸ್ಥಿತಿ, ಸಂಹಾರ ಇವುಗಳ ನಿಯಾಮಕನಾದ ನಿನಗೆ ನಮಸ್ಕಾರ.

ವ್ಯಕ್ತಿಂ ನೀತ್ವಾ ತ್ವಂ ವಪುಃ ಸ್ವಂ ಮಹಿಮ್ನಾ
ತಸ್ಮಾದಂಡಾತ್ಸ್ವಾಭಿದಾನಂದಚಿಂತ್ಯಃ ।
ದ್ಯಾವಾಪೃಥ್ವ್ಯೋರೂರ್ಧ್ವಖಂಡಾವರಾಭ್ಯಾಂ
ಹ್ಯಂಡಾದಸ್ಮಾತ್ತ್ವಂ ವಿಭಾಗಂ ಕರೋಷಿ ॥ ೮ ॥

ವ್ಯಕ್ತಂ ಮೇರುರ್ಯಜ್ಜರಾಯುಸ್ತವಾಭೂ
ದೇವಂ ವಿದ್ಮಸ್ತ್ವತ್ತ್ರಣೀತಶ್ಚಕಾಸ್ತಿ ।
ವ್ಯಕ್ತಂ ದೇವಾಜನ್ಮನಃ ಶಾಶ್ವತಸ್ಯ
ದ್ಯೌಸ್ತೇ ಮೂರ್ಧಾ ಲೋಚನೇ ಚಂದ್ರಸೂರ್ಯೌ ॥ ೯ ॥

ವ್ಯಾಲಾಃ ಕೇಶಾಃ ಶ್ರೋತ್ರರಂಧ್ರಾ ದಿಶಸ್ತೇ
ಪಾದೌ ಭೂಮಿರ್ನಾಭಿರಂಧ್ರೇ ಸಮುದ್ರಾಃ ।

---

೮. ದೇವಾ, ಅಚಿಂತ್ಯಮಹಿಮನಾದ ನೀನು ಬ್ರಹ್ಮಾಂಡವೆಂಬ ಪ್ರಸಿದ್ಧಿಯನ್ನು ಪಡೆದು ನಿನ್ನ ಹೆಸರಿನಿಂದಲೇ ಅಂಕಿತವಾದ ಅಂಡದಿಂದ ದಿವ್ಯರೂಪವನ್ನು ಧರಿಸಿ ಗೋಚರಿಸಿದೆ. ಆ ಅಂಡದ ಮೇಲಣ ಮತ್ತು ಕೆಳಗಣ ಹೋಳುಗಳೆರಡನ್ನೂ ಭೂವ್ಯಂತರಿಕ್ಷಗಳೆಂದು ವಿಂಗಡಿಸಿದೆ. ಅಷ್ಟೇ ಅಲ್ಲದೆ ಇದರಲ್ಲಿಯೇ ಅತಲವಿತಲಾದಿಗಳಾದ ಏಳು ಅಧೋಲೋಕಗಳನ್ನೂ, ಭೂಲೋಕ ಭುವರ್ಲೋಕ ಮೊದಲಾದ ಏಳು ಊರ್ಧ್ವಲೋಕಗಳನ್ನು ವಿಭಾಗಮಾಡಿದೆ.

೯. ಭಗವಂತಾ, ಸಕಲದೇವತೆಗಳ ನಿವಾಸಸ್ಥಾನವೆನಿಸಿದ ಮೇರುಪರ್ವತವು ನಿನ್ನ ಗರ್ಭಾಶಯವೆಂದೆನಿಸಿದೆ. ಜಗತ್ತೆಲ್ಲ ನಿನ್ನಿಂದ ನಿರ್ಮಿತವಾಗಿ ಪ್ರಕಾಶಿಸುತ್ತಿದೆಯೆಂಬುದು ನಮಗೆ ಗೊತ್ತು. ನಿನಗೆ ಕರ್ಮಾಧೀನವಾದ ಜನ್ಮವಿಲ್ಲ. ನೀನು ಶಾಶ್ವತ. ಅಂತರಿಕ್ಷವು ನಿನ್ನ ಶಿರಸ್ಸು. ಚಂದ್ರಸೂರ್ಯರು ಕಣ್ಣುಗಳು.

೧೦. ಸರ್ಪಗಳೇ ನಿನ್ನ ಕೂದಲು; ದಿಕ್ಕುಗಳು ನಿನ್ನ ಕಿವಿಯ ರಂಧ್ರ; ಭೂಮಿಯು ನಿನ್ನ ಪಾದಗಳು; ಸಮುದ್ರಗಳು ನಿನ್ನ ನಾಭಿರಂಧ್ರದಲ್ಲಿ ನೆಲಸಿರ

ಮಾಯಾಕಾರಃ ಕಾರಣಂ ತ್ವಂ ಪ್ರಸಿದ್ಧೋ
ವೇದ್ಯೈಃ ಶಾಂತೋ ಜ್ಯೋತಿಷಾ ತ್ವಂ ವಿಮುಕ್ತಃ ||೧೦||

ವೇದಾರ್ಥೇಷು ತ್ವಾಂ ವಿವೃಣ್ವಂತಿ ಬುದ್ಧ್ವಾ
ಹೃತ್ಪದ್ಮಾಂತಃ ಸನ್ನಿವಿಷ್ಟಂ ಪುರಾಣಂ |
ತ್ವಾಮಾತ್ಮಾನಂ ಲಬ್ಧಯೋಗಾ ಗೃಣನ್ತಿ
ಸಾಂಖ್ಯೈರ್ಯಾಸ್ತಾಃ ಸಪ್ತಸೂಕ್ಷ್ಮಾಃ ಪ್ರಣೀತಾಃ ||೧೧||

ತಾಸಾಂ ಹೇತುರ್ಯಾಷ್ಟಮೀ ಚಾಪಿ ಗೀತಾ
ತಸ್ಯಾಂ ತಸ್ಯಾಂ ಗೀಯಸೇ ವೈ ತ್ವಮಂತಃ |
ದೃಷ್ಟ್ವಾ ಮೂರ್ತಿಂ ಸ್ಥೂಲಸೂಕ್ಷ್ಮಾಂ ಚಕಾರ
ದೈವೈರ್ಭಾವಾಃ ಕಾರಣೈಃ ಕೈಶ್ಚಿದುಕ್ತಾಃ ||೧೨||

---

ತಕ್ಕುವು. ನೀನು ಮಾಯಾರೂಪನು, ಸರ್ವಕಾರಣನು, ವೇದಪ್ರಸಿದ್ಧನು, ಶಾಂತನು, ತೇಜೋಮಯನು. ಎಲ್ಲ ಬಗೆಯ ಉಪಾಧಿಗಳಿಂದಲೂ ಬಿಡುಗಡೆ ಹೊಂದಿದವನು.

೧೧-೧೨. ಯೋಗಿಗಳು ವೇದಗಳ ಅರ್ಥವನ್ನು ಪರಿಶೀಲಿಸಿ ಅವು ಪುರಾಣ ಪುರುಷನಾದ ನಿನ್ನನ್ನೇ ಪ್ರತಿಪಾದಿಸುತ್ತವೆಯೆಂದು ನಿಶ್ಚಯಿಸಿರುವರು. ತಮ ಹೃದಯಕಮಲದಲ್ಲಿ ನಿನ್ನನ್ನೇ ನೆಲಗೊಳಿಸಿ ಧ್ಯಾನಿಸುವರು. ನಿನ್ನನ್ನೇ ಅಂತರ್ಯಾಮಿ ಯೆಂದು ಹೇಳುವರು. ಸಾಂಖ್ಯದರ್ಶನದಲ್ಲಿ ಪ್ರಕೃತಿ, ಮಹತ್ತು, ಅಹಂಕಾರ, ತನ್ಮಾತ್ರ, ಭೂತ, ಇಂದ್ರಿಯ, ಆತ್ಮ ಎಂಬ ಏಳು ವರ್ಗದ ತತ್ವಗಳು ಪ್ರತಿಪಾದಿತ ವಾಗಿವೆಯಷ್ಟೆ! ಎಂಟನೆಯ ತತ್ವವೆನಿಸಿದ ನೀನು ಅವುಗಳಿಗೆ ಕಾರಣವಾಗಿರುವೆ. ಅವುಗಳಲ್ಲಿ ಒಂದೊಂದರಲ್ಲಿಯೂ ವ್ಯಾಪಿಸಿರುವೆ. ಆತ್ಮನ ಕರ್ಮಾನುಭವಕ್ಕಾಗಿ ಈ ಪ್ರಾಕೃತಿಕ ತತ್ವಗಳಿಂದ ಸ್ಥೂಲ ಶರೀರಗಳನ್ನೂ ಸೂಕ್ಷ್ಮಶರೀರಗಳನ್ನೂ ನಿರ್ಮಿ ಸಿದೆ. ದೈವೀಸಂಪತ್ತಿಗೆ ಹಾನಿಬಂದಾಗ ಅದನ್ನು ಪರಿಹರಿಸುವ ಸಲುವಾಗಿ ನೀನು ಜನ್ಮವೆತ್ತುವೆಯೆಂದು ಶಾಸ್ತ್ರಗಳು ಸಾರುತ್ತವೆ.

ಸಂಭೂತಾಸ್ತೇ ತ್ವತ್ತ ಏವಾದಿಸರ್ಗೇ
ಭೂಯಸ್ತಾಂ ತಾಂ ವಾಸನಾಂ ತೇಭ್ಯುಪೇಯುಃ ।
ತ್ವತ್ಸಂಕಲ್ಪೇನಾಂತಮಾಯಾಪ್ತಿಗೂಢಃ
ಕಾಲೋ ಮೇಯೋ ಧ್ವಸ್ತಸಂಖ್ಯಾವಿಕಲ್ಪಃ ॥೧೩॥

ಭಾವಾಭಾವ ವ್ಯಕ್ತಿಸಂಹಾರಹೇತು
ಸ್ತ್ವಂ ಸೋಽನಂತಸ್ತಸ್ಯ ಕರ್ತಾಸಿ ಚಾತ್ಮನ್ ।
ಯೇಽನ್ಯೇ ಸೂಕ್ಷ್ಮಾಃ ಸಂತಿ ತೇಭ್ಯೋಽಭಿಗೀತಃ
ಸ್ಥೂಲಾ ಭಾವಾಶ್ಚಾವೃತಾರಶ್ಚ ತೇಷಾಂ ॥೧೪॥

ತೇಭ್ಯಃ ಸ್ಥೂಲೈಸ್ತೈಃ ಪುರಾಣೈಃ ಪ್ರತೀತೋ
ಭೂತಂ ಭವ್ಯಂ ಚೈವಮುದ್ಭೂತಿಭಾಜಾಂ ।
ಭಾವೇ ಭಾವೇ ಭಾವಿತಂ ತ್ವಾ ಯುನಕ್ತಿ
ಯುಕ್ತಂ ಯುಕ್ತಂ ವ್ಯಕ್ತಿಭಾವಾನ್ನಿರಸ್ಯ ।

---

೧೩. ಆದಿಸೃಷ್ಟಿಯಲ್ಲಿ ಜೀವರಾಶಿಯೆಲ್ಲ ನಿನ್ನಿಂದಲೇ ಉತ್ಪನ್ನವಾದುವು. ಮರಳಿ ಅವು ತಮ್ಮತಮ್ಮ ಸಂಸ್ಕಾರಕ್ಕೆ ಅನುಗುಣವಾದ ಜನ್ಮವನ್ನು ಪಡೆದುವು. ಅನಾದಿಯೂ, ಅಪರಿಚ್ಛಿನ್ನವೂ ಆದ ಕಾಲವು ನಿನ್ನ ಸಂಕಲ್ಪದಿಂದ ಮಾಸ, ವರ್ಷ, ಯುಗ ಮುಂತಾದ ಪ್ರಭೇದಗಳಿಂದ ಪರಿಚ್ಛಿನ್ನವಾಗಿರುವುದು.

೧೪-೧೫. ಸರ್ವಾಂತರ್ಯಾಮಿಯಾದ ಓ ದೇವಾ, ಹಿಂದೆ ಹೇಳಿದ ಸ್ಥೂಲ ಮತ್ತು ಸೂಕ್ಷ್ಮರೂಪದಿಂದಿರುವ ಜೀವರಾಶಿಗಳ ಉತ್ಪತ್ತಿಗೂ ವಿನಾಶಕ್ಕೂ ನೀನೇ ಕಾರಣವಾಗಿರುವೆ. ನೀನು ಅನಂತನು; ಜಗತ್ಕರ್ತನು; ಇವುಗಳಲ್ಲದೆ ಇನ್ನೂ ಉಳಿದ ಸೂಕ್ಷ್ಮರೂಪವಾದ ಮತ್ತು ಅದನ್ನು ಆವರಿಸಿಕೊಂಡಿರುವ ಸ್ಥೂಲರೂಪವಾದ ಸೃಷ್ಟಿವರ್ಗವೇನಿರುವುದೋ ಅದರ ಅಳಿವಿಗೂ ಉಳಿವಿಗೂ ನಿನ್ನನ್ನೇ ಕಾರಣವೆನ್ನುವರು. ಅಲ್ಲದೆ ಇನ್ನೂ ಶಕ್ತಿಯುತರೂ ಪ್ರಾಚೀನರೂ ಆದ ಜ್ಞಾನಿಗಳೂ ಕೂಡ ನಿನ್ನನ್ನೇ ಸರ್ವಕಾರಣನೆನ್ನುವರು. ಹೀಗೆ ಮಾನವರಲ್ಲಿ ಹಿಂದೆ ಹುಟ್ಟಿದ ಮತ್ತು ಮುಂದೆ ಹುಟ್ಟುವ ಒಬ್ಬೊಬ್ಬನೂ ತನ್ನ ಒಂದೊಂದು ಜನ್ಮದಲ್ಲಿಯೂ ನಿನ್ನನ್ನೇ

ಇತ್ಥಂ ದೇವೋ ಭಕ್ತಿಭಾಜಾಂ ಶರಣ್ಯ
ಸ್ತ್ರಾತಾ ಗೋಪ್ತಾ ನೋ ಭವಾನಂತಮೂರ್ತಿಃ ||೧೫||

ವಿರಿಂಚಿಮಸುರಾಸ್ತುತ್ವಾ ಬ್ರಹ್ಮಾಣಮವಿಕಾರಿಣಂ |
ತಸ್ಥುರ್ವರ್ಗನೋಭಿರಿಷ್ಟಾರ್ಥಸಂಪ್ರಾಪ್ತಿಪ್ರಾರ್ಥನಾಸ್ತತಃ ||೧೬||

ಏವಂ ಸ್ತುತೋ ವಿರಿಂಚಿಸ್ತು ಪ್ರಸಾದಂ ಪರಮಂ ಗತಃ |
ಅಮರಾನ್ವರದೇನಾಽಽಹ ವಾಮಹಸ್ತೇನ ನಿರ್ದಿಶನ್ ||೧೭||

|| ಬ್ರಹ್ಮೋವಾಚ ||

ನಾರೀ ಯಾಭರ್ತೃಕಾಽಕಸ್ಮಾತ್ತನುಸ್ತೇ ತ್ಯಕ್ತಭೂಷಣಾ |
ನ ರಾಜತೇ ತಥಾ ಶಕ್ರ ಮ್ಲಾನವಕ್ತ್ರಶಿರೋರುಹಾ ||೧೮||

ಹುತಾಶನ ವಿಮುಕ್ತೋಽಪಿ ನ ಧೂಮೇನ ವಿರಾಜಸೇ |
ಭಸ್ಮನೇವ ಪ್ರತಿಚ್ಛನ್ನೋ ದಗ್ಧದಾವಶ್ಚಿರೋಷಿತಃ ||೧೯||

---

ಸರ್ವಕರ್ತೃವೆಂದು ಭಾವಿಸುವನು. ಹಾಗೆ ನಿನ್ನಲ್ಲಿ ಮನಸ್ಸಿಟ್ಟವನನ್ನು ನೀನು ಅಸಹಾಯನನ್ನಾಗಿ ಬಿಡುವುದಿಲ್ಲ. ದೇವಾ, ನೀನು ಭಕ್ತರಿಗೆ ಆಶ್ರಯವನ್ನು ಕೊಡತಕ್ಕವನು. ಅನಂತರೂಪಿಯೆನಿಸಿಕೊಂಡವನು. ನಮ್ಮನ್ನು ರಕ್ಷಿಸು, ಸಲಹು.

೧೬. ದೇವತೆಗಳು ವಿಕಾರರಹಿತನಾದ ಬ್ರಹ್ಮದೇವನನ್ನು ಸ್ತುತಿಸಿ ತಮ್ಮ ಇಷ್ಟಾರ್ಥವು ಕೈಗೂಡಲೆಂದು ಮನಸ್ಸಿನಲ್ಲಿ ಪ್ರಾರ್ಥಿಸುತ್ತಾ ನಿಂತಿದ್ದರು.

೧೭. ಹೀಗೆ ಸ್ತುತಿಸಲ್ಪಟ್ಟ ಬ್ರಹ್ಮನು ಬಹಳ ಪ್ರಸನ್ನನಾಗಿ ವರವನು ಕರುಣಿಸುವುದಾಗಿ ಎಡಗೈಯಿಂದ ದೇವತೆಗಳನ್ನು ನಿರ್ದೇಶಿಸುತ್ತ ಇಂತೆಂದನು.

೧೮. ಬ್ರಹ್ಮನು ಹೇಳಿದನು.—ಓ ಇಂದ್ರಾ, ಪತಿಯಿಲ್ಲದ ಸ್ತ್ರೀಯಂತೆ ನಿನ್ನ ಶರೀರವು ಇದ್ದಕ್ಕಿದ್ದಹಾಗೆ ಅಲಂಕಾರರಹಿತವಾಗಿರುವುದಲ್ಲಾ ! ಮುಖವೂ ಕೂದಲೂ ಕಳೆಗುಂದಿವೆ. ನೀನು ಎಂದಿನಂತೆ ಪ್ರಕಾಶಿಸುತ್ತಿಲ್ಲ.

೧೯. ಓ ಅಗ್ನೀ, ಹೊಗೆಯಿಲ್ಲದಿದ್ದರೂ ನೀನು ಶೋಭಿಸುತ್ತಿಲ್ಲ. ಕಾಡೆಲ್ಲವನ್ನೂ ಬಹುಕಾಲ ಸುಟ್ಟು ಬೂದಿಯಿಂದ ಮರೆಯಾದ ಕಾಳ್ಕಿಚ್ಚಿನಂತಿರುವೆ.

ಯಮಮಾಮಯಮಯೋ ನೈವ ಶರೀರೇ ತ್ವಂ ವಿರಾಜಸೇ ।
ದಂಡಸ್ಯಾಲಂಬನೇನೇವ ಹ್ಯಕೃಚ್ಛ್ರಸ್ತು ಪದೇ ಪದೇ ॥೨೦॥

ರಜನೀಚರನಾಥೋಽಪಿ ಕಿಂ ಭೀತ ಇವ ಭಾಷಸೇ ।
ರಾಕ್ಷಸೇಂದ್ರ ಕ್ಷತಾರಾತೇ ತ್ವಮರಾತಿಕ್ಷತೋ ಯಥಾ ॥೨೧॥

ತನುಸ್ತೇ ವರುಣೋಚ್ಛುಷ್ಕಾ ಪರೀತಸ್ಯೇವ ವಹ್ನಿನಾ ।
ವಿಮುಕ್ತರುಧಿರಂ ಪಾಶಂ ಫಣಿಭಿಃ ಪ್ರವಿಲೋಕಯ ॥೨೨॥

ವಾಯೋ ಭವಾನ್ವಿಚೇತಸ್ಕಸ್ತ್ವಂ ಸ್ನಿಗ್ಧೈರಿವ ನಿರ್ಜಿತಃ ।
ಕಿಂ ತ್ವಂ ಬಿಭೇಷಿ ಧನದ ಸಂನ್ಯಸ್ಯೈವ ಕುಬೇರತಾಮ್ ॥೨೩॥

ರುದ್ರಾಸ್ತ್ರಿಶೂಲಿನಸ್ಸಂತೋ ವದಧ್ವಂ ಬಹುಶೂಲತಾಮ್ ।
ಭವಂತಃ ಕೇನ ತತ್ಕ್ಷಿಪ್ತಂ ತೇಜಸ್ತು ಭವತಾಮಪಿ ॥೨೪॥

---

೨೦. ಎಲೈ ಯಮನೇ, ಆರೋಗ್ಯವಂತನಾದ ಮನುಷ್ಯನು ಕೋಲೂರಿಕೊಂಡು ನಡೆದರೆ ಹೇಗೆ ಒಪ್ಪುವುದಿಲ್ಲವೋ ಹಾಗೆ ನೀನು ರೋಗಗ್ರಸ್ತವಾದ ಈ ಶರೀರದಿಂದ ಪ್ರಕಾಶಿಸುವುದೇ ಇಲ್ಲ.

೨೧. ಓ ನಿರಋತೀ, ನೀನು ರಾಕ್ಷಸರ ಒಡೆಯ. ಶತ್ರುಗಳನ್ನು ಅಡಗಿಸುವವನು. ಆದರೂ ಶತ್ರುವಿನಿಂದ ಬಾಧೆಗೊಂಡು ಹೆದರಿದವನಂತೆ ಮಾತನಾಡುವೆಯೇಕೆ ?

೨೨. ಎಲೈ ವರುಣನೇ, ಅಗ್ನಿಯಿಂದ ಆವೃತನಾದವನಂತೆ ನಿನ್ನ ದೇಹವು ಬಹಳ ಬಾಡಿದೆ. ನಿನ್ನ ಪಾಶಾಯುಧಧ ಸರ್ಪಗಳು ರಕ್ತವನ್ನು ಕಾರುತ್ತಿದ್ದರೂ ಸುಮ್ಮನೆ ನೋಡುತ್ತಿರುವೆ.

೨೩. ಎಲೈ ವಾಯೂ ! ಸ್ನೇಹಿತರಿಂದ ಪರಾಜಿತನಾದವನಂತೆ ನೀನು ಶೂನ್ಯ ಮನಸ್ಕನಾಗಿರುವೆಯಲ್ಲಾ ! ಕುಬೇರನೇ, ಸಕಲೈಶ್ವರ್ಯದ ಒಡೆತನವನ್ನು ಬಿಟ್ಟು ಏತಕ್ಕೆ ಹೆದರಿರುವೆ ?

೨೪. ಓ ರುದ್ರರೇ, ತ್ರಿಶೂಲಧಾರಿಗಳಾದ ನಿಮಗೆ ಈ ಹೃದಯವೇದನೆಯು ಏಕೆ ಬಂದಿತು ? ಹೇಳಿರಿ. ನಿಮ್ಮ ತೇಜಸ್ಸೂ ಸಹ ಮರೆಯಾಗಲು ಕಾರಣವೇನು ?

ಅಕಿಂಚಿತ್ಕರತಾಂ ಯಾತಃ ಕರಸ್ತೇ ನ ವಿಭಾಸತೇ ।
ಅಲಂ ನೀಲೋತ್ಪಲಾಭೇನ ಚಕ್ರೇಣ ಮಧುಸೂದನ ॥೨೫॥

ಕಿಂ ತ್ವಯಾಽನುದರಾಲೀನಭುವನಪ್ರವಿಲೋಕನಂ ।
ಕ್ರಿಯತೇ ಸ್ತಿಮಿತಾಕ್ಷೇಣ ಭವತಾ ವಿಶ್ವತೋಮುಖ ॥೨೬॥

ಏವಮುಕ್ತಾಃ ಸುರಾಸ್ತೇನ ಬ್ರಹ್ಮಣಾ ಬ್ರಹ್ಮಮೂರ್ತಿನಾ ।
ವಾಚಾಂ ಪ್ರಧಾನಭೂತತ್ವಾನ್ಮಾರುತಂ ತಮಚೋದಯನ್ ॥೨೭॥

ಅಥ ವಿಷ್ಣುಮುಖೈರ್ದೇವೈಃ ಶ್ವಸನಃ ಪ್ರತಿಬೋಧಿತಃ ।
ಚತುರ್ಮುಖಂ ತದಾ ಪ್ರಾಹ ಚರಾಚರಗುರುಂ ವಿಭುಂ ॥೨೮॥

ನನು ವೇತ್ಸಿ ಚರಾಚರಭೂತಗತಂ
ಭವಭಾವಮತೀವ ಮಹಾನುಚ್ಛ್ರಿತಃ ಪ್ರಭವಃ ।

---

೨೫. ನೀನು ಪ್ರಯತ್ನರಹಿತನಾಗಿರುವೆಯಲ್ಲಾ! ಇದೇನು? ನಿನ್ನ ಕೈ ಪ್ರಕಾಶಹೀನವಾಗಿದೆ? ನಿನ್ನ ಚಕ್ರವು ತನ್ನ ಸಹಜವಾದ ಕೋಟಿಸೂರ್ಯ ಪ್ರಕಾಶವನ್ನು ಬಿಟ್ಟು ಕನ್ನೈದಿಲೆಯ ಬಣ್ಣವನ್ನು ತಾಳಿದೆ. ಆ ಬಗೆಯ ಕಾಂತಿಹೀನತೆ ಅದಕ್ಕೆ ಬರಬಾರದು.

೨೬. ಎಲೈ ಸರ್ವತೋಮುಖನೇ, ನಿನ್ನ ಕೋಮಲವಾದ ಉದರದಲ್ಲಿ ಅಡಗಿರುವ ಪ್ರಪಂಚಗಳನ್ನು ಅಲುಗಾಡದೆ ನೆಟ್ಟ ಕಣ್ಣುಗಳಿಂದ ನೋಡುತ್ತಿರುವೆಯೇನು?

೨೭. ವೇದ ಶರೀರಕನಾದ ಬ್ರಹ್ಮನು ಹೀಗೆ ಹೇಳಲು ದೇವತೆಗಳು ಮಾತುಗಾರರಲ್ಲಿ ಬಲ್ಲಿದನಾದ ವಾಯುದೇವನಿಗೆ ತಮ್ಮ ಆಗಮನೋದ್ದೇಶವನ್ನು ಬಿನ್ನೈಸುವಂತೆ ಸೂಚನೆಯಿತ್ತರು.

೨೮. ಬಳಿಕ ವಿಷ್ಣುವೇ ಮೊದಲಾದ ದೇವತೆಗಳ ಕೋರಿಕೆಯಂತೆ ವಾಯುವು ಚರಾಚರರೂಪನೂ, ಜಗತ್ತಿನ ಗುರುವೂ, ವಿಭುವೂ ಆದ ಬ್ರಹ್ಮನಿಗಿಂತೆಂದನು.

೨೯. ದೇವಾ, ಎಲ್ಲರಿಗಿಂತ ಹಿರಿಯವನೂ ಅತಿಶಯ ಮಹಿಮಶಾಲಿಯೂ ಆದ ನಿನಗೆ ಚರಾಚರಾತ್ಮಕವಾದ ಸಕಲ ಜಂತುಗಳ ಮನೋಗತವೂ ತಿಳಿದೇ

ಪುನರರ್ಥಿವಚೋಽಭಿವಿಸ್ತೃತ
 ಶ್ರವಣೋಪಮಕೌತುಕಭಾವಕೃತಃ ||೨೯||

ತ್ವಮನಂತ ಕರೋಷಿ ಜಗದ್ಭವತಾಂ
 ಸಚರಾಚರಗರ್ಭವಿಭಿನ್ನಗುಣಂ ।
ಅಮರಾಸುರಮೇತದಶೇಷಮಪಿ
 ತ್ವಯಿ ತುಲ್ಯಮಹೋ ಜನಕೋಽಸಿ ಯತಃ ||೩೦||

ಪಿತುರಸ್ತಿ ತಥಾಪಿ ಮನೋವಿಕೃತಿಃ
 ಸಗುಣೋ ವಿಗುಣೋ ಬಲವಾನಬಲಃ ।
ಭವತೋ ವರಲಾಭನಿವೃತ್ತಿಭಯಃ
 ಕುಲಿಶಾಂಗಸುತೋ ದಿತಿಜೋಽತಿಬಲಃ ।
ಸಚರಾಚರನಿರ್ಮಥನೇ ಕಿಮಿತಿ
 ಕಿತವಸ್ತು ಕೃತೋ ವಿಹಿತೋ ಭವತಾ ||೩೧||

---

ಇರುವುದು. ಆದರೂ ನಿನ್ನ ಸಹಾಯವನ್ನಪೇಕ್ಷಿಸಿ ಬಂದಿರುವ ನಮ್ಮ ಮಾತನ್ನೂ ಕೇಳೋಣವೆಂಬ ಕುತೂಹಲದಿಂದ ನೀನು ಪ್ರವೃತ್ತನಾಗಿರುವೆ.

೩೦. ಓ ಅನಂತಾ, ಸ್ಥಾವರಜಂಗಮಗಳಿಂದ ತುಂಬಿ ನಾನಾವಿಧವಾದ ಗುಣಗಳಿಂದ ಕೂಡಿದ ಈ ಜಗತ್ತನ್ನು ನೀನು ನಿರ್ಮಿಸುವೆ. ಸುರರು, ಅಸುರರು ಇವರೆಲ್ಲರೂ ನಿನಗೆ ಒಂದೇ. ಏಕೆಂದರೆ ನೀನು ಎಲ್ಲರಿಗೂ ತಂದೆಯಾಗಿರುವೆ. ಆದರೂ ತಂದೆಯಾದವನ ಮನಸ್ಸೂ ಕೂಡ ವ್ಯತ್ಯಾಸವನ್ನು ಹೊಂದುವುದು. ಹೇಗೆಂದರೆ ಮಕ್ಕಳಲ್ಲಿ ಒಬ್ಬನು ಗುಣಶಾಲಿ; ಇನ್ನೊಬ್ಬನು ಗುಣವಿಲ್ಲದವನು. ಒಬ್ಬನು ಬಲಿಷ್ಠ; ಮತ್ತೊಬ್ಬನು ದುರ್ಬಲ.

೩೧. ವಜ್ರಾಂಗನ ಪುತ್ರನಾದ ತಾರಕಾಸುರನು ನಿನ್ನಿಂದ ವರವನ್ನು ಪಡೆದು ನಿರ್ಭಯನಾಗಿ ಬಹು ಬಲಿಷ್ಠನಾಗಿದ್ದಾನೆ. ಅವನು ಚರಾಚರಗಳೆಲ್ಲವನ್ನೂ ಧ್ವಂಸ ಮಾಡುತ್ತಿದ್ದಾನೆ. ದೇವಾ, ಅವನನ್ನು ಇಷ್ಟು ಧೂರ್ತನನ್ನಾಗಿ ನೀನು ಮಾಡಿದು ದೇಕೆ?

ಕಿಲ ದೇವ ತ್ವಯಾ ಸ್ಥಿತಯೇ ಜಗತಾಂ
ಮಹದದ್ಭುತಚಿತ್ರವಿಚಿತ್ರಗುಣಾಃ ।
ಅಪಿ ತುಷ್ಟಿಕೃತಃ ಶ್ರುತಕಾಮಫಲಾ
ವಿಹಿತಾ ದ್ವಿಜನಾಯಕದೇವಗಣಾಃ ॥೩೨॥

ಅಪಿ ನಾಕಮಭೂತ್ಕಿಲ ಯಜ್ಞಭುಜಾಂ
ಭವತೋ ವಿನಿಯೋಗವಶಾತ್ಸತತಂ ।
ಅಪಹೃತ್ಯ ವಿಮಾನಗಣಂ ಸ ಕೃತೋ
ದಿತಿಜೇನ ಮಹಾಮರುಭೂಮಿಸಮಃ ॥೩೩॥

ಕೃತವಾನಸಿ ಸರ್ವಗುಣಾತಿಶಯಂ
ಯಮಶೇಷಮಹೀಧರರಾಜತಯಾ ।
ಸಮಮಿಂಗಿತಭಾವವಿಧಿಃ ಸ ಗಿರಿ
ರ್ಗಗನೇನ ಸದೋಚ್ಛ್ರಯತಾಂ ಹಿ ಗತಃ ॥೩೪॥

---

೩೨. ದೇವಾ, ಲೋಕಗಳ ಮರ್ಯಾದೆಯನ್ನು ಪಾಲಿಸುವುದಕ್ಕಾಗಿ ಬ್ರಾಹ್ಮಣೋತ್ತಮರನ್ನೂ ದೇವತೆಗಳನ್ನೂ ಸೃಷ್ಟಿಸಿ, ಅವರನ್ನು ಅತ್ಯದ್ಭುತವೂ ವಿಚಿತ್ರವೂ ಆದ ಗುಣಗಳಿಂದ ತುಂಬಿಸಿ, ಅವರ ಇಷ್ಟಾರ್ಥಗಳನ್ನು ಕೇಳಿ ಅನುಗ್ರಹಿಸಿ ಅವರನ್ನು ತೃಪ್ತರನ್ನಾಗಿ ನೀನು ಮಾಡಿದೆಯಲ್ಲವೇ ?

೩೩. ನಿನ್ನ ವರದ ಬಲದಿಂದ ಆ ದೈತ್ಯನು ದೇವತೆಗಳ ವಿಮಾನಗಳನ್ನು ಅಪಹರಿಸಿ ಸ್ವರ್ಗವನ್ನು ದೊಡ್ಡ ಮರುಭೂಮಿಗೆ ಸಮನಾಗಿ ಮಾಡಿಬಿಟ್ಟನಲ್ಲಾ !

೩೪. ನೀನು ಮೇರುಪರ್ವತವನ್ನು ಎಲ್ಲ ಪರ್ವತಗಳಿಗೂ ಅಧಿರಾಜನನ್ನಾಗಿ ಮಾಡಿ ಅದಕ್ಕೆ ಎಲ್ಲಾ ಗುಣಗಳಲ್ಲಿಯೂ ಶ್ರೇಷ್ಠತೆಯನ್ನು ಕೊಟ್ಟೆ. ಅದು ನಿನ್ನ ಮನೋಭಿಪ್ರಾಯಕ್ಕೆ ಅನುಗುಣವಾಗಿ ಆಕಾಶವನ್ನು ಮುಟ್ಟುವಷ್ಟು ಔನ್ನತ್ಯವನು ಪಡೆಯಿತು.

ಅಧಿನಾಸವಿಹಾರವಿಧಾವುಚಿತೋ
  ದಿತಿಜೇನ ಪವಿಕ್ಷತಶೃಂಗತಟಃ ।
ಪರಿಲುಂಠಿತರತ್ನಗುಹಾನಿವಹೋ
  ಬಹುದೈತ್ಯಸಮಾಶ್ರಯತಾಂ ಗಮಿತಃ ॥೩೫॥

ಸುರರಾಜ ಸ ತಸ್ಯ ಭಯೇನ ಗತಂ
  ವ್ಯದಧಾದಶರೀರ ಇತೋಽಪಿ ವೃಥಾ ।
ಉಪಯೋಗ್ಯತಯಾ ವಿವೃತಂ ಸುಚಿರಂ
  ವಿಮಲದ್ಯುತಿಪೂರಿತದಿಗ್ವದನಂ ॥೩೬॥

ಭವತೈವ ವಿನಿರ್ಮಿತಮಾದಿಯುಗೇ
  ಸುರಹೇತಿಸಮೂಹಮನುತ್ಥಮಿದಂ ।
ದಿತಿಜಸ್ಯ ಶರೀರಮವಾಪ್ಯ ಗತಂ
  ಶತಧಾ ಮತಿಭೇದಮಿವಾಲ್ಪಮನಾಃ ॥೩೭॥

---

೩೫. ಅದು ಈಗ ತಾರಕಾಸುರನ ವಾಸಕ್ಕೂ ವಿಹಾರಕ್ಕೂ ಉಚಿತವಾದ ಸ್ಥಲವೆನಿಸಿದೆ. ಅವನು ವಜ್ರಾಯುಧದಿಂದ ಅದರ ಶಿಖರಭಾಗಗಳನ್ನು ಮುರಿದು ಹಾಕಿದ್ದಾನೆ. ಅದರ ಗುಹೆಗಳಲ್ಲಿದ್ದ ರತ್ನಗಳನ್ನು ಸೂರೆಮಾಡಿದ್ದಾನೆ. ಹಲವರು ದೈತ್ಯರು ಅಲ್ಲಿ ಆಶ್ರಯವನ್ನು ಪಡೆದಿದ್ದಾರೆ.

೩೬. ದೇವತೆಗಳ ಅಧೀಶ್ವರನಾದ ಓ ಕಮಲಾಸನಾ, ತಾರಕಾಸುರನ ಭಯದಿಂದ ಆ ಮೇರುವು ಪರ್ವತರೂಪವಾದ ತನ್ನ ಶರೀರವನ್ನು ಬಿಟ್ಟು ಇಲ್ಲಿಂದ ಪಲಾಯನಮಾಡಿದನು. ದೇವತೆಗಳಿಗೆಲ್ಲ ಉಪಯೋಗವಾಗಲೆಂದು ಯಾವ ಅಡ್ಡಿಯೂ ಇಲ್ಲದಂತೆ ಎಲ್ಲ ದಿಕ್ಕುಗಳಲ್ಲಿಯೂ ತೆರೆದು ಬಿಟ್ಟಿದ್ದ, ಮಣಿವೆಳಗುಗಳ ಕಾಂತಿಯಿಂದ ತುಂಬಿದ ಗುಹೆಗಳು ನಿಷ್ಪ್ರಯೋಜನವಾದುವು.

೩೭. ದೇವತೆಗಳ ಆಯುಧಗಳನ್ನು ನೀನೇ ಆದಿಯುಗದಲ್ಲಿ ನಿರ್ಮಿಸಿದೆ. ಅವು ಪರಾಜಯವನ್ನೇ ಅರಿಯದವು. ಆ ದೈತ್ಯನ ಶರೀರದ ಮೇಲೆ ಪ್ರಯೋಗಿಸಲ್ಪಟ್ಟಾಗ ಅವು ಚಪಲಚಿತ್ತನ ಬುದ್ಧಿಯಂತೆ, ನೂರಾರು ಪಾಲಾಗಿ ಒಡೆದು ಹೋದುವು.

**ಆಸಾರಧೂಲಿಧ್ವಸ್ತಾಂಗಾ ದ್ವಾರಸ್ಥಾಃ ಸ್ಮ ಕದರ್ಥಿನಃ ।**
**ಲಬ್ಧಪ್ರವೇಶಾಃ ಕೃಚ್ಛ್ರೇಣ ವಯಂ ತಸ್ಯಾಮರದ್ವಿಷಃ ॥೩೮॥**

**ಸಭಾಯಾಮಮರಾ ದೇವ ನಿಕೃಷ್ಟೇಽಪ್ಯುಪವೇಶಿತಾಃ ।**
**ವೇತ್ರಹಸ್ತೈರಜಲ್ಪಂತಸ್ತತೋಽಪಹಸಿತಾಸ್ತು ತೈಃ ॥೩೯॥**

**ಮಹಾರ್ಯ್ಯಾಃ ಸಿದ್ಧಸರ್ವಾರ್ಥಾ ಭವಂತಃ ಸ್ವಲ್ಪಭಾಷಿಣಃ ।**
**ಚಾಟುಯುಕ್ತಮಥೋ ಕರ್ಮ ಹ್ಯಮರಾ ಬಹು ಭಾಷತ ॥೪೦॥**

**ಸಭಯಂ ದೈತ್ಯಸಿಂಹಸ್ಯ ಸಶಕ್ರಸ್ಯ ತು ಸಂಸ್ಥಿತಾಃ ।**
**ವದತೇತಿ ಚ ದೈತ್ಯಸ್ಯ ಪ್ರೇಷ್ಯೈರ್ವಿಹಸಿತಾ ಬಹು ॥೪೧॥**

**ಋತವೋ ಮೂರ್ತಿಮಂತಸ್ತಮುಪಾಸಂತೇ ಹ್ಯಹರ್ನಿಶಂ ।**
**ಕೃತಾಪರಾಧಸಂತ್ರಾಸಂ ನ ತ್ಯಜಂತಿ ಕದಾಚನ ॥೪೨॥**

---

೩೮. ನಾವು ಮಳೆಯಲ್ಲಿ ನೆನೆದು ಮೈಯೆಲ್ಲ ಧೂಳಿನಿಂದ ಮಾಸಿರಲು, ದೇವ ಶತ್ರುವಾದ ಆ ದೈತ್ಯನ ಬಾಗಿಲಲ್ಲಿ ದೀನರಾಗಿ ಕಾದು ಬಿದ್ದಿರುವೆವು. ಅವನ ಹತ್ತಿರಕ್ಕೆ ಪ್ರವೇಶವು ಸಿಗುವುದೇ ಬಹಳ ಕಷ್ಟ.

೩೯. ದೇವಾ, ಅವನ ಸಭೆಯಲ್ಲಿ ದೇವತೆಗಳನ್ನು ನಿಕೃಷ್ಟವಾದ ಸ್ಥಾನಗಳಲ್ಲಿ ಕೂರಿಸುವರು. ಅಷ್ಟೇ ಅಲ್ಲ; ಮಾತನಾಡದೆ ಅವರು ಸುಮ್ಮನೆ ಕುಳಿತಿದ್ದರೆ ಅವರನ್ನು ಕೋಲುಕಾರರು ಹಾಸ್ಯಮಾಡುವರು.

೪೦. "ಮಾನನೀಯರಾದ ಪೂಜ್ಯರೇ, ನಿಮ್ಮ ಇಷ್ಟಾರ್ಥಗಳೆಲ್ಲ ಸಿದ್ಧ ವಾಗಿವೆ. ನೀವು ಮಿತಭಾಷಿಗಳು. ನೀವು ಕೈಗೊಳ್ಳುವ ಕಾರ್ಯವೂ ಮನಃಪ್ರಿಯ ವಾದುದು." ಎಂದು ದೈತ್ಯರನ್ನು ಹೊಗಳಿ "ದೇವತೆಗಳಿರಾ, ನೀವು ಬಹಳ ಮಾತಾಡುತ್ತೀರಿ" ಎಂದು ದೇವತೆಗಳನ್ನು ಜರೆಯುವರು.

೪೧. "ಇಂದ್ರನಿಗೂ ಅಧಿಪತಿಯಾದ ದೈತ್ಯರಾಜನ ಮುಂದೆ ನಿಂತುಕೊಂಡು ಭಯದೊಡನೆ ಮಾತನಾಡಿರಿ" ಎಂದು ದೈತ್ಯಭೃತ್ಯರು ದೇವತೆಗಳನ್ನು ಬಹಳವಾಗಿ ಹಾಸ್ಯಮಾಡುವರು.

೪೨. ಋತುಗಳು ಆಕಾರವನ್ನು ಧರಿಸಿ ಅವನನ್ನು ಹಗಲೂ ಇರುಳೂ ಸೇವಿಸುತ್ತವೆ. ತಮ್ಮಿಂದ ಎಲ್ಲಿ ಅಪರಾಧವಾದೀತೋ ಎಂದು ಅವು ಯಾವಾಗಲೂ ಹೆದರಿಕೊಂಡಿವೆ.

ತಂತ್ರೀತ್ರಯುಲಯೋಪೇತಂ ಸಿದ್ಧಗಂಧರ್ವಕಿನ್ನರೈಃ ।
ಸುರಾಗಮುಪಧಾ ನಿತ್ಯಂ ಗೀಯತೇ ತಸ್ಯ ವೇಶ್ಮಸು ||೪೩||

ಹಂತಾಕೃತೋಪಕರಣೈರ್ಮಿತ್ರಾರಿಗುರುಲಾಘವೈಃ ।
ಶರಣಾಗತಸಂತ್ಯಾಗೀ ತ್ಯಕ್ತಸತ್ಯಪರಿಶ್ರಯಃ ||೪೪||

ಇತಿ ನಿಃಶೇಷಮಥವಾ ನಿಃಶೇಷಂ ನೈ ನ ಶಕ್ಯತೇ ।
ತಸ್ಯಾಽವಿನಯಮಾಖ್ಯಾತುಂ ಸ್ರಷ್ಟಾ ತತ್ರ ಪರಾಯಣಂ ||೪೫||

ಇತ್ಯುಕ್ತಃ ಸ್ವಾತ್ಮಭೂರ್ದೇವಃ ಸುರೈರ್ದೈತ್ಯವಿಚೇಷ್ಟಿತಂ ।
ಸುರಾನುವಾಚ ಭಗವಾಂಸ್ತತಃ ಸ್ಮಿತಮುಖಾಂಬುಜಃ ||೪೬||

|| ಬ್ರಹ್ಮೋವಾಚ ||

ಅವಧ್ಯಸ್ತಾರಕೋ ದೈತ್ಯಃ ಸರ್ವೈರಪಿ ಸುರಾಸುರೈಃ ।
ಯಸ್ಯ ವಧ್ಯಃ ಸ ನಾದ್ಯಾಪಿ ಜಾತಸ್ತ್ರಿಭುವನೇ ಪುಮಾನ್ ||೪೭||

---

೪೩. ಮಂದ್ರಮಧ್ಯತಾರಗಳೆಂಬ ಮೂರು ಸ್ಥಾನಗಳಲ್ಲಿ ಲಯಕ್ಕನುಗುಣವಾಗಿ ಸಿದ್ಧರೂ ಗಂಧರ್ವರೂ, ಕಿನ್ನರರೂ ಆ ದೈತ್ಯರಾಜನ ಮನೆಗಳಲ್ಲಿ ಮನಸ್ಸಿಲ್ಲದಿದ್ದರೂ ಮಧುರವಾಗಿ ಅನುದಿನವೂ ಹಾಡುವರು.

೪೪. ಅಕಟಾ! ಅವನಿಗೆ ಮಿತ್ರರು, ಶತ್ರುಗಳು, ಹಿರಿಯರು, ಕಿರಿಯರು ಇವರಾರಿಂದಲೂ ಏನೂ ಆಗಬೇಕಾಗಿಲ್ಲ. ಅವನು ಮರೆಹೊಕ್ಕವರನ್ನು ಕೈಬಿಡುವನು. ಸತ್ಯದ ಕಟ್ಟುನಿಟ್ಟುಗಳಾವುವೂ ಅವನಿಗಿಲ್ಲ.

೪೫. ಹೀಗೆ ಅವನ ಅವಿನಯವನ್ನು ಪರಿಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ಈ ವಿಚಾರದಲ್ಲಿ ಪ್ರಭುವಾದ ನೀನೇ ಪ್ರಮಾಣ."

೪೬. ದೇವತೆಗಳು ದೈತ್ಯರ ವ್ಯಾಪಾರವನ್ನಿಂತು ವಿವರಿಸಲು, ಬ್ರಹ್ಮದೇವನು ಮುಖಕಮಲದಲ್ಲಿ ಮುಗುಳು ನಗೆಯನ್ನು ಬೀರುತ್ತ ಅವರಿಗಿಂತೆಂದನು.

೪೭. ಬ್ರಹ್ಮನು ಹೇಳಿದನು.—ಸುರರು, ಅಸುರರು ಇವರು ಯಾರೂ ತಾರಕಾಸುರನನ್ನು ಕೊಲ್ಲಲಾರರು. ಆತನನ್ನು ಸಂಹರಿಸಬಲ್ಲ ಪುರುಷನು ಮೂರು ಲೋಕದಲ್ಲಿ ಇನ್ನೂ ಹುಟ್ಟಿಲ್ಲ.

ಮಯಾ ಸ ವರದಾನೇನ ಛಂದಯಿತ್ವಾ ನಿವಾರಿತಃ ।
ತಪಸಃ ಸಾಂಪ್ರತಂ ರಾಜಾ ತ್ರೈಲೋಕ್ಯದಹನಾತ್ಮಕಾತ್ ॥೪೮॥

ಸ ಚ ವವ್ರೇ ವಧಂ ದೈತ್ಯಃ ಶಿಶುತಃ ಸಪ್ತವಾಸರಾತ್ ।
ಸ ಸಪ್ತದಿವಸೋ ಬಾಲಃ ಶಂಕರಾದ್ಯೋ ಭವಿಷ್ಯತಿ ॥೪೯॥

ತಾರಕಸ್ಯ ನಿಹಂತಾ ಸ ಭಾಸ್ಕರಾಭೋ ಭವಿಷ್ಯತಿ ।
ಸಾಂಪ್ರತಂ ಚಾಪ್ಯಪತ್ನೀಕಃ ಶಂಕರೋ ಭಗವಾನ್ಪ್ರಭುಃ ॥೫೦॥

ಯಚ್ಚಾಹಮುಕ್ತವಾನ್ಯಸ್ಯಾ ಹ್ಯುತ್ತಾನಕರತಾ ಸದಾ ।
ಉತ್ತಾನೋ ವರದಃ ಪಾಣಿರೇಷ ದೇವ್ಯಾಃ ಸದೈವ ತು ॥೫೧॥

ಹಿಮಾಚಲಸ್ಯ ದುಹಿತಾ ಸಾ ತು ದೇವೀ ಭವಿಷ್ಯತಿ ।
ತಸ್ಯಾಃ ಸಕಾಶಾದ್ಯಃ ಶರ್ವಸ್ತ್ವರಣ್ಯಾಂ ಪಾವಕೋ ಯಥಾ ॥೫೨॥

---

೪೮. ದೈತ್ಯರಾಜನಾದ ತಾರಕನಿಗೆ ನಾನು ವರವಿತ್ತು ಮನಸ್ಸನ್ನೊಲಿಸಿಕೊಂಡು ಮೂರು ಲೋಕವನ್ನೂ ತಳಮಳಗೊಳಿಸುವ ಘೋರತಪಸ್ಸನ್ನು ಮಾಡದಂತೆ ಅವನನ್ನು ತಡೆದೆನು.

೪೯. ಏಳು ದಿನದ ಮಗುವಿನಿಂದ ತನಗೆ ವಧವಾಗಬೇಕೆಂದು ಆ ದೈತ್ಯನು ಬೇಡಿಕೊಂಡನು. ಈಶ್ವರನಿಂದ ಮುಂದೆ ಹುಟ್ಟುವವನೇ ಆ ಏಳು ದಿನದ ಬಾಲನು.

೫೦. ಆ ತಾರಕಾಸುರನ ಸಂಹಾರಕನು ಸೂರ್ಯನಂತೆ ತೇಜಸ್ವಿಯಾಗಿರುವನು. ಆದರೆ ಪ್ರಕೃತದಲ್ಲಿ ಪೂಜ್ಯನಾದ ಶಂಕರನು ಪತ್ನೀರಹಿತನಾಗಿದ್ದಾನೆ.

೫೧. ಯಾರ ಕೈ ಯಾವಾಗಲೂ ಮೇಲುಮೊಗವಾಗಿಯೇ ಇರುವುದೋ ಆಕೆಯ ಮಗನೇ ಆತನೆಂದೂ ಹೇಳಿರುವೆನು. ಪೂಜ್ಯಳಾದ ದೇವಿಯ ಕೈ ಯಾವಾಗಲೂ ಮೇಲುಮುಖವಾಗಿ ವರವನ್ನು ಕರುಣಿಸುತ್ತಿರುವುದು.

೫೨-೫೩. ಆ ದೇವಿಯಾದರೋ ಹಿಮವಂತನ ಮಗಳಾಗುವಳು. ಅರಣಿಯಲ್ಲಿ ಅಗ್ನಿ ಹುಟ್ಟುವಂತೆ ಆಕೆಯಲ್ಲಿ ಪರಮೇಶ್ವರನಿಂದ ಕುಮಾರನು ಜನಿಸುವನು.

ಜನಯಿಷ್ಯತಿ ತಂ ಪ್ರಾಪ್ಯ ತಾರಕೋಽಭಿಭವಿಷ್ಯತಿ ।
ಮಯಾಪ್ಯುಪಾಯಃ ಸ ಕೃತೋ ಯಥೈವಂ ಹಿ ಭವಿಷ್ಯತಿ ॥೫೩॥

ಶೇಷಶ್ಚಾಪ್ಯಸ್ಯ ವಿಭವೋ ವಿನಶ್ಯೇತ್ತದನಂತರಂ ।
ಸ್ತೋಕಕಾಲಂ ಪ್ರತೀಕ್ಷಧ್ವಂ ನಿರ್ವಿಶಂಕೇನ ಚೇತಸಾ ॥೫೪॥

ಇತ್ಯುಕ್ತಾ ಸ್ತ್ರಿದಶಾಸ್ತೇನ ಸಾಕ್ಷಾತ್ಕಮಲಜನ್ಮನಾ ।
ಜಗ್ಮುಸ್ತಂ ಪ್ರಣಿಪತ್ಯೇಶಂ ಯಥಾಯೋಗಂ ದಿವೌಕಸಃ ॥೫೫॥

ತತೋ ಗತೇಷು ದೇವೇಷು ಬ್ರಹ್ಮಾ ಲೋಕಪಿತಾಮಹಃ ।
ನಿಶಾಂ ಸಸ್ಮಾರ ಭಗವಾನ್ ಸ್ವತನೋಃ ಪೂರ್ವಸಂಭವಾಂ ॥೫೬॥

ತತೋ ಭಗವತೀ ರಾತ್ರಿರುಪತಸ್ಥೇ ಪಿತಾಮಹಂ ।
ತಾಂ ವಿವಿಕ್ತೇ ಸಮಾಲೋಕ್ಯ ಬ್ರಹ್ಮೋವಾಚ ವಿಭಾವರೀಂ ॥೫೭॥

---

ಅವನೊಡನೆ ಯುದ್ಧಮಾಡಿ ತಾರಕಾಸುರನು ಹತನಾಗುವನು. ಇದೆಲ್ಲವೂ ಹೀಗೆ ನಡೆಯುವುದಕ್ಕೆ ಬೇಕಾದ ಉಪಾಯವನ್ನು ನಾನು ಆಗಲೇ ಮಾಡಿರುವೆನು.

೫೪. ಇನ್ನುಳಿದ ಅವನ ಐಶ್ವರ್ಯವೂ ಸಹ ಆ ಬಳಿಕ ಹಾಳಾಗುವುದು. ಮನಸ್ಸಿನಲ್ಲಿ ಸಂದೇಹವನ್ನಿಟ್ಟುಕೊಳ್ಳದೆ ಸ್ವಲ್ಪಕಾಲ ಪ್ರತೀಕ್ಷಿಸಿರಿ."

೫೫. ಬ್ರಹ್ಮದೇವನು ಹೀಗೆ ಹೇಳಲು ದೇವತೆಗಳು ಅವನನ್ನು ನಮಸ್ಕರಿಸಿ ತಮ್ಮತಮ್ಮ ಇಷ್ಟಾನುಸಾರವಾಗಿ ತೆರಳಿದರು.

೫೬. ದೇವತೆಗಳು ಹೊರಟುಹೋದ ಮೇಲೆ ಲೋಕಪಿತಾಮಹನಾದ ಬ್ರಹ್ಮನು ತನ್ನ ದೇಹದಿಂದ ಹಿಂದೆ ಉತ್ಪನ್ನಳಾದ ನಿಶಾದೇವಿಯನ್ನು ಸ್ಮರಿಸಿಕೊಂಡನು.

೫೭. ತರುವಾಯ ಪೂಜ್ಯಳಾದ ರಾತ್ರಿಯು ಬ್ರಹ್ಮನ ಬಳಿಗೆ ಬಂದು ನಿಂತಳು. ಆಕೆಯನ್ನು ಕಂಡು ಅವನು ಏಕಾಂತದಲ್ಲಿ ಇಂತೆಂದನು.

|| ಬ್ರಹ್ಮೋವಾಚ ||

ವಿಭಾವರೀ ಮಹತ್ಕಾರ್ಯಂ ವಿಬುಧಾನಾಮುಪಸ್ಥಿತಂ ।
ತತ್ಕರ್ತವ್ಯಂ ತ್ವಯಾ ದೇವಿ ಶೃಣು ಕಾರ್ಯಸ್ಯ ನಿಶ್ಚಯಂ ||೫೮||

ತಾರಕೋ ನಾಮ ದೈತ್ಯೇಂದ್ರಃ ಸುರಕೇತುರನಿರ್ಜಿತಃ ।
ತಸ್ಯಾಭಾವಾಯ ಭಗವಾನ್ ಜನಯಿಷ್ಯತಿ ಚೇಶ್ವರಃ ||೫೯||

ಸುತಂ ಸ ಭವಿತಾ ತಸ್ಯ ತಾರಕಸ್ಯಾಂತಕಾರಕಃ ।
ಶಂಕರಸ್ಯಾಭವತ್ಪತ್ನೀ ಸತೀ ದಕ್ಷಸುತಾ ತು ಯಾ ||೬೦||

ಸಾ ಮೃತಾ ಕುಪಿತಾ ದೇವೀ ಕಸ್ಮಿಂಶ್ಚಿತ್ಕಾರಣಾಂತರೇ ।
ಭವಿತಾ ಹಿಮಶೈಲಸ್ಯ ದುಹಿತಾ ಲೋಕಭಾವಿನೀ ||೬೧||

ವಿರಹೇಣ ಹರಸ್ತಸ್ಯಾ ಮತ್ವಾ ಶೂನ್ಯಂ ಜಗತ್ತ್ರಯಂ ।
ತಪಸ್ಯನ್ ಹಿಮಶೈಲಸ್ಯ ಕಂದರೇ ಸಿದ್ಧಸೇವಿತೇ ||೬೨||

---

೫೮. ಬ್ರಹ್ಮನು ಹೇಳಿದನು.—ಎಲೌ ದೇವೀ, ರಾತ್ರೀ, ದೇವತೆಗಳಿಗಾಗಿ ಮಾಡಬೇಕಾದ ದೊಡ್ಡ ಕಾರ್ಯವೊಂದು ಈಗ ಒದಗಿದೆ. ನೀನು ಅದನ್ನು ನಡೆಸಬೇಕು. ಅದರ ವಿವರವನ್ನು ಹೇಳುವೆನು ಕೇಳು.

೫೯. ತಾರಕನೆಂಬ ದೈತ್ಯನು ದೇವತೆಗಳಿಗೆ ಧೂಮಕೇತುವಿನಂತಿದ್ದಾನೆ. ಅವನನ್ನು ಗೆಲ್ಲುವುದು ಅವರಿಗೆ ಅಸಾಧ್ಯ. ಅವನ ಸಂಹಾರಕ್ಕಾಗಿ ಪೂಜ್ಯನಾದ ಶಂಕರನಿಗೆ ಪುತ್ರನೊಬ್ಬನು ಜನಿಸುವನು. ಆತನೇ ತಾರಕಾಂತಕನೆನಿಸುವನು.

೬೦-೬೧. ದಕ್ಷಬ್ರಹ್ಮನ ಮಗಳಾದ ಸತಿಯು ಶಂಕರನ ಪತ್ನಿಯಾಗಿದ್ದಳಷ್ಟೆ ! ಅವಳು ಯಾವುದೋ ಕಾರಣದಿಂದ ಕೋಪಿಸಿಕೊಂಡು ಮೃತಳಾದಳು. ಲೋಕಮಾತೆಯಾದ ಆಕೆಯು ಹಿಮವಂತನ ಮಗಳಾಗಿ ಹುಟ್ಟುವಳು.

೬೨. ಆಕೆಯ ವಿರಹದಿಂದ ಈಶ್ವರನಿಗೆ ಮೂರು ಲೋಕವೂ ಶೂನ್ಯವಾಗಿ ಕಾಣುವುದು. ಅವನು ಅವಳ ಉತ್ಪತ್ತಿಯನ್ನೇ ನಿರೀಕ್ಷಿಸಿ ಸಿದ್ಧರಿಂದ ಸೇವಿತವಾದ ಹಿಮಾಚಲದ ಗುಹೆಯಲ್ಲಿ ತಪಸ್ಸುಮಾಡುತ್ತ ಕೆಲಕಾಲ ವಾಸಮಾಡುತ್ತಿರುವನು.

ಪ್ರತೀಕ್ಷಮಾಣಸ್ತಜ್ಜನ್ಮ ಕಂಚಿತ್ಕಾಲಂ ನಿವತ್ಸ್ಯತಿ ।
ತಯೋಃ ಸುತಪ್ತತಪಸೋರ್ಭವಿತಾ ಯೋ ಮಹಾಬಲಃ ॥೬೩॥

ಸ ಭವಿಷ್ಯತಿ ದೈತ್ಯಸ್ಯ ತಾರಕಸ್ಯ ವಿನಾಶಕಃ ।
ಜಾತಮಾತ್ರಾ ತು ಸಾ ದೇವೀ ಸ್ವಲ್ಪಸಂಜ್ಞಾ ಚ ಭಾಮಿನೀ ॥೬೪॥

ವಿರಹೋತ್ಕಂಠಿತಾ ಗಾಢಂ ಹರಸಂಗಮಲಾಲಸಾ ।
ತಯೋಃ ಸುತಪ್ತತಪಸೋಃ ಸಂಯೋಗಃ ಸ್ಯಾಚ್ಛುಭಾನನೇ ॥೬೫॥

ತತಸ್ತಾಭ್ಯಾಂ ತು ಜನಿತಃ ಸ್ವಲ್ಪೋ ವಾಕ್ಕಲಹೋ ಭವೇತ್ ।
ತತಸ್ತು ಸಂಶಯೋ ಭೂಯಸ್ತಾರಕಸ್ಯ ನ ದೃಶ್ಯತೇ ॥೬೬॥

ತಯೋಃ ಸಂಯುಕ್ತಯೋಸ್ತಸ್ಮಾತ್ಸುರತಾಸಕ್ತಿಕಾರಣೇ ।
ವಿಘ್ನಸ್ತ್ವಯಾ ವಿಧಾತವ್ಯೋ ಯಥಾ ತಾಭ್ಯಾಂ ತಥಾ ಶೃಣು ॥೬೭॥

---

೬೩. ಅವರಿಬ್ಬರೂ ತಪಸ್ಸನ್ನು ವಿಶೇಷವಾಗಿ ಆಚರಿಸುವರು. ಬಹು ಬಲಿಷ್ಠನಾದ ಮಗನೊಬ್ಬನು ಅವರಿಗೆ ಹುಟ್ಟುವನು. ಅವನೇ ತಾರಕಾಸುರನ ವಿನಾಶಕನೆನಿಸುವನು.

೬೪-೬೫. ಸತೀ ದೇವಿಯೂ ಕೂಡ ಹುಟ್ಟಿದಕೂಡಲೆ ಮೂರ್ಛೆಹೋಗುವಳು. ಈಶ್ವರನ ವಿರಹದಿಂದ ಪೀಡಿತಳಾಗಿ ಅವನ ಸಮಾಗಮವನ್ನು ಬಯಸುತ್ತಿರುವಳು. ಅವರಿಬ್ಬರೂ ಅತ್ಯುಗ್ರವಾಗಿ ತಪಸ್ಸನ್ನು ಮಾಡುವರು. ಎಲೌ ಮಂಗಳಮುಖೀ, ಬಳಿಕ ಇಬ್ಬರೂ ಒಟ್ಟುಗೂಡುವರು.

೬೬. ಅನಂತರ ಅವರಿಬ್ಬರಿಗೂ ಸ್ವಲ್ಪ ವಾಕ್ಕಲಹ ಹುಟ್ಟುವುದು. ಆದರೂ ತಾರಕಾಸುರನ ವಿನಾಶದ ವಿಚಾರದಲ್ಲಿ ಸಂಶಯವೇನೂ ಇರುವುದಿಲ್ಲ.

೬೭. ಸುರತಾಸಕ್ತಿಯಿಂದ ಅವರಿಬ್ಬರೂ ಸೇರಿದಾಗ ನೀನು ವಿಘ್ನವನ್ನು ಉಂಟುಮಾಡಬೇಕು. ಅದು ಹೇಗೆಂದರೆ ಹೇಳುವೆನು ಕೇಳು. ನೀನು ಪಾರ್ವತಿಯ ಜನನಿಯಾದ ಮೇನಾದೇವಿಯ ಗರ್ಭದಲ್ಲಿ ನಿಂತು ನಿನ್ನ ರೂಪವನ್ನು ಎಂದರೆ ಕರಿಯ ಬಣ್ಣವನ್ನು ಗರ್ಭದಲ್ಲಿರುವ ದೇವಿಗೆ ಬರಿಸು.

ಗರ್ಭಸ್ಥಾನೇ ಚ ತನ್ಮಾತುಃ ಸ್ವೇನ ರೂಪೇಣ ರಂಜಯ ।
ತತೋ ವಿಹಸ್ಯ ಶರ್ವಸ್ತಾಂ ವಿಭ್ರಾಂತೋ ನರ್ಮಪೂರ್ವಕಂ ॥೬೮॥

ಭರ್ತ್ಸಯಿಷ್ಯತಿ ತಾಂ ದೇವೀಂ ತತಃ ಸಾ ಕುಪಿತಾ ಸತೀ ।
ಪ್ರಯಾಸ್ಯತಿ ತಪಶ್ಚರ್ತುಂ ತತ್ತಸ್ಮಾತ್ತಪಸೇ ಪುನಃ ॥೬೯॥

ಜನಯಿಷ್ಯತಿ ಯಂ ಶರ್ವಾದಮಿತದ್ಯುತಿಮಂಡಿತಂ ।
ಸ ಭವಿಷ್ಯತಿ ಹಂತಾ ವೈ ಸುರಾರೀಣಾಮಸಂಶಯಃ ॥೭೦॥

ತ್ವಯಾಪಿ ದಾನವಾ ದೇವಿ ಹಂತವ್ಯಾ ಲೋಕದುರ್ಜಯಾಃ ।
ಯಾವಚ್ಚ ನ ಸತೀ ದೇಹಸಂಕ್ರಾಂತಗುಣಸಂಚಯಾ ॥೭೧॥

ತತ್ಸಂಗಮೇನ ತಾವತ್ತ್ವಂ ದೈತ್ಯಾನ್ ಹಂತುಂ ನ ಶಕ್ಷ್ಯಸೇ ।
ಏವಂ ಕೃತೇ ತಪಸ್ತಪ್ತ್ವಾ ಸೃಷ್ಟಿಸಂಹಾರಕಾರಿಣೇ ॥೭೨॥

ಸಮಾಪ್ತನಿಯಮಾ ದೇವೀ ಯದಾ ಚೋಮಾ ಭವಿಷ್ಯತಿ ।
ತದಾ ಸ್ವಮೇವ ತದ್ರೂಪಂ ಶೈಲಜಾ ಪ್ರತಿಪತ್ಸ್ಯತೇ ॥೭೩॥

---

೬೮-೬೯. ನೀನು ಹಾಗೆ ಮಾಡಿದರೆ ಪರಮೇಶ್ವರನು ಪಾರ್ವತಿಯನ್ನು ನೋಡಿ ಪ್ರಣಯಕಲಹದಲ್ಲಿ ಹಾಸ್ಯಮಾಡುವನು. ಅವಳನ್ನು ಗದರಿಸಿ ಜರೆಯುವನು. ಆಕೆಯೂ ಕೋಪಗೊಂಡು ಅವನನ್ನು ಬಿಟ್ಟು ತಪಸ್ಸಿಗಾಗಿ ತೆರಳುವಳು.

೭೦. ಆಕೆಗೆ ಈಶ್ವರನಿಂದ ಅಪರಿಮಿತ ತೇಜೋವಂತನಾದ ಕುಮಾರನೊಬ್ಬನು ಜನಿಸುವನು. ದೇವತೆಗಳ ಶತ್ರುಗಳನ್ನು ಸಂಹಾರಮಾಡತಕ್ಕವನು ಅವನೇ. ಸಂಶಯವಿಲ್ಲ.

೭೧. ನೀನು ಸತಿಯ ದೇಹದಲ್ಲಿ ನಿಂತು ಅಲ್ಲಿ ನಿನ್ನ ಗುಣಗಳನ್ನು ನೆಲೆಗೊಳಿಸುವವರೆಗೂ ಲೋಕದಲ್ಲಿ ದುರ್ಜಯರೆನಿಸಿರುವ ದೈತ್ಯದಾನವರನ್ನು ಸಂಹರಿಸುತ್ತಿರು. ಅವಳೊಡನೆ ಕೂಡಿದ ಬಳಿಕ ನೀನು ದೈತ್ಯರನ್ನು ಸಂಹರಿಸಲಾರೆ.

೭೨-೭೩. ನೀನು ಹೀಗೆ ಮಾಡಿದರೆ ಜಗತ್ತಿನ ಸೃಷ್ಟಿಯನ್ನೂ ಸಂಹಾರವನ್ನೂ ನಡೆಸಬಲ್ಲ ಆ ಪಾರ್ವತಿಯು ತಪಸ್ಸನ್ನು ಮಾಡಿ ನಿಯಮವನ್ನು ಸಾಂಗವಾಗಿ ನೆರವೇರಿಸುವಳು. ಆಗ ತನ್ನ ಸಹಜವಾದ ರೂಪವನ್ನೇ ತಾಳುವಳು.

ತನುಸ್ತ್ವಾಪಿ ಸಹಜಾ ಸೈಕಾನಂಶಾ ಭವಿಷ್ಯತಿ ।
ರೂಪಾಂಶೇನ ತು ಸಂಯುಕ್ತಾ ತ್ವಮುಮಾಯಾಂ ಭವಿಷ್ಯಸಿ ॥೭೪॥

ಏಕಾನಂಶೇತಿ ಲೋಕಸ್ತ್ವಾಂ ವರದೇ ಪೂಜಯಿಷ್ಯತಿ ।
ಭೇದೈರ್ಬಹುವಿಧಾಕಾರೈಃ ಸರ್ವಗಾ ಕಾಮಸಾಧಿನೀ ॥೭೫॥

ಓಂಕಾರವಕ್ತ್ರಾ ಗಾಯತ್ರೀ ತ್ವಮಿತಿ ಬ್ರಹ್ಮವಾದಿಭಿಃ ।
ಆಕ್ರಾಂತಿರೂರ್ಜಿತಾಕಾರಾ ರಾಜಭಿಶ್ಚ ಮಹಾಭುಜೈಃ ॥೭೬॥

ತ್ವಂ ಭೂರಿತಿ ವಿಶಾಂ ಮಾತಾ ಶೂದ್ರೈಃ ಶೈವೀತಿ ಪೂಜಿತಾ ।
ಕ್ಷಾಂತಿರ್ಮುನೀನಾಮಕ್ಷೋಭ್ಯಾ ದಯಾ ನಿಯಮಿನಾಮಿತಿ ॥೭೭॥

---

೭೪. ನಿನ್ನ ಸ್ವಭಾವಸಿದ್ಧವಾದ ಶರೀರವು ಅಭಿನ್ನವೂ ಅಂಶರಹಿತವೂ ಆಗಿರುವುದು. ನಿನ್ನ ರೂಪದ ಏಕಾಂಶದಿಂದ ನೀನು ಪಾರ್ವತಿಯೊಡನೆ ಸಂಯುಕ್ತಳಾಗುವೆ.

೭೫. ವರವನ್ನು ನೀಡುವ ಓ ನಿಶಾದೇವಿ, ನಿನ್ನನ್ನು ಜನರು ಏಕಾ, ಅನಂಶಾ ಮುಂತಾದ ಹೆಸರುಗಳಿಂದ ಪೂಜಿಸುವರು. ನೀನು ವಿಧವಿಧವಾದ ಆಕಾರಗಳನ್ನು ತಾಳಬಲ್ಲೆ. ಬೇಕಾದ ಕಡೆಗೆ ಹೋಗಬಲ್ಲೆ. ಮನಸ್ಸಿಗೆ ತೋರಿದುದನ್ನು ಸಾಧಿಸಬಲ್ಲೆ.

೭೬. ಬ್ರಹ್ಮಜ್ಞಾನಿಗಳು ನಿನ್ನನ್ನು ಓಂಕಾರವಕ್ತ್ರೆ, ಗಾಯತ್ರಿ ಎಂದು ಪೂಜಿಸುವರು. ಪರಾಕ್ರಮಶಾಲಿಗಳಾದ ರಾಜರು ಆಕ್ರಾಂತೆಯೆಂದೂ ಊರ್ಜಿತಾಕಾರೆಯೆಂದೂ ಆರಾಧಿಸುವರು.

೭೭. ನೀನು ಭೂಃ ಎಂಬ ಹೆಸರಿನಿಂದ ವೈಶ್ಯರ ಮಾತೆಯೆನಿಸುವೆ. ಶೂದ್ರರು ಶೈವಿಯೆಂದು ನಿನ್ನನ್ನು ಅರ್ಚಿಸುವರು. ಮುನಿಗಳು ಕ್ಷಾಂತಿಯೆಂದೂ ನಿರ್ವಿಕಾರಳೆಂದೂ ನಿನ್ನನ್ನು ಧ್ಯಾನಿಸುವರು. ವ್ರತಶೀಲರು ದಯೆಯೆಂದು ನಿನ್ನನ್ನು ಗೌರವಿಸುವರು.

ತ್ವಂ ಮಹೋಪಾಯಸಂದೋಹಾ ನೀತಿರ್ನಯವಿಸರ್ಪಿಣಾಂ ।
ಪರಿಚ್ಛಿತ್ತಿಸ್ತ್ವಮರ್ಥಾನಾಂ ತ್ವಮೀಹಾ ಪ್ರಾಣಿಹೃಚ್ಛಯಾ ॥೭೮॥

ತ್ವಂ ಮುಕ್ತಿಃ ಸರ್ವಭೂತಾನಾಂ ತ್ವಂ ಗತಿಃ ಸರ್ವದೇಹಿನಾಂ ।
ತ್ವಂ ಚ ಕೀರ್ತಿಮತಾಂ ಕೀರ್ತಿಸ್ತ್ವಂ ಮೂರ್ತಿಃ ಸರ್ವದೇಹಿನಾಂ ॥೭೯॥

ರತಿಸ್ತ್ವಂ ರಕ್ತಚಿತ್ತಾನಾಂ ಪ್ರೀತಿಸ್ತ್ವಂ ಹೃಷ್ಟದರ್ಶಿನಾಂ ।
ತ್ವಂ ಕಾಂತಿಃ ಕೃತಭೂಷಾಣಾಂ ತ್ವಂ ಶಾಂತಿರ್ದುಃಖಕರ್ಮಣಾಂ ॥೮೦॥

ತ್ವಂ ಭ್ರಾಂತಿಃ ಸರ್ವಬೋಧಾನಾಂ ತ್ವಂ ಗತಿಃ ಕ್ರತುಯಾಜಿನಾಂ ।
ಜಲಧೀನಾಂ ಮಹಾವೇಲಾ ತ್ವಂ ಚ ಲೀಲಾ ವಿಲಾಸಿನಾಂ ॥೮೧॥

ಸಂಭೂತಿಸ್ತ್ವಂ ಪದಾರ್ಥಾನಾಂ ಸ್ಥಿತಿಸ್ತ್ವಂ ಲೋಕಪಾಲಿನೀ ।
ತ್ವಂ ಕಾಲರಾತ್ರಿರ್ನಿಶ್ಶೇಷಭುವನಾವಲಿನಾಶಿನೀ ॥೮೨॥

---

೭೮. ಕಾರ್ಯಸಾಧನೆಗೆ ಬೇಕಾದ ಎಲ್ಲ ಬಗೆಯ ಉಪಾಯಗಳ ಸಮುದಾಯವೇ ನೀನು. ನಯಶಾಲಿಗಳಿಗೆ ದಾರಿಯನ್ನು ತೋರಿಸುವ ನೀತಿ ನೀನು. ವಿಧವಿಧವಾದ ಅರ್ಥಗಳ ಅವಧಿ ನೀನು. ಸಕಲ ಜಂತುಗಳ ಅಂತರಂಗಗತವಾದ ಅಭಿಲಾಷೆ ನೀನು.

೭೯. ಎಲ್ಲ ಪ್ರಾಣಿಗಳಿಗೂ ಮುಕ್ತಿಕೊಡುವವಳು ನೀನು. ಸಕಲಜೀವರಾಶಿಗಳಿಗೂ ಗತಿ ನೀನು. ಕೀರ್ತಿವಂತರ ಕೀರ್ತಿಗೆ ಕಾರಣ ನೀನು. ಸಮಸ್ತ ಚೇತನರ ಶರೀರ ನೀನು.

೮೦. ಪ್ರಿಯನ ಮತ್ತು ಪ್ರಿಯೆಯ ಮನಸ್ಸನ್ನು ಬಂಧಿಸುವ ಅನುರಾಗ ನೀನು. ಹರ್ಷಗೊಂಡವರ ಹೃದಯದಲ್ಲಿನ ಪ್ರೀತಿ ನೀನು. ಅಲಂಕಾರಮಾಡಿಕೊಂಡವರ ಕಾಂತಿ ನೀನು.

೮೧. ಎಲ್ಲ ತಿಳುವಳಿಕೆಯನ್ನೂ ಮರೆಮಾಡುವ ಭ್ರಾಂತಿ ನೀನು. ಯಜ್ಞಯಾಗಗಳನ್ನು ಮಾಡಿದವರಿಗೆ ದೊರಕುವ ಸದ್ಗತಿ ನೀನು. ಸಮುದ್ರಗಳನ್ನು ಎಲ್ಲೆ ಗಟ್ಟನಲ್ಲಿ ತಡೆದು ನಿಲ್ಲಿಸುವ ತೀರ ನೀನು. ಕ್ರೀಡಾಭಿಲಾಷಿಗಳ ಲೀಲೆ ನೀನು.

೮೨. ಪದಾರ್ಥಗಳಿಗೆ ಉತ್ಪತ್ತಿಕಾರಣ ನೀನು. ಜಗತ್ತಿನ ಮರ್ಯಾದೆಯನ್ನು ಉಳಿಸಿ ಅದನ್ನು ಪಾಲಿಸುವವಳು ನೀನು. ಸಕಲ ಲೋಕಗಳನ್ನೂ ಸಂಹಾರಗೊಳಿಸುವ ಕಾಳರಾತ್ರಿ ನೀನು.

ಪ್ರಿಯಕಂಠಗ್ರಹಾನಂದದಾಯಿನೀ ತ್ವಂ ವಿಭಾವರೀ ।
ಇತ್ಯನೇಕವಿಧೈರ್ದೇವಿ ರೂಪೈರ್ಲೋಕೇ ತ್ವಮರ್ಚಿತಾ ॥೬೩॥

ಯೇ ತ್ವಾಂ ಸ್ತೋಷ್ಯಂತಿ ವರದೇ ಪೂಜಯಿಷ್ಯಂತಿ ವಾಪಿ ಯೇ ।
ತೇ ಸರ್ವಕಾಮಾನಾಪ್ಸ್ಯಂತಿ ನಿಯತಾ ನಾತ್ರ ಸಂಶಯಃ ॥೬೪॥

ಇತ್ಯುಕ್ತಾ ತು ನಿಶಾ ದೇವೀ ತಥೇತ್ಯುಕ್ತ್ವಾ ಕೃತಾಂಜಲಿಃ ।
ಜಗಾಮ ತ್ವರಿತಾ ತೂರ್ಣಂ ಗೃಹಂ ಹಿಮಗಿರೇಃ ಪರಂ ॥೬೫॥

ತತ್ರಾಸೀನಾಂ ಮಹಾಹರ್ಮ್ಯೇ ರತ್ನಭಿತ್ತಿಸಮಾಶ್ರಯಾಂ ।
ದದರ್ಶ ಮೇನಾಮಾಪಾಂಡುಚ್ಛವಿವಕ್ತ್ರಸರೋರುಹಾಂ ॥೬೬॥

ಕಿಂಚಿಚ್ಛ್ಯಾಮಮುಖೋದಗ್ರಸ್ತನಭಾರಾವನಾಮಿತಾಂ ।
ಮಹೌಷಧಿಗಣಾಬದ್ಧಮಂತ್ರರಾಜನಿಷೇವಿತಾಂ ॥೬೭॥

---

೬೩. ಪ್ರಿಯನ ಕಂಠಾಲಿಂಗನದಿಂದ ಆಗುವ ಆನಂದವನ್ನು ಕೊಡುವ ರಾತ್ರಿ ನೀನು. ದೇವೀ, ಈ ರೀತಿಯಾದ ಅನೇಕ ರೂಪಗಳಿಂದ ಲೋಕದಲ್ಲಿ ನೀನು ಅರ್ಚನೆಯನ್ನು ಕೈಗೊಳ್ಳುವೆ.

೬೪. ಭಕ್ತರಿಗೆ ವರವನ್ನು ಕರುಣಿಸುವ ಓ ವಿಭಾವರೀ, ಯಾರು ನಿನ್ನನ್ನು ಸ್ತೋತ್ರಮಾಡುವರೋ ಅಥವಾ ಪೂಜಿಸುವರೋ, ಅವರ ಮನೋರಥಗಳೆಲ್ಲವೂ ಪೂರ್ಣವಾಗುವುವು. ಅವರು ಜಿತೇಂದ್ರಿಯರಾಗುವರು.

೬೫. ಬ್ರಹ್ಮನು ಹೀಗೆ ಹೇಳಲು ನಿಶಾದೇವಿ ಕೈಮುಗಿದು "ಹಾಗೆಯೇ ಆಗಲಿ" ಎಂದು ಒಪ್ಪಿಕೊಂಡಳು. ತಡಮಾಡದೆ ಪರ್ವತರಾಜನ ಮನೆಗೆ ಹೊರಟಳು.

೬೬. ನಿಶೆಯು ಆ ದಿವ್ಯವಾದ ಅರಮನೆಯಲ್ಲಿ ಹಿಮವಂತನ ಪತ್ನಿಯಾದ ಮೇನೆಯನ್ನು ಕಂಡಳು. ಅವಳು ರತ್ನಖಚಿತವಾದ ಗೋಡೆಯನ್ನು ಒರಗಿಕೊಂಡು ಕುಳಿತಿದ್ದಳು. ತಾವರೆಯಂತಿದ್ದ ಅವಳ ಮುಖವು ಬೆಳ್ಳಗಾಗಿತ್ತು.

೬೭. ಅವಳ ಸ್ತನಾಗ್ರಗಳು ನಸುಗಪ್ಪೇರಿದ್ದುವು. ಅವುಗಳ ಭಾರದಿಂದ ಅವಳು ಸ್ವಲ್ಪ ಬಾಗಿದ್ದಳು. ಶ್ರೇಷ್ಠವಾದ ಮೂಲಿಕೆಗಳನ್ನು ರಕ್ಷೆಗೋಸ್ಕರ ಕಟ್ಟಿಕೊಂಡಿದ್ದಳು. ಮಂತ್ರಾಭಿಮಾನಿದೇವತೆಗಳು ಅವಳನ್ನು ಓಲೈಸುತ್ತಿದ್ದರು. ಅವಳು ಜೀವರಕ್ಷೆಗೆಂದು ಸುವರ್ಣಮಯವಾದ ಮಹಾಸರ್ಪವನ್ನು ಧರಿಸಿದ್ದಳು.

ಉದ್ವಹತ್ಕನಕೋನ್ನದ್ಧಜೀವರಕ್ಷಾಮಹೋರಗಾಂ ।
ಮಣಿದೀಪಗಣಜ್ಯೋತಿರ್ಮಹಾಲೋಕಪ್ರಕಾಶಿತೇ ॥೮೮॥

ಪ್ರಕೀರ್ಣಬಹುಸಿದ್ಧಾರ್ಥೇ ಮನೋಜಪರಿವಾರಕೇ ।
ಶುಚಿನ್ಯಂಶುಕಸಂಛನ್ನಭೂಶಯ್ಯಾಸ್ತರಣೋಜ್ವಲೇ ॥೮೯॥

ಧೂಪಾಮೋದಮನೋರಮ್ಯೇ ಸರ್ಜಗಂಧೋಪಯೋಗಿಕೇ ।
ತತಃ ಕ್ರಮೇಣ ದಿವಸೇ ಗತೇ ದೂರಂ ವಿಭಾವರೀ ॥೯೦॥

ವ್ಯಜೃಂಭತ ಸುಖೋದರ್ಕೇ ತತೋ ಮೇನಾಮಹಾಗೃಹೇ ।
ಪ್ರಸುಪ್ತಪ್ರಾಯಪುರುಷೇ ನಿದ್ರಾಭೂತೋಪಚಾರಿಕೇ ॥೯೧॥

ಸ್ಫುಟಾಲೋಕೇ ಶಶಭೃತಿ ಭ್ರಾಂತಿರಾತ್ರಿವಿಹಂಗಮೇ ।
ರಜನೀಚರಭೂತಾನಾಂ ಸಂಘೈರಾವೃತಚತ್ವರೇ ॥೯೨॥

ಗಾಢಕಂಠಗ್ರಹಾಲಗ್ನಸುಭಗೇಷ್ಟಜನೇ ತತಃ ।
ಕಿಂಚಿದಾಕುಲತಾಂ ಪ್ರಾಪ್ತೇ ಮೇನಾನೇತ್ರಾಂಬುಜದ್ವಯೇ ॥೯೩॥

---

೮೮-೯೧. ಹಗಲು ಕಳೆದ ಬಹಳ ಹೊತ್ತಿನ ಮೇಲೆ ವಿಭಾವರಿಯು ಮೇನೆಯ ಮನೆಯನ್ನು ಹೊಕ್ಕಳು. ಅಲ್ಲಿ ರತ್ನದೀಪಗಳು ಉಜ್ವಲವಾದ ಕಾಂತಿಯನ್ನು ಬೀರುತ್ತಿದ್ದುವು. ರಕ್ಷೆಗಾಗಿ ಬಿಳಿಯ ಸಾಸುವೆಯನ್ನು ಚೆಲ್ಲಿದ್ದರು. ಹಲವರು ಸುಂದರಿಯರು ಸೇವೆಗಾಗಿ ಕಾದಿದ್ದರು. ಶುಚಿಯಾದ ಹಾಸಿಗೆಯನ್ನು ಹಾಕಿ ಅದರ ಮೇಲೆ ಅಚ್ಚಬಿಳಿಯ ಬಟ್ಟೆಯನ್ನು ಹಾಸಿದ್ದರು. ಧೂಪ, ಸಜ್ಜರಸ ಇವುಗಳ ಪರಿಮಳವು ಎಲ್ಲಕಡೆಯೂ ವ್ಯಾಪಿಸುತ್ತಿತ್ತು. ಗಂಡಸರೆಲ್ಲ ನಿದ್ದೆ ಹೋಗಿದ್ದರು. ಪರಿಚಾರಿಕೆಯರೂ ಕೂಡ ತೂಗಡಿಸುತ್ತಿದ್ದರು.

೯೨. ಚಂದ್ರನು ಚೆನ್ನಾಗಿ ಪ್ರಕಾಶಿಸುತ್ತಿದ್ದನು. ರಾತ್ರಿಯ ಹಕ್ಕಿಗಳು ಹಾರಾಡುತ್ತಿದ್ದುವು. ನಿಶಾಚರಜಂತುಗಳು ಚೌಕಗಳಲ್ಲಿ ಗುಂಪುಗುಂಪಾಗಿ ನೆರೆದಿದ್ದುವು.

೯೩. ಪ್ರೇಮವಶರಾದ ರಮಣರಮಣಿಯರು ಗಾಢಾಲಿಂಗನದಲ್ಲಿದ್ದರು. ಮೇನಾದೇವಿಯ ತಾವರೆಯಂತಹ ಕಣ್ಣುಗಳು ಸ್ವಲ್ಪಮಟ್ಟಿಗೆ ವ್ಯಾಕುಲವಾಗಿದ್ದುವು.

ಆವಿವೇಶ ಮುಖೇ ರಾತ್ರಿಃ ಸುಚಿರಸ್ಫುಟಸಂಗಮಾ ।
ಜನ್ಮದಾಯಾ ಜಗನ್ಮಾತುಃ ಕ್ರಮೇಣ ಜಠರಾಂತರೇ ॥೯೪॥

ಆವಿವೇಶಾಂತರಂ ಜನ್ಮ ಮನ್ಯಮಾನಾ ಕ್ಷಪಾ ತು ವೈ ।
ಅರಂಜಯಚ್ಛವಿಂ ದೇವ್ಯಾ ಗುಹಾರಣ್ಯೇ ವಿಭಾವರೀ ॥೯೫॥

ತತೋ ಜಗತ್ಪರಿತ್ರಾಣಹೇತುರ್ಹಿಮಗಿರಿಪ್ರಿಯಾ ।
ಬ್ರಾಹ್ಮೇ ಮುಹೂರ್ತೇ ಸುಭಗೇ ವ್ಯಸೂಯತ ಗುಹಾರಣಿಂ ॥೯೬॥

ತಸ್ಯಾಂ ತು ಜಾಯಮಾನಾಯಾಂ ಜಂತವಃ ಸ್ಥಾಣುಜಂಗಮಾಃ ।
ಅಭವನ್ ಸುಖಿನಃ ಸರ್ವೇ ಸರ್ವಲೋಕನಿವಾಸಿನಃ ॥೯೭॥

ನಾರಕಾಣಾಮಪಿ ತದಾ ಸುಖಂ ಸ್ವರ್ಗಸಮಂ ಮಹತ್ ।
ಅಭವತ್ಕ್ರೂರಸತ್ವಾನಾಂ ಚೇತಃ ಶಾಂತಂ ಚ ದೇಹಿನಾಂ ॥೯೮॥

---

೯೪-೯೫. ಬ್ರಹ್ಮದೇವನ ಅಪ್ಪಣೆಯಂತೆ ದೃಢ ಮನಸ್ಸಿನಿಂದ ಬಂದಿದ್ದ ರಾತ್ರಿಯು ಲೋಕಮಾತೆಯಾದ ಪಾರ್ವತಿಗೆ ಜನ್ಮವನ್ನು ಕೊಡಲಿರುವ ಮೇನಾ ದೇವಿಯ ಮುಖವನ್ನು ಹೊಕ್ಕು ಕ್ರಮೇಣ ಗರ್ಭವನ್ನು ಸೇರಿದಳು. ಇನ್ನೇನು ಆ ಪಾರ್ವತಿಯು ಅವತಾರವಾದೀತು ಎಂದು ತಿಳಿದ ಕೂಡಲೇ ಅವಳು ಆಕೆಯ ಮೈಗೆ ತನ್ನ ಬಣ್ಣವನ್ನು ತೊಟ್ಟಳು.

೯೬. ಬಳಿಕ ಜಗತ್ತಿನ ರಕ್ಷಣೆಗೆ ನಿಮಿತ್ತಭೂತಳಾದ ಮೇನೆಯು ಮಂಗಳ ಮಯವಾದ ಬ್ರಾಹ್ಮಮುಹೂರ್ತದಲ್ಲಿ ಪಾರ್ವತೀದೇವಿಯನ್ನು ಹೆತ್ತಳು. ಮುಂದೆ ತಾರಕಧ್ವಂಸಿಯಾದ ಕುಮಾರಸ್ವಾಮಿಗೆ ಜನ್ಮದಾತೆಯು ಈಕೆಯೇ ಅಲ್ಲವೆ!

೯೭. ಆಕೆಯು ಜನಿಸಿದ ಕೂಡಲೇ ಎಲ್ಲ ಲೋಕಗಳಲ್ಲಿಯೂ ವಾಸಿಸುವ ಚರಾಚರ ಜಂತುಗಳಿಗೆ ಸುಖವುಂಟಾಯಿತು.

೯೮. ನರಕದಲ್ಲಿ ಯಾತನೆಯನ್ನು ಅನುಭವಿಸುತ್ತಿದ್ದ ಜೀವರಾಶಿಗಳಿಗೂ ಕೂಡ ಸ್ವರ್ಗಸದೃಶವಾದ ಮಹತ್ಸೌಖ್ಯವು ಲಭಿಸಿತು. ಹಿಂಸಾಸ್ವಭಾವದ ಪ್ರಾಣಿಗಳ ಮನಸ್ಸಿನಲ್ಲಿ ದಯೆ ತಲೆದೋರಿತು.

ಜ್ಯೋತಿಷಾಮಪಿ ತೇಜಸ್ತ್ವಮಭವತ್ಸುರತೋನ್ನತಾ ।
ವನಾಶ್ರಿತಾಶ್ಚೌಷಧಯಃ ಸ್ವಾದುವಂತಿ ಫಲಾನಿ ಚ ॥೯೯॥

ಗಂಧವಂತಿ ಚ ಮಾಲ್ಯಾನಿ ವಿಮಲಂ ಚ ನಭೋಽಭವತ್ ।
ಮಾರುತಶ್ಚ ಸುಖಸ್ಪರ್ಶೋ ದಿಶಶ್ಚ ಸುಮನೋಹರಾಃ ॥೧೦೦॥

ತೇನ ಚೋದ್ಭೂತಫಲಿತಪರಿಪಾಕಗುಣೋಜ್ಜ್ವಲಾಃ ।
ಅಭವತ್ಪೃಥಿವೀ ದೇವೀ ಶಾಲಿಮಾಲಾಕುಲಾಪಿ ಚ ॥೧೦೧॥

ತಪಾಂಸಿ ದೀರ್ಘಚೀರ್ಣಾನಿ ಮುನೀನಾಂ ಭಾವಿತಾತ್ಮನಾಂ ।
ತಸ್ಮಿನ್ ಗತಾನಿ ಸಾಫಲ್ಯಂ ಕಾಲೇ ನಿರ್ಮಲಚೇತಸಾಂ ॥೧೦೨॥

ವಿಸ್ಮೃತಾನಿ ಚ ಶಾಸ್ತ್ರಾಣಿ ಪ್ರಾದುರ್ಭಾವಂ ಪ್ರಪೇದಿರೇ ।
ಪ್ರಭಾವಸ್ತೀರ್ಥಮುಖ್ಯಾನಾಂ ತದಾ ಪುಣ್ಯತಮೋಽಭವತ್ ॥೧೦೩॥

---

೯೯. ಗ್ರಹಗಳೂ ನಕ್ಷತ್ರಗಳೂ ಅತಿಶಯವಾಗಿ ಪ್ರಕಾಶಿಸಿದುವು. ದೇವತೆಗಳ ಏಳಿಗೆ ಹೆಚ್ಚಿತು. ಕಾಡಿನಲ್ಲಿರುವ ಗಿಡಗಳೂ ಮರಗಳೂ ಸೊಂಪೇರಿದುವು. ಹಣ್ಣುಗಳಲ್ಲಿ ರುಚಿ ಹೆಚ್ಚಿತು.

೧೦೦. ಹೂಮಾಲೆಗಳಲ್ಲಿ ಪರಿಮಳವು ಹೆಚ್ಚಿತು. ಆಕಾಶವು ನಿರ್ಮಲವಾಯಿತು. ವಾಯು ಹಿತಕರವಾಗಿ ಬೀಸಿತು. ದಿಕ್ಕುಗಳು ಬಹು ರಮಣೀಯವಾಗಿ ಕಾಣಿಸಿದುವು.

೧೦೧. ಸಸ್ಯಗಳು ಸೊಂಪಾಗಿ ಬೆಳೆದು ಹಣ್ಣುಕಾಯಿಗಳಿಂದ ಕಂಗೊಳಿಸುತ್ತಿದ್ದುವು. ಹುಲುಸಾದ ಬತ್ತದ ಪೈರಿನಿಂದ ಭೂಮಿಯು ಬಹು ರಮಣೀಯವಾಗಿ ಶೋಭಿಸುತ್ತಿತ್ತು.

೧೦೨. ಮಹಾಮಹಿಮರೂ ನಿರ್ಮಲಮನಸ್ಕರೂ ಆದ ಮುನಿಗಳು ಎಷ್ಟೋ ಕಾಲದಿಂದ ಮಾಡಿದ ತಪಸ್ಸುಗಳು ಆ ಕಾಲದಲ್ಲಿ ಫಲಪ್ರದವಾದುವು.

೧೦೩. ಮರೆತುಹೋಗಿದ್ದ ಶಾಸ್ತ್ರಾರ್ಥಗಳು ಕೂಡ ಆಗ ನೆನಪಿಗೆ ಬಂದುವು. ಸುಪ್ರಸಿದ್ಧವಾದ ಪುಣ್ಯತೀರ್ಥಗಳ ಮಹಿಮೆಯು ಮತ್ತಷ್ಟು ಅತಿಶಯವಾಯಿತು.

ಅಂತರಿಕ್ಷೇ ಸುರಾಶ್ಚಾಸನ್ ವಿಮಾನೇಷು ಸಹಸ್ರಶಃ |
ಸಮಹೇಂದ್ರಹರಿಬ್ರಹ್ಮವಾಯುವಹ್ನಿಪುರೋಗಮಾಃ ||೧೦೪||

ಪುಷ್ಪವೃಷ್ಟಿಂ ಪ್ರಮುಮುಚುಸ್ತಸ್ಮಿಂಸ್ತು ಹಿಮಭೂಧರೇ |
ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ||೧೦೫||

ಮೇರುಪ್ರಭೃತಯಶ್ಚಾಪಿ ಮೂರ್ತಿಮಂತೋ ಮಹಾಬಲಾಃ |
ತಸ್ಮಿನ್ ಮಹೋತ್ಸವೇ ಪ್ರಾಪ್ತೇ ದಿವ್ಯಪ್ರಾಭೃತಪಾಣಯಃ ||೧೦೬||

ಸರಿತಃ ಸಾಗರಾಶ್ಚೈವ ಸಮಾಜಗ್ಮುಶ್ಚ ಸರ್ವಶಃ |
ಹಿಮಶೈಲೋಽಭವಲ್ಲೋಕೇ ತದಾ ಸರ್ವೈಶ್ಚರಾಚರೈಃ ||೧೦೭||

ಸೇವ್ಯಶ್ಚಾಪ್ಯಭಿಗಮ್ಯಶ್ಚ ಸ ಶ್ರೇಯಾಂಶ್ಚಾಚಲೋತ್ತಮಃ |
ಅನುಭೂಯೋತ್ಸವಂ ದೇವಾ ಜಗ್ಮುಃ ಸ್ವಾನಾಲಯಾನ್ಮುದಾ ||೧೦೮||

---

೧೦೪. ಇಂದ್ರ, ಹರಿ, ಬ್ರಹ್ಮ, ವಾಯು, ಅಗ್ನಿ ಮುಂತಾದ ದೇವತೆಗಳು ಸಾವಿರಾರು ಮಂದಿ ವಿಮಾನಗಳಲ್ಲಿ ಬಂದು ಅಂತರಿಕ್ಷದಲ್ಲಿ ನಿಂತರು.

೧೦೫. ಆ ಹಿಮವತ್ಪರ್ವತದ ಮೇಲೆ ಅವರು ಹೂವಿನ ಮಳೆಯನ್ನು ಕರೆದರು. ಗಂಧರ್ವರು, ಕಿನ್ನರರು ಮೊದಲಾದವರು ಹಾಡಿದರು. ಅಪ್ಸರ ಸ್ತ್ರೀಯರು ನರ್ತಿಸಿದರು.

೧೦೬. ಮೇರು ಮೊದಲಾದ ಮಹಾ ಮಹಾ ಪರ್ವತಗಳು ಪ್ರಶಸ್ತವಾದ ರೂಪವನ್ನು ತಾಳಿ, ಬಗೆಬಗೆಯ ದಿವ್ಯವಸ್ತುಗಳ ಕೈಗಾಣಿಕೆಗಳನ್ನು ತೆಗೆದುಕೊಂಡು ಆ ಮಹೋತ್ಸವಕ್ಕೆ ಬಂದುವು.

೧೦೭-೧೦೮. ನದಿಗಳ ಮತ್ತು ಸಾಗರಗಳ ಅಧಿದೇವತೆಗಳು ಎಲ್ಲ ಕಡೆಗಳಿಂದಲೂ ಬಂದರು. ಚರಾಚರವಸ್ತುಗಳೆಲ್ಲವೂ ಹಿಮವಂತನ ಬಳಿಗೆ ಬಂದು ಅವನನ್ನು ಓಲೈಸಿದುವು. ಅವನು ಪರ್ವತಗಳಲ್ಲೆಲ್ಲ ಮೇಲೆನಿಸಿದನು; ಶ್ರೇಯೋವಂತನೂ ಆದನು. ಪಾರ್ವತಿಯ ಜನ್ಮೋತ್ಸವದ ಆನಂದವನ್ನನುಭವಿಸಿ ದೇವತೆಗಳೆಲ್ಲ ತಮ್ಮ ತಮ್ಮ ನೆಲೆಗಳಿಗೆ ತೆರಳಿದರು.

**ದೇವಗಂಧರ್ವನಾಗೇಂದ್ರೈಶ್ಶೈಲಲೀಲಾಪ್ಸರೋಗಣೈಃ ।**
**ಹಿಮಶ್ಶೈಲಸುತಾ ದೇವೀ ಸ್ವಯಂಪೂರ್ವಿಕಯಾ ತತಃ ॥೧೦೯॥**

**ಕ್ರಮೇಣ ವೃದ್ಧಿಮಾನೀತಾ ಲಕ್ಷ್ಮೀವಾನಲಸೈರ್ಬುಧೈಃ ।**
**ಕ್ರಮೇಣ ರೂಪಸೌಭಾಗ್ಯಪ್ರಬೋಧೈರ್ಭುವನತ್ರಯಂ ॥೧೧೦॥**

**ಅಜಯದ್ಭೂಷಯಚ್ಚಾಪಿ ನಿಃಸಾಧಾರ್ಯೈರ್ನಗಾತ್ಮಜಾ ।**
**ಏತಸ್ಮಿನ್ನಂತರೇ ಶಕ್ರೋ ನಾರದಂ ದೇವಸಮ್ಮತಂ ॥೧೧೧॥**

**ದೇವರ್ಷಿಮಥ ಸಸ್ಮಾರ ಕಾರ್ಯಸಾಧನಸತ್ವರಂ ।**
**ಸ್ಮೃತಿಂ ಶಕ್ರಸ್ಯ ವಿಜ್ಞಾಯ ಜಾತಾಂ ತು ಭಗವಾಂಸ್ತದಾ ॥೧೧೨॥**

**ಆಜಗಾಮ ಮುದಾ ಯುಕ್ತೋ ಮಹೇಂದ್ರಸ್ಯ ನಿವೇಶನಂ ।**
**ತಂ ಸ ದೃಷ್ಟ್ವಾ ಸಹಸ್ರಾಕ್ಷಃ ಸಮುತ್ಥಾಯ ಮಹಾಸನಾತ್ ॥೧೧೩॥**

---

೧೦೯. ಉದ್ಯೋಗಶೀಲರಾದ ವಿದ್ವಾಂಸರು ಸಂಪತ್ತನ್ನು ಅಭಿವೃದ್ಧಿಗೊಳಿಸುವಂತೆ ದೇವತೆಗಳು, ಗಂಧರ್ವರು, ನಾಗೇಂದ್ರರು, ಗಿರಿದೇವತೆಗಳು, ಅಪ್ಸರಸ್ತ್ರೀಯರು ಇವರೆಲ್ಲರೂ ತಾವು ತಾವೇ ಮುಂದೆ ಬಂದು, ಹಿಮವಂತನ ಮಗಳಾದ ಪಾರ್ವತಿಯನ್ನು ಎತ್ತಿ, ಸಾಕಿ, ಸಲಹಿ ಕ್ರಮಕ್ರಮವಾಗಿ ಬೆಳಸಿದರು.

೧೧೦. ಕಾಲಕ್ರಮದಿಂದ ಪಾರ್ವತಿಯು ತನ್ನ ಅಸಾಧಾರಣವಾದ ರೂಪ, ಸೌಭಾಗ್ಯ, ವಿವೇಕ ಇವುಗಳಿಂದ ಮೂರುಲೋಕವನ್ನೂ ಮೀರಿಸಿದಳು. ಅಷ್ಟೇ ಅಲ್ಲ; ಅದಕ್ಕೆ ಅಲಂಕಾರಪ್ರಾಯಳೂ ಆದಳು.

೧೧೧. ಇಷ್ಟರಲ್ಲಿಯೇ ಇಂದ್ರನು ದೇವತೆಗಳಿಗೆ ಆಪ್ತನೂ, ಕಾರ್ಯಸಾಧನದಲ್ಲಿ ಕುಶಲನೂ ಆದ ನಾರದಮಹರ್ಷಿಯನ್ನು ಸ್ಮರಿಸಿಕೊಂಡನು.

೧೧೨. ಪೂಜ್ಯನಾದ ಆ ದೇವರ್ಷಿಯು ಇಂದ್ರನು ತನ್ನನ್ನು ನೆನಸಿಕೊಂಡುದನ್ನು ತಿಳಿದು ಸಂತೋಷದಿಂದ ಅವನ ಮನೆಗೆ ಬಂದನು.

೧೧೩. ದೇವೇಂದ್ರನು ಆ ಮಹರ್ಷಿಯನ್ನು ಕಂಡು, ಸಿಂಹಾಸನದಿಂದ ಎದ್ದು ಬಂದು ಯಥಾಯೋಗ್ಯವಾಗಿ ಪಾದ್ಯವನ್ನು ಸಮರ್ಪಿಸಿ ಪೂಜಿಸಿದನು.

ಯಥಾರ್ಹೇಣ ತು ಪಾದ್ಯೇನ ಪೂಜಯಾಮಾಸ ವಾಸವಃ |
ಶಕ್ರಪ್ರಣೀತಾಂ ತಾಂ ಪೂಜಾಂ ಪ್ರತಿಗೃಹ್ಯ ಯಥಾವಿಧಿ ||೧೧೪||

ನಾರದಃ ಕುಶಲಂ ದೇವಮಪೃಚ್ಛತ್ಪಾಕಶಾಸನಂ |
ಪೃಷ್ಟೇ ಚ ಕುಶಲೇ ಶಕ್ರಃ ಪ್ರೋವಾಚ ವಚನಂ ಪ್ರಭುಃ ||೧೧೫||

|| ಇಂದ್ರ ಉವಾಚ ||

ಕುಶಲಸ್ಯಾಂಕುರೇ ತಾವತ್ಸಂಭೂತೇ ಭುವನತ್ರಯೇ |
ತತ್ಫಲೋದ್ಭವಸಂಪತ್ತೌ ತ್ವಂ ಭವಾತಂದ್ರಿತೋ ಮುನೇ ||೧೧೬||

ವೇತ್ಸಿ ಚೈತತ್ಸಮಸ್ತಂ ತ್ವಂ ತಥಾಪಿ ಪರಿಚೋದಕಃ |
ನಿರ್ವೃತಿಂ ಪರಮಾಂ ಯಾತಿ ನಿವೇದ್ಯಾರ್ಥಂ ಸುಹೃಜ್ಜನೇ ||೧೧೭||

ತದ್ಯಥಾ ಶೈಲಜಾ ದೇವೀ ಯೋಗಂ ಯಾಯಾತ್ಪಿನಾಕಿನಾ |
ಶೀಘ್ರಂ ತದುದ್ಯಮಃ ಸರ್ವೈರಸ್ಮತ್ಪಕ್ಷ್ಯೈರ್ವಿಧೀಯತಾಂ ||೧೧೮||

---

೧೧೪-೧೧೫. ಇಂದ್ರನು ಶಾಸ್ತ್ರೋಕ್ತವಿಧಾನದಿಂದ ಮಾಡಿದ ಪೂಜೆಯನ್ನು ಕೈಗೊಂಡು ನಾರದನು ಅವನ ಕ್ಷೇಮವನ್ನು ವಿಚಾರಿಸಿದನು. ಅಮರಾಧಿಪತಿಯು ದೇವರ್ಷಿಯ ಕುಶಲ ಪ್ರಶ್ನೆಗಳಿಗೆ ಉತ್ತರವಿತ್ತನು.

೧೧೬. ಇಂದ್ರನು ಹೇಳಿದನು.—ಓ ಮುನಿವರ್ಯಾ, ಕುಶಲವೆಂಬುದು ಇನ್ನೂ ಮೊಳಕೆಯ ಸ್ಥಿತಿಯಲ್ಲಿಯೇ ಇದೆ. ನೀನು ಜಾಗರೂಕನಾಗಿದ್ದುಕೊಂಡು ಅದರ ಫಲಸಮೃದ್ಧಿಯು ಮೂರು ಲೋಕಗಳಿಗೂ ಒದಗುವಂತೆ ಮಾಡಬೇಕು.

೧೧೭. ಇದೆಲ್ಲವನ್ನೂ ನೀನು ಬಲ್ಲೆ ; ಆದರೂ ಮತ್ತೊಮ್ಮೆ ಹೇಳುವಂತೆ ನನ್ನನ್ನು ಪ್ರೇರಿಸುತ್ತೀಯೆ. ಮನಸ್ಸಿನಲ್ಲಿರುವ ವಿಚಾರವನ್ನು ಆಪ್ತಮಿತ್ರರೊಡನೆ ಹೇಳಿಕೊಂಡರೆ ಎಷ್ಟೋ ನೆಮ್ಮದಿಯುಂಟಾಗುತ್ತದೆ.

೧೧೮. ವಿಷಯವೇನಂದರೆ.—ಹಿಮವಂತನ ಪುತ್ರಿಯಾದ ಪಾರ್ವತಿಯು ಪರಮೇಶ್ವರನ ಸಮಾಗಮವನ್ನು ಪಡೆಯುವಂತೆ ಮಾಡಬೇಕಾಗಿದೆ. ನಮ್ಮ ಪಕ್ಷದವರೆಲ್ಲ ಇದಕ್ಕಾಗಿ ಬೇಗನೆ ಪ್ರಯತ್ನಿಸಬೇಕು.

ಅವಗಮ್ಯಾರ್ಥಮಖಿಲಂ ತತ ಆಮಂತ್ರ್ಯ ನಾರದಃ ।
ಶಕ್ರಂ ಜಗಾಮ ಭಗವಾನ್ ಹಿಮಶೈಲನಿವೇಶನಂ ॥೧೧೯॥

ತತ್ರ ದ್ವಾರೇ ಸ ವಿಪ್ರೇಂದ್ರಶ್ಚಿತ್ರವೇತ್ರಲತಾಕುಲೇ ।
ವಂದಿತೋ ಹಿಮಶೈಲೇನ ನಿರ್ಗತೇನ ಪುರೋ ಮುನಿಃ ॥೧೨೦॥

ಸಹ ಪ್ರವಿಶ್ಯ ಭವನಂ ಭುವೋ ಭೂಷಣತಾಂ ಗತಂ ।
ನಿವೇದಿತೇ ಸ್ವಯಂ ಹೈಮೇ ಹಿಮಶೈಲೇನ ವಿಸ್ತೃತೇ ॥೧೨೧॥

ಮಹಾಸನೇ ಮುನಿವರೋ ನಿಷಸಾದಾತುಲದ್ಯುತಿಃ ।
ಯಥಾರ್ಹಂ ಚಾರ್ಘ್ಯಪಾದ್ಯಂ ಚ ಶೈಲಸ್ತಸ್ಮೈ ನ್ಯವೇದಯತ್ ॥೧೨೨॥

ಮುನಿಸ್ತು ಪ್ರತಿಜಗ್ರಾಹ ತಮರ್ಘಂ ವಿಧಿವತ್ತದಾ ।
ಗೃಹೀತಾರ್ಘಂ ಮುನಿವರಮಪೃಚ್ಛಚ್ಛ್ಲಕ್ಷ್ಣಯಾ ಗಿರಾ ॥೧೨೩॥

---

೧೧೯. ಬಳಿಕ ನಾರದನು ಸಂಗತಿಯೆಲ್ಲವನ್ನೂ ಅರಿತು, ಇಂದ್ರನನ್ನು ಬೀಳ್ಕೊಂಡು ಹಿಮವಂತನ ಮನೆಗೆ ಹೋದನು.

೧೨೦. ಬೆತ್ತದ ಬಳ್ಳಿಗಳು ಚಿತ್ರವಿಚಿತ್ರವಾಗಿ ಹಬ್ಬಿದ್ದ ಹೆಬ್ಬಾಗಿಲ ಬಳಿಗೆ ಗಿರಿರಾಜನು ಬಂದು ಬ್ರಾಹ್ಮಣೋತ್ತಮನಾದ ನಾರದನಿಗೆ ನಮಸ್ಕಾರ ಮಾಡಿದನು.

೧೨೧-೧೨೨. ಅಸಮಾನತೇಜೋನಿಧಿಯಾದ ದೇವರ್ಷಿಯು ಲೋಕಕ್ಕೆಲ್ಲ ಅಲಂಕಾರದಂತಿರುವ ಹಿಮವಂತನ ಅರಮನೆಯೊಳಕ್ಕೆ ಹೋಗಿ, ಅವನು ಒಪ್ಪಿಸಿದ ವಿಶಾಲವಾದ ಸುವರ್ಣಪೀಠದಲ್ಲಿ ಕುಳಿತನು. ಪರ್ವತರಾಜನು ಯಥಾಯೋಗ್ಯವಾಗಿ ಅರ್ಘ್ಯಪಾದ್ಯಗಳನ್ನು ಸಮರ್ಪಿಸಿದನು.

೧೨೩. ನಾರದಮುನಿಯು ಶಾಸ್ತ್ರೋಕ್ತವಾಗಿ ಆ ಸತ್ಕಾರವನ್ನು ಸ್ವೀಕರಿಸಿದನು. ಬಳಿಕ ಹಿಮವಂತನು ಮೃದುವಚನದಿಂದ ಆ ಮಹರ್ಷಿಯನ್ನು ಪ್ರಶ್ನಿಸಿದನು.

ಕುಶಲಂ ತಪಸಃ ಶೈಲಃ ಶನೈಃ ಫುಲ್ಲಾನನಾಂಬುಜಃ ।
ಮುನಿರಪ್ಯದ್ರಿರಾಜಾನಮಪೃಚ್ಛತ್ಕುಶಲಂ ತದಾ ॥೧೨೪॥

॥ ನಾರದ ಉವಾಚ ॥

ಅಹೋಽವತಾರಿತಾಃ ಸರ್ವೇ ಸನ್ನಿವೇಶೇ ಮಹಾಗಿರೇ ।
ಪೃಥುತ್ವಂ ಮನಸಾ ತುಲ್ಯಂ ಕಂದರಾಣಾಂ ತಥಾಚಲ ॥೧೨೫॥

ಗುರುತ್ವಂ ತೇ ಗುಣೌಘಾನಾಂ ಸ್ಥಾವರಾದತಿರಿಚ್ಯತೇ ।
ಪ್ರಸನ್ನತಾ ಚ ತೋಯಸ್ಯ ಮನಸೋಽಪ್ಯಧಿಕಾ ಚ ತೇ ॥೧೨೬॥

ನ ಲಕ್ಷಯಾಮಃ ಶೈಲೇಂದ್ರ ಶಿಷ್ಯತೇ ಕಂದರೋದರಾತ್ ।
ನ ಚ ಲಕ್ಷ್ಮೀಸ್ತಥಾ ಸ್ವರ್ಗೇ ಕುತ್ರಾಧಿಕತಯಾ ಸ್ಥಿತಾ ॥೧೨೭॥

---

೧೨೪. "ನಿಮ್ಮ ತಪಸ್ಸು ಅಡ್ಡಿಯಿಲ್ಲದೆ ನಡೆಯುತ್ತಿರುವುದೇ?" ಎಂದು ಗಿರಿರಾಜನು ಅರಳಿದ ಮುಖದಿಂದ ನಾರದನನ್ನು ಕೇಳಿದನು. ಅದಕ್ಕೆ ಪ್ರತಿಯಾಗಿ ಮಹರ್ಷಿಯೂ ಸಹ ಆತನ ಯೋಗಕ್ಷೇಮವನ್ನು ವಿಚಾರಿಸಿದನು.

೧೨೫. ನಾರದನು ಹೇಳಿದನು.—ಓ ಪರ್ವತರಾಜಾ, ನಿನ್ನ ಸನ್ನಿವೇಶವು ಎಷ್ಟು ಪ್ರಶಸ್ತವಾದುದು! ದೇವತೆಗಳು, ಋಷಿಗಳು ಇವರೆಲ್ಲರಿಗೂ ಇದು ನೆಲೆವೀಡಾಗಿದೆ. ಎಲೈ ಹಿಮವಂತನೇ, ನಿನ್ನ ಗುಹೆಗಳು ನಿನ್ನ ಮನಸ್ಸಿನಷ್ಟೇ ವಿಶಾಲವಾಗಿವೆ.

೧೨೬. ನಿನ್ನ ಗುಣರಾಶಿಗಳು ನಿನ್ನ ಸ್ಥಾವರರೂಪವಾದ ಪರ್ವತಕ್ಕಿಂತಲೂ ಗುರುತರವಾಗಿವೆ. ನಿನ್ನ ಜಲಾಶಯಗಳಲ್ಲಿರುವ ನೀರು ನಿನ್ನ ಮನಸ್ಸಿಗಿಂತಲೂ ಹೆಚ್ಚು ತಿಳಿಯಾಗಿದೆ.

೧೨೭. ಓ ಗಿರೀಂದ್ರಾ, ನಿನ್ನ ಗುಹಾಪ್ರದೇಶಕ್ಕಿಂತ ಮಿಗಿಲಾದ ಮತ್ತೊಂದು ಸ್ಥಳವನ್ನು ನಾವು ಕಾಣಲಾರೆವು. ಸ್ವರ್ಗದಲ್ಲಿಯೂ ಸಹ ಇಷ್ಟೊಂದು ಸಂಪತ್ಸಮೃದ್ಧಿಯು ಇರಲಾರದು.

**ನಾನಾತಪೋಭಿರ್ಮುನಿಭಿರ್ಜ್ವಲನಾರ್ಕಸಮಪ್ರಭೈಃ ।**
**ಪಾವನೈಃ ಪಾವಿತೋ ನಿತ್ಯಂ ತ್ವತ್ಕಂದರಸಮಾಶ್ರಿತೈಃ ॥೧೨೮॥**

**ಅವಮತ್ಯ ವಿಮಾನಾನಿ ಸ್ವರ್ಗವಾಸವಿರಾಗಿಣಃ ।**
**ಪಿತುರ್ಗೃಹ ಇವಾಸನ್ನಾ ದೇವಗಂಧರ್ವಕಿನ್ನರಾಃ ॥೧೨೯॥**

**ಅಹೋ ಧನ್ಯೋಽಸಿ ಶೈಲೇಂದ್ರ ಯಸ್ಯ ತೇ ಕಂದರಂ ಹರಃ ।**
**ಅಧ್ಯಾಸ್ತೇ ಲೋಕನಾಥೋಽಪಿ ಸಮಾಧಾನಪರಾಯಣಃ ॥೧೩೦॥**

**ಇತ್ಯುಕ್ತವತಿ ದೇವರ್ಷೌ ನಾರದೇ ಸಾದರಂ ಗಿರಾ ।**
**ಹಿಮಶೈಲಸ್ಯ ಮಹಿಷೀ ಮೇನಾ ಮುನಿದಿದೃಕ್ಷಯಾ ॥೧೩೧॥**

**ಅನುಯಾತಾ ದುಹಿತ್ರಾ ತು ಸ್ವಲ್ಪಾಲಿಪರಿಚಾರಿಕಾ ।**
**ಲಜ್ಜಾಪ್ರಣಯನಮ್ರಾಂಗೀ ಪ್ರವಿವೇಶ ನಿವೇಶನಂ ॥೧೩೨॥**

---

೧೨೮. ಅಗ್ನಿಸೂರ್ಯರಂತೆ ತೇಜಸ್ವಿಗಳಾದ ಎಷ್ಟೋ ಜನ ಮಹಾಮುನಿಗಳು ನಿನ್ನ ಗುಹೆಗಳಲ್ಲಿ ನಾನಾವಿಧವಾಗಿ ತಪಸ್ಸು ಮಾಡುತ್ತಿರುವರು. ಅವರ ಸಾನ್ನಿಧ್ಯದಿಂದ ನೀನು ಸದಾ ಪವಿತ್ರನಾಗಿರುವೆ.

೧೨೯. ದೇವತೆಗಳು, ಗಂಧರ್ವರು ಮತ್ತು ಕಿನ್ನರರು ತಮ್ಮತಮ್ಮ ವಿಮಾನಗಳನ್ನು ಕಡೆಗಣಿಸಿ, ಸ್ವರ್ಗವಾಸದಲ್ಲಿ ಅಭಿಲಾಷೆಯನ್ನು ತೊರೆದು ತಂದೆಯ ಮನೆಯಲ್ಲಿರುವಂತೆ ಇಲ್ಲಿ ಆನಂದದಿಂದ ವಾಸಿಸುತ್ತಿರುವರು.

೧೩೦. ಓ ಶೈಲೇಂದ್ರಾ, ನೀನೆಷ್ಟು ಧನ್ಯ! ತಾನೇ ಸರ್ವಲೋಕಗಳ ಅಧಿಪತಿಯಾಗಿದ್ದರೂ ಪರಮೇಶ್ವರನು ನಿನ್ನ ದರಿಗಳಲ್ಲಿ ವಾಸಿಸುತ್ತ ಸಮಾಧಿನಿರತನಾಗಿ ತಪಸ್ಸನ್ನು ಮಾಡುತ್ತಿರುವನು.

೧೩೧-೧೩೨. ದೇವರ್ಷಿಯಾದ ನಾರದನು ಆದರವಚನದಿಂದ ಹೀಗೆ ಹೇಳುತ್ತಿರಲು, ಹಿಮವಂತನ ಪಟ್ಟದ ರಾಣಿಯಾದ ಮೇನೆಯು ಆ ಮಹರ್ಷಿಯನ್ನು ನೋಡಬೇಕೆಂದು ಮಗಳೊಡನೆಯೂ ಮಿತಪರಿವಾರದೊಡನೆಯೂ ಕೂಡಿ, ಲಜ್ಜೆಯಿಂದ ನಮ್ರಳಾಗಿ ಆ ಮನೆಯನ್ನು ಸೇರಿದಳು.

ತತ್ರ ಸ್ಥಿತೋ ಮುನಿವರಃ ಶೈಲೇನ ಸಹಿತೋ ವಶೀ ।
ದೃಷ್ಟ್ವಾ ತು ತೇಜಸೋ ರಾಶಿಂ ಮುನಿಂ ಶೈಲಪ್ರಿಯಾ ತದಾ ||೧೩೩||

ವವಂದೇ ಗೂಢವದನಾ ಪಾಣಿಪದ್ಮಕೃತಾಂಜಲಿಃ ।
ತಾಂ ವಿಲೋಕ್ಯ ಮಹಾಭಾಗೋ ಮಹರ್ಷಿರಮಿತದ್ಯುತಿಃ । ||೧೩೪||

ಆಶೀರ್ಭಿರಮೃತೋದ್ಗಾರರೂಪಾಭಿಸ್ತಾಂ ವ್ಯವರ್ಧಯತ್ ।
ತತೋ ವಿಸ್ಮಿತಚಿತ್ತಾ ತು ಹಿಮವದ್ಗಿರಿಪುತ್ರಿಕಾ ||೧೩೫||

ಉದ್ವೈಕ್ಷನ್ನಾರದಂ ದೇವೀ ಮುನಿಮುದ್ಭುತರೂಪಿಣಂ ।
ಏಹಿ ವತ್ಸೇತಿ ಚಾಪ್ಯುಕ್ತಾ ಋಷಿಣಾ ಸ್ನಿಗ್ಧಯಾ ಗಿರಾ ||೧೩೬||

ಕಂಠೇ ಗೃಹೀತ್ವಾ ಪಿತರಮುತ್ಸಂಗೇ ಸಮುಪಾವಿಶತ್ ।
ಉವಾಚ ಮಾತಾ ತಾಂ ದೇವೀಮಭಿವಂದಯ ಪುತ್ರಿಕೇ ||೧೩೭||

---

೧೩೩. ಜಿತೇಂದ್ರಿಯನಾದ ನಾರದಮಹಾಮುನಿಯು ಅಲ್ಲಿ ಪರ್ವತರಾಜನೊಡನೆ ಇದ್ದನು. ತೇಜೋನಿಧಿಯಾದ ಆ ಋಷಿಯನ್ನು ನೋಡಿ ಮೇನಾದೇವಿಯು ನಮಸ್ಕರಿಸಿದಳು. ಮುಖವನ್ನು ತಗ್ಗಿಸಿ ಕಮಲದಂತಿದ್ದ ಕೈಗಳನ್ನು ಮುಗಿದುಕೊಂಡು ನಿಂತಳು.

೧೩೪. ಅಪರಿಮಿತ ಕಾಂತಿಯುಕ್ತನೂ ಮಹಾಮಹಿಮನೂ ಆದ ಮಹರ್ಷಿಯು ಅವಳನ್ನು ನೋಡಿ, ಅಮೃತತರಂಗರೂಪವಾದ ಆಶೀರ್ವಾದಗಳಿಂದ ಅವಳಿಗೆ ಶ್ರೇಯಸ್ಸನ್ನುಂಟುಮಾಡಿದನು.

೧೩೫-೧೩೬. ಬಳಿಕ ಹಿಮವಂತನ ಪುತ್ರಿಯಾದ ಪಾರ್ವತಿಯು ಅದ್ಭುತ ರೂಪವುಳ್ಳ ನಾರದ ಮುನಿಯನ್ನು ನೋಡಿ ಆಶ್ಚರ್ಯಗೊಂಡಳು. ಮಹರ್ಷಿಯು 'ಮಗೂ, ಬಾ' ಎಂದು ಪ್ರೀತಿಪೂರ್ವಕವಾದ ಮಾತಿನಿಂದ ಹೇಳಿದನು.

೧೩೭-೧೩೮. ಪಾರ್ವತಿಯು ತಂದೆಯ ಕುತ್ತಿಗೆಯನ್ನು ತಬ್ಬಿಕೊಂಡು ಅವನ ತೊಡೆಯ ಮೇಲೆ ಕುಳಿತಳು. ಆಗ ಅವಳ ತಾಯಿಯು 'ಮಗೂ, ಪೂಜ್ಯರಾದ

**ಭಗವಂತಂ ತತೋ ಧನ್ಯಂ ಪತಿಮಾಪ್ಸ್ಯಸಿ ಸಮ್ಮತಂ ।**
**ಇತ್ಯುಕ್ತಾ ತು ತತೋ ಮಾತ್ರಾ ವಸ್ತ್ರಾಂತಪಿಹಿತಾನನಾ ॥೧೩೮॥**

**ಕಿಂಚಿತ್ಕಂಪಿತಮೂರ್ಧಾ ತು ವಾಕ್ಯಂ ನೋವಾಚ ಕಿಂಚನ ।**
**ತತಃ ಪುನರುವಾಚೇದಂ ವಾಕ್ಯಂ ಮಾತಾ ಸುತಾಂ ತದಾ ॥೧೩೯॥**

**ವತ್ಸೇ ವಂದಯ ದೇವರ್ಷಿಂ ತತೋ ದಾಸ್ಯಾಮಿ ತೇ ಶುಭಂ ।**
**ರತ್ನಕ್ರೀಡನಕಂ ರಮ್ಯಂ ಸ್ಥಾಪಿತಂ ಯಚ್ಚಿರಂ ಮಯಾ ॥೧೪೦॥**

**ಇತ್ಯುಕ್ತಾ ತು ತತೋ ವೇಗಾದುದ್ಧೃತ್ಯ ಚರಣೌ ತದಾ ।**
**ವವಂದೇ ಮೂರ್ಧ್ನಿ ಸಂಧಾಯ ಕರಪಂಕಜಕುಟ್ಮಲಂ ॥೧೪೧॥**

**ಕೃತೇ ತು ವಂದನೇ ತಸ್ಯಾ ಮಾತಾ ಸಖೀಮುಖೇನ ತು ।**
**ಚೋದಯಾಮಾಸ ಶನಕೈಸ್ತಸ್ಯಾಃ ಸೌಭಾಗ್ಯಶಂಸಿನಾಂ ॥೧೪೨॥**

---

ಮಹರ್ಷಿಗಳಿಗೆ ನಮಸ್ಕಾರಮಾಡು. ಅನುರೂಪನೂ ಧನ್ಯನೂ ಆದ ಪತಿಯನ್ನು ಪಡೆಯುವೆ' ಎಂದು ಹೇಳಿದಳು. ಪಾರ್ವತಿಯಾದರೋ ಸೀರೆಯ ಸೆರಗಿನಲ್ಲಿ ಮುಖವನ್ನು ಮುಚ್ಚಿಕೊಂಡು, ತಲೆಯನ್ನು ಸ್ವಲ್ಪ ಅಲ್ಲಾಡಿಸಿದಳು. ಉತ್ತರ ವೇನನ್ನೂ ಹೇಳಲಿಲ್ಲ.

೧೩೯-೧೪೦. ತಾಯಿ ಮತ್ತೆ ಮಗಳಿಗಿಂತೆಂದಳು. "ಮಗೂ, ದೇವರ್ಷಿಗೆ ನಮಸ್ಕಾರ ಮಾಡು. ಬಹುಕಾಲದಿಂದ ನಾನು ಇಟ್ಟುಕೊಂಡಿರುವ ಚೆಲುವಾದ ಒಳ್ಳೆಯ ರತ್ನದ ಗೊಂಬೆಯನ್ನು ನಿನಗೆ ಆಡುವುದಕ್ಕೆ ಕೊಡುವೆನು."

೧೪೧. ತಾಯಿ ಹೀಗೆ ಹೇಳಲು ಪಾರ್ವತಿಯು ಬೇಗನೆ ಮುನಿಯ ಪಾದ ಗಳನ್ನು ಮುಟ್ಟಿ, ಕೈಗಳನ್ನು ತಲೆಯ ಮೇಲೆ ಜೋಡಿಸಿ ಮುಗಿದು, ನಮಸ್ಕಾರ ಮಾಡಿದಳು.

೧೪೨-೧೪೩. ನಮಸ್ಕಾರ ಮಾಡಿದ ಬಳಿಕ ಅವಳ ತಾಯಿಯು, ಮಗಳ ವಿಚಾರವಾದ ಚಿಂತೆಯು ಮನಸ್ಸಿನಲ್ಲಿರುವುದು ಸ್ತ್ರೀಸ್ವಭಾವವಾದ ಕಾರಣ ಅವಳ

ಶರೀರಲಕ್ಷಣಾನಾಂ ತು ವಿಜ್ಞಾನಾಯ ತು ಕೌತುಕಾತ್ ।
ಸ್ತ್ರೀಸ್ವಭಾವಾದ್ಯದುದ್ಧಿಹಿತುಶ್ಚಿಂತಾಂ ಹೃದಿ ಸಮುದ್ವಹನ್ ॥೧೫೩॥

ಜ್ಞಾತ್ವಾ ತದಿಂಗಿತಂ ಶೈಲೋ ಮಹಿಷ್ಯಾ ಹೃದಯೇನ ತು ।
ಅನುದ್ವಿಗ್ನೋಽಕ್ಷತಿರ್ಮನೇ ರಮ್ಯಮೇತದುಪಸ್ಥಿತಂ ॥೧೫೪॥

ಚೋದಿತಃ ಶೈಲಮಹಿಷೀಸಖ್ಯಾ ಮುನಿವರಸ್ತದಾ ।
ಸ್ಮಿತಾನನೋ ಮಹಾಭಾಗೋ ವಾಕ್ಯಂ ಪ್ರೋವಾಚ ನಾರದಃ ॥೧೫೫॥

ನ ಜಾತೋಽಸ್ಯಾಃ ಪತಿರ್ಭದ್ರೇ ಲಕ್ಷಣೈಶ್ಚ ವಿವರ್ಜಿತಾ ।
ಉತ್ತಾನಹಸ್ತಾ ಸತತಂ ಚರಣೈರ್ವ್ಯಭಿಚಾರಿಭಿಃ ।
ಸ್ವಚ್ಛಾಯಯಾ ಭವಿಷ್ಯೇಯಂ ಕಿಮನ್ಯದ್ಬಹು ಭಾಷ್ಯತೇ ॥೧೫೬॥

ಶ್ರುತ್ವೈತತ್ಸಂಭ್ರಮಾವಿಷ್ಟೋ ಧ್ವಸ್ತಧೈರ್ಯೋ ಮಹಾಬಲಃ ।
ನಾರದಂ ಪ್ರತ್ಯುವಾಚಾಥ ಸಾಶ್ರುಕಂಠೋ ಮಹಾಗಿರಿಃ ॥೧೫೭॥

---

ಸೌಭಾಗ್ಯ ಸೂಚಕಗಳಾದ ಶರೀರ ಲಕ್ಷಣಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ಸಖಿಯ ಮೂಲಕ ನಾರದ ಮುನಿಗೆ ಮೆಲ್ಲಗೆ ಸೂಚನೆಕೊಟ್ಟಳು.

೧೫೪. ರಾಣಿಯ ಆ ಅಭಿಪ್ರಾಯವು ಹಿಮವಂತನಿಗೆ ಗೊತ್ತಾಯಿತು. ಆದರೆ ಅವನು ಅದನ್ನು ಹೊರಗೆಡಹಲಿಲ್ಲ. ಅವನು ಸಂತುಷ್ಟನಾಗಿ "ಇದು ಒಳ್ಳೆಯದೇ ಆಯಿತು" ಎಂದು ಭಾವಿಸಿಕೊಂಡನು.

೧೫೫. ಮೇನಾದೇವಿಯ ಸಖಿಯ ಮಾತನ್ನು ಕೇಳಿ ಮಹಾಮಹಿಮನಾದ ನಾರದ ಮುನಿಯು ಮುಗುಳುನಗೆ ನಗುತ್ತ ಇಂತೆಂದನು.

೧೫೬. ಓ ಮಂಗಳಾಂಗೀ, ಇವಳ ಪತಿಯು ಇನ್ನೂ ಹುಟ್ಟಿಲ್ಲ. ಮತ್ತೂ ಇವಳು ಲಕ್ಷಣರಹಿತಳಾಗಿದ್ದಾಳೆ. ಯಾವಾಗಲೂ ಕೈಯನ್ನು ಮೇಲ್ಮುಖವಾಗಿಟ್ಟುಕೊಂಡು ತನ್ನ ನೆರಳನ್ನು ನೋಡಿ ಕಾಲುಗಳನ್ನು ಅಲ್ಲಾಡಿಸುತ್ತಿರುವಳು. ಇದಕ್ಕಿಂತ ಹೆಚ್ಚಾಗಿ ಇನ್ನೇನು ಹೇಳಲಿ?

೧೫೭. ಇದನ್ನು ಕೇಳಿ ಮಹಾ ಬಲಶಾಲಿಯಾದ ಹಿಮವಂತನು, ಸಡಗರದಿಂದ ಧೈರ್ಯವು ಕುಗ್ಗಿಹೋಗಲು, ಗದ್ಗದ ಸ್ವರದಿಂದ ನಾರದನಿಗಿಂತೆಂದನು.

|| ಹಿಮವಾನುವಾಚ ||

ಸಂಸಾರಸ್ಯಾತಿದೋಷಸ್ಯ ದುರ್ವಿಜ್ಞೇಯಾ ಗತಿರ್ಯತಃ |
ಸೃಷ್ಟ್ಯಾಂ ಚಾವಶ್ಯಭಾವಿನ್ಯಾಂ ಕೇನಾಪ್ಯತಿಶಯಾತ್ಮನಾ ||೧೪೮||

ಕರ್ತ್ರಾ ಪ್ರಣೀತಾ ಮರ್ಯಾದಾ ಸ್ಥಿತಾ ಸಂಸಾರಿಣಾಮಿಯಂ |
ಯೋ ಜಾಯತೇ ಹಿ ಯದ್ಬೀಜೋ ಜನಿತುಃ ಸ ಹ್ಯಸಾರ್ಥಕಃ ||೧೪೯||

ಜನಿತಾ ಚಾಪಿ ಜಾತಸ್ಯ ನ ಕಶ್ಚಿದಿತಿ ಯತ್ಸ್ಫುಟಂ |
ಸ್ವಕರ್ಮಣೈವ ಜಾಯಂತೇ ವಿವಿಧಾ ಭೂತಜಾತಯಃ ||೧೫೦||

ಅಂಡಜೋ ಹ್ಯಂಡಜಾಜ್ಜಾತಃ ಪುನರ್ಜಾಯೇತ ಮಾನವಃ |
ಮಾನುಷೋಽಪಿ ಸರೀಸೃಪ್ಯಾಂ ಮನುಷ್ಯತ್ವೇನ ಜಾಯತೇ ||೧೫೧||

ತತ್ರಾಪಿ ಜಾತೌ ಶ್ರೇಷ್ಠಾಯಾಂ ಧರ್ಮಸ್ಯೋತ್ಕರ್ಷಣೇನ ತು |
ಅಪುತ್ರಜನ್ಮಿನಃ ಶೇಷಾಃ ಪ್ರಾಣಿನಃ ಸಮವಸ್ಥಿತಾಃ ||೧೫೨||

---

೧೪೮-೧೪೯. ಹಿಮವಂತನು ಹೇಳಿದನು.—ಬಹು ದೋಷಮಯವಾದ ಸಂಸಾರದ ಗತಿಯನ್ನರಿಯುವುದೇ ಕಷ್ಟ. ಸೃಷ್ಟಿಕಾರ್ಯವು ಅವಶ್ಯವಾಗಿ ಆಗ ಬೇಕಾಗಿದೆ. ಸಂಸಾರಿಗಳು ಮಹಾಪ್ರಾಜ್ಞನಾದ ಯಾವನೋ ಸೃಷ್ಟಿಕರ್ತನು ಏರ್ಪಡಿಸಿದ ಮರ್ಯಾದೆಗೆ ಕಟ್ಟುಬಿದ್ದಿದ್ದಾರೆ. ಒಬ್ಬನ ರೇತಸ್ಸಿನಿಂದ ಹುಟ್ಟಿದವನು ತನ್ನ ಜನ್ಮದಾತನಿಗೆ ಪ್ರಯೋಜನವೇನನ್ನೂ ಮಾಡಲಾರದವನಾಗಿದ್ದಾನೆ.

೧೫೦. ತಂದೆಯು ಮಗನಿಗೆ ಕಾರಣಭೂತನೇನೂ ಅಲ್ಲವೆಂಬುದು ಸ್ಪಷ್ಟ ವಾಗಿದೆ. ಏಕೆಂದರೆ ವಿಧವಿಧವಾದ ಪ್ರಾಣಿಗಳು ತಮ್ಮತಮ್ಮ ಕರ್ಮಫಲದಿಂದಲೇ ಹುಟ್ಟುತ್ತವೆ.

೧೫೧. ಪಕ್ಷಿಯು ಪಕ್ಷಿಯಿಂದ ಹುಟ್ಟುತ್ತದೆ. ಅದು ಮತ್ತೆ ಮನುಷ್ಯನಾಗಿ ಹುಟ್ಟಬಹುದು. ಮಾನವನೂ ಕೂಡ ಮರುಜನ್ಮದಲ್ಲಿ ಹೆಣ್ಣು ಹಾವಿನ ಹೊಟ್ಟೆ ಯಲ್ಲಿ ಜನಿಸಬಹುದು. ಆ ಬಳಿಕ ಮನುಷ್ಯ ಜನ್ಮವನ್ನು ಮರಳಿ ತಾಳಬಹುದು.

೧೫೨. ಜೀವನು ಅತಿಶಯವಾದ ಪುಣ್ಯಕರ್ಮವನ್ನು ಮಾಡಿದ್ದರೆ ಮನುಷ್ಯ ರಲ್ಲಿಯೂ ಉತ್ತಮಜಾತಿಯಲ್ಲಿ ಜನಿಸುವನು. ಮನುಷ್ಯನು ಹೊರತು ಉಳಿದ ಯಾವ ಪ್ರಾಣಿಗೂ ಪುತ್ರಸಂಬಂಧಪ್ರಯುಕ್ತವಾದ ಕರ್ಮವಿಧಿಯಿಲ್ಲ.

ಮನುಜಾಸ್ತತ್ರ ಜಾಯಂತೇ ಯತೋ ನ ಗೃಹಧರ್ಮಿಣಃ ।
ಕ್ರಮೇಣಾಶ್ರಮಸಂಪ್ರಾಪ್ತಿರ್ಬ್ರಹ್ಮಚಾರಿವ್ರತಾದನು ||೧೫೩||

ತಸ್ಯ ಕರ್ತುರ್ನಿಯೋಗೇನ ಸಂಸಾರೋ ಯೇನ ವರ್ಧಿತಃ ।
ಸಂಸಾರಸ್ಯ ಕುತೋ ವೃದ್ಧಿಸ್ಸರ್ವೇ ಸ್ಯುರ್ಯದತಿಗ್ರಹಾಃ ||೧೫೪||

ಅತಃ ಕರ್ತ್ರಾ ತು ಶಾಸ್ತ್ರೇಷು ಸುತಲಾಭಃ ಪ್ರಶಂಸಿತಃ ।
ಪ್ರಾಣಿನಾಂ ಮೋಹನಾರ್ಥಾಯ ನರಕತ್ರಾಣಸಂಶ್ರಯಾತ್ ||೧೫೫||

ಸ್ತ್ರಿಯಾ ವಿರಹಿತಾ ಸೃಷ್ಟಿರ್ಜಂತೂನಾಂ ನೋಪಪದ್ಯತೇ ।
ಸ್ತ್ರೀಜಾತಿಸ್ತು ಪ್ರಕೃತ್ಯೈವ ಕೃಪಣಾ ದೈನ್ಯಭಾಷಿಣೀ ।
ಶಾಸ್ತ್ರಾಲೋಚನಸಾಮರ್ಥ್ಯಮುಜ್ಝಿತಂ ತಾಸು ವೇಧಸಾ ||೧೫೬||

---

೧೫೩. ಮನುಷ್ಯರಿಗೆ ಜನ್ಮಮಾತ್ರದಿಂದಲೇ ಗೃಹಸ್ಥಾಶ್ರಮದ ಸಂಬಂಧವು ಬರುವುದಿಲ್ಲ. ಬ್ರಹ್ಮಚರ್ಯವ್ರತವನ್ನು ಸಾಂಗವಾಗಿ ನೆರವೇರಿಸಿದ ಬಳಿಕ ಆ ಆಶ್ರಮಕ್ಕೆ ಪ್ರವೇಶವು ದೊರೆಯುವುದು.

೧೫೪. ಪ್ರತಿಯೊಬ್ಬನೂ ಸಂಸಾರವಂದಿಗನಾಗಿ ಅದನ್ನು ಬೆಳೆಸಬೇಕೆಂಬುದು ಸೃಷ್ಟಿಕರ್ತನ ಕಟ್ಟಳೆ. ಎಲ್ಲರೂ ಈ ನಿಯಮವನ್ನು ಮೀರಿದರೆ ಸಂಸಾರದ ಅಭಿವೃದ್ಧಿ ಹೇಗೆ ಆದೀತು?

೧೫೫. ಪುತ್ರನು ತಂದೆತಾಯಿಗಳನ್ನು ನರಕದಿಂದ ಉದ್ಧಾರಮಾಡತಕ್ಕವನು. ಆದುದರಿಂದ ಜನರಿಗೆ ಮೋಹವನ್ನು ಹುಟ್ಟಿಸುವುದಕ್ಕಾಗಿ ಸೃಷ್ಟಿಕರ್ತನು ಪುತ್ರಲಾಭವನ್ನು ಶಾಸ್ತ್ರಗಳಲ್ಲಿ ಬಹಳವಾಗಿ ಕೊಂಡಾಡಿದ್ದಾನೆ.

೧೫೬. ಸ್ತ್ರೀಯಿಲ್ಲದೆ ಪ್ರಾಣಿಗಳ ಸೃಷ್ಟಿ ನಡೆಯುವುದಿಲ್ಲ. ಅವಳು ಸಹಜವಾಗಿಯೇ ಅಸಹಾಯಳು. ದೈನ್ಯದಿಂದ ಮಾತಾಡುವವಳು. ಅವಳಿಗೆ ಶಾಸ್ತ್ರವಿಚಾರ ಸಾಮರ್ಥ್ಯವನ್ನು ಬ್ರಹ್ಮನು ಅನುಗ್ರಹಿಸಿಲ್ಲ.

ಶಾಸ್ತ್ರೇಷೂಕ್ತಮಸಂದಿಗ್ಧಂ ಬಹುವಾರಂ ಮಹಾಫಲಂ ।
ದಶಪುತ್ರಸಮಾ ಕನ್ಯಾ ಯಾ ನ ಸ್ಯಾಚ್ಛೀಲವರ್ಜಿತಾ ॥೧೫೭॥

ವಾಕ್ಯಮೇತತ್ಫಲಭ್ರಷ್ಟಂ ಪುಂಸಾಂ ಗ್ಲಾನಿಕರಂ ಪರಂ ।
ಕನ್ಯಾ ಹಿ ಕೃಪಣಾ ಶೋಚ್ಯಾ ಪಿತುರ್ದುಃಖವಿವರ್ಧಿನೀ ॥೧೫೮॥

ಯಾಪಿ ಸ್ಯಾತ್ಪೂರ್ಣಸರ್ವಾರ್ಥಾ ಪತಿಪುತ್ರಧನಾದಿಭಿಃ ।
ಕಿಂ ಪುನರ್ದುರ್ಭಗಾ ಹೀನಾ ಪತಿಪುತ್ರಧನಾದಿಭಿಃ ॥೧೫೯॥

ತ್ವಂ ಚೋಕ್ತವಾನ್ ಸುತಾಯಾ ಮೇ ಶರೀರೇ ದೋಷಸಂಗ್ರಹಂ ।
ಅಹೋ ಮುಹ್ಯಾಮಿ ಶುಷ್ಯಾಮಿ ಗ್ಲಾಮಿ ಸೀದಾಮಿ ನಾರದ ॥೧೬೦॥

ಅಯುಕ್ತಮಥ ವಕ್ತವ್ಯಮಪ್ರಾಪ್ಯಮಪಿ ಸಾಂಪ್ರತಂ ।
ಅನುಗ್ರಹೇಣ ಮೇ ಛಿಂದಿ ದುಃಖಂ ಕನ್ಯಾಶ್ರಯಂ ಮುನೇ ॥೧೬೧॥

---

೧೫೭. ಒಳ್ಳೆಯ ನಡತೆಯನ್ನು ಬಿಡದಿರುವ ಕನ್ಯೆಯು ಹತ್ತು ಜನ ಪುತ್ರರಿಗೆ ಸಮಾನಳೆಂದೂ ಮಹತ್ಫಲಗಳನ್ನು ಕೊಡತಕ್ಕವಳೆಂದೂ ಶಾಸ್ತ್ರಗಳಲ್ಲಿ ಹಲವುಸಾರಿ ಸ್ಪಷ್ಟವಾಗಿ ಹೇಳಿದೆ.

೧೫೮-೧೫೯. ಆದರೆ ಈ ವಾಕ್ಯಮಾತ್ರದಿಂದ ಮನುಷ್ಯನಿಗೆ ಫಲವೇನೂ ಆಗದು. ಅದಕ್ಕೆ ಪ್ರತಿಯಾಗಿ ಗ್ಲಾನಿಯೇ ಉಂಟಾಗುವುದು. ಏಕೆಂದರೆ ಪತಿಪುತ್ರ ಧನಾದಿಗಳಿಂದ ಪರಿಪೂರ್ಣಳೆನಿಸಿರುವ ಕನ್ಯೆಯೂ ಕೂಡ ಅಸಹಾಯಳೂ ಶೋಕ ವಿಷಯಳೂ ಆಗುವಳು. ತಂದೆಗೆ ಅವಳಿಂದ ದುಃಖವೇ ಹೆಚ್ಚುವುದು. ಹೀಗಿರುವಾಗ ದುರದೃಷ್ಟದವಳೂ ಪತಿಪುತ್ರಧನಾದಿಗಳಿಂದ ರಹಿತಳೂ ಆದವಳ ವಿಷಯವನ್ನು ಹೇಳತಕ್ಕುದೇನು ?

೧೬೦. ನನ್ನ ಮಗಳ ಶರೀರದಲ್ಲಿ ದುಷ್ಟ ಲಕ್ಷಣಗಳಿವೆಯೆಂದು ನೀನು ಹೇಳಿದೆ. ಅಯ್ಯೋ! ನಾರದಾ, ನನಗೆ ಮುಂದೇ ತೋಚುವುದಿಲ್ಲ. ಬತ್ತಿಹೋಗು ತ್ತೇನೆ. ನನ್ನ ಸಂತೋಷವು ಹಾಳಾಯಿತು. ನಾನು ಅಶರಣನಾದೆನು.

೧೬೧. ಅಯುಕ್ತವಾಗಿರಲಿ, ಬರಕೂಡದಂಥದಾಗಿರಲಿ ನೀನು ಅದನ್ನು ಈಗ ಹೇಳಬೇಕು. ಎಲೈ ಮುನಿವರ್ಯಾ, ಈ ಕನ್ಯಾಸಂಬಂಧವಾದ ನನ್ನ ದುಃಖವನ್ನು ಪರಿಹರಿಸು. ನನ್ನಲ್ಲಿ ಅನುಗ್ರಹವನ್ನು ಮಾಡು.

ಪರಿಚ್ಛಿನ್ನೇऽಪ್ಯಸಂದಿಗ್ಧೇ ಮನಃ ಪರಿಭವಾಶ್ರಯಂ ।
ತೃಷ್ಣಾ ಮುಷ್ಣಾತಿ ನಿಷ್ಣಾತಾ ಫಲಲೋಭಾಶ್ರಯಾ ಶುಭಾ ॥೧೬೨॥
ಸ್ತ್ರೀಣಾಂ ಹಿ ಪರಮಂ ಜನ್ಮ ಕುಲಾನಾಮುಭಯಾತ್ಮನಾಂ ।
ಇಹಾಮುತ್ರ ಸುಖಾಯೋಕ್ತಂ ಸತ್ಪತಿಪ್ರಾಪ್ತಿಸಂಜ್ಞಿತಂ ॥೧೬೩॥
ದುರ್ಲಭಃ ಸತ್ಪತಿಃ ಸ್ತ್ರೀಣಾಂ ವಿಗುಣೋऽಪಿ ಪತಿಃ ಕಿಲ ।
ನ ಪ್ರಾಪ್ಯತೇ ವಿನಾ ಪುಣ್ಯೈಃ ಪತಿರ್ನಾರ್ಯಾ ಕದಾಚನ ॥೧೬೪॥
ಯತೋ ನಿಃಸಾಧನೋ ಧರ್ಮಃ ಪರಿಮಾಣೋಜ್ಝಿತಾ ರತಿಃ ।
ಧನಂ ಜೀವಿತಪರ್ಯಾಪ್ತಂ ಪತ್ಯೌ ನಾರ್ಯಾಃ ಪ್ರತಿಷ್ಠಿತಂ ॥೧೬೫॥
ನಿರ್ಧನೋ ದುರ್ಭಗೋ ಮೂರ್ಖಃ ಸರ್ವಲಕ್ಷಣವರ್ಜಿತಃ ।
ದೈವತಂ ಪರಮಂ ನಾರ್ಯಾಃ ಪತಿರುಕ್ತಃ ಸದೈವ ಹಿ ॥೧೬೬॥

---

೧೬೨-೧೬೩. ಕಾರ್ಯವು ಸಾಮಾನ್ಯವಾದುದಾಗಿರಲಿ, ಜಯದಲ್ಲಿ ಸಂದೇಹವಿಲ್ಲದುದಾಗಿರಲಿ, ಫಲದಲ್ಲಿ ಅತಿಯಾದ ಲೋಭದಿಂದ ಅಶುಭವಾದ ರೀತಿಯಲ್ಲಿ ಪ್ರವರ್ತಿಸಿದ ಆಸೆಯು ಮನಸ್ಸನ್ನು ತಪ್ಪುದಾರಿಗೆ ಎಳೆದು ಅಪಮಾನಕ್ಕೆ ಗುರಿಮಾಡುತ್ತದೆ. ಒಳ್ಳೆಯ ಪತಿಯನ್ನು ಪಡೆಯುವ ಅದೃಷ್ಟವಿದ್ದರೆ ಮಾತ್ರ ಕನ್ಯೆಯು ಹುಟ್ಟಿದ ಮತ್ತು ಹೊಕ್ಕ ವಂಶಗಳೆರಡಕ್ಕೂ ಇಹಪರಗಳಲ್ಲಿ ಸುಖವುಂಟು.

೧೬೪. ಸ್ತ್ರೀಯರಿಗೆ ಒಳ್ಳೆಯ ಪತಿಯು ಲಭಿಸುವುದು ಬಹು ವಿರಳ. ಗುಣರಹಿತನಾದವನು ಸಿಕ್ಕುವುದೂ ಕಷ್ಟವೇ. ಏಕೆಂದರೆ ಪುಣ್ಯವಿಲ್ಲದೆ ಹೆಂಗಸಿಗೆ ಪತಿಯು ಎಂದಿಗೂ ದೊರಕಲಾರನು.

೧೬೫. ಏಕೆಂದರೆ ಮೋಕ್ಷಸಾಧನವಾದ ಧರ್ಮ, ಅಪರಿಮಿತವಾದ ಸುಖ, ಜೀವಮಾನದಲ್ಲೆಲ್ಲ ಅನುಭವಿಸಬಹುದಾದಷ್ಟು ಧನ ಇವೆಲ್ಲವೂ ಸ್ತ್ರೀಗೆ ಲಭಿಸುವುದು ಪತಿಯಿಂದ.

೧೬೬. ಪತಿಯಾದವನು ಧನರಹಿತನೂ, ಅದೃಷ್ಟಹೀನನೂ, ಮೂರ್ಖನೂ, ಸಕಲಲಕ್ಷಣರಹಿತನೂ ಆಗಿರಲಿ ಪತ್ನಿಯು ಅವನನ್ನೇ ದೇವರೆಂದು ಭಾವಿಸಬೇಕು.

ತ್ವಯಾ ಚೋಕ್ತಂ ಹಿ ದೇವರ್ಷೇ ನ ಜಾತೋಽಸ್ಯಾಃ ಪತಿಃ ಕಿಲ ।
ಏತದ್ದೌರ್ಭಾಗ್ಯಮತುಲಮಸಂಖ್ಯಂ ಗುರು ದುಸ್ಸಹಂ ॥೧೬೭॥

ಚರಾಚರೇ ಭೂತಸರ್ಗೇ ಯದದ್ಯಾಪಿ ಚ ನೋ ಮುನೇ ।
ನ ಸ ಜಾತ ಇತಿ ಬ್ರೂಷೇ ತೇನ ಮೇ ವ್ಯಾಕುಲಂ ಮನಃ ॥೧೬೮॥

ಮನುಷ್ಯದೇವಜಾತೀನಾಂ ಶುಭಾಶುಭನಿವೇದಕಂ ।
ಲಕ್ಷಣಂ ಹಸ್ತಪಾದಾದೌ ವಿಹಿತೈರ್ಲಕ್ಷಣೈಃ ಕಿಲ ॥೧೬೯॥

ಸೇಯಮುತ್ತಾನಹಸ್ತೇತಿ ತ್ವಯೋಕ್ತಾ ಮುನಿಪುಂಗವ ।
ಉತ್ತಾನಹಸ್ತತಾ ಪ್ರೋಕ್ತಾ ಯಾಚತಾಮೇವ ನಿತ್ಯದಾ ॥೧೭೦॥

ಶುಭೋದಯಾನಾಂ ಧನ್ಯಾನಾಂ ನ ಕದಾಚಿತ್ಪ್ರಯಚ್ಛತಾಂ ।
ಸ್ವಚ್ಛಾಯಯಾಸ್ಯಾಶ್ಚರಣೌ ತ್ವಯೋಕ್ತೌ ವ್ಯಭಿಚಾರಿಣೌ ॥೧೭೧॥

---

೧೬೭. ಎಲೈ ದೇವರ್ಷಿಯೇ, ಇವಳ ಪತಿಯು ಇನ್ನೂ ಹುಟ್ಟಿಲ್ಲವೆಂದು ನೀನು ಹೇಳಿದೆಯಲ್ಲವೇ? ಇದನ್ನು ಅಸಮಾನವೂ, ಅಪರಿಮಿತವೂ ದುಸ್ಸಹವೂ ಆದ ಮಹಾದುರದೃಷ್ಟವೆನ್ನಬೇಕು.

೧೬೮. ಓ ನಾರದಾ, ಸ್ಥಾವರಜಂಗಮರೂಪವಾದ ಬಗೆಬಗೆಯ ಪ್ರಾಣಿಗಳಿಂದ ತುಂಬಿದ ಈ ವಿಸ್ತಾರವಾದ ಪ್ರಪಂಚದಲ್ಲಿ ಈಕೆಯ ಪತಿಯೊಬ್ಬನು ಮಾತ್ರ ಇನ್ನೂ ಹುಟ್ಟಿಲ್ಲವೆನ್ನುತ್ತೀಯಲ್ಲಾ ! ಆದರಿಂದ ನನ್ನ ಮನುಸ್ಸು ವ್ಯಾಕುಲಿತವಾಗಿದೆ.

೧೬೯. ಮನುಷ್ಯರಿಗೂ ದೇವತೆಗಳಿಗೂ ಮುಂದೆ ಒದಗುವ ಶುಭಾಶುಭಗಳನ್ನು ತಿಳಿಯುವುದು ಅವರ ಕೈ, ಕಾಲು ಮುಂತಾದ ಅವಯವಗಳಲ್ಲಿ ಹೇಳಿರುವ ಲಕ್ಷಣಗಳಿಂದಲೇ ಅಲ್ಲವೆ ?

೧೭೦. ಓ ಮುನಿಪುಂಗವಾ, ಇವಳ ಕೈ ಮೇಲ್ಮುಖವಾಗಿರುವುದೆಂದು ನೀನು ಹೇಳಿದೆ. ಯಾಚಕರು ಮಾತ್ರವೇ ಹೀಗೆ ಕೈಗಳನ್ನು ಯಾವಾಗಲೂ ಮೇಲುಮುಖವಾಗಿ ಮಾಡಿ ಬೇಡುವರು. ಅಭಿವೃದ್ಧಿಗೆ ಬರತಕ್ಕವರೂ, ಧನ್ಯರೂ, ದಾನಿಗಳೂ ಆದವರಿಗೆ ಹೀಗೆ ಎಂದಿಗೂ ಇರದು.

೧೭೧. ಇವಳು ತನ್ನ ನೆರಳನ್ನು ನೋಡಿಕೊಳ್ಳುತ್ತಾ ಕಾಲುಗಳನ್ನು ಅಲ್ಲಾಡಿಸುವಳೆಂದು ಹೇಳಿದೆ. ಎಲೈ ಮುನಿವರ್ಯಾ, ಇವಳಿಗೆ ಶ್ರೇಯಸ್ಸುಂಟಾಗುವ ಆಸೆಯು ಆ ಲಕ್ಷಣದಿಂದಲೂ ನನಗೆ ತೋರಿಬರುವುದಿಲ್ಲ.

ತತ್ರಾಪಿ ಶ್ರೇಯಸಾಂ ಹ್ಯಾಶಾ ಮುನೇ ನ ಪ್ರತಿಭಾತಿ ನಃ ।
ಶರೀರಲಕ್ಷಣಾಶ್ಚಾನ್ಯೇ ಪೃಥಕ್ಫಲನಿವೇದಿನಃ ||೧೭೨||

ಸೌಭಾಗ್ಯಧನಪುತ್ರಾಯುಃಪತಿಲಾಭಾನುಶಂಸಿನಃ ।
ತೈಶ್ಚ ಸರ್ವೈರ್ವಿಹೀನೇಯಂ ತ್ವಮಾತ್ಥ ಮುನಿಪುಂಗವ ||೧೭೩||

ತ್ವಂ ಮೇ ಸರ್ವಂ ವಿಜಾನಾಸಿ ಸತ್ಯವಾಗಸಿ ಚಾಪ್ಯತಃ ।
ಮುಹ್ಯಾಮಿ ಮುನಿಶಾರ್ದೂಲ ಹೃದಯಂ ದೀರ್ಯತೀವ ಮೇ ||೧೭೪||

ಇತ್ಯುಕ್ತ್ವಾ ವಿರತಃ ಶೈಲೋ ಮಹಾದುಃಖವಿಚಾರಣಾತ್ ।
ಶ್ರುತ್ವೈತದಖಿಲಂ ತಸ್ಮಾಚ್ಛೈಲರಾಜಮುಖಾಂಬುಜಾತ್ ।
ಸ್ಮಿತಪೂರ್ವಮುವಾಚೇದಂ ನಾರದೋ ದೇವಚೋದಿತಃ ||೧೭೫||

|| ನಾರದ ಉವಾಚ ||

ಹರ್ಷಸ್ಥಾನೇಽಪಿ ಮಹತಿ ತ್ವಯಾ ದುಃಖಂ ನಿರೂಪ್ಯತೇ ।
ಅಪರಿಚ್ಛಿನ್ನವಾಕ್ಯಾರ್ಥೇ ಮೋಹಂ ಯಾಸಿ ಮಹಾಗಿರೇ ||೧೭೬||

---

೧೭೨-೧೭೩. ಎಲೈ ಮುನಿಶ್ರೇಷ್ಠನೇ, ಸೌಭಾಗ್ಯ, ಧನ, ಪುತ್ರ, ಆಯುಸ್ಸು, ಪತಿಲಾಭ ಮುಂತಾದ ಬೇರೆಬೇರೆ ಫಲಗಳನ್ನು ಸೂಚಿಸುವ ಶರೀರಲಕ್ಷಣಗಳು ಇನ್ನೂ ಉಂಟು. ಅವು ಯಾವುವೂ ಇವಳಲ್ಲಿ ಇಲ್ಲವೆಂದು ಹೇಳಿದೆ.

೧೭೪. ನೀನು ನನ್ನ ವಿಚಾರವೆಲ್ಲವನ್ನೂ ಬಲ್ಲೆ. ಮತ್ತು ನೀನಾಡುವುದೆಲ್ಲವೂ ಸತ್ಯ. ಓ ಮಹರ್ಷೀ, ನನಗೆ ದಿಕ್ಕುತೋಚದೆ ಹೋಗಿದೆ. ನನ್ನ ಎದೆಯು ಸೀಳಿಹೋಗುವಂತಾಗಿದೆ."

೧೭೫. ಹೀಗೆ ಹೇಳಿ ಹಿಮವಂತನು ತನಗೊದಗಿದ ಮಹಾದುಃಖವನ್ನು ಆಲೋಚಿಸುತ್ತ ಸುಮ್ಮನಾದನು. ಗಿರಿರಾಜನ ಮುಖಕಮಲದಿಂದ ಇದೆಲ್ಲ ವೃತ್ತಾಂತವನ್ನೂ ಕೇಳಿ ದೇವೇಂದ್ರನಿಂದ ಪ್ರೇರಿತನಾದ ನಾರದಮುನಿಯು ಮುಗುಳುನಗೆ ನಗುತ್ತಾ ಇಂತೆಂದನು.

೧೭೬. ನಾರದನು ಹೇಳಿದನು.—ಓ ಗಿರಿರಾಜಾ, ಅಪಾರವಾದ ಸಂತೋಷದ ಸಮಯದಲ್ಲಿ ನೀನು ದುಃಖವನ್ನು ಪ್ರಕಟಿಸುತ್ತಿರುವೆ. ಅಸ್ಪಷ್ಟವಾಗಿ ನಾನು ಹೇಳಿದ ಮಾತಿನ ಅರ್ಥವನ್ನು ಅರಿಯದೆ ಮೋಹಗೊಳ್ಳುತ್ತಿರುವೆ.

**ಇಮಾಂ ಶೃಣು ಗಿರಂ ಮತ್ತೋ ರಹಸ್ಯಪರಿನಿಷ್ಠಿತಾಂ ।**
**ಸಮಾಹಿತೋ ಮಹಾಶೈಲ ಮಯೋಕ್ತಸ್ಯ ವಿಚಾರಣೇ ॥೧೭೭॥**

**ನ ಜಾತೋಽಸ್ಯಾಃ ಪತಿರ್ದೇವ್ಯಾ ಯನ್ಮಯೋಕ್ತಂ ಹಿಮಾಚಲ ।**
**ನ ಸ ಜಾತೋ ಮಹಾದೇವೋ ಭೂತಭವ್ಯಭವೋದ್ಭವಃ ।**
**ಶರಣ್ಯಃ ಶಾಶ್ವತಃ ಶಾಸ್ತಾ ಶಂಕರಃ ಪರಮೇಶ್ವರಃ ॥೧೭೮॥**

**ಬ್ರಹ್ಮವಿಷ್ಣ್ವಿಂದ್ರಮುನಯೋ ಜನ್ಮಮೃತ್ಯುಜರಾರ್ದಿತಾಃ ।**
**ತಸ್ಯೈತೇ ಪರಮೇಶಸ್ಯ ಸರ್ವೇ ಕ್ರೀಡನಕಾ ಗಿರೇ ॥೧೭೯॥**

**ಆಸ್ತೇ ಬ್ರಹ್ಮಾ ತದಿಚ್ಛಾತಃ ಸಂಭೂತೋ ಭುವನಪ್ರಭುಃ ।**
**ವಿಷ್ಣುರ್ಯುಗೇ ಯುಗೇ ಜಾತೋ ನಾನಾಜಾತಿರ್ಮಹಾತನುಃ ॥೧೮೦॥**

---

೧೭೭. ಪರ್ವತೋತ್ತಮಾ, ನನ್ನ ಮಾತಿನ ಅಭಿಪ್ರಾಯವನ್ನು ಪರಿಶೀಲಿಸಿ ತಿಳಿಯಬೇಕಾದರೆ, ಇಗೋ! ನಾನು ಹೇಳುವ ರಹಸ್ಯಾರ್ಥವನ್ನು ಗಮನವಿಟ್ಟು ಕೇಳು.

೧೭೮. ಹಿಮವಂತಾ, ಈ ದೇವಿಯ ಪತಿಯು ಹುಟ್ಟಿಲ್ಲವೆಂದು ಹೇಳಿದೆನಷ್ಟೆ! ಅದು ನಿಜ. ಮಹಾದೇವನು ಹುಟ್ಟಿದವನೇ ಅಲ್ಲ. ಹಿಂದೆ ಇದ್ದ, ಮುಂದೆ ಹುಟ್ಟುವ, ಈಗ ಇರುವ ಎಲ್ಲ ವಸ್ತುಗಳಿಗೂ ಕಾರಣಕರ್ತನಾತನು. ಅವನು ಶರಣ್ಯನು, ಶಾಶ್ವತನು, ಆಳುವವನು, ಸುಖವನ್ನುಂಟುಮಾಡುವನು, ಪರಮೇಶ್ವರನು.

೧೭೯. ಎಲೈ ಹಿಮಾಚಲಾ, ಬ್ರಹ್ಮ, ವಿಷ್ಣು, ಇಂದ್ರ ಮತ್ತು ಮುನಿಗಳು ಹುಟ್ಟು, ಸಾವು, ಮುಪ್ಪು ಇವುಗಳ ಕೋಟಲೆಗೆ ಸಿಕ್ಕಿರುವರು. ಇವರೆಲ್ಲರೂ ಆ ಪರಮೇಶ್ವರನ ಕೈಗೊಂಬೆಗಳು.

೧೮೦. ಅವನ ಇಚ್ಛೆಯಿಂದ ಬ್ರಹ್ಮನು ಉತ್ಪನ್ನನಾಗಿದ್ದಾನೆ. ಲೋಕಪ್ರಭುವಾದ ವಿಷ್ಣುವು ಒಂದೊಂದು ಯುಗದಲ್ಲೂ ಬೇರೆ ಬೇರೆ ಜಾತಿಯಲ್ಲಿ ಅಪ್ರಾಕೃತವಾದ ದೇಹವನ್ನು ಧರಿಸಿದ್ದಾನೆ.

ಮನ್ಯಸೇ ಮಾಯಯಾ ಜಾತಂ ವಿಷ್ಣುಂ ಚಾಪಿ ಯುಗೇ ಯುಗೇ ।
ಆತ್ಮನೋ ನ ವಿನಾಶೋಽಸ್ತಿ ಸ್ಥಾವರಾಂತೇಽಪಿ ಭೂಧರ ॥೧೮೧॥

ಸಂಸಾರೇ ಜಾಯಮಾನಸ್ಯ ಮ್ರಿಯಮಾಣಸ್ಯ ದೇಹಿನಃ ।
ನಶ್ಯತೇ ದೇಹ ಏವಾತ್ರ ನಾತ್ಮನೋ ನಾಶ ಉಚ್ಯತೇ ॥೧೮೨॥

ಬ್ರಹ್ಮಾದಿಸ್ಥಾವರಾಂತೋಽಯಂ ಸಂಸಾರೋ ಯಃ ಪ್ರಕೀರ್ತಿತಃ ।
ಸ ಜನ್ಮಮೃತ್ಯುದುಃಖಾರ್ತೋ ಹ್ಯವಶಃ ಪರಿವರ್ತತೇ ॥೧೮೩॥

ಮಹಾದೇವೋಽಚಲಃ ಸ್ಥಾಣುರ್ನ ಜಾತೋ ಜನಕೋಽಜರಃ ।
ಭವಿಷ್ಯತಿ ಪತಿಃ ಸೋಽಸ್ಯಾ ಜಗನ್ನಾಥೋ ನಿರಾಮಯಃ ॥೧೮೪॥

ಯದುಕ್ತಂ ಚ ಮಯಾ ದೇವೀ ಲಕ್ಷಣೈರ್ವರ್ಜಿತಾ ತವ ।
ಶೃಣು ತಸ್ಯಾಪಿ ವಾಕ್ಯಸ್ಯ ಸಮ್ಯಕ್ತ್ವೇನ ವಿಚಾರಣಂ ॥೧೮೫॥

---

೧೮೧. ವಿಷ್ಣುವೂ ಕೂಡ ಪ್ರತಿಯೊಂದು ಯುಗದಲ್ಲಿಯೂ ಮಾಯೆಯಿಂದ ಜನಿಸುವನೆಂದು ನಿನಗೆ ಗೊತ್ತಿದೆ. ಗಿರೀಂದ್ರಾ, ಸ್ಥಿರವಾಗಿರುವಂತೆ ಕಾಣುವ ಈ ಪ್ರಾಕೃತಪ್ರಪಂಚವೆಲ್ಲಾ ನಾಶವಾದರೂ ಆತ್ಮನಿಗೆ ಮಾತ್ರ ವಿನಾಶವೆಂಬುದಿಲ್ಲ.

೧೮೨. ಮಾನವನು ಎಡೆಬಿಡದೆ ಈ ಸಂಸಾರದಲ್ಲಿ ಹುಟ್ಟಿ ಸಾಯುವನು. ಅವನ ದೇಹಮಾತ್ರವೇ ಹಾಳಾಗುತ್ತದೆ. ಶಾಸ್ತ್ರಗಳಲ್ಲಿ ಆತ್ಮನಿಗೆ ನಾಶವನ್ನು ಹೇಳಿಲ್ಲ.

೧೮೩. ಬ್ರಹ್ಮನಿಂದ ತೊಡಗಿ ಸ್ಥಾವರದವರೆಗಿರುವ ಈ ಜಗತ್ತು ಹುಟ್ಟು ಸಾವುಗಳ ದುಃಖಕ್ಕೀಡಾಗಿ ಪರವಶತೆಯಿಂದ ತೊಳಲುತ್ತಿದೆ.

೧೮೪. ಅಚಲನೂ ಸ್ಥಿರನೂ, ಉತ್ಪತ್ತಿರಹಿತನೂ, ಲೋಕಕರ್ತನೂ, ಜರಾರಹಿತನೂ, ಜಗನ್ನಾಥನೂ, ರೋಗವರ್ಜಿತನೂ ಆದ ಮಹಾದೇವನು ಈಕೆಯ ಪತಿಯಾಗುವನು.

೧೮೫. ನಿನ್ನ ಮಗಳಾದ ಪಾರ್ವತೀದೇವಿಯು ಲಕ್ಷಣರಹಿತಳೆಂದು ನಾನು ಹೇಳಿದೆನಷ್ಟೆ! ಆ ಮಾತಿನ ಅಭಿಪ್ರಾಯವನ್ನೂ ಸಹ ಸರಿಯಾಗಿ ಕೇಳು.

**ಲಕ್ಷಣಂ ದೈವಿಕೋ ಹ್ಯಂಕಃ ಶರೀರಾವಯವಾಶ್ರಯಃ ।**
**ಸರ್ವಾಯುರ್ಧನಸೌಭಾಗ್ಯಪರಿಮಾಣಪ್ರಕಾಶಕಂ ॥೧೫೬॥**

**ಅನಂತಸ್ಯಾಪ್ರಮೇಯಸ್ಯ ಸೌಭಾಗ್ಯಸ್ಯಾಸ್ಯ ಭೂಧರ ।**
**ನೈವಾಂಕೋ ಲಕ್ಷಣಾಕಾರಃ ಶರೀರೇ ಸಂವಿಧೀಯತೇ ॥೧೮೭॥**

**ಅತೋಽಸ್ಯಾ ಲಕ್ಷಣಂ ಗಾತ್ರೇ ಶೈಲ ನಾಸ್ತಿ ಮಹಾಮತೇ ।**
**ಯಥಾಹಮುಕ್ತವಾನಸ್ಯಾ ಹ್ಯುತ್ತಾನಕರತಾ ಸದಾ ॥೧೮೮॥**

**ಉತ್ತಾನೋ ವರದಃ ಪಾಣಿರೇಷ ದೇವ್ಯಾಃ ಸದೈವ ತು ।**
**ಸುರಾಸುರಮುನಿವ್ರಾತವರದೇಯಂ ಭವಿಷ್ಯತಿ ॥೧೮೯॥**

**ಯಥಾ ಪ್ರೋಕ್ತಂ ತದಾ ಪಾದೌ ಸ್ವಚ್ಛಾಯಾವ್ಯಭಿಚಾರಿಣೌ ।**
**ಅಸ್ಯಾಃ ಶೃಣು ಮಮಾತ್ರಾಪಿ ವಾಗ್ಯುಕ್ತಿಂ ಶೈಲಸತ್ತಮ ॥೧೯೦॥**

---

೧೮೬. ಲಕ್ಷಣವೆಂಬುದು ಶರೀರದ ಅವಯವದಲ್ಲಿ ಕಂಡುಬರುವ, ದೈವ ದತ್ತವಾದ ಒಂದು ಗುರುತು. ಅದು ಆಯುಸ್ಸು, ಧನ, ಸೌಭಾಗ್ಯ ಇವುಗಳ ಪರಿಮಾಣವನ್ನು ಸೂಚಿಸುತ್ತದೆ.

೧೮೭. ಓ ಹಿಮವಂತಾ, ಇವಳ ಸೌಭಾಗ್ಯವು ಅನಂತವೂ ಅಪ್ರಮೇಯವೂ ಆದುದು. ಶರೀರದಲ್ಲಿನ ಗುರುತಿನಿಂದ ಇದರ ಲಕ್ಷಣವು ಸೂಚಿತವಾಗಬೇಕಾಗಿಲ್ಲ. ಆದುದರಿಂದಲೇ, ಎಲೈ ಮಹಾಪ್ರಾಜ್ಞನೇ, ಇವಳ ಶರೀರದಲ್ಲಿ ಸೌಭಾಗ್ಯ ಸೂಚಕ ವಾದ ಲಕ್ಷಣವಿಲ್ಲವೆಂದೆನು.

೧೮೮-೧೮೯. ಯಾವಾಗಲೂ ಇವಳ ಕೈ ಮೇಲ್ಮುಖವಾಗಿರುವುದೆಂದು ಹೇಳಿದೆನಲ್ಲವೇ ? ಹೌದು. ಈ ದೇವಿಯು ಮೇಲುಮುಖವಾದ ತನ್ನ ಕೈಯಿಂದ ಸದಾ ವರವನ್ನು ಕೊಡುವಳು. ಸುರರು, ಅಸುರರು, ಮುನಿಗಳು ಮುಂತಾದ ವರಿಗೆಲ್ಲ ಈಕೆಯು ವರಪ್ರದಳಾಗುವಳು.

೧೯೦. ಗಿರಿರಾಜಾ, ಇವಳ ಪಾದಗಳು ಇವಳ ಛಾಯೆಯೊಡಗೂಡಿ ಚಲಿಸು ತ್ತಿರುವುವೆಂದು ಹೇಳಿದೆನಲ್ಲಾ ! ಅದಕ್ಕೂ ಕೂಡ ನಾನು ಹೇಳುವ ಯುಕ್ತಿಯನ್ನು ಕೇಳು.

ಚರಣೌ ಪದ್ಮಸಂಕಾಶಾವಸ್ಯಾಃ ಸ್ವಚ್ಛನಖೋಜ್ವಲೌ ।
ಸುರಾಸುರಾಣಾಂ ನಮತಾಂ ಕಿರೀಟಮಣಿಕಾಂತಿಭಿಃ ॥೯೧॥

ವಿಚಿತ್ರವರ್ಣೌ ಭಾಸಂತೌ ಸ್ವಚ್ಛಾಯಾಪ್ರತಿಬಿಂಬಿತೌ ।
ಭಾರ್ಯಾ ಜಗದ್ಗುರೋರ್ಹ್ಯೇಷಾ ವೃಷಾಂಕಸ್ಯ ಮಹೀಧರ ॥೯೨॥

ಜನನೀ ಲೋಕಧರ್ಮಸ್ಯ ಸಂಭೂತಾ ಭೂತಭಾವನೀ ।
ಶಿವೇಯಂ ಪಾವನಾಯೈವ ತ್ವತ್ಕ್ಷೇತ್ರೇ ಪಾವಕದ್ಯುತಿಃ ॥೯೩॥

ತದ್ಯಥಾ ಶೀಘ್ರಮೇವೈಷಾ ಯೋಗಂ ಯಾಯಾತ್ಪಿನಾಕಿನಾ ।
ತಥಾ ವಿಧೇಯಂ ವಿಧಿವತ್ತ್ವಯಾ ಶೈಲೇಂದ್ರಸತ್ತಮ ।
ಅತ್ಯಂತಂ ಹಿ ಮಹತ್ಕಾರ್ಯಂ ದೇವಾನಾಂ ಹಿಮಭೂಧರ ॥೯೪॥

---

೯೧. ತಾವರೆಯಂತಿರುವ ಇವಳ ಪಾದಗಳು ನಿರ್ಮಲವಾದ ಉಗುರುಗಳಿಂದ ಪ್ರಕಾಶಿಸುತ್ತಿವೆ. ಸುರರೂ ಅಸುರರೂ ನಮಸ್ಕಾರಮಾಡುವಾಗ ಅವರ ಕಿರೀಟರತ್ನಗಳ ಕಾಂತಿಯಿಂದ ಅವು ವಿಚಿತ್ರವರ್ಣವಾಗಿ ಶೋಭಿಸುವುವು. ಆಗ ಇವಳ ಛಾಯೆಯು ಅವುಗಳಲ್ಲಿ ಪ್ರತಿಬಿಂಬಿಸುವುದು.

೯೨-೯೩. ಓ ಹಿಮವಂತಾ, ಜಗದ್ಗುರುವಾದ ಪರಮೇಶ್ವರನ ಪತ್ನಿಯಿವಳು. ಲೋಕಕ್ಕೆ ಧರ್ಮವನ್ನು ತಿಳಿಸಿಕೊಡುವವಳು. ಪ್ರಾಣಿಗಳ ಸೃಷ್ಟಿಕಾರಿಣಿ. ಮಂಗಳಸ್ವರೂಪಳೂ ಅಗ್ನಿಯಂತೆ ತೇಜೋಯುಕ್ತಳೂ ಆದ ಈಕೆಯು ನಿನ್ನನ್ನು ಪವಿತ್ರನನ್ನಾಗಿ ಮಾಡುವುದಕ್ಕಾಗಿಯೇ ನಿನ್ನ ಪತ್ನಿಯ ಗರ್ಭದಲ್ಲಿ ಜನಿಸಿದಳು.

೯೪. ಎಲೈ ಪರ್ವತಸಾರ್ವಭೌಮನೇ, ಇವಳು ಪರಮೇಶ್ವರನೊಡನೆ ಬೇಗನೆ ಸಮಾಗಮವನ್ನು ಹೊಂದುವಂತೆ ನೀನು ಕ್ರಮವರಿತು ಪ್ರಯತ್ನಿಸಬೇಕು. ಹಿಮವಂತಾ, ಇದು ದೇವತೆಗಳಿಗೆ ಸಂಬಂಧಪಟ್ಟ ಬಹಳ ದೊಡ್ಡ ಕೆಲಸ.

|| ಸೂತ ಉವಾಚ ||

ಏವಂ ಶ್ರುತ್ವಾ ತು ಶೈಲೇಂದ್ರೋ ನಾರದಾತ್ಸರ್ವಮೇವ ಹಿ ।
ಆತ್ಮಾನಂ ಸ ಪುನರ್ಜಾತಂ ಮೇನೇ ಮೇನಾಪತಿಸ್ತದಾ ||೧೯೫||

ನಮಸ್ಕೃತ್ಯ ವೃಷಾಂಕಾಯ ತದಾ ದೇವಾಯ ಧೀಮತೇ ।
ಉವಾಚ ಸೋಽಪಿ ಸಂಹೃಷ್ಟೋ ನಾರದಂ ತು ಹಿಮಾಚಲಃ ||೧೯೬||

|| ಹಿಮವಾನುವಾಚ ||

ದುಸ್ತರಾನ್ನರಕಾದ್ಘೋರಾದುದ್ಧೃತೋಽಸ್ಮಿ ತ್ವಯಾ ಮುನೇ ।
ಪಾತಾಲಾದಹಮುದ್ಧೃತ್ಯ ಸಪ್ತಲೋಕಾಧಿಪಃ ಕೃತಃ ||೧೯೭||

ಹಿಮಾಚಲೋಽಸ್ಮಿ ವಿಖ್ಯಾತಸ್ತ್ವಯಾ ಮುನಿವರಾಧುನಾ ।
ಹಿಮಾಚಲೇಽಚಲಗುಣಾಂ ಪ್ರಾಪಿತೋಽಸ್ಮಿ ಸಮುನ್ನತಿಂ ||೧೯೮||

---

೧೯೫. ಸೂತಪೌರಾಣಿಕನು ಹೇಳಿದನು.—ನಾರದಮುನಿಯಿಂದ ಇದೆಲ್ಲವನ್ನೂ ಕೇಳಿ ಮೇನಾದೇವಿಯ ಪತಿಯಾದ ಹಿಮವಂತನು ತಾನು ಮರಳಿ ಹುಟ್ಟಿದಂತೆ ಭಾವಿಸಿದನು. ಎಂದರೆ ಚಿಂತೆಯೆಲ್ಲವನ್ನೂ ಬಿಟ್ಟು ಆನಂದ ಪರವಶನಾದನು.

೧೯೬. ಹಿಮವಂತನು ಆಗ ಸರ್ವಜ್ಞನಾದ ಮಹಾದೇವನಿಗೆ ನಮಸ್ಕಾರ ಮಾಡಿ ಸಂತೋಷದಿಂದ ನಾರದನಿಗಿಂತೆಂದನು.

೧೯೭. ಹಿಮವಂತನು ಹೇಳಿದನು.—ಎಲೈ ಮುನೀಂದ್ರಾ, ಪಾರಾಗುವುದು ಅಸಾಧ್ಯವೆನಿಸಿದ್ದ ಭಯಂಕರವಾದ ನರಕದಿಂದ ನನ್ನನ್ನು ನೀನು ಉದ್ಧರಿಸಿದೆ. ಪಾತಾಲದಿಂದೆತ್ತಿ ಏಳುಲೋಕಗಳ ಅಧಿಪತಿಯನ್ನಾಗಿ ಮಾಡಿದೆ.

೧೯೮. ಓ ಮುನಿವರ್ಯಾ, ಹಿಮಾಚಲವೆಂಬ ಪ್ರಖ್ಯಾತಿಯು ಈಗ ನಿನ್ನಿಂದ ನನಗೆ ಬಂದಿತು. ನನ್ನಲ್ಲಿ ಗುಣಗಳು ಸ್ಥಿರವಾಗಿ ನೆಲೆಸಿರುವುವೆಂಬ ಮೇಲ್ಮೆಯನ್ನು ನನಗೆ ಉಂಟುಮಾಡಿದೆ.

ಆನಂದದಿವಸಾಹಾರಿ ಹೃದಯಂ ಮೇಽಧುನಾ ಮುನೇ ।
ನಾಧ್ಯವಸ್ಯತಿ ಕೃತ್ಯಾನಾಂ ಪ್ರವಿಭಾಗವಿಚಾರಣಂ ॥೧೯೯॥

ಯದಿ ವಾಚಾಮಧೀಶಃ ಸ್ಯಾಂ ತ್ವದ್ಗುಣಾನಾಂ ವಿಚಾರಣೇ ॥೨೦೦॥

ಭವದ್ವಿಧಾನಾಂ ನಿಯತಮಮೋಘಂ ದರ್ಶನಂ ಮುನೇ ।
ತವಾಸ್ಮಾನ್ ಪ್ರತಿ ಚಾಪಲ್ಯಂ ವ್ಯಕ್ತಂ ಮಮ ಮಹಾಮುನೇ ॥೨೦೧॥

ಭವದ್ಭಿರೇವ ಕೃತ್ಯೋಽಹಂ ನಿವಾಸಾಯಾತ್ಮರೂಪಿಣಾಂ ।
ಮುನೀನಾಂ ದೇವತಾನಾಂ ಚ ಸ್ವಯಂ ಕರ್ತಾಪಿ ಕಲ್ಮಷಂ ॥೨೦೨॥

ತಥಾಪಿ ವಸ್ತುನ್ಯೇಕಸ್ಮಿನ್ನಾಜ್ಞಾ ಮೇ ಸಂಪ್ರದೀಯತಾಂ ।
ಇತ್ಯುಕ್ತವತಿ ಶೈಲೇಂದ್ರೇ ಸ ತದಾ ಹರ್ಷನಿರ್ಭರೇ ॥೨೦೩॥

---

೧೯೯. ಎಲೈ ನಾರದಮುನಿಯೇ, ಈ ದಿನ ನನ್ನ ಮನಸ್ಸು ಆನಂದದಿಂದ ತುಂಬಿಹೋಗಿದೆ. ಕರ್ತವ್ಯಗಳನ್ನು ಪರಿಶೀಲಿಸಿ ನಿಶ್ಚಯಮಾಡುವ ಸಾಮರ್ಥ್ಯವೂ ಕೂಡ ಅದಕ್ಕಿಲ್ಲ.

೨೦೦. ಒಂದು ವೇಳೆ ನಾನು ಬೃಹಸ್ಪತಿಯಾಗಿದ್ದರೆ ನಿನ್ನ ಗುಣಗಳನ್ನು ವಿಮರ್ಶಿಸುವ ಸಾಮರ್ಥ್ಯವು ನನಗೆ ಬರುತ್ತಿತ್ತೋ ಏನೋ !

೨೦೧. ಎಲೈ ನಾರದಮುನಿಯೇ, ನಿಮ್ಮಂತಹವರ ದರ್ಶನವು ನಿಶ್ಚಯವಾಗಿಯೂ ವ್ಯರ್ಥವಾಗತಕ್ಕುದಲ್ಲ. ನಮ್ಮ ಮೇಲೆ ನಿನಗೆ ಎಷ್ಟು ಪ್ರೀತಿಯಿದೆಯೆಂಬುದು ವ್ಯಕ್ತವಾಯಿತು.

೨೦೨. ನನ್ನಲ್ಲಿ ಎಷ್ಟೋ ದೋಷಗಳಿವೆ. ಆದರೂ ದೋಷದೂರರೂ ನಿರ್ಮಲಸ್ವರೂಪರೂ ಆದ ಮಹರ್ಷಿಗಳಿಗೂ ದೇವತೆಗಳಿಗೂ ನಾನು ವಾಸಸ್ಥಾನವಾಗಿರುವಂತೆ ನೀವೇ ಏರ್ಪಡಿಸಿರುವಿರಿ. ನನ್ನ ಮೇಲೆ ತಮಗೆ ಅಕೃತ್ರಿಮವಾದ ಅನುಗ್ರಹವು ಇದೆ. ಆದರೂ ಈಗ ನಾನು ತಮಗಾಗಿ ನೆರವೇರಿಸಬೇಕಾದ ಯಾವುದಾದರೊಂದು ಕಾರ್ಯವನ್ನು ಅಪ್ಪಣೆಕೊಡಿಸಿ.

೨೦೩–೨೦೪. ಹರ್ಷಪೂರ್ಣನಾದ ಹಿಮವಂತನು ಹೀಗೆ ಹೇಳುತ್ತಿರಲು, ನಾರದನು ತನ್ನ ಮಾತೆಲ್ಲವೂ ನಡೆಯಿತು ಎಂದು ತಿಳಿದು, " ಪ್ರಭೂ, ದೇವಕಾರ್ಯ

**ತಥಾ ಚ ನಾರದೋ ವಾಕ್ಯಂ ಕೃತಂ ಸರ್ವಮಿತಿ ಪ್ರಭೋ ।**
**ಸುರಕಾರ್ಯೇ ಯ ಏವಾರ್ಥಸ್ತವಾಪಿ ಸ ಮಹತ್ತರಃ ॥೨೦೪॥**

**ಇತ್ಯುಕ್ತ್ವಾ ನಾರದಃ ಶೀಘ್ರಂ ಜಗಾಮ ತ್ರಿದಿವಂ ಪ್ರತಿ ।**
**ಸ ಗತ್ವಾ ಶಕ್ರಭವನಮಮರಂ ಸಂದದರ್ಶ ಹ ॥೨೦೫॥**

**ತತೋಽಭಿರೂಪೇ ಸ ಮುನಿರೂಪವಿಷ್ಟೋ ಮಹಾಸನೇ ।**
**ಪೃಷ್ಟಃ ಶಕ್ರೇಣ ಪ್ರೋವಾಚ ಹಿಮಜಾಸಂಶ್ರಯಾಂ ಕಥಾಂ ॥೨೦೬॥**

**॥ ನಾರದ ಉವಾಚ ॥**

**ಸಮೂಹ್ಯ ಯತ್ತು ಕರ್ತವ್ಯಂ ತನ್ಮಯಾ ಕೃತಮೇವ ಹಿ ।**
**ಕಿಂ ತು ಪಂಚಶರಸ್ಯೈವ ಸಮಯೋಽಯಮುಪಸ್ಥಿತಃ ॥೨೦೭॥**

**ಇತ್ಯುಕ್ತೋ ದೇವರಾಜಸ್ತು ಮುನಿನಾ ಕಾರ್ಯದರ್ಶಿನಾ ।**
**ಚೂತಾಂಕುರಾಸ್ತ್ರಂ ಸಸ್ಮಾರ ಭಗವಾನ್ ಪಾಕಶಾಸನಃ ॥೨೦೮॥**

---

ವನ್ನು ನಡೆಸುವುದರಿಂದ ಆಗುವ ದೊಡ್ಡ ಪ್ರಯೋಜನವು ನಿನಗೂ ಸೇರಿದುದೇ ಆಗಿದೆ'' ಎಂದು ಹೇಳಿದನು.

೨೦೫. ನಾರದನು ಹೀಗೆ ಹೇಳಿ ತಡಮಾಡದೆ ಸ್ವರ್ಗಕ್ಕೆ ಹೋಗಿ, ದೇವೇಂದ್ರನ ಅರಮನೆಯಲ್ಲಿ ಅವನನ್ನು ಕಂಡನು.

೨೦೬. ತನಗೆ ತಕ್ಕ ದಿವ್ಯಾಸನದಲ್ಲಿ ಕುಳಿತ ಬಳಿಕ, ಇಂದ್ರನು ಪ್ರಶ್ನೆ ಮಾಡಲು ನಾರದನು ಪಾರ್ವತಿಯ ವೃತ್ತಾಂತವನ್ನು ಇಂತೆಂದು ವಿವರಿಸಿದನು.

೨೦೭. ನಾರದನು ಹೇಳಿದನು.—ಕಾರ್ಯದ ಹೊರೆಯನ್ನು ಹೊತ್ತ ಬಳಿಕ ನಾನು ಏನುಮಾಡಬೇಕೋ ಅದನ್ನು ಮಾಡಿಯೇ ಇರುವೆನು. ಆದರೆ ಈಗ ಮನ್ಮಥನಿಂದಲೇ ಕೆಲಸವಾಗುವ ಸಮಯವೊದಗಿದೆ.

೨೦೮. ಕಾರ್ಯಸಾಧನೆಯ ರೀತಿಯನ್ನು ಬಲ್ಲ ನಾರದಮುನಿಯು ಹೀಗೆ ಹೇಳಲು ಪೂಜ್ಯನಾದ ದೇವೇಂದ್ರನು ಮನ್ಮಥನನ್ನು ಸ್ಮರಿಸಿದನು.

**ಸಂಸ್ಮೃತಸ್ತು ತದಾ ಕ್ಷಿಪ್ರಂ ಸಹಸ್ರಾಕ್ಷೇಣ ಧೀಮತಾ ।**
**ಉಪತಸ್ಥೇ ರತಿಯುತಃ ಸವಿಲಾಸೋ ಝಷಧ್ವಜಃ ।**
**ಪ್ರಾದುರ್ಭೂತಂ ತು ತಂ ದೃಷ್ಟ್ವಾ ಶಕ್ರಃ ಪ್ರೋವಾಚ ಸಾದರಂ ॥೨೦೯॥**

**॥ ಶಕ್ರ ಉವಾಚ ॥**

**ಉಪದೇಶೇನ ಬಹುನಾ ಕಿಂ ತ್ವಾಂ ಪ್ರತಿವದೇ ಪ್ರಿಯಂ ।**
**ಮನೋಭವೋಽಸಿ ತೇನ ತ್ವಂ ವೇತ್ಸಿ ಭೂತಮನೋಗತಂ ॥೨೧೦॥**

**ತದ್ಯಥಾರ್ಥಕಮೇವ ತ್ವಂ ಕುರು ನಾಕಸದಾಂ ಪ್ರಿಯಂ ।**
**ಶಂಕರಂ ಯೋಜಯ ಕ್ಷಿಪ್ರಂ ಗಿರಿಪುತ್ರ್ಯಾ ಮನೋಭವ ।**
**ಸಂಯುತೋ ಮಧುನಾ ಚೈವ ಋತುರಾಜೇನ ದುರ್ಜಯ ॥೨೧೧॥**

**ಇತ್ಯುಕ್ತೋ ಮದನಸ್ತೇನ ಶಕ್ರೇಣ ಸ್ವಾರ್ಥಸಿದ್ಧಯೇ ।**
**ಪ್ರೋವಾಚ ಪಂಚಬಾಣೋಽಥ ವಾಕ್ಯಂ ಭೀತಃ ಶತಕ್ರತುಂ ॥೨೧೨॥**

---

೨೦೯. ಪ್ರಾಜ್ಞನಾದ ಇಂದ್ರನು ನೆನೆಸಿಕೊಂಡ ಕೂಡಲೇ ಮನ್ಮಥನು ರತಿಯೊಡನೆ ಕೂಡಿ ವಿಲಾಸದಿಂದ ಅಲ್ಲಿ ಬಂದು ನಿಂತನು. ಅವನನ್ನು ಕಂಡು ದೇವೇಂದ್ರನು ಆದರದಿಂದ ಇಂತು ನುಡಿದನು.

೨೧೦. ಇಂದ್ರನು ಹೇಳಿದನು.—ಹೆಚ್ಚಾಗಿ ಹೇಳುವುದರಿಂದ ಪ್ರಯೋಜನವೇನು. ಪ್ರಿಯವಾದ ವಿಷಯವೊಂದನ್ನು ನಿನಗೆ ಹೇಳುವೆನು. ನೀನು ಮನೋಭವ. ಮನಸ್ಸಿನಲ್ಲೇ ಹುಟ್ಟಿದವ. ಆದುದರಿಂದ ಪ್ರಾಣಿಗಳ ಮನಸ್ಸಿನಲ್ಲೇನಿರುವುದೆಂಬುದನ್ನು ನೀನು ತಿಳಿಯಬಲ್ಲೆ.

೨೧೧. ಆದಕಾರಣ ದೇವತೆಗಳಿಗೆ ಪ್ರಿಯಕರವಾದ ಕಾರ್ಯವೊಂದನ್ನು ನೀನು ಮಾಡಬೇಕಾಗಿದೆ. ಎಲೈ ಮನ್ಮಥಾ, ಈಶ್ವರನನ್ನು ಪಾರ್ವತಿಯೊಡನೆ ಬೇಗನೆ ಕೂಡಿಸು. ಶತ್ರುಗಳಿಗೆ ಗೆಲ್ಲಲಾಗದ ಓ ವೀರಾ, ಋತುರಾಜನಾದ ವಸಂತನನ್ನೂ ನಿನ್ನೊಡನೆ ಕರೆದುಕೊಂಡು ಹೋಗು.

೨೧೨. ತನ್ನ ಪ್ರಯೋಜನದ ಸಿದ್ಧಿಗಾಗಿ ಇಂದ್ರನು ಹೀಗೆ ಹೇಳಲು ಮನ್ಮಥನು ಭೀತನಾಗಿ ಅವನಿಗಿಂತೆಂದನು.

||ಕಾಮ ಉವಾಚ ||

ಅನಯಾ ದೇವಸಾಮಗ್ರ್ಯಾ ಮುನಿದಾನವಭೀಮಯಾ ।
ದುಃಸಾಧ್ಯಃ ಶಂಕರೋ ದೇವಃ ಕಿಂ ನ ವೇತ್ಸಿ ಜಗತ್ಪ್ರಭೋ ||೨೧೩||

ತಸ್ಯ ದೇವಸ್ಯ ವೇತ್ಥ ತ್ವಂ ಕರಣಂ ತು ಯದವ್ಯಯಂ ।
ಪ್ರಾಯಃ ಪ್ರಸಾದಃ ಕೋಪೋಽಪಿ ಸರ್ವೋ ಹಿ ಮಹತಾಂ ಮಹಾ ||೨೧೪||

ಸರ್ವೋಪಭೋಗಸಾರಾ ಹಿ ಸುಂದರ್ಯಃ ಸ್ವರ್ಗಸಂಭವಾಃ ।
ಅಧ್ಯಾಶ್ರಿತಂ ಚ ಯತ್ಸೌಖ್ಯಂ ಭವತಾ ನಷ್ಟಚೇಷ್ಟಿತಂ ||೨೧೫||

ಪ್ರಮಾದಾದಥ ವಿಭ್ರಶ್ಯೇದೀಶಂ ಪ್ರತಿ ವಿಚಿಂತ್ಯತಾಂ ।
ಪ್ರಾಗೇವ ಚೇಹ ದೃಶ್ಯಂತೇ ಭೂತಾನಾಂ ಕಾರ್ಯಸಂಭವಾಃ ||೨೧೬||

ವಿಶೇಷಂ ಕಾಂಕ್ಷತಾಂ ಶಕ್ರ ಸಾಮಾನ್ಯಾದ್ಭ್ರಂಶನಂ ಫಲಂ ।
ಶ್ರುತ್ವೈತದ್ವಚನಂ ಶಕ್ರಸ್ತಮುವಾಚಾಮರೈರ್ಯುತಃ ||೨೧೭||

---

೨೧೩. ಮನ್ಮಥನು ಹೇಳಿದನು.—ದೇವತೆಗಳ ಈ ಸಾಧನಸಂಪತ್ತಿಯು ಮುನಿಗಳಿಗೂ ದಾನವರಿಗೂ ಭಯಂಕರವಾದುದೇನೋ ನಿಜ. ಆದರೂ ಇದರಿಂದ ಪೂಜ್ಯನಾದ ಪರಮೇಶ್ವರನನ್ನು ವಶಪಡಿಸಿಕೊಳ್ಳುವುದು ಅಸಾಧ್ಯ. ಎಲೈ ಜಗತ್ಪ್ರಭುವೇ, ಇದು ನಿನಗೆ ಗೊತ್ತಿಲ್ಲವೆ ?

೨೧೪. ಆ ಭಗವಂತನ ಇಂದ್ರಿಯವು ವಿಕಾರಕ್ಕೆ ಒಳಗಾಗುವುದಿಲ್ಲವೆಂಬುದು ನಿನಗೆ ತಿಳಿದಿದೆ. ಮಹಾತ್ಮರ ಅನುಗ್ರಹವಾಗಲಿ ಕೋಪವಾಗಲಿ ಯಾವುದೂ ಸಾಮಾನ್ಯವಾದುದಲ್ಲ.

೨೧೫. ಸಕಲವಿಧ ಭೋಗಗಳಿಗೂ ಸಾಧನವಾದ ಸಾರವಸ್ತುಗಳು, ಅಪ್ಸರಸ್ತ್ರೀಯರು, ಸ್ವರ್ಗಲಭ್ಯವಾದ ಸೌಖ್ಯ ಇವೆಲ್ಲವೂ ನಿನ್ನ ಈ ಪ್ರಯತ್ನದಿಂದ ನಷ್ಟವಾಗುವುವು. ಈಶ್ವರನ ಮೇಲೆ ಇವುಗಳನ್ನು ಪ್ರಯೋಗಿಸಿದರೆ ಪ್ರಮಾದವಶದಿಂದಲಾದರೂ ಅವನು ವಿಕಾರಕ್ಕೊಳಗಾಗುವನೇ ಎಂಬುದನ್ನು ಯೋಚಿಸು.

೨೧೬-೨೧೭. ಕಾರ್ಯದ ಪರಿಣಾಮಗಳು ಪ್ರಾಣಿಗಳಿಗೆ ಮೊದಲೇ ಗೋಚರವಾಗುತ್ತವೆ. ಓ ದೇವೇಂದ್ರಾ, ವಿಶೇಷಫಲವನ್ನು ಆಪೇಕ್ಷಿಸಿದರೆ ಸಾಮಾನ್ಯ ಫಲವೂ ಕೂಡ ಕೈಬಿಟ್ಟುಹೋಗುತ್ತದೆ.'' ಈ ಮಾತನ್ನು ಕೇಳಿ ಇಂದ್ರನು ದೇವತೆಗಳೊಡಗೂಡಿ ಅವನಿಗೆ ಹೀಗೆ ಹೇಳಿದನು.

|| ಶಕ್ರ ಉವಾಚ ||

ವಯಂ ಪ್ರಮಾಣಾಸ್ತೇ ಹ್ಯತ್ರ ರತಿಕಾಂತ ನ ಸಂಶಯಃ ।
ಸಂದಂಶೇನ ವಿನಾ ಶಕ್ತಿರಯಸ್ಕಾರಸ್ಯ ನೇಷ್ಯತೇ ।
ಕಸ್ಯಚಿಚ್ಚ ಕ್ವಚಿದ್ದೃಷ್ಟಂ ಸಾಮರ್ಥ್ಯಂ ನ ತು ಸರ್ವತಃ ||೨೧೮||

ಇತ್ಯುಕ್ತಃ ಪ್ರಯಯೌ ಕಾಮಃ ಸಖಾಯಂ ಮಧುಮಾಶ್ರಿತಃ ।
ರತಿಯುಕ್ತೋ ಜಗಾಮಾಶು ಪ್ರಸ್ಥಂ ತು ಹಿಮಭೂಭೃತಃ ||೨೧೯||

ಸ ತು ತತ್ರಾಕರೋಚ್ಚಿಂತಾಂ ಕಾರ್ಯಸ್ಯೋಪಾಯಪೂರ್ವಿಕಾಂ ।
ಮಹಾರ್ಥಾ ಯೇ ಹಿ ನಿಷ್ಕಂಪಾ ಮನಸ್ತೇಷಾಂ ಸುದುರ್ಜಯಂ ||೨೨೦||

ತದಾದಾವೇವ ಸಂಕ್ಷೋಭ್ಯ ನಿಯತಂ ಸುಜಯೋ ಭವೇತ್ ।
ಸಂಸಿದ್ಧಿಂ ಪ್ರಾಪ್ನುಯಾಶ್ಚೈವ ಪೂರ್ವಂ ಸಂಶೋಧ್ಯ ಮಾನಸಂ ||೨೨೧||

---

೨೧೮. ಇಂದ್ರನು ಹೇಳಿದನು.—ಎಲೈ ಮನ್ಮಥನೇ, ಈ ಕಾರ್ಯವನ್ನು ನೀನು ಸಾಧಿಸಬಲ್ಲೆಯೆಂಬ ವಿಚಾರದಲ್ಲಿ ನನ್ನ ಮಾತನ್ನು ನಂಬು; ಇದರಲ್ಲಿ ಸಂಶಯವಿಲ್ಲ. ಇಕ್ಕಳವಿಲ್ಲದೆಹೋದರೆ ಕಮ್ಮಾರನಿಗೆ ಶಕ್ತಿಯೇ ಇಲ್ಲ. ಒಬ್ಬನಿಗೆ ಯಾವುದೋ ಒಂದು ಕಾರ್ಯದಲ್ಲಿ ಮಾತ್ರ ಸಾಮರ್ಥ್ಯವುಂಟು. ಎಲ್ಲರಿಗೂ ಎಲ್ಲ ವಿಷಯಗಳಲ್ಲೂ ಶಕ್ತಿ ಇರುವುದಿಲ್ಲ.

೨೧೯. ಇಂದ್ರನು ಹೀಗೆ ಹೇಳಲು ಮನ್ಮಥನು ಸ್ನೇಹಿತನಾದ ವಸಂತನೊಡನೆಯೂ ಪತ್ನಿಯಾದ ರತಿದೇವಿಯೊಡನೆಯೂ ಕೂಡಿ ಹಿಮವತ್ಪರ್ವತದ ತಪ್ಪಲಿಗೆ ಹೋದನು.

೨೨೦. ಅವನು ಕಾರ್ಯಸಾಧನೆಗೆ ಉಪಾಯವಾವುದೆಂದು ಮೊದಲು ಯೋಚಿಸಿದನು. "ಇಂದ್ರಿಯವಿಕಾರಗಳಿಗೆ ಯಾರು ಅಧೀನರಾಗುವುದಿಲ್ಲವೋ ಅವರೇ ಮಹಾಕಾರ್ಯವನ್ನು ಸಾಧನೆಮಾಡತಕ್ಕವರು. ಅವರ ಮನಸ್ಸು ಯಾವುದಕ್ಕೂ ಸೋಲದು.

೨೨೧. ಆದುದರಿಂದ ಪ್ರಾರಂಭದಲ್ಲೇ ಮನಸ್ಸನ್ನು ವಿಕಾರಕ್ಕೆ ಒಳಗು ಮಾಡಿದರೆ ಖಂಡಿತವಾಗಿಯೂ ಜಯಲಾಭವಾಗುವುದು. ಮೊದಲು ಮನಸ್ಸನು ಪರೀಕ್ಷೆಮಾಡಿ ಕಾರ್ಯಸಿದ್ಧಿಯನ್ನು ಪಡೆಯಬೇಕು.

ಕಥಂ ಚ ವಿವಿಧೈರ್ಭಾವೈರ್ದ್ವೇಷಾನುಗಮನಂ ವಿನಾ ।
ಕ್ರೋಧಃ ಕ್ರೂರತರಾಸಂಗಾದ್ಭೀಷಣೇರ್ಷ್ಯಾಂ ಮಹಾಸಖೀಂ ॥೨೨೨॥

ಚಾಪಲ್ಯಮೂರ್ಧ್ನಿ ವಿಧ್ವಸ್ತಧೈರ್ಯಾಧಾರಾಂ ಮಹಾಬಲಾಂ ।
ತಾಮಸ್ಯ ವಿನಿಯೋಕ್ಷ್ಯಾಮಿ ಮನಸೋ ವಿಕೃತಿಂ ಪರಾಂ ॥೨೨೩॥

ಪಿಧಾಯ ಧೈರ್ಯದ್ವಾರಾಣಿ ಸಂತೋಷಮಪಕೃಷ್ಯ ಚ ।
ಅವಗಂತುಂ ಹಿ ಮಾಂ ತತ್ರ ನ ಕಶ್ಚಿದತಿಪಂಡಿತಃ ॥೨೨೪॥

ವಿಕಲ್ಪಮಾತ್ರಾವಸ್ಥಾನೇ ವೈರೂಪ್ಯಂ ಮನಸೋ ಭವೇತ್ ।
ಪಶ್ಚಾನ್ಮೂಲಕ್ರಿಯಾರಂಭಗಂಭೀರಾವರ್ತದುಸ್ತರಂ ॥೨೨೫॥

ಹರಿಷ್ಯಾಮಿ ಹರಸ್ಯಾಹಂ ತಪಸ್ತಸ್ಯ ಸ್ಥಿರಾತ್ಮನಃ ।
ಇಂದ್ರಿಯಗ್ರಾಮಮಾವೃತ್ಯ ರಮ್ಯಸಾಧನಸಂವಿಧಿಃ ॥೨೨೬॥

---

೨೨೨-೨೨೪. ಬಗೆಬಗೆಯ ಭಾವಗಳಿಂದ ದ್ವೇಷವು ಅನುಸರಿಸಿ ಬಾರದಿದ್ದರೆ ಕ್ರೋಧವು ಹೇಗೆ ಹುಟ್ಟೀತು? ಅತಿಕ್ರೂರವಾದ ಕಾರ್ಯಗಳಲ್ಲಿ ಕೂಡಿ ಒಡನಾಡಿಯಾಗಿರುವ, ಭಯಂಕರರೂಪವಾದ ಈರ್ಷ್ಯೆಯೇ ಈ ಕೋಪದ ನೆಚ್ಚಿನ ಗೆಳತಿ. ಇದು ವಿಧವಿಧವಾದ ಚಾಪಲ್ಯವನ್ನು ಹುಟ್ಟಿಸಿ ಧೈರ್ಯವನ್ನು ಅಡಗಿಸುವುದು. ಬಹು ಬಲಯುತವಾದುದು. ಮನಸ್ಸಿಗೆ ವಿಕಾರವನ್ನು ಹುಟ್ಟಿಸುವುದರಲ್ಲಿ ಎಲ್ಲಕ್ಕಿಂತಲೂ ಮೊದಲನೆಯದು. ಧೈರ್ಯದ ಸಾಧನಗಳೆಲ್ಲವನ್ನೂ ಅಡಗಿಸಿ, ಸಂತೋಷವನ್ನು ದೂರಕ್ಕೆ ಹೊರಡಿಸಿ ಈರ್ಷ್ಯೆಯನ್ನು ಈ ಮಹಾದೇವನ ಮೇಲೆ ಹೇಗೆ ಪ್ರಯೋಗಿಸಲಿ? ಇರಲಿ! ಈ ಕಾರ್ಯದಲ್ಲಿ ನಾನು ಪ್ರವರ್ತಿಸಿದರೆ ನನ್ನ ಮರ್ಮವನ್ನು ತಿಳಿಯಲು ಯಾರಿಗೂ ತಕ್ಕಷ್ಟು ಪಾಂಡಿತ್ಯವಿಲ್ಲ.

೨೨೫. ಸಂದೇಹವು ತಲೆದೋರಿದರೆ ಸಾಕು; ಮನಸ್ಸು ವೈರೂಪ್ಯವನ್ನು ಪಡೆಯುವುದು. ಬಳಿಕ ಮೊದಲು ಪ್ರಾರಂಭಿಸಿದ ಕಾರ್ಯವನ್ನು ಮುಂದುವರಿಸಲಾರದೆ ಆಳವಾದ ನೀರಿನ ಸುಳಿಯಲ್ಲಿ ಸಿಕ್ಕಿಕೊಂಡಂತೆ ಅಲ್ಲೇ ಸುತ್ತಿಸುತ್ತಿ ತೊಳಲುತ್ತಿರುವುದು.

೨೨೬. ನಾನು ರಮಣೀಯವಾದ ಸಾಧನವಿಧಾನಗಳನ್ನು ಸಂಗ್ರಹಿಸಿಕೊಂಡು, ಜಿತೇಂದ್ರಿಯನಾದ ಪರಮೇಶ್ವರನ ಇಂದ್ರಿಯಗಳನ್ನು ಆವರಿಸಿ ಅವನ ತಪಸ್ಸಿಗೆ ಭಂಗವನ್ನು ತರುವೆನು.”

ಚಿಂತಯಿತ್ವೈವ ಮದನೋ ಭೂತಭರ್ತುಸ್ತದಾಶ್ರಮಂ ।
ಜಗಾಮ ಜಗತೀಸಾರಂ ಸರಲದ್ರುಮವೇದಿಕಂ ॥೨೨೭॥

ಶಾಂತಸತ್ವ ಸಮಾಕೀರ್ಣಮಚಲಪ್ರಾಣಿಸಂಕುಲಂ ।
ನಾನಾಪುಷ್ಪಲತಾಜಾಲಂ ಗಗನಸ್ಥಗಣೇಶ್ವರಂ ॥೨೨೮॥

ನಿರ್ವ್ಯಗ್ರವೃಷಲಾಧ್ಯುಷ್ಟನೀಲಶಾದ್ವಲಸಾನುಕಂ ।
ತತ್ರಾಪಶ್ಯತ್ತ್ರಿನೇತ್ರಸ್ಯ ರಮ್ಯಂ ಕಂಚಿದ್ದ್ವಿತೀಯಕಂ ॥೨೨೯॥

ವೀರಕಂ ಲೋಕವೀರೇಶಮೀಶಾನಸದೃಶದ್ಯುತಿಂ ।
ಯಕ್ಷಕುಂಕುಮಕಿಂಜಲ್ಕಪುಂಜಪಿಂಗಜಟಾಸಟಂ ॥೨೩೦॥

ವೇತ್ರಪಾಣಿನಮವ್ಯಗ್ರ ಮುಗ್ರಭೋಗೀಂದ್ರಭೂಷಣಂ ।
ತತೋ ನಿಮೀಲಿತೋನ್ನಿದ್ರಪದ್ಮಪತ್ರಾಭಲೋಚನಂ ॥೨೩೧॥

---

೨೨೭. ಮನ್ಮಥನು ಹೀಗೆ ಯೋಚಿಸುತ್ತ ಜಗತ್ತಿನಲ್ಲಿ ಸಾರಭೂತವಾದ, ಸರಲವೃಕ್ಷದ ವೇದಿಕೆಯಿಂದ ಕೂಡಿದ ಮಹಾದೇವನ ಆ ಆಶ್ರಮಕ್ಕೆ ಹೋದನು.

೨೨೮. ಹಿಮಾಚಲದ ಆ ಪುಣ್ಯಸ್ಥಲದಲ್ಲಿ ಸಾದುಸ್ವಭಾವದ ಪ್ರಾಣಿಗಳೂ, ಘಾತುಕಸ್ವಭಾವದ ದುಷ್ಟಮೃಗಗಳೂ ಶಾಂತಗುಣದಿಂದ ಕೂಡಿದ್ದುವು. ಅವು ಒಂದರೊಡನೊಂದು ಸ್ನೇಹದಿಂದ ಬೆರೆತಿದ್ದುವು. ಬಗೆಬಗೆಯ ಹೂಬಳ್ಳಿಗಳು ದಟ್ಟವಾಗಿ ಬೆಳೆದಿದ್ದುವು. ಪ್ರಮಥಗಣಗಳು ಆಕಾಶದಲ್ಲಿ ನೆರೆದಿದ್ದುವು.

೨೨೯. ಹಸುರು ಹುಲ್ಲಿನಿಂದ ಹಚ್ಚಗಿದ್ದ ತಪ್ಪಲಿನಲ್ಲಿ ಪರಮೇಶ್ವರನ ವಾಹನವಾದ ವೃಷಭವು ನಿರ್ಲಕ್ಷ್ಯವಾಗಿ ನಿಂತಿತ್ತು: ಅಲ್ಲಿ ಮಹೇಶ್ವರನ ಪರಿಚರನೊಬ್ಬನು ಗೋಚರಿಸಿದನು.

೨೩೦. ಲೋಕೈಕವೀರನೂ, ತೇಜಸ್ಸಿನಲ್ಲಿ ಈಶ್ವರನಿಗೆ ಸದೃಶನೂ ಆದ ವೀರಕನೆಂಬುವನೇ ಆತನು. ಅವನ ಜಟಾಭಾರವು ಯಕ್ಷಕುಂಕುಮದಂತೆಯೂ ತಾವರೆಯ ಕೇಸರದಂತೆಯೂ ಹೊಂಬಣ್ಣವಾಗಿತ್ತು. ಉಗ್ರವಾದ ಸರ್ಪವೇ ಅವನ ಭೂಷಣ. ಆತನು ಕೈಯಲ್ಲಿ ಕೋಲನ್ನು ಹಿಡಿದು ಜಾಗರೂಕನಾಗಿ ನಿಂತಿದ್ದನು.

೨೩೧–೨೩೨. ಬಳಿಕ ಮನ್ಮಥನು ಮಹೇಶ್ವರನನ್ನು ಕಂಡನು. ಅವನು ಅರಳಿದ ತಾವರೆಯ ಎಸಳಿನಂತೆ ಕಾಂತಿಯುಕ್ತವಾಗಿದ್ದ ಕಣ್ಣುಗಳನ್ನು ಅರೆಮುಚ್ಚಿ

ಪ್ರೇಕ್ಷಮಾಣಮೃಜುಸ್ಥಾನಂ ನಾಸಿಕಾಗ್ರಂ ಸುಲೋಚನೈಃ ।
ಶ್ರವಸ್ತರಸಸಿಂಹೇಂದ್ರಚರ್ಮಲಂಬೋತ್ತರೀಯಕಂ ॥೨೩೨॥

ಶ್ರವಣಾಹಿಫಲನ್ಮುಕ್ತನಿಶ್ವಾಸಾನಲಪಿಂಗಲಂ ।
ಪ್ರೇಂಖತ್ಕಪಾಲಪರ್ಯಂತತುಂಬಿಲಂಬಿಜಟಾಚಯಂ ॥೨೩೩॥

ಕೃತವಾಸುಕಿಪರ್ಯಂತನಾಭಿಮೂಲನಿವೇಶಿತಂ ।
ಬಹ್ಮಾಂಜಲಿಸ್ಥಪುಚ್ಛಾಗ್ರನಿಬದ್ಧೋರಗಭೂಷಣಂ ॥೨೩೪॥

ದದರ್ಶ ಶಂಕರಂ ಕಾಮಃ ಕ್ರಮಪ್ರಾಪ್ತಾಂತಿಕಂ ಶನೈಃ ।
ತತೋ ಭ್ರಮರಝುಂಕಾರಮಾಲಂಬಿದ್ರುಮಸಾನುಕಂ ॥೨೩೫॥

ಪ್ರವಿಷ್ಟಃ ಕರ್ಣರಂಧ್ರೇಣ ಭವಸ್ಯ ಮದನೋ ಮನಃ ।
ಶಂಕರಃ ಸ್ವನಮಾಕರ್ಣ್ಯ ಮಧುರಂ ಮದನಾಶ್ರಯಂ ॥೨೩೬॥

---

ಮೂಗಿನ ತುದಿಯನ್ನೇ ದಿಟ್ಟಿಸಿ ನೋಡುತ್ತಿದ್ದನು. ಬಲು ಅಂದವಾದ ಸಿಂಹದ ಚರ್ಮವನ್ನು ಉತ್ತರೀಯವಾಗಿ ಹೊದೆದಿದ್ದನು. ಅದು ಜೋಲಾಡುತ್ತಿತ್ತು.

೨೩೩. ಅವನು ಕರ್ಣಾಭರಣವಾಗಿ ತೊಟ್ಟಿದ್ದ ಸರ್ಪಗಳ ನಿಶ್ವಾಸಾಗ್ನಿಯಿಂದ ಹೊಂಬಣ್ಣವಾಗಿ ತೋರುತ್ತಿದ್ದನು.

೨೩೪. ನಾಭಿಮೂಲದಲ್ಲಿ ವಾಸುಕಿಯನ್ನು ಕಟಿಸೂತ್ರದಂತೆ ಧರಿಸಿದ್ದನು. ಬ್ರಹ್ಮಾಂಜಲಿಯ ಬಳಿಯಲ್ಲಿ ಎಂದರೆ ಕೈಮಣಿಕಟ್ಟಿನಲ್ಲಿ ಸರ್ಪಗಳನ್ನು ಬಾಲವು ಮುಂದೆ ಬರುವಂತೆ ಅಲಂಕಾರಕ್ಕಾಗಿ ಸುತ್ತಿಕೊಂಡಿದ್ದನು.

೨೩೫. ಈ ರೀತಿಯಾದ ಶಂಕರನನ್ನು ಮನ್ಮಥನು ನೋಡಿ ಮೆಲ್ಲಗೆ ಕ್ರಮ ಕ್ರಮವಾಗಿ ಸಮೀಪಕ್ಕೆ ಹೋದನು. ತಪ್ಪಲಿನ ಮರಗಳಲ್ಲಿ ದುಂಬಿಗಳು ಝೇಂಕಾರ ಮಾಡುತ್ತಿದ್ದುವು. ಅದೇ ಸಮಯವನ್ನು ನೋಡಿ ಕಿವಿಯ ರಂಧ್ರದ ಮೂಲಕ ಅವನು ಈಶ್ವರನ ಮನಸ್ಸನ್ನು ಹೊಕ್ಕನು.

೨೩೬. ಕಾಮವಿಕಾರವನ್ನುಂಟುಮಾಡುವ ಆ ಮಧುರಧ್ವನಿಯನ್ನು ಕೇಳಿ, ಶಂಕರನು ಮನಸ್ಸಿನಲ್ಲಿ ಅನುರಾಗಕ್ಕೆ ಎಡೆಗೊಟ್ಟು ತನ್ನ ಪ್ರೀತಿಪಾತ್ರಳಾದ ದಾಕ್ಷಾಯಣಿಯನ್ನು ಸ್ಮರಿಸಿಕೊಂಡನು.

ಸಸ್ಮಾರ ದಕ್ಷದುಹಿತಾಂ ದಯಿತಾಂ ರಕ್ತಮಾನಸಃ ।
ತತಃ ಸಾ ತಸ್ಯ ಶನಕೈಸ್ತಿರೋಭೂಯಾತಿನಿರ್ಮಲಾ ॥೨೩೭॥

ಸಮಾಧಿಭವನೇ ತಸ್ಥೌ ಲಕ್ಷ್ಮೀಃ ಪ್ರತ್ಯಕ್ಷರೂಪಿಣೀ ।
ತತಸ್ತನ್ಮಯತಾಂ ಯಾತಃ ಪ್ರತ್ಯಾಹಪಿಹಿತಾಶಯಃ ॥೨೩೮॥

ವಶಿತ್ವೇನ ಬುಬೋಧೇಶೋ ವಿಕೃತಿಂ ಮದನಾತ್ಮಿಕಾಂ ।
ಈಷತ್ಕೋಪಸಮಾವಿಷ್ಟೋ ಧೈರ್ಯಮಾಲಂಬ್ಯ ಧೂರ್ಜಟಿಃ ॥೨೩೯॥

ನಿರಾಸೇ ಮದನಸ್ಥಿತ್ಯಾ ಯೋಗಮಾಯಾಸಮಾವೃತಃ ।
ಸ ತಯಾ ಮಾಯಯಾವಿಷ್ಟೋ ಜಜ್ವಾಲ ಮದನಸ್ತತಃ ॥೨೪೦॥

ಇಚ್ಛಾಶರೀರೋ ದುರ್ಜೇಯೋ ರೋಷದೋಷಮಹಾಶ್ರಯಃ ।
ಹೃದಯಾನ್ನಿರ್ಗತಃ ಸೋಽಥ ವಾಸನಾವ್ಯಸನಾತ್ಮಕಃ ॥೨೪೧॥

---

೨೩೭-೨೩೮. ಬಳಿಕ ಅತಿನಿರ್ಮಲರೂಪಳಾದ ಆಕೆಯು ಅದೃಶ್ಯಳಾಗಿ ಮೆಲ್ಲಗೆ ಬಂದು ಅವನ ಏಕಾಗ್ರಚಿತ್ತದಲ್ಲಿ ನೆಲಸಿದಳು ಅವನ ಪಾಲಿಗೆ ಅವಳು ಪ್ರತ್ಯಕ್ಷರೂಪಳಾದ ಲಕ್ಷ್ಮಿಯೇ ಆದಳು. ಆಗ ಕಾಮನು ಒಡ್ಡಿದ ವಿಘ್ನದಿಂದ ಮಹಾದೇವನ ಯೋಗಸಮಾಧಿ ದೂರ ಸರಿಯಿತು. ಅವನು ಪ್ರೇಯಸೀಮಯನಾದನು.

೨೩೯. ಜಿತೇಂದ್ರಿಯನಾದ ಕಾರಣ ಈಶ್ವರನಿಗೆ ಅದು ಕಾಮವಿಕಾರವೆಂದು ಗೊತ್ತಾಯಿತು. ಅವನು ಧೈರ್ಯವನ್ನು ತಂದುಕೊಂಡು ಸ್ವಲ್ಪಮಟ್ಟಿಗೆ ಕುಪಿತನಾದನು.

೨೪೦. ಮನಸ್ಸಿನಲ್ಲಿ ನೆಲಸಿದ್ದಕಾರಣ ಅವನನ್ನು ಓಡಿಸುವ ಸಲುವಾಗಿ ಈಶ್ವರನು ಯೋಗಮಾಯೆಯೊಡಗೂಡಿದನು. ಅದರ ಆಕ್ರಮಣಕ್ಕೆ ತುತ್ತಾಗಿ ಮದನನು ಉರಿದುಹೋದನು.

೨೪೧-೨೪೨. ಇಷ್ಟಬಂದ ದೇಹವನ್ನು ತಾಳಬಲ್ಲವನೂ, ಜಯಿಸುವುದಕ್ಕೆ ಅಸಾಧ್ಯನೂ, ರೋಷವೆಂಬ ದೋಷಕ್ಕೆ ಮುಖ್ಯಾಶ್ರಯನೂ, ವಾಸನಾರೂಪವಾದ ವ್ಯಸನವನ್ನು ಉಂಟುಮಾಡುವ ಸ್ವಭಾವದವನೂ ಆದ ಮನ್ಮಥನು ಈಶ್ವರನ

ಬಹಿಃಸ್ಥಲಂ ಸಮಾಲಂಬ್ಯ ಹ್ಯುಪತಸ್ಥೌ ಝಷಧ್ವಜಃ।
ಅನುಯಾತೋಽಥ ಹೃದ್ಯೇನ ಮಿತ್ರೇಣ ಮಧುನಾ ಸಹ॥ ॥೨೪೨॥

ಸಹಕಾರತರೌ ದೃಷ್ಟ್ವಾ ಮೃದುಮಾರುತನಿರ್ಧುತಂ।
ಸ್ತಬಕಂ ಮದನೋ ರಮ್ಯಂ ಹರವಕ್ಷಸಿ ಸತ್ವರಂ ॥೨೪೩॥

ಮುಮೋಚ ಮೋಹನಂ ನಾಮ ಮಾರ್ಗಣಂ ಮಕರಧ್ವಜಃ।
ಶಿವಸ್ಯ ಹೃದಯೇ ಶುದ್ಧೇ ನಾಶಶಾಲೀ ಮಹಾಶರಃ ॥೨೪೪॥

ಪಪಾತ ಪರುಷಪ್ರಾಂಶುಃ ಪುಷ್ಪಬಾಣೊ ವಿಮೋಹನಃ।
ತತಃ ಕರಣಸಂದೇಹೋ ವಿದ್ಧಸ್ತು ಹೃದಯೇ ಭವಃ ॥೨೪೫॥

ಬಭೂವ ಭೂಧರೌಪಮ್ಯಧೈರ್ಯೋಽಪಿ ಮದನೋನ್ಮುಖಃ।
ತತಃ ಪ್ರಭುತ್ವಾದ್ಭಾವಾನಾಂ ನಾವೇಶಂ ಸಮುಪದ್ಯತ ॥೨೪೬॥

---

ಹೃದಯದಿಂದ ಹೊರಟು ಹೊರಗಡೆ ಬಯಲಿನಲ್ಲಿ ಬಂದು ನಿಂತನು. ಅವನ ಆಪ್ತ ಮಿತ್ರನಾದ ವಸಂತನೂ ಅವನ ಜೊತೆಯಲ್ಲಿಯೇ ಬಂದನು.

೨೪೩. ಮನ್ಮಥನು ಮಾವಿನ ಮರದಲ್ಲಿ ಮೆಲ್ಗಾಳಿಯಿಂದ ಅಲ್ಲಾಡುತ್ತಿದ್ದ ಹೂಗೊಂಚಲನ್ನು ಕಂಡನು. ಮೋಹನವೆಂಬ ಆ ಪುಷ್ಪಬಾಣವನ್ನು ಈಶ್ವರನ ಎದೆಯ ಮೇಲೆ ಬಿಟ್ಟನು.

೨೪೪. ನಾಶಮಾಡುವ ಸ್ವಭಾವವುಳ್ಳದ್ದೂ, ಕಠಿಣವೂ, ದೀರ್ಘವೂ, ಮೋಹಕರವೂ ಆದ ಬಾಣವು ಶಿವನ ನಿರ್ಮಲವಾದ ಹೃದಯಲ್ಲಿ ಬಿದ್ದಿತು.

೨೪೫. ಈಶ್ವರನು ಪರ್ವತದಂತೆ ಮಹಾಧೀರನು. ಆದರೂ ಮನ್ಮಥನ ಬಾಣವು ಎದೆಗೆ ನಾಟಿಕೊಳ್ಳಲು ಅವನ ಇಂದ್ರಿಯಗಳ ಶಕ್ತಿ ಕುಗ್ಗಿತು. ಅವನು ಕಾಮಪರವಶನಾದನು.

೨೪೬. ಬಗೆಬಗೆಯ ಮನೋಭಾವಗಳ ಅಧೀಶ್ವರನಾದುದರಿಂದ ಪರಮೇಶ್ವರನು ಪುಷ್ಪಬಾಣರೂಪವಾದ ಬಾಹ್ಯವಿಘ್ನಗಳು ಎಷ್ಟು ಬಂದರೂ ಮೂರ್ಛೆಗೊಳ್ಳಲಿಲ್ಲ.

ಬಾಹ್ಯಂ ಬಹು ಸಮಾಸಾದ್ಯ ಪ್ರತ್ಯೂಹಪ್ರಸವಾತ್ಮಕಂ ।
ತತಃ ಕೋಪಾನಲೋದ್ಭೂತಘೋರಹುಂಕಾರಭೀಷಣೇ ॥೨೪೭॥

ಬಭೂವ ವದನೇ ನೇತ್ರಂ ತೃತೀಯಮನಲಾಕುಲಂ ।
ರುದ್ರಸ್ಯ ರೌದ್ರವಪುಷೋ ಜಗತ್ಸಂಹಾರಭೈರವಂ ॥೨೪೮॥

ತದಂತಿಕಸ್ಥೇ ಮದನೇ ವ್ಯಸ್ಫಾರಯತ ಧೂರ್ಜಟಿಃ ।
ತನ್ನೇತ್ರವಿಸ್ಫುಲಿಂಗೇನ ಕ್ರೋಶತಾಂ ನಾಕವಾಸಿನಾಂ ॥೨೪೯॥

ಗಮಿತೋ ಭಸ್ಮಸಾತ್ತೂರ್ಣಂ ಕಂದರ್ಪಃ ಕಾಮಿದರ್ಪಕಃ ।
ಸ ತು ತಂ ಭಸ್ಮಸಾತ್ಕೃತ್ವಾ ಹರನೇತ್ರೋದ್ಭವೋಽನಲಃ ॥೨೫೦॥

ವ್ಯಜೃಂಭತ ಜಗದ್ದಗ್ಧುಂ ಜ್ವಾಲಾಹುಂಕಾರಘಸ್ಮರಃ ।
ತತೋ ಭವೋ ಜಗದ್ಧೇತೋರ್ವ್ಯಭಜಜ್ಜಾತವೇದಸಂ ॥೨೫೧॥

ಸಹಕಾರೇ ಮಧೌ ಚಂದ್ರೇ ಸುಮನಸ್ಸು ಪರೇಷ್ವಪಿ ।
ಭೃಂಗೇಷು ಕೋಕಿಲಾಸ್ಯೇಷು ವಿಭಾಗೇನ ಸ್ಮರಾನಲಂ ॥೨೫೨॥

---

೨೪೭-೨೪೮. ತರುವಾಯ ಉಗ್ರರೂಪನಾದ ಈಶ್ವರನ ಮುಖವು ಕೋಪಾಗ್ನಿಯಿಂದ ಕೆಂಪೇರಿ, ಹುಂಕಾರಮಾಡುತ್ತ ಭಯಂಕರವಾಯಿತು. ಮೂರನೆಯ ಹಣೆಗಣ್ಣು ಬೆಂಕಿಯಿಂದ ತುಂಬಿ ಪ್ರಪಂಚವನ್ನು ಸಂಹಾರಮಾಡುವಂತೆ ಭೀಕರವಾಗಿ ತೋರಿತು.

೨೪೯. ಈಶ್ವರನು ಸಮೀಪದಲ್ಲಿದ್ದ ಮನ್ಮಥನ ಮೇಲೆ ಅದನ್ನು ಕೊಡಹಿದನು. ಕಾಮಿಗಳಿಗೆ ದರ್ಪವನ್ನು ಹುಟ್ಟಿಸುವ ಮನ್ಮಥನು ಆ ಉರಿಗಣ್ಣಿನ ಕಿಡಿಯಿಂದ ಬೇಗನೆ ಉರಿದು ಬೂದಿಯಾದನು. ದೇವತೆಗಳು ಕಿರಿಚಿಕೊಂಡರು.

೨೫೦. ಈಶ್ವರನ ನೇತ್ರಜ್ವಾಲೆಯು ಮನ್ಮಥನನ್ನು ಬೂದಿಮಾಡಿ, ಉರಿಗಳನ್ನು ಕೆದರಿ ಅಬ್ಬರಿಸುತ್ತ ಜಗತ್ತನ್ನು ಸುಡಬೇಕೆಂದು ಬೆಳೆಯುತ್ತಿತ್ತು.

೨೫೧-೨೫೨. ಅನಂತರ ಈಶ್ವರನು ಪ್ರಪಂಚದ ರಕ್ಷಣೆಯ ಸಲುವಾಗಿ ಆ ಮನ್ಮಥಾಗ್ನಿಯನ್ನು ಮಾವು, ವಸಂತರ್ತು, ಚಂದ್ರ, ಅಂದವಾದ ಹೂಗಳು, ದುಂಬಿ, ಕೋಗಿಲೆಯ ಮುಖ ಇವುಗಳಲ್ಲಿ ವಿಭಾಗಿಸಿ ಇಟ್ಟನು.

ಸ ಬಾಹ್ಯಾಂತರವಿದ್ಧೇನ ಹರೇಣ ಸ್ಮರಮಾರ್ಗಣಃ ।
ರಾಗಸ್ನೇಹಸಮಿದ್ಧಾಂತರ್ಧಾವಂಸ್ತೀವ್ರಹುತಾಶನಃ ||೨೫೩||

ವಿಭಕ್ತಲೋಕಸಂಕ್ಷೋಭಕರೋ ದುರ್ವಾರಜೃಂಭಿತಃ ।
ಸಂಪ್ರಾಪ್ಯ ಸ್ನೇಹಸಂಪೃಕ್ತಂ ಕಾಮಿನಾಂ ಹೃದಯಂ ಕಿಲ ||೨೫೪||

ಜ್ವಲತ್ಯಹರ್ನಿಶಂ ಭೀಮೋ ದುಶ್ಚಿಕಿತ್ಸ್ಯಮುಖಾತ್ಮಕಃ ।
ವಿಲೋಕ್ಯ ಹರಹುಂಕಾರಜ್ವಾಲಾಭಸ್ಮಕೃತಂ ಸ್ಮರಂ ||೨೫೫||

ವಿಲಲಾಪ ರತಿಃ ಕ್ರೂರಂ ಬಂಧುನಾ ಮಧುನಾ ಸಹ ।
ತತೋ ವಿಲಪ್ಯ ಬಹುಶೋ ಮಧುನಾ ಪರಿಸಾಂತ್ವಿತಾ ||೨೫೬||

ಜಗಾಮ ಶರಣಂ ದೇವಮಿಂದುಮೌಲಿಂ ತ್ರಿಲೋಚನಂ ।
ಭೃಂಗಾನುಯಾತಾಂ ಸಂಗೃಹ್ಯ ಪುಷ್ಪಿತಾಂ ಸಹಕಾರಜಾಂ ||೨೫೭||

---

೨೫೩-೨೫೪. ಅಂತರಂಗದಲ್ಲೂ ಬಹಿರಂಗದಲ್ಲೂ ಈಶ್ವರನನ್ನು ಇರಿದ ಮನ್ಮಥನ ಬಾಣವು ರಾಗಸ್ನೇಹಗಳನ್ನು ಉಜ್ವಲಗೊಳಿಸುತ್ತ, ತೀಕ್ಷ್ಣವಾದ ಅಗ್ನಿಯ ರೂಪವನ್ನು ತಾಳಿತು. ಬೇರೆಬೇರೆ ಕಡೆಗಳಲ್ಲಿ ಪರಮೇಶ್ವರನು ಅದನ್ನು ವಿಭಾಗಿಸಿ ಇಟ್ಟ ಬಳಿಕ ಅದು ಲೋಕದ ಮನಸ್ಸಿನಲ್ಲಿ ವಿಕಾರವನ್ನು ಹುಟ್ಟಿಸುತ್ತ ಅಡಗಿಸುವುದಕ್ಕೆ ಅಸಾಧ್ಯವಾಗಿ ಬೆಳೆಯಿತು. ಅನುರಾಗದಿಂದ ಕೂಡಿದ ಕಾಮಿಗಳ ಮನಸ್ಸನ್ನು ಆಶ್ರಯಿಸಿ ಅದು ಹಗಲೂ ರಾತ್ರಿಯೂ ಭಯಂಕರವಾಗಿ ಉರಿಯುತ್ತಿದೆ. ಅದಕ್ಕೆ ಚಿಕಿತ್ಸೆಯೇ ಇಲ್ಲದಂತಾಗಿದೆ.

೨೫೫. ಈಶ್ವರನ ಹುಂಕಾರದಿಂದೆದ್ದ ಅಗ್ನಿಗೆ ತುತ್ತಾಗಿ ಮನ್ಮಥನು ಬೂದಿಯಾದುದನ್ನು ಕಂಡು ಅವನ ಪತ್ನಿಯಾದ ರತಿಯು ಬಂಧುವಾದ ವಸಂತನೊಡಗೂಡಿ ಬಹು ದೈನ್ಯದಿಂದ ಗೋಳಾಡಿದಳು.

೨೫೬. ಎಷ್ಟೋ ಹೊತ್ತು ಅತ್ತಮೇಲೆ ವಸಂತನ ಮಾತಿನಿಂದ ಸಮಾಧಾನ ಹೊಂದಿ, ಚಂದ್ರಶೇಖರನೂ, ತ್ರಿಲೋಚನನೂ ಆದ ಮಹಾದೇವನನ್ನು ಅವಳು ಶರಣುಹೊಕ್ಕಳು.

೨೫೭-೨೫೯. ಅವಳು ದುಂಬಿಗಳು ಅನುಸರಿಸಿ ಬರುವ, ಹೂಬಿಟ್ಟ ಸಿಹಿ ಮಾವಿನ ಬಳ್ಳಿಯನ್ನು ಕೈಯಲ್ಲಿ ಪವಿತ್ರಕ್ಕೆ ಪ್ರತಿಯಾಗಿ ಇಟ್ಟುಕೊಂಡಳು. ಹೆಣ್ಣು

ಲತಾಂ ಪವಿತ್ರಕಸ್ಥಾನೇ ಪಾಣೌ ಪರಭೃತಾಂ ಸಖೀಂ ।
ನಿರ್ಬಧ್ಯ ತು ಜಟಾಜೂಟಂ ಕುಟೀಲ್ಯೈರಲಕ್ಕೈ ರತಿಃ ॥೨೫೮॥

ಉದ್ಧೂಲ್ಯ ಗಾತ್ರಂ ಶುಭ್ರೇಣ ಹೃದ್ಯೇನ ಸ್ಮರಭಸ್ಮನಾ ।
ಜಾನುಭ್ಯಾಮವನೀಂ ಗತ್ವಾ ಪ್ರೋವಾಚೇಂದುವಿಭೂಷಣಂ ॥೨೫೯॥

॥ ರತಿರುವಾಚ ॥

ನಮಃ ಶಿವಾಯಾಸ್ತು ನಿರಾಮಯಾಯ
ನಮಃ ಶಿವಾಯಾಸ್ತು ಮನೋಮಯಾಯ ।
ನಮಃ ಶಿವಾಯಾಸ್ತು ಸುರಾರ್ಚಿತಾಯ
ತುಭ್ಯಂ ಸದಾ ಭಕ್ತಕೃಪಾಪರಾಯ ॥೨೬೦॥

ನಮೋ ಭವಾಯಾಸ್ತು ಭವೋದ್ಭವಾಯ
ನಮೋಽಸ್ತು ತೇ ಧ್ವಸ್ತಮನೋಭವಾಯ ।
ನಮೋಽಸ್ತು ತೇ ಗೂಢಮಹಾವ್ರತಾಯ
ನಮೋಽಸ್ತು ಮಾಯಾಗಹನಾಶ್ರಿತಾಯ ॥೨೬೧॥

---

ಕೋಗಿಲೆಯೇ ಅವಳ ಗೆಳತಿಯಾದಳು. ವಕ್ರವಾದ ಮುಂಗುರುಳುಗಳಿಂದ ಜಟಾಪಾಶವನ್ನು ಕಟ್ಟಿದಳು. ಪ್ರಾಣಪ್ರಿಯನಾದ ಮನ್ಮಥನ ಶುಭ್ರವಾದ ಭಸ್ಮವನ್ನು ಮೈಗೆ ಹಚ್ಚಿಕೊಂಡಳು. ಮಂಡಿಯನ್ನೂರಿ ನೆಲದ ಮೇಲೆ ಕುಳಿತು ಪರಮೇಶ್ವರನಿಗೆ ಹೀಗೆ ಮೊರೆಯಿಟ್ಟಳು.

೨೬೦. ರತಿ ಹೇಳಿದಳು.—ರೋಗರಹಿತನಾದ ಶಿವನಿಗೆ ನಮಸ್ಕಾರ. ಮನೋಮಯನಾದ ಶಿವನಿಗೆ ನಮಸ್ಕಾರ. ದೇವತೆಗಳಿಂದ ಪೂಜೆಯನ್ನು ಕೈಗೊಳ್ಳುವ ಶಿವನಿಗೆ ನಮಸ್ಕಾರ. ಯಾವಾಗಲೂ ಭಕ್ತರಿಗೆ ದಯೆ ತೋರುವುದರಲ್ಲಿ ಆಸಕ್ತನಾದ ನಿನಗೆ ನಮಸ್ಕಾರ.

೨೬೧. ಜಗತ್ತನ್ನು ನಿರ್ಮಾಣಮಾಡಿದ ಪರಮೇಶ್ವರನಿಗೆ ನಮಸ್ಕಾರ. ಮನ್ಮಥ ಸಂಹಾರಕನಾದ ನಿನಗೆ ನಮಸ್ಕಾರ. ಇತರರಿಗೆ ತಿಳಿಯದಂತೆ ಮಹಾವ್ರತವನ್ನು ಆಚರಿಸುತ್ತಿರುವ ನಿನಗೆ ನಮಸ್ಕಾರ. ದುರ್ಜ್ಞೇಯವಾದ ಮಾಯೆಯಿಂದ ಕೂಡಿದಾತನಿಗೆ ನಮಸ್ಕಾರ.

ನಮೋಽಸ್ತು ಶರ್ವಾಯ ನಮಃ ಶವಾಯ
ನಮೋಽಸ್ತು ಸಿದ್ಧಾಯ ಪುರಾತನಾಯ ।
ನಮೋಽಸ್ತು ಕಾಲಾಯ ನಮಃ ಕಲಾಯ
ನಮೋಽಸ್ತು ತೇ ಜ್ಞಾನವರಪ್ರದಾಯ ॥೨೬೨॥

ನಮೋಽಸ್ತು ತೇ ಕಾಲಕಲಾತಿಗಾಯ
ನಮೋ ನಿಸರ್ಗಾಮಲಭೂಷಣಾಯ ।
ನಮೋಽಸ್ತ್ವಮೇಯಾಂಧಕಮರ್ದಕಾಯ
ನಮಃ ಶರಣ್ಯಾಯ ನಮೋಽಗುಣಾಯ ॥೨೬೩॥

ನಮೋಽಸ್ತು ತೇ ಭೀಮಗುಣಾನುಗಾಯ
ನಮೋಽಸ್ತು ನಾನಾಭುವನಾದಿಕರ್ತ್ರೇ ।
ನಮೋಽಸ್ತು ನಾನಾಜಗತಾಂ ವಿಧಾತ್ರೇ
ನಮೋಽಸ್ತು ತೇ ಚಿತ್ರಫಲಪ್ರಯೋಕ್ತ್ರೇ ॥೨೬೪॥

---

೨೬೨. ದುಷ್ಟರನ್ನು ನಿಗ್ರಹಿಸುವಾತನಿಗೆ ನಮಸ್ಕಾರ. ಮಂಗಳಮಯನಿಗೆ ನಮಸ್ಕಾರ. ಸಿದ್ಧನಿಗೆ ನಮಸ್ಕಾರ. ಪುರಾತನನಿಗೆ ನಮಸ್ಕಾರ. ಕಾಲರೂಪನಿಗೆ ನಮಸ್ಕಾರ. ಅವ್ಯಕ್ತಮಧುರವಾದ ಧ್ವನಿಸ್ವರೂಪನಿಗೆ ನಮಸ್ಕಾರ. ಜ್ಞಾನವನ್ನು ಕರುಣಿಸುವಾತನಿಗೆ ನಮಸ್ಕಾರ.

೨೬೩. ಕಾಲದ ಗತಿಯನ್ನು ಮೀರಿದಾತನಿಗೆ ನಮಸ್ಕಾರ. ಸಹಜವಾಗಿಯೇ ದೋಷರಹಿತವಾದ ಭೂಷಣಗಳಿಂದ ಕೂಡಿದವನಿಗೆ ನಮಸ್ಕಾರ. ಅಪರಿಮಿತ ಪರಾಕ್ರಮಶಾಲಿಯಾದ ಅಂಧಕಾಸುರನನ್ನು ಸಂಹರಿಸಿದವನಿಗೆ ನಮಸ್ಕಾರ. ಶರಣ್ಯನಿಗೆ ನಮಸ್ಕಾರ. ನಿರ್ಗುಣನಿಗೆ ನಮಸ್ಕಾರ.

೨೬೪. ಭಯಂಕರವಾದ ಗುಣಗಳಿಂದ ಕೂಡಿದವನಿಗೆ ನಮಸ್ಕಾರ. ನಾನಾಲೋಕಗಳ ಆದಿಕರ್ತನಿಗೆ ನಮಸ್ಕಾರ. ಬಗೆಬಗೆಯ ಜಗತ್ತುಗಳ ವಿಧಾಯಕನಿಗೆ ನಮಸ್ಕಾರ. ಕರ್ಮಾನುಗುಣವಾಗಿ ಆಶ್ಚರ್ಯಕರವಾದ ಫಲವನ್ನು ಕೊಡುವಾತನಿಗೆ ನಮಸ್ಕಾರ.

ಸರ್ವಾವಸಾನೇ ಹ್ಯವಿನಾಶನೇತ್ರೇ
ನಮೋಽಸ್ತು ಚಿತ್ರಾಧ್ವರಭಾಗಭೋಕ್ತ್ರೇ ।
ನಮೋಽಸ್ತು ಭಕ್ತಾಭಿಮತಪ್ರದಾತ್ರೇ
ನಮಃ ಸದಾ ತೇ ಭವಸಂಗಹರ್ತ್ರೇ ॥೨೬೫॥

ಅನಂತರೂಪಾಯ ಸದೈವ ತುಭ್ಯಂ
ಅಸಹ್ಯಕೋಪಾಯ ನಮೋಽಸ್ತು ತುಭ್ಯಂ ।
ಶಶಾಂಕಚಿಹ್ನಾಯ ಸದೈವ ತುಭ್ಯಂ
ಅಮೇಯಮಾನಾಯ ನಮಃ ಸ್ತುತಾಯ ॥೨೬೬॥

ವೃಷೇಂದ್ರಯಾನಾಯ ಪುರಾಂತಕಾಯ
ನಮಃ ಪ್ರಸಿದ್ಧಾಯ ಮಹೌಷಧಾಯ ।
ನಮೋಽಸ್ತು ಭಕ್ತ್ಯಾಭಿಮತಪ್ರದಾಯ
ನಮೋಽಸ್ತು ಸರ್ವಾರ್ತಿಹರಾಯ ತುಭ್ಯಂ ॥೨೬೭॥

---

೨೬೫. ಎಲ್ಲವೂ ನಾಶವಾದರೂ ನೀನು ಮಾತ್ರ ನಾಶವಾಗದೆ ಜಗನ್ನಾಯಕನಾಗಿಯೇ ಇರುವೆ. ವಿಧವಿಧವಾದ ಯಜ್ಞಗಳಲ್ಲಿ ಭಾಗವನ್ನು ವಹಿಸುವೆ. ಇಂತಹ ನಿನಗೆ ನಮಸ್ಕಾರ. ಭಕ್ತರ ಮನೋರಥವನ್ನು ಸಲ್ಲಿಸುವ ನಿನಗೆ ನಮಸ್ಕಾರ. ಸಂಸಾರದ ಸಂಬಂಧವನ್ನು ಪರಿಹರಿಸುವ ನಿನಗೆ ಸದಾ ನಮಸ್ಕಾರ.

೨೬೬. ಅನಂತರೂಪನಾದ ನಿನಗೆ ಯಾವಾಗಲೂ ನಮಸ್ಕಾರ. ದುಸ್ಸಹವಾದ ಕೋಪವುಳ್ಳ ನಿನಗೆ ನಮಸ್ಕಾರ. ಚಂದ್ರನನ್ನು ಮುಡಿಯಲ್ಲಿ ಧರಿಸಿದ ನಿನಗೆ ನಿತ್ಯವೂ ನಮಸ್ಕಾರ. ಅಪರಿಮಿತವಾದ ಚಿತ್ತೌನ್ನತ್ಯವುಳ್ಳಾತನಿಗೆ ನಮಸ್ಕಾರ. ಭಕ್ತರ ಸ್ತೋತ್ರವನ್ನು ಕೈಗೊಳ್ಳುವ ನಿನಗೆ ನಮಸ್ಕಾರ.

೨೬೭. ವೃಷಭೇಂದ್ರ ವಾಹನನಿಗೆ ನಮಸ್ಕಾರ. ತ್ರಿಪುರಾಸುರ ಸಂಹಾರಕನಿಗೆ ನಮಸ್ಕಾರ. ಪ್ರಸಿದ್ಧನಿಗೆ ನಮಸ್ಕಾರ. ದಿವ್ಯೌಷಧ ಸ್ವರೂಪನಿಗೆ ನಮಸ್ಕಾರ. ಭಕ್ತಿಯಿಂದ ತುಷ್ಟನಾಗಿ ಇಷ್ಟಾರ್ಥವನ್ನು ಕೊಡುವಾತನಿಗೆ ನಮಸ್ಕಾರ. ಎಲ್ಲ ಬಗೆಯ ದುಃಖವನ್ನೂ ಪರಿಹರಿಸುವ ನಿನಗೆ ನಮಸ್ಕಾರ.

ಚರಾಚರಾಚಾರವಿಚಾರವರ್ಯ
ಮಾಚಾರ್ಯಮುತ್ಪ್ರೇಕ್ಷಿತಭೂತಸರ್ಗಂ ।
ತ್ವಾಮಿಂದುಮೌಲಿಂ ಶರಣಂ ಪ್ರಪನ್ನಾ
ಪ್ರಿಯಾಪ್ರಮೇಯಂ ಮಹತಾಂ ಮಹೇಶಂ ॥೨೬೮॥

ಪ್ರಯಚ್ಛ ಮೇ ಕಾಮಯಶಃಸಮೃದ್ಧಿಂ
ಪುನಃ ಪ್ರಭೋ ಜೀವತು ಕಾಮದೇವಃ ।
ಪ್ರಿಯಂ ವಿನಾ ತ್ವಾಂ ಪ್ರಿಯಜೀವಿತೇಷು
ತ್ವತ್ತೋಽಪರಃ ಕೋ ಭುವನೇಷ್ವಿಹಾಸ್ತಿ ॥೨೬೯॥

ಪ್ರಭುಃ ಪ್ರಿಯಾಯಾಃ ಪ್ರಸವಃ ಪ್ರಿಯಾಣಾಂ
ಪ್ರಣೀತಪರ್ಯಾಯಪರಾಪರಾರ್ಥಃ ।
ತ್ವಮೇವಮೇಕೋ ಭುವನಸ್ಯ ನಾಥೋ
ದಯಾಲುರುನ್ಮೂಲಿತಭಕ್ತಭೀತಿಃ ॥೨೭೦॥

---

೨೬೮. ಸ್ಥಾವರಜಂಗಮಗಳ ಆಚಾರವನ್ನು ವಿಮರ್ಶಿಸುವುದರಲ್ಲಿ ಸಮರ್ಥನೂ, ಸಂಕಲ್ಪಮಾತ್ರದಿಂದ ಪ್ರಾಣಿಗಳ ಸೃಷ್ಟಿಯನ್ನು ಮಾಡಬಲ್ಲವನೂ, ಚಂದ್ರಚೂಡನೂ, ಪ್ರಿಯನೂ, ಊಹೆಗೆ ನಿಲುಕದವನೂ, ಮಹಾತ್ಮರಿಗೆಲ್ಲ ಅಧೀಶ್ವರನೂ ಆದ ನಿನ್ನನ್ನು ಮರೆಹೊಕ್ಕಿರುವೆನು.

೨೬೯. ನನ್ನ ಇಷ್ಟಾರ್ಥವನ್ನೂ ಕೀರ್ತಿಸಂಪತ್ತನ್ನೂ ಕರುಣಿಸು. ದೇವಾ, ಕಾಮದೇವನು ಮತ್ತೆ ಬದುಕಲಿ. ನನ್ನ ಪ್ರಿಯನ ಪ್ರಾಣಗಳಲ್ಲಿ ಕರುಣೆಯನ್ನು ತೋರುವಾತನು ಈ ಪ್ರಪಂಚದಲ್ಲಿ ಆತ್ಮನಾದ ನಿನ್ನನ್ನು ಬಿಟ್ಟರೆ ಮತ್ತಾವ ನಿರುವನು ?

೨೭೦. ಮನ್ಮಥನ ಪ್ರಿಯಳಾದ ನನಗೆ ಪ್ರಭುವೂ, ಪ್ರಿಯವಾದ ಅರ್ಥಗಳನ್ನು ಕರುಣಿಸುವಾತನೂ, ಐಹಿಕಾಮುಷ್ಮಿಕ ಪ್ರಯೋಜನಗಳನ್ನು ಕ್ರಮವಾಗಿ ಅನುಗ್ರಹಿಸುವವನೂ, ಜಗತ್ತಿನ ಅಧಿಪತಿಯೂ ನೀನೊಬ್ಬನೇ. ಭಕ್ತರ ಭೀತಿಯನ್ನು ಪರಿಹರಿಸುವ ದಯಾಲುವೂ ನೀನೇ.

|| ಸೂತ ಉವಾಚ ||

ಇತ್ಥಂ ಸ್ತುತಃ ಶಂಕರ ಈಡ್ಯ ಈಶೋ
ವೃಷಾಕಪಿರ್ಮನ್ಮಥಕಾಂತಯಾ ತು |
ತುತೋಷ ದೋಷಾಕರಖಂಡಧಾರೀ
ಉವಾಚ ಚೈನಾಂ ಮಧುರಂ ನಿರೀಕ್ಷ್ಯ ||೨೭೧||

|| ಶಂಕರ ಉವಾಚ ||

ಭವಿತೇತಿ ಚ ಕಾಮೋಽಯಂ ಕಾಲಾತ್ಕಾಂತೋಽಚಿರಾದಪಿ |
ಅನಂಗ ಇತಿ ಲೋಕೇಷು ಸ ವಿಖ್ಯಾತಿಂ ಗಮಿಷ್ಯತಿ ||೨೭೨||

ಇತ್ಯುಕ್ತಾ ಶಿರಸಾ ವಂದ್ಯ ಗಿರಿಶಂ ಕಾಮವಲ್ಲಭಾ |
ಜಗಾಮೋಪವನಂ ರಮ್ಯಂ ರತಿಸ್ತು ಹಿಮಭೂಭೃತಃ ||೨೭೩||

ರುರೋದ ಚಾಪಿ ಬಹುಶೋ ದೀನಾ ರಮ್ಯೇ ಸ್ಥಲೇ ತು ಸಾ |
ಮರಣವ್ಯವಸಾಯಾತ್ತು ನಿವೃತ್ತಾ ಸಾ ಹರಾಜ್ಞಯಾ ||೨೭೪||

---

೨೭೧. ಸೂತಪೌರಾಣಿಕನು ಹೇಳಿದನು.—ರತಿದೇವಿಯು ಹೀಗೆ ಸ್ತೋತ್ರ ಮಾಡಲು, ಕ್ಷೇಮಂಕರನೂ, ಸ್ತೋತ್ರಾರ್ಹನೂ ಅಧಿಪತಿಯೂ, ಧರ್ಮರಕ್ಷಕನೂ ಆದ ಚಂದ್ರಶೇಖರನು ಸಂತುಷ್ಟನಾಗಿ ಅವಳನ್ನು ನೋಡಿ ಮಧುರವಚನದಿಂದ ಇಂತೆಂದನು.

೨೭೨. ಶಂಕರನು ಹೇಳಿದನು.—ಈ ಮನ್ಮಥನು ಸ್ವಲ್ಪ ಕಾಲದಲ್ಲೇ ಮತ್ತೆ ನಿನ್ನ ಪತಿಯಾಗುವನು. ಅವನು ಅನಂಗ ಎಂದರೆ ಶರೀರವಿಲ್ಲದವನು ಎಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಖ್ಯಾತಿಯನ್ನು ಪಡೆಯುವನು.

೨೭೩. ಪರಮೇಶ್ವರನು ಹೀಗೆ ಹೇಳಲು, ಕಾಮನ ಪತ್ನಿಯಾದ ರತಿಯು ಅವನನ್ನು ಭಕ್ತಿಯಿಂದ ನಮಸ್ಕರಿಸಿ ಹಿಮವತ್ಪರ್ವತದ ರಮಣೀಯವಾದ ಉಪವನಕ್ಕೆ ತೆರಳಿದಳು.

೨೭೪. ಆ ರಮ್ಯವಾದ ಸ್ಥಲದಲ್ಲಿ ದೈನ್ಯದಿಂದ ಅವಳು ಬಹುವಾಗಿ ಅತ್ತಳು. ಈಶ್ವರನ ಆಜ್ಞೆಯಾಗಿದ್ದುದರಿಂದ ಅವಳು ಮರಣದ ಪ್ರಯತ್ನವನ್ನು ಮಾತ್ರ ಮಾಡಲಿಲ್ಲ.

ಅಥ ನಾರದವಾಕ್ಯೇನ ಚೋದಿತೋ ಹಿಮಭೂಧರಃ ।
ಕೃತಾಭರಣಸಂಸ್ಕಾರಾಂ ಕೃತಕೌತುಕಮಂಗಲಾಂ ॥೨೭೫॥

ಸ್ವರ್ಗಪುಷ್ಪಕೃತಾಪೀಡಾಂ ಶುಭ್ರಚೀನಾಂಶುಕಾಂಬರಾಂ ।
ಸಖೀಭ್ಯಾಂ ಸಂಯುತಾಂ ಶೈಲೋ ಗೃಹೀತ್ವಾ ಸ್ವಸುತಾಂ ತತಃ ॥೨೭೬॥

ಜಗಾಮ ಶುಭಯೋಗೇನ ತದಾ ಸಂಪೂರ್ಣಮಾನಸಃ ।
ಸ ಕಾನನಾನ್ಯುಪಾಕ್ರಮ್ಯ ವನಾನ್ಯುಪವನಾನಿ ಚ ॥೨೭೭॥

ದದರ್ಶ ರುದತೀಂ ನಾರೀಮಪ್ರತರ್ಕ್ಯಮಹೌಜಸಂ ।
ರೂಪೇಣಾಸದೃಶೀಂ ಲೋಕೇ ರಮ್ಯೇಷು ವನಸಾನುಷು ॥೨೭೮॥

ಕೌತುಕೇನ ಪರಾಮೃಶ್ಯ ತಾಂ ದೃಷ್ಟ್ವಾ ರುದತೀಂ ಗಿರಿಃ ।
ಉಪಸರ್ಪ್ಯ ತತಸ್ತಸ್ಯಾ ನಿಕಟೇ ಸೋಽಭ್ಯಪೃಚ್ಛತ ॥೨೭೯॥

---

೨೭೫-೨೭೬. ಬಳಿಕ ನಾರದಮುನಿಯ ಮಾತಿನಂತೆ ಹಿಮವಂತನು ತನ್ನ ಮಗಳಾದ ಪಾರ್ವತಿಗೆ ಭೂಷಣಗಳಿಂದ ಅಲಂಕರಿಸಿ, ಮಂಗಳಕರವಾದ ಹಸ್ತ ಸೂತ್ರವನ್ನು ಕಟ್ಟಿ, ಕಲ್ಪವೃಕ್ಷದ ಪುಷ್ಪಮಾಲೆಯನ್ನು ಮುಡಿಸಿ, ಶುಭ್ರವಾದ ಚೀನಾಂಬರವನ್ನು ಉಡಿಸಿ, ಗೆಳತಿಯರಿಬ್ಬರೂ ಜೊತೆಯಲ್ಲಿ ಬರುತ್ತಿರಲು, ಶುಭ ಯೋಗದಿಂದ ಕೂಡಿದ ವೇಳೆಯಲ್ಲಿ ಅವಳೊಡನೆ ಹರ್ಷಪೂರ್ಣಮನಸ್ಕನಾಗಿ ಹೊರಟನು.

೨೭೭-೨೭೮. ಅವನು ಕಾಡುಗಳನ್ನೂ, ತೋಟಗಳನ್ನೂ, ಕೈದೋಟ ಗಳನ್ನೂ ದಾಟಿಹೋಗಿ, ಮುಂದೆ ರಮ್ಯವಾದ ವನಗಳಿಂದ ತುಂಬಿದ ತಪ್ಪಲಿನಲ್ಲಿ ಅಸಮಾನರೂಪಶಾಲಿನಿಯೂ, ಅತಿಶಯತೇಜಸ್ವಿನಿಯೂ ಆದ ಒಬ್ಬ ಹೆಂಗಸು ಅಳುತ್ತಿರುವುದನ್ನು ಕಂಡನು.

೨೭೯. ಹಿಮವಂತನು ಆಕೆಯು ಅಳುತ್ತಿರುವುದನ್ನು ಗಮನಿಸಿ, ಕುತೂಹಲ ದಿಂದ ಹತ್ತಿರಕ್ಕೆ ಹೋಗಿ ಕುಳಿತು ಅವಳನ್ನು ಇಂತು ಪ್ರಶ್ನಿಸಿದನು.

|| ಹಿಮವಾನುವಾಚ ||

ಕಾಸಿ ಕಸ್ಯಾಸಿ ಕಲ್ಯಾಣಿ ಕಿಮರ್ಥಂ ಚಾಪಿ ರೋದಿಷಿ ।
ನೈತದಲ್ಪಮಹಂ ಮನ್ಯೇ ಕಾರಣಂ ಲೋಕಸುಂದರಿ ||೨೮೦||

ಸಾ ತಸ್ಯ ವಚನಂ ಶ್ರುತ್ವಾ ಉವಾಚ ಮಧುನಾ ಸಹ ।
ರುದತೀ ಶೋಕಜನನಂ ಶ್ವಸತೀ ದೈನ್ಯವರ್ಧನಂ ||೨೮೧||

|| ರತಿರುವಾಚ ||

ಕಾಮಸ್ಯ ದಯಿತಾಂ ಭಾರ್ಯಾಂ ರತಿಂ ಮಾಂ ವಿದ್ಧಿ ಸುವ್ರತ ।
ಗಿರಾವಸ್ಮಿನ್ ಮಹಾಭಾಗ ಗಿರಿಶಸ್ತಪಸಿ ಸ್ಥಿತಃ ||೨೮೨||

ತೇನ ಪ್ರತ್ಯೂಹರುಷ್ಟೇನ ವಿಸ್ಫಾರ್ಯಾಲೋಕ್ಯ ಲೋಚನಂ ।
ದಗ್ಧೋಽಸೌ ಝಷಕೇತುಸ್ತು ಮಮ ಕಾಂತೋಽತಿವಲ್ಲಭಃ ||೨೮೩||

ಅಹಂ ತು ಶರಣಂ ಯಾತಾ ತಂ ದೇವಂ ಭಯವಿಹ್ವಲಾ ।
ಸ್ತುತವತ್ಯಥ ಸಂಸ್ತುತ್ಯಾ ತತೋ ಮಾಂ ಗಿರಿಶೋಽಬ್ರವೀತ್ ||೨೮೪||

---

೨೮೦. ಹಿಮವಂತನು ಹೇಳಿದನು.—ಓ ಕಲ್ಯಾಣೀ, ನೀನು ಯಾರು? ಯಾರ ಪತ್ನಿ? ಏಕೆ ಅಳುತ್ತೀಯೆ? ಎಲೌ ಲೋಕಸುಂದರೀ, ನೀನು ಅಳುವುದಕ್ಕೆ ಕಾರಣವು ಸಾಮಾನ್ಯವಾಗಿರಲಾರದೆಂದು ತಿಳಿಯುತ್ತೇನೆ.

೨೮೧. ಅವನ ಮಾತನ್ನು ಕೇಳಿ, ಆಕೆಯು ವಸಂತನೊಡನೆ ಇಂತೆಂದಳು. ಅವಳ ಗೋಳು ದುಃಖವನ್ನು ಹುಟ್ಟಿಸುತ್ತಿತ್ತು. ನಿಟ್ಟುಸಿರು ದೈನ್ಯವನ್ನು ಹೆಚ್ಚಿಸುತ್ತಿತ್ತು.

೨೮೨. ರತಿ ಹೇಳಿದಳು.—ಓ ಸುವ್ರತಾ, ನನ್ನನ್ನು ಮನ್ಮಥನ ಪ್ರಿಯಪತ್ನಿಯಾದ ರತಿಯೆಂದು ತಿಳಿ. ಎಲೈ ಮಹಾಮಹಿಮಶಾಲಿಯೇ, ಈ ಬೆಟ್ಟದಲ್ಲಿ ಪರಮೇಶ್ವರನು ತಪಸ್ಸು ಮಾಡುತ್ತಿರುವನು.

೨೮೩. ಆತನು ತನ್ನ ತಪಸ್ಸಿಗೆ ವಿಘ್ನವಾಯಿತೆಂದು ಕೋಪಗೊಂಡು, ಉರಿಗಣ್ಣನ್ನು ತೆರೆದು, ನನ್ನ ಪ್ರಿಯತಮನೂ ಪತಿಯೂ ಆದ ಮನ್ಮಥನನ್ನು ಸುಟ್ಟುಬಿಟ್ಟನು.

೨೮೪. ನಾನು ಭಯಭ್ರಾಂತಳಾಗಿ ಆ ಮಹಾದೇವನನ್ನು ಮರೆಹೊಕ್ಕೆನು. ವಿಧವಿಧವಾಗಿ ಸ್ತುತಿಸಿದೆನು. ಬಳಿಕ ಪರಮೇಶ್ವರನು ನನಗೆ ಹೇಳಿದನು.

ತುಷ್ಟೋಽಹಂ ಕಾಮದಯಿತೇ ಕಾಮೋಽಯಂ ತೇ ಭವಿಷ್ಯತಿ ।
ತ್ವತ್ಸ್ತುತಿಂ ಚಾಪ್ಯಧೀಯಾನೋ ನರೋ ಭಕ್ತ್ಯಾ ಮದಾಶ್ರಯಃ ।
ಲಪ್ಸ್ಯತೇ ಕಾಂಕ್ಷಿತಂ ಕಾಮಂ ನಿವರ್ತ್ಯ ಮರಣಾದಿತಃ ॥೨೮೫॥

ಪ್ರತೀಕ್ಷಂತೀ ಚ ತದ್ವಾಕ್ಯಮಾಶಾವೇಶಾದಿಭಿರ್ಗೃಹಂ ।
ಶರೀರಂ ಪರಿರಕ್ಷಿಷ್ಯೇ ಕಂಚಿತ್ಕಾಲಂ ಮಹಾದ್ಯುತೇ ॥೨೮೬॥

ಇತ್ಯುಕ್ತಸ್ತು ತದಾ ರತ್ಯಾ ಶೈಲಃ ಸಂಭ್ರಮಭೀಷಿತಃ ।
ಪಾಣಾವಾದಾಯ ಹಿ ಸುತಾಂ ಗಂತುಮೈಚ್ಛತ್ಸ್ವಕಂ ಪುರಂ ॥೨೮೭॥

ಭಾವಿನೋಽವಶ್ಯಭಾವಿತ್ವಾದ್ಭವಿತ್ರೀ ಭೂತಭಾವನೀ ।
ಲಜ್ಜಮಾನಾ ಸಖೀಮುಖೈರುವಾಚ ಪಿತರಂ ಗಿರಿಂ ॥೨೮೮॥

---

೨೮೫. "ಎಲೌ ರತೀ, ನಾನು ಸಂತುಷ್ಟನಾದೆನು. ನಿನ್ನ ಇಷ್ಟಾರ್ಥವು ಕೈಗೂಡುವುದು. ನೀನು ಮಾಡಿದ ಸ್ತೋತ್ರವನ್ನು ಪಾರಾಯಣಮಾಡಿ ಭಕ್ತಿಯಿಂದ ನನ್ನನ್ನು ಮರೆಹೊಗುವ ಮನುಷ್ಯನು ಮರಣಾನಂತರ ಸಕಲೇಷ್ಟಾರ್ಥವನ್ನೂ ಪಡೆಯುವನು."

೨೮೬. ಎಲೈ ತೇಜೋನಿಧಿಯೇ, ನಾನು ಆಶಾವಶಳಾಗಿ ಆ ಮಾತು ಫಲಕಾರಿಯಾಗುವುದನ್ನೇ ಇದಿರುನೋಡುತ್ತ ಸ್ವಲ್ಪಕಾಲ ದೇಹವನ್ನು ಕಾಪಾಡಿ ಕೊಂಡಿರುವೆನು.

೨೮೭. ರತಿಯು ಹೇಳಿದ ಮಾತಿನಿಂದ ಹಿಮವಂತನು ಗಾಬರಿಬಿದ್ದು ಹೆದರಿ, ಮಗಳ ಕೈಯನ್ನು ಹಿಡಿದುಕೊಂಡು ತನ್ನ ಪಟ್ಟಣಕ್ಕೆ ಹಿಂದಿರುಗಿ ಹೋಗಲು ಬಯಸಿದನು.

೨೮೮. ನಡೆಯಬೇಕಾದುದು ಅವಶ್ಯವಾಗಿ ನಡೆದೇ ತೀರಬೇಕು. ಅದನ್ನು ತಪ್ಪಿಸಲು ಯಾರಿಂದಲೂ ಆಗದು. ಆದುದರಿಂದ ಶಾಶ್ವತಳೂ, ಸಕಲಜೀವರಾಶಿಗಳ ಜನನಿಯೂ ಆದ ಪಾರ್ವತಿಯು ಲಜ್ಜೆಪಡುತ್ತ ಸಖಿಯ ಮೂಲಕ ತನ್ನ ತಂದೆಯಾದ ಹಿಮವಂತನಿಗೆ ಇಂತೆಂದಳು.

॥ ಶೈಲದುಹಿತೋವಾಚ ॥

ದುರ್ಭಾಗ್ಯೇಣ ಶರೀರೇಣ ಕಿಂ ಮಮಾನೇನ ಕಾರಣಂ ।
ಕಥಂ ಚ ತಾದೃಶಂ ಪ್ರಾಪ್ತಂ ಸುಖಂ ಮೇ ಸ ಪತಿರ್ಭವೇತ್ ॥೨೮॥

ತಪೋಭಿಃ ಪ್ರಾಪ್ಯತೇಽಭೀಷ್ಟಂ ನಾಸಾಧ್ಯಂ ಹಿ ತಪಸ್ಯತಃ ।
ದುರ್ಭಗತ್ವಂ ವೃಥಾ ಲೋಕೇ ವಹತೇ ಸತಿ ಸಾಧನೇ ॥೨೯॥

ಜೀವಿತಾದ್ದುರ್ಭಗಾಚ್ಛ್ರೇಯೋ ಮರಣಂ ಹ್ಯತಪಸ್ಯತಃ ।
ಭವಿಷ್ಯಾಮಿ ನ ಸಂದೇಹೋ ನಿಯಮೈಃ ಶೋಷಯೇ ತನುಂ ॥೩೦॥

ತಪಸಿ ಭ್ರಷ್ಟಸಂದೇಹೇ ಉದ್ಯಮೋಽರ್ಥಜಿಗೀಷಯಾ ।
ಸಾಹಂ ತಪಃ ಕರಿಷ್ಯಾಮಿ ಯದಹಂ ಪ್ರಾಪ್ಯ ದುರ್ಲಭಾ ॥೩೧॥

---

೨೮. ಪಾರ್ವತಿ ಹೇಳಿದಳು.—ಅದೃಷ್ಟಹೀನವಾದ ಈ ಶರೀರದಿಂದ ನನಗೆ ಆಗಬೇಕಾಗಿರುವುದೇನು ? ನನಗೆ ಅಂತಹ ಸುಖವು ಹೇಗೆ ಒದಗೀತು ? ಅಂತಹ ಪತಿಯು ತಾನೆ ಹೇಗೆ ದೊರೆತಾನು ?

೨೯. ತಪಸ್ಸಿನಿಂದ ಇಷ್ಟಾರ್ಥ ಸಿದ್ಧಿಯಾಗುವುದು. ತಪಸ್ಸುಮಾಡುವವನಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಇಂತಹ ಸಾಧನವಿದ್ದರೂ ಲೋಕದಲ್ಲಿ ಜನರು ವ್ಯರ್ಥವಾಗಿ ದುರ್ದೈವಕ್ಕೆ ಗುರಿಯಾಗುತ್ತಾರಲ್ಲಾ !

೩೦. ತಪಸ್ಸುಮಾಡದೆ ದುರ್ಗತಿಗೆ ಆಶ್ರಯವಾದ ಬಾಳನ್ನು ನಡೆಸುವುದಕ್ಕಿಂತ ಮರಣವೇ ಲೇಸು. ನಾನು ತಪೋನಿರತಳಾಗುವೆನು ; ಸಂದೇಹವಿಲ್ಲ. ವ್ರತಗಳಿಂದ ದೇಹವನ್ನು ಸೊರಗಿಸುವೆನು.

೩೧. ತಪಸ್ಸು ಲೋಪದೋಷಗಳಿಲ್ಲದೆ ಸಾಂಗವಾಗಿ ನೆರವೇರಿದರೆ ಅರ್ಥಸಿದ್ಧಿಗಾಗಿ ಮಾಡುವ ಪ್ರಯತ್ನವು ಸಫಲವಾಗುವುದು. ಆದುದರಿಂದ ನಾನು ತಪಸ್ಸನ್ನಾಚರಿಸುವೆನು. ಅದರಿಂದ ನನಗೆ ಗೌರವವುಂಟು.

ಇತ್ಯುಕ್ತಃ ಶೈಲರಾಜಸ್ತು ದುಹಿತ್ರಾ ಸ್ನೇಹವಿಕ್ಲವಃ ।
ಉವಾಚ ವಾಚಾ ಶೈಲೇಂದ್ರೋ ಸ್ನೇಹಗದ್ಗದವರ್ಣಯಾ ॥೨೯೩॥

॥ ಹಿಮವಾನುವಾಚ ॥

ಉ ಮೇತಿ ಚಪಲೇ ಪುತ್ರಿ ನ ಕ್ಷಮಂ ತಾವಕಂ ವಪುಃ ।
ಸೋಢುಂ ಕ್ಲೇಶಸ್ವರೂಪಸ್ಯ ತಪಸಃ ಸೌಮ್ಯದರ್ಶನೇ ॥೨೯೪॥

ಭಾವೀನ್ಯಭಿವಿಚಾರ್ಯಾಣಿ ಪದಾರ್ಥಾನಿ ಸದೈವ ತು ।
ಭಾವಿನೋಽರ್ಥಾ ಭವಂತ್ಯೇವ ಹಠೇನಾನಿಚ್ಛತೋಽಪಿ ವಾ ॥೨೯೫॥

ತಸ್ಮಾನ್ನ ತಪಸಾ ತೇಽಸ್ತಿ ಬಾಲೇ ಕಿಂಚಿತ್ಪ್ರಯೋಜನಂ ।
ಭವನಾಯೈವ ಗಚ್ಛಾವಶ್ಚಿಂತಯಿಷ್ಯಾಮಿ ತತ್ರ ವೈ ॥೨೯೬॥

ಇತ್ಯುಕ್ತಾ ತು ಯದಾ ನೈವ ಗೃಹಾಯಾಭ್ಯೇತಿ ಶೈಲಜಾ ।
ತತಃ ಸ ಚಿಂತಯಾವಿಷ್ಟೋ ದುಹಿತಾಂ ಪ್ರಶಶಂಸ ಚ ॥೨೯೭॥

---

೨೯೩. ಮಗಳು ಹೀಗೆ ಹೇಳಲು ಸ್ನೇಹಪರವಶನಾದ ಗಿರಿರಾಜನು ಗದ್ಗದ ವಚನದಿಂದ ಹೀಗೆ ಉತ್ತರವಿತ್ತನು.

೨೯೪. ಹಿಮವಂತನು ಹೇಳಿದನು.—ಚಪಲಸ್ವಭಾವದ ಎಲೌ ಮಗಳೇ, ಹೀಗೆ ಮಾಡಬೇಡ. ನೀನು ಸೌಮ್ಯಳಾಗಿ ಕಾಣುವೆ. ನಿನ್ನ ಶರೀರವು ತಪಸ್ಸಿನ ಕ್ಲೇಶವನ್ನು ಸಹಿಸದು.

೨೯೫. ಯಾವಾಗಲೂ ಮುಂದೆ ಒದಗಲಿರುವ ಸಂಗತಿಗಳನ್ನು ಚೆನ್ನಾಗಿ ವಿಚಾರಿಸಬೇಕು. ನಾವು ಇಷ್ಟಪಡದಿದ್ದರೂ ಅವು ಬಂದೇ ಬರುವುವು. ಅವುಗಳ ಹಟವೇ ಅದು.

೨೯೬. ಓ ಬಾಲೇ, ಆದುದರಿಂದ ನಿನಗೆ ತಪಸ್ಸಿನಿಂದೇನೂ ಪ್ರಯೋಜನ ವಿಲ್ಲ. ಮನೆಗೆ ಹೋಗಿ ಅಲ್ಲಿಯೇ ವಿಚಾರಮಾಡೋಣ.

೨೯೭. ಹೀಗೆ ಹೇಳಿದರೂ ಪಾರ್ವತಿಯು ಮನೆಯ ಕಡೆಗೆ ಹೋಗಲೇ ಇಲ್ಲ. ಆಗ ಹಿಮವಂತನು ಚಿಂತಾಕುಲನಾದನು. ಕೊನೆಗೆ ತನ್ನ ಮಗಳನ್ನು ಶ್ಲಾಘಿಸಿದನು.

ತತೋಽಂತರಿಕ್ಷೇ ದಿವ್ಯಾ ವಾಗಭೂದ್ಭುವನಭೂತಲೇ ।
ಉ ಮೇತಿ ಚಪಲೇ ಪುತ್ರಿ ತ್ವಯೋಕ್ತಾ ತನಯಾ ತತಃ ॥೨೯೮॥

ಉಮೇತಿ ನಾಮ ತೇನಾಸ್ಯಾ ಭುವನೇಷು ಭವಿಷ್ಯತಿ ।
ಸಿದ್ಧಿಂ ಚ ಮೂರ್ತಿಮತ್ಯೇಷಾ ಸಾಧಯಿಷ್ಯತಿ ಚಿಂತಿತಾಂ ॥೨೯೯॥

ಇತಿ ಶ್ರುತ್ವಾ ತು ವಚನಮಾಕಾಶಾತ್ಕಾಶಪಾಂಡುರಃ ।
ಅನುಜ್ಞಾಯ ಸುತಾಂ ಶೈಲೋ ಜಗಾಮಾಶು ಸ್ವಮಂದಿರಂ ॥೩೦೦॥

॥ ಸೂತ ಉವಾಚ ॥

ಶೈಲಜಾಪಿ ಯಯೌ ಶೈಲಮಗಮ್ಯಮಪಿ ದೈವತೈಃ ।
ಸಖೀಭ್ಯಾಮನುಯಾತಾ ತು ನಿಯತಾ ನಗರಾಜಜಾ ॥೩೦೧॥

ಶೃಂಗಂ ಹಿಮವತಃ ಪುಣ್ಯಂ ನಾನಾಧಾತುವಿಭೂಷಿತಂ ।
ದಿವ್ಯಪುಷ್ಪಲತಾಕೀರ್ಣಂ ಸಿದ್ಧಗಂಧರ್ವಸೇವಿತಂ ॥೩೦೨॥

---

೨೯೮-೨೯೯. ಬಳಿಕ ಭೂತಲದಲ್ಲೆಲ್ಲಾ ಕೇಳುವಂತೆ ಅಂತರಿಕ್ಷದಲ್ಲಿ ದಿವ್ಯ ವಾಣಿಯಾಯಿತು. "ಓ ಗಿರೀಂದ್ರಾ, ಚಪಲಸ್ವಭಾವದ ಎಲೌ ಮಗಳೇ ಹೀಗೆ ಮಾಡಬೇಡ ಎಂದು ನೀನು ನಿನ್ನ ಮಗಳಿಗೆ ಹೇಳಿದೆಯಷ್ಟೆ! ಅದರಿಂದ ಈಕೆಗೆ ಉಮಾ ಎಂಬ ಹೆಸರು ಲೋಕಗಳಲ್ಲಿ ಪ್ರಸಿದ್ಧವಾಗುವುದು. ಮಂಗಳಾಂಗಿಯಾದ್ರ ಈಕೆಯು ತಾನು ಕೋರಿದ ಸಿದ್ಧಿಯನ್ನೂ ಪಡೆಯುವಳು."

೩೦೦. ಈ ರೀತಿಯಾದ ಗಗನವಾಣಿಯನ್ನು ಕೇಳಿ ಕಾಶಪುಷ್ಪದಂತೆ ಶುಭ ವರ್ಣದವನಾದ ಹಿಮವಂತನು ಮಗಳಿಗೆ ಅಪ್ಪಣೆಯನ್ನಿತ್ತು ಬೇಗನೆ ತನ್ನ ಮನೆಗೆ ಹೋದನು.

೩೦೧. ಸೂತಪೌರಾಣಿಕನು ಹೇಳಿದನು.—ಪಾರ್ವತಿಯು ನಿಯಮವಂತಳಾಗಿ ಸಖಿಯರಿಬ್ಬರೊಡಗೂಡಿ ದೇವತೆಗಳ ಸಂಚಾರಕ್ಕೂ ಅಸಾಧ್ಯವಾದ ಪರ್ವತ ಸ್ಥಳಕ್ಕೆ ಹೋದಳು.

೩೦೨. ಹಿಮವತ್ಪರ್ವತದ ಆ ಶಿಖರವು ಪುಣ್ಯಕರವಾಗಿಯೂ ಬಗೆಬಗೆಯ ಧಾತುಗಳಿಂದ ಅಲಂಕೃತವಾಗಿಯೂ ಇತ್ತು. ಅಲ್ಲಿ ಸ್ವರ್ಗೀಯವಾದ ಹೂಬಳ್ಳಿಗಳು ಹಬ್ಬಿದ್ದುವು. ಸಿದ್ಧರೂ ಗಂಧರ್ವರೂ ಸೇವೆಮಾಡುತ್ತಿದ್ದರು.

ನಾನಾಮೃಗಗಣಾಕೀರ್ಣಂ ಭ್ರಮರೋದ್ಘುಷ್ಟಪಾದಪಂ ।
ದಿವ್ಯಪ್ರಸ್ರವಣೋಪೇತಂ ದೀರ್ಘಿಕಾಭಿರಲಂಕೃತಂ ||೩೦೩||

ನಾನಾಪಕ್ಷಿಗಣಾಕೀರ್ಣಂ ಚಕ್ರವಾಕೋಪಶೋಭಿತಂ ।
ಜಲಜಸ್ಥಲಜೈಃ ಪುಷ್ಪೈಃ ಪ್ರೋತ್ಫುಲ್ಲೈರುಪಶೋಭಿತಂ ||೩೦೪||

ಚಿತ್ರಕಂದರಸಂಸ್ಥಾನಂ ಗುಹಾಗೃಹಮನೋಹರಂ ।
ವಿಹಂಗಸಂಘಸಂಜುಷ್ಟಂ ಕಲ್ಪಪಾದಪಸಂಕಟಂ ||೩೦೫||

ತತ್ರಾಪಶ್ಯನ್ಮಹಾಶಾಖಂ ಶಾಖಿನಂ ಹರಿತಚ್ಛದಂ ।
ಸರ್ವರ್ತುಕುಸುಮೋಪೇತಂ ಮನೋರಥಶತೋಜ್ವಲಂ ||೩೦೬||

ನಾನಾಪುಷ್ಪಸಮಾಕೀರ್ಣಂ ನಾನಾವಿಧಫಲಾನ್ವಿತಂ ।
ನತಂ ಸೂರ್ಯಸ್ಯ ರುಚಿಭಿರ್ಭಿನ್ನಸಂಹತಪಲ್ಲವಂ ||೩೦೭||

---

೩೦೩. ಬಗೆಬಗೆಯ ಮೃಗಗಳು ತುಂಬಿದ್ದುವು. ಮರಗಳಲ್ಲಿ ದುಂಬಿಗಳು ಝೇಂಕಾರ ಮಾಡುತ್ತಿದ್ದುವು. ರಮಣೀಯವಾದ ಝರಿಗಳೂ ಕೊಳಗಳೂ ಪ್ರಕಾಶಿಸುತ್ತಿದ್ದುವು.

೩೦೪. ನಾನಾಜಾತಿಯ ಪಕ್ಷಿಗಳು ವಾಸಿಸುತ್ತಿದ್ದುವು. ಚಕ್ರವಾಕಗಳು ಕಂಗೊಳಿಸುತ್ತಿದ್ದುವು. ಬಗೆಬಗೆಯ ಹೂಗಳು ನೀರಿನಲ್ಲೂ ನೆಲದಲ್ಲೂ ಅರಳಿ ಮನೋಹರವಾಗಿದ್ದುವು.

೩೦೫. ಗುಹೆಗಳು ಬಗೆಬಗೆಯ ಆಕಾರದಿಂದ ಚಿತ್ರವಿಚಿತ್ರವಾಗಿದ್ದುವು. ಪಕ್ಷಿಗಳು ಗುಂಪುಗುಂಪಾಗಿದ್ದುವು. ಕಲ್ಪವೃಕ್ಷಗಳು ಒತ್ತೊತ್ತಾಗಿ ಬೆಳದಿದ್ದುವು.

೩೦೬. ಪಾರ್ವತಿಯು ಅಲ್ಲೊಂದು ಮರವನ್ನು ನೋಡಿದಳು. ಅದರ ಕೊಂಬೆಗಳು ಉದ್ದವಾಗಿಯೂ ಹಸುರಾಗಿಯೂ ಇದ್ದುವು. ಎಲ್ಲ ಋತುಗಳ ಹೂಗಳೂ ಅದರಲ್ಲಿದ್ದುವು. ಅದು ಮನೋರಥಗಳನ್ನು ಈಡೇರಿಸುತ್ತ ಕಂಗೊಳಿಸಿತು.

೩೦೭. ಬಗೆಬಗೆಯ ಹೂಗಳಿಂದಲೂ ಫಲಗಳಿಂದಲೂ ಅದು ಕಿಕ್ಕಿರಿಯುತ್ತಿತ್ತು. ಒತ್ತಾಗಿ ಬಿಟ್ಟಿದ್ದ ಚಿಗುರುಗಳ ಮೇಲೆ ಸೂರ್ಯನ ಕಿರಣಗಳು ಬೀಳುತ್ತಿದ್ದುವು. ಮರವು ಹೂಹಣ್ಣುಗಳ ಭಾರದಿಂದ ಬಾಗಿತ್ತು.

ತತ್ರಾಂಬರಾಣಿ ಸಂತ್ಯಜ್ಯ ಭೂಷಣಾನಿ ಚ ಶೈಲಜಾ ।
ಸಂವೀತಾ ವಲ್ಕಲೈರ್ದಿವ್ಯೈರ್ದರ್ಭನಿರ್ಮಿತಮೇಖಲಾ ॥೩೦೮॥

ತ್ರಿಃಸ್ನಾತಾ ಪಾಟಲಾಹಾರಾ ಬಭೂವ ಶರದಾಂ ಶತಂ ।
ಶತಮೇಕೇನ ಶೀರ್ಣೇನ ಪರ್ಣೇನಾವರ್ತಯತ್ತದಾ ॥೩೦೯॥

ನಿರಾಹಾರಾ ಶತಂ ಸಾಭೂತ್ಸನ್ಮಾನಾಂ ತಪಸಾಂ ನಿಧಿಃ ।
ತತ ಉದ್ವೇಜಿತಾಃ ಸರ್ವೇ ಪ್ರಾಣಿನಸ್ತತ್ತಪೋಗ್ನಿನಾ ॥೩೧೦॥

ತತಃ ಸಸ್ಮಾರ ಭಗವಾನ್ ಮುನೀನ್ ಸಪ್ತ ಶತಕ್ರತುಃ ।
ತೇ ಸಮಾಗಮ್ಯ ಮುನಯಃ ಸರ್ವೇ ಸಮುದಿತಾಸ್ತತಃ ॥೩೧೧॥

ಪೂಜಿತಾಶ್ಚ ಮಹೇಂದ್ರೇಣ ಪಪ್ರಚ್ಛುಸ್ತಂ ಪ್ರಯೋಜನಂ ।
ಕಿಮರ್ಥಂ ತು ಸುರಶ್ರೇಷ್ಠ ಸಂಸ್ಮೃತಾಸ್ತು ವಯಂ ತ್ವಯಾ ॥೩೧೨॥

---

೩೦೮. ಪಾರ್ವತಿಯು ಆ ಮರದಲ್ಲಿ ತನ್ನ ವಸ್ತ್ರಭೂಷಣಗಳನ್ನು ಇರಿಸಿ ಪವಿತ್ರವಾದ ನಾರುಡೆಯನ್ನುಟ್ಟಳು. ದರ್ಭೆಯನ್ನು ಹೆಣೆದು ಡಾಬಿನಂತೆ ಸೊಂಟಕ್ಕೆ ಕಟ್ಟಿಕೊಂಡಳು.

೩೦೯. ದಿನಕ್ಕೆ ಮೂರುಸಾರಿ ಸ್ನಾನಮಾಡಿ ಪಾದರಿ ಹೂವನ್ನು ಆಹಾರ ವಾಗಿ ತೆಗೆದುಕೊಳ್ಳುತ್ತ ನೂರು ವರ್ಷವನ್ನು ಕಳೆದಳು. ತರುವಾಯ ನೂರು ವರ್ಷ ತರಗೆಲೆಯನ್ನು ಭಕ್ಷಿಸಿ ದೇಹಧಾರಣಮಾಡಿದಳು.

೩೧೦. ತಪೋನಿಧಿಯಾದ ಆಕೆಯು ಮತ್ತೆ ನೂರು ವರ್ಷಕಾಲ ಉಪವಾಸ ಮಾಡಿದಳು. ಅವಳ ತಪಸ್ಸಿನ ಜ್ವಾಲೆಯಿಂದ ಪ್ರಾಣಿಗಳೆಲ್ಲವೂ ಗಾಬರಿಗೊಂಡುವು.

೩೧೧. ತರುವಾಯ ಪೂಜ್ಯನಾದ ಇಂದ್ರನು ಸಪ್ತರ್ಷಿಗಳನ್ನು ಧ್ಯಾನಿಸಿದನು. ಅವರೆಲ್ಲರೂ ಒಟ್ಟಿಗೆ ಬಂದು ಅಲ್ಲಿ ಕಾಣಿಸಿಕೊಂಡರು.

೩೧೨. ದೇವೇಂದ್ರನು ಅವರನ್ನು ಸತ್ಕರಿಸಿದನು. "ದೇವರಾಜಾ, ನಮ್ಮನ್ನು ನೀನು ಸ್ಮರಿಸಿಕೊಳ್ಳಲು ಕಾರಣವೇನು? ನಮ್ಮಿಂದ ಆಗಬೇಕಾದ ಪ್ರಯೋಜನವೇನು?" ಎಂದು ಮುನಿಗಳು ಕೇಳಿದರು.

ಶಕ್ರಃ ಪ್ರೋವಾಚ ಶೃಣ್ವಂತು ಭಗವಂತಃ ಪ್ರಯೋಜನಂ ।
ಹಿಮಾಚಲೇ ತಪೋ ಘೋರಂ ತಪ್ಯತೇ ಭೂಧರಾತ್ಮಜಾ ।
ತಸ್ಯಾ ಹ್ಯಭಿಮತಂ ಕಾಮಂ ಭವಂತಃ ಕರ್ತುಮರ್ಹಥ ॥೩೧೩॥

ತತಃ ಸಮಾಪರ್ತ ದೇವ್ಯಾ ಜಗದರ್ಥಂ ತ್ವರಾನ್ವಿತಾಃ ।
ತಥೇತ್ಯುಕ್ತ್ವಾ ತು ಶೈಲೇಂದ್ರಂ ಸಿದ್ಧಸಂಘಾತಸೇವಿತಂ । ॥೩೧೪॥

ಊಚುರಾಗತ್ಯ ಮುನಯಸ್ತಾಮಥೋ ಮಧುರಾಕ್ಷರಂ ।
ಪುತ್ರಿ ಕಿಂ ತೇ ವ್ಯವಸಿತಃ ಕಾಮಃ ಕಮಲಲೋಚನೇ ॥೩೧೫॥

ತಾನುವಾಚ ತತೋ ದೇವೀ ಸಲಜ್ಜಾ ಗೌರವಾನ್ಮುನೀನ್ ।
ತಪಸ್ಯತೋ ಮಹಾಭಾಗಾಃ ಪ್ರಾಪ್ಯ ಮೌನಂ ಭವಾದೃಶಾನ್ ॥೩೧೬॥

---

೩೧೩. "ಪೂಜ್ಯರೇ ! ತಮ್ಮ ಆಗಮನದಿಂದಾಗಬೇಕಾದ ಪ್ರಯೋಜನವನ್ನು ಕೇಳಿರಿ. ಹಿಮಾಲಯ ಪರ್ವತದಲ್ಲಿ ಪರ್ವತರಾಜನ ಪುತ್ರಿಯು ಘೋರವಾದ ತಪಸ್ಸನ್ನು ಮಾಡುತ್ತಿದ್ದಾಳೆ. ನೀವು ಅವಳ ಕೋರಿಕೆಯನ್ನು ಸಲ್ಲಿಸಬೇಕು" ಎಂದು ಇಂದ್ರನು ಹೇಳಿದನು.

೩೧೪. ಬಳಿಕ ಅವರು ಲೋಕಹಿತಕ್ಕಾಗಿ ಆ ಕಾರ್ಯವನ್ನು ಒಪ್ಪಿಕೊಂಡು ಸಿದ್ಧಗಣದಿಂದ ಸೇವಿತವಾಗಿ ಪಾರ್ವತಿಯ ತಪಸ್ಥಾನವಾಗಿದ್ದ ಹಿಮವತ್ಪರ್ವತಕ್ಕೆ ಬೇಗನೆ ಬಂದರು.

೩೧೫. ಮುನಿಗಳು ಅಲ್ಲಿಗೆ ಬಂದು ಮಧುರ ವಚನದಿಂದ ಅವಳಿಗಿಂತು ಹೇಳಿದರು. "ಎಲೌ ಪುತ್ರಿ, ಕಮಲಾಕ್ಷಿ! ನಿನ್ನ ಮನಸ್ಸಿನಲ್ಲಿರುವ ಬಯಕೆಯೇನು?"

೩೧೬-೩೧೮. ಬಳಿಕ ಪಾರ್ವತಿಯು ಲಜ್ಜಾಯುಕ್ತಳಾಗಿ ಗೌರವದೊಡನೆ ಮುನಿಗಳಿಗಿಂತೆಂದಳು. "ಓ ಮಹಾಮಹಿಮರೇ ! ತಪೋನಿಧಿಗಳಾದ ನಿಮ್ಮಂತಹವರು ದೊರೆತಾಗ ನಮಸ್ಕರಿಸಬೇಕೆಂದು ಮೌನದಿಂದ ಮನಸ್ಸು ಮಾಡಿದರೂ ಸಾಕು. ನಿಸ್ಸಂದೇಹವಾಗಿ ಪಾಪವೆಲ್ಲವೂ ತೊಲಗುವುದು. ನೀವು ನನ್ನನ್ನು ಪ್ರಶ್ನಿಮಾಡ

ವಂದನಾಯ ನಿಯುಕ್ತಾ ಧೀಃ ಪಾವಯತ್ಯವಿಕಲ್ಪಿತಂ ।
ಪ್ರಶ್ನೋSಸ್ಮತ್ತೋSದ್ಭವತಾಂ ಯುಕ್ತಮಾಸನಮಾದಿತಃ ॥೩೧೭॥

ಉಪವಿಷ್ಟಾಃ ಶ್ರಮೋSಸ್ಮತ್ತಸ್ತತಃ ಪ್ರಕ್ಷ್ಯಥ ಮಾಮತಃ ।
ಇತ್ಯುಕ್ತ್ವಾ ಸಾ ತತಶ್ಚಕ್ರೇ ಕೃತಾಸನಪರಿಗ್ರಹಾನ್ ॥೩೧೮॥

ಸಾ ತು ತಾನ್ ವಿಧಿವತ್ಪೂಜ್ಯಾನ್ ಪೂಜಯಿತ್ವಾ ವಿಧಾನತಃ ।
ಉವಾಚಾದಿತ್ಯಸಂಕಾಶಾನ್ ಮುನೀನ್ ಸಪ್ತ ಸತೀ ಶನೈಃ ॥೩೧೯॥

ತ್ಯಕ್ತ್ವಾ ವ್ರತಾತ್ಮಕಂ ಮೌನಂ ಮೌನಂ ಜಗ್ರಾಹ ಹ್ರೀಮಯಂ ।
ಭಾವಂ ತಸ್ಯಾಸ್ತು ಮೌನಾಂತಂ ತಸ್ಯಾಃ ಸಪ್ತರ್ಷಯೋ ಯಥಾ ॥೩೨೦॥

ಗೌರವಾಧೀನತಾಂ ಪ್ರಾಪ್ತಾಃ ಪಪ್ರಚ್ಛುಸ್ತಾಂ ಪುನಸ್ತಥಾ ।
ಸಾSಪಿ ಗೌರವಗರ್ಭೇಣ ಮನಸಾ ಚಾರುಹಾಸಿನೀ ॥೩೨೧॥

---

ಬೇಕೆಂದಿರುವ ಕಾರಣ ಮೊದಲು ಆಸನದಲ್ಲಿ ಕುಳಿತುಕೊಳ್ಳುವುದು ಯುಕ್ತ. ಶ್ರಮವು ಪರಿಹಾರವಾದ ಬಳಿಕ ನನ್ನನ್ನು ಪ್ರಶ್ನಿಸಿರಿ'' ಎಂದು ಹೇಳಿ ಅವರನ್ನು ಪೀಠಗಳಲ್ಲಿ ಕುಳ್ಳಿರಿಸಿದಳು.

೩೧೯. ಹಿಂದಿನ ಜನ್ಮದಲ್ಲಿ ಸತಿಯೆಂಬ ಹೆಸರನ್ನು ತಾಳಿದ್ದ ಆ ಪಾರ್ವತಿಯು ಪೂಜ್ಯರೂ ಸೂರ್ಯನಂತೆ ತೇಜೋಯುಕ್ತರೂ ಆದ ಆ ಸಪ್ತರ್ಷಿಗಳನ್ನು ಶಾಸ್ತ್ರೋಕ್ತ ವಾಗಿ ಪೂಜಿಸಿ ಮೆಲ್ಲಗೆ ಮಾತನಾಡಿದಳು.

೩೨೦. ಅವಳು ವ್ರತಸಂಬಂಧವಾದ ಮೌನವನ್ನು ತೊರೆದು ಲಜ್ಜಾ ಪ್ರಯುಕ್ತವಾದ ಮೌನವನ್ನು ತಾಳಿದಳು. ಸಪ್ತರ್ಷಿಗಳಿಗೆ ಅವಳ ಮೌನಭಾವದ ಅಭಿಪ್ರಾಯವು ಗೊತ್ತಾಯಿತು. ಅವರು ಗೌರವದಿಂದ ಮತ್ತೆ ಆಕೆಯನ್ನು ಕೇಳಿದರು.

೩೨೧. ಮುನಿಗಳು ತಮ್ಮ ಮಾತನ್ನು ನಿಲ್ಲಿಸಿದ ಬಳಿಕ ಮಂದಹಾಸಿನಿ ಯಾದ ಪಾರ್ವತಿಯು, ಮನಸ್ಸಿನಲ್ಲಿ ಗೌರವವು ಉಕ್ಕುತ್ತಿರಲು, ಅವರನ್ನು ನೋಡಿ ಎಲ್ಲೆ ಮೀರದಂತೆ ಇಂತೆಂದಳು.

ಮುನೀಞ್ಛಾಂತಕಥಾಲೋಕಾ‌ನ್ ಪ್ರೇಕ್ಷ್ಯ ಪ್ರೋವಾಚ ವಾಗ್ಮಿಯಂ ।
ಭಗವಂತೋ ವಿಜಾನಂತಿ ಪ್ರಾಣಿನಾಂ ಮಾನಸಂ ಹಿತಂ ॥೩೨॥

ಮನೋಗತೀಭಿರತ್ಯರ್ಥಂ ಕದರ್ಥ್ಯಂತೇ ಹಿ ದೇಹಿನಃ ।
ಕೇಚಿತ್ತು ನಿಪುಣಾಸ್ತತ್ರ ಯತಂತೇ ವಿಬುಧೋದ್ಯಮೈಃ ॥೩೩॥

ಉಪಾಯೈರ್ದುರ್ಲಭಾನ್ ಭಾವಾನ್ ಪ್ರಾಪ್ನುವಂತಿ ಹ್ಯತಂದ್ರಿತಾಃ ।
ಅಪರೇ ತು ಪರಿಚ್ಛಿನ್ನಾ ನಾನಾಕಾರಾಭ್ಯುಪಕ್ರಮಾಃ ॥೩೪॥

ದೇಹಾಂತರಾರ್ಥಮಾರಂಭಮಾಶ್ರಯಂತಿ ಹಿತಪ್ರದಂ ।
ಮಮ ತ್ವಾಕಾಶಸಂಭೂತಪುಷ್ಪದಾಮವಿಭೂಷಿತಂ ॥೩೫॥

ವಂಧ್ಯಾಸುತಂ ಪ್ರಾಪ್ತುಕಾಮಂ ಮನಃ ಪ್ರಸರತೇ ಮುಹುಃ ।
ಅಹಂ ಕಿಲ ಭವಂ ದೇವಂ ಪತಿಂ ಪ್ರಾಪ್ತುಂ ಸಮುದ್ಯತಾ ॥೩೬॥

---

೩೨-೩೩. ಪ್ರಾಣಿಗಳ ಮನೋಗತವಾದ ಹಿತವಾವುದೆಂಬುದನ್ನು ಪೂಜ್ಯರಾದ ನೀವು ಬಲ್ಲಿರಿ. ಮನುಷ್ಯರು ತಮ್ಮ ಮನೋವ್ಯಾಪಾರಗಳಿಂದ ಬಹು ಮಟ್ಟಿಗೆ ತೊಂದರೆಗೊಳಗಾಗುತ್ತಾರೆ. ಕುಶಲರಾದ ಕೆಲವರಾದರೋ ಬುದ್ಧಿವಂತಿಕೆ ಯಿಂದ ಪ್ರಯತ್ನಿಸುತ್ತಾರೆ. ಅವರು ಜಾಗರೂಕರಾಗಿದ್ದು ದುರ್ಲಭವಾದ ಮನೋ ರಥಗಳನ್ನು ಉಪಾಯಗಳಿಂದ ಸಾಧಿಸುತ್ತಾರೆ.

೩೪. ಮಿತಪ್ರಜ್ಞರಾದ ಮತ್ತೆ ಕೆಲವರಾದರೋ ನಾನಾವಿಧವಾದ ಪ್ರಯತ್ನ ಗಳನ್ನು ಮಾಡುತ್ತ ತಮ್ಮ ಬುದ್ಧಿಗೆ ಹಿತಕರವೆಂದು ತೋರಿದ ಕಾರ್ಯವನ್ನು ಪ್ರಾರಂಭಿ ಸುತ್ತಾರೆ. ಆದರೆ ಅದು ಮೋಕ್ಷಸಾಧನವಾಗದು. ಪುನರ್ಜನ್ಮವನ್ನು ಮಾತ್ರ ಕೊಡತಕ್ಕುದಾಗಿರುವುದು.

೩೫-೩೬. ನನ್ನ ಮನಸ್ಸಾದರೋ ಆಕಾಶದಲ್ಲಿ ಬಿಟ್ಟ ಹೂಮಾಲೆಯನ್ನು ಮುಡಿದ ಬಂಜೆಯ ಮಗನನ್ನು ಸೇರಬೇಕೆಂದು ಬಾರಿಬಾರಿಗೂ ತವಕಪಡುತ್ತದೆ. ಏಕೆಂದರೆ ನಾನು ಮಹಾದೇವನನ್ನೇ ಪತಿಯಾಗಬೇಕೆಂದು ಬಯಸಿ ಅದಕ್ಕಾಗಿ ಯತ್ನಿ ಸುತ್ತಿದ್ದೇನೆ.

**ಪ್ರಕೃತ್ಯೈವ ದುರಾಧರ್ಷಂ ತಪಸ್ಯಂತಂ ತು ಸಂಪ್ರತಿ ।
ಸುರಾಸುರೈರನಿರ್ಣೀತಪರಮಾರ್ಥಕ್ರಿಯಾಶ್ರಯಂ ॥೩೨೭॥**

**ಸಾಂಪ್ರತಂ ಚಾಪಿ ನಿರ್ದಗ್ಧಮದನಂ ವೀತರಾಗಿಣಂ ।
ಕಥಮಾರಾಧಯೇದೀಶಂ ಮಾದೃಶೀ ತಾದೃಶಂ ಶಿವಂ ॥೩೨೮॥**

**ಇತ್ಯುಕ್ತ್ವಾ ಮುನಯಸ್ತೇ ತು ಸ್ಥಿರತಾಂ ಮನಸಸ್ತತಃ ।
ಜ್ಞಾತುಮಸ್ಯಾ ವಚಃ ಪ್ರೋಚುಃ ಪ್ರಕ್ರಮಾತ್ಪ್ರಕೃತಾರ್ಥಕಂ ॥೩೨೯॥**

**॥ ಮುನಯ ಊಚುಃ ॥**

**ದ್ವಿವಿಧಂ ತು ಸುಖಂ ತಾವತ್ಪುತ್ರಿ ಲೋಕೇಷು ಭಾವ್ಯತೇ ।
ಶರೀರಸ್ಯಾಸ್ಯ ಸಂಭೋಗೈಶ್ಚೇತಸಶ್ಚಾಪಿ ನಿರ್ವೃತಿಃ ॥೩೩೦॥**

---

೩೨೭. ಸ್ವಭಾವವಾಗಿಯೇ ಆ ಪರಮೇಶ್ವರನನ್ನು ಸಮೀಪಿಸುವುದು ಕಷ್ಟ. ಈಗಲಾದರೋ ಅವನು ತಪಸ್ಸಿನಲ್ಲಿ ತೊಡಗಿದ್ದಾನೆ. ಸುರಾಸುರರಿಗೆ ಸಹ ನಿರ್ಣಯಿಸುವುದಕ್ಕೆ ಕಷ್ಟವಾದ ಪರಮಾರ್ಥವ್ಯಾಪಾರದಲ್ಲಿ ನಿರತನಾಗಿದ್ದಾನೆ.

೩೨೮. ಈಗ ತಾನೆ ಅವನು ಮನ್ಮಥನನ್ನು ಸುಟ್ಟು ಬೂದಿಮಾಡಿದ್ದಾನೆ. ವಿಷಯಸುಖಗಳ ಮೇಲೆ ಅವನಿಗೆ ಅಭಿಲಾಷೆಯೇ ಇಲ್ಲ. ಇಂತಹ ಶಿವನನ್ನು ನನ್ನಂತಹವಳು ಮೆಚ್ಚಿಸಿ ಒಲಿಸಿಕೊಳ್ಳುವುದು ಹೇಗೆ?

೩೨೯. ಪಾರ್ವತಿಯು ಹೀಗೆ ಹೇಳಲು ಮುನಿಗಳು ಅವಳ ಮನಸ್ಸಿನ ಸ್ಥೈರ್ಯವನ್ನು ತಿಳಿಯಬೇಕೆಂದು ಅವಳು ಪ್ರಾರಂಭಿಸಿದ ಪ್ರಕೃತ ವಿಷಯವನ್ನೇ ಕುರಿತು ಹೀಗೆ ಹೇಳಿದರು.

೩೩೦. ಮುನಿಗಳು ಹೇಳಿದರು.—ಎಲೌ ಮಗಳೇ! ಲೋಕದಲ್ಲಿ ಸುಖವು ಎರಡು ವಿಧವಾಗಿದೆಯೆಂದು ಪ್ರಾಜ್ಞರು ತಿಳಿಯುತ್ತಾರೆ. ವಿಷಯಸುಖಗಳ ಅನುಭವದಿಂದ ಶರೀರಕ್ಕೆ ಆಗುವ ಸುಖವೊಂದು. ವೈರಾಗ್ಯದಿಂದ ಮನಸ್ಸಿಗೆ ಉಂಟಾಗುವ ಸುಖವೊಂದು.

ಪ್ರಕೃತ್ಯಾ ಸ ತು ದಿಗ್ವಾಸಾ ಭೀಮಃ ಪಿತೃವಣೇಶಯಃ ।
ಕಪಾಲೀ ಭಿಕ್ಷುಕೋ ನಗ್ನೋ ವಿರೂಪಾಕ್ಷಃ ಸ್ಥಿರಕ್ರಿಯಃ ॥೩೩೧॥

ಪ್ರಮತ್ತೋನ್ಮತ್ತಕಾಕಾರೋ ಬೀಭತ್ಸಕೃತಸಂಗ್ರಹಃ ।
ಯತಿನಾ ತೇನ ಕಸ್ತೇಽರ್ಥೋ ಮೂರ್ತಾನರ್ಥೇನ ಕಾಂಕ್ಷಿತಃ ॥೩೩೨॥

ಯದಿ ಹ್ಯಸ್ಯ ಶರೀರಸ್ಯ ಭೋಗಮಿಚ್ಛಸಿ ಸಾಂಪ್ರತಂ ।
ತತ್ಕಥಂ ತೇ ಮಹಾದೇವಾದ್ಭಯಭಾಜೋ ಜುಗುಪ್ಸಿತಾತ್ ॥೩೩೩॥

ಸ್ರವದ್ರಕ್ತವಸಾಭ್ಯಕ್ತಕಪಾಲಕೃತಭೂಷಣಾತ್ ।
ಶ್ವಸದುಗ್ರಭುಜಂಗೇಂದ್ರಕೃತಭೂಷಣಭೀಷಣಾತ್ ॥೩೩೪॥

ಶ್ಮಶಾನವಾಸಿನೋ ರೌದ್ರಪ್ರಮಥಾನುಗತಾತ್ಸತಿ ।
ಸುರೇಂದ್ರಮುಕುಟವ್ರಾತನಿಘೃಷ್ಟಚರಣೋಽರಿಹಾ ॥೩೩೫॥

---

೩೩೧-೩೩೨. ಸ್ವಭಾವವಾಗಿಯೇ ಅವನು ದಿಗಂಬರ, ಭಯಂಕರ, ಶ್ಮಶಾನವಾಸಿ, ಕಪಾಲಧಾರಿ, ಭಿಕ್ಷುಕ, ಬೆತ್ತಲೆಯಾದವನು, ವಿಕಾರವಾದ ಕಣ್ಣುಗಳುಳ್ಳವನು, ಮಾಡಿದುದನ್ನೇ ಬಿಡದೆ ಮಾಡುತ್ತಿರುವವನು, ಪ್ರಮತ್ತನಂತೆಯೂ ಉನ್ಮತ್ತನಂತೆಯೂ ಇರುವವನು, ಜುಗುಪ್ಸೆಯನ್ನು ಹುಟ್ಟಿಸುವ ಪದಾರ್ಥಗಳನ್ನು ಸಂಗ್ರಹಿಸಿಕೊಂಡಿರತಕ್ಕವನು; ಒಟ್ಟಿನಲ್ಲಿ ಅನರ್ಥವೇ ಆಕಾರವನ್ನು ತಾಳಿ ಬಂದಂತೆ ತೋರತಕ್ಕವನು. ಇಂತಹ ಆ ಯತಿಯಿಂದ ನಿನ್ನ ಯಾವ ಮನೋರಥವು ತಾನೆ ಕೈಗೂಡೀತು?

೩೩೩-೩೩೪. ಎಲೌ ಸತೀ, ಈ ದೇಹದ ಸುಖವನ್ನು ನೀನು ಅಪೇಕ್ಷಿಸುವೆಯಾದರೆ ಆ ಮಹಾದೇವನಿಂದ ಈಗ ನಿನ್ನ ಆ ಆಸೆ ಹೇಗೆ ತಾನೆ ಪೂರ್ಣವಾಗುವುದು? ಏಕೆಂದರೆ ಅವನು ಭಯಂಕರ; ಜುಗುಪ್ಸೆಯನ್ನು ಹುಟ್ಟಿಸುವವನು. ರಕ್ತವೂ ಕೊಬ್ಬೂ ಹರಿಯುತ್ತಿರುವ ರುಂಡಗಳ ಮಾಲೆಯನ್ನು ಹಾಕಿಕೊಂಡಿರುವನು. ಭಯಂಕರವಾಗಿ ಉಸಿರುಬಿಡುತ್ತಿರುವ ಮಹಾಸರ್ಪದಿಂದ ಅಲಂಕೃತನಾಗಿರುವನು. ಶ್ಮಶಾನದಲ್ಲಿ ವಾಸಮಾಡುವನು. ಭೀಕರರಾದ ಪ್ರಮಥಗಣಗಳೊಡನೆ ಕೂಡಿರುವನು.

೩೩೫-೩೩೬. ಜಗದ್ರಕ್ಷಕನೂ, ಲಕ್ಷ್ಮೀಪತಿಯೂ, ಅನಂತಮೂರ್ತಿಯೂ, ಶತ್ರುನಾಶಕನೂ ಆದ ವಿಷ್ಣುವಿದ್ದಾನೆ. ದೇವತೆಗಳು ತಮ್ಮ ಕಿರೀಟಗಳನ್ನು ಆತನ

ಹರಿರಸ್ತಿ ಜಗದ್ಧಾತಾ ಶ್ರೀಕಾಂತೋಽನಂತಮೂರ್ತಿಮಾನ್ ।
ನಾಥೋ ಯಜ್ಞಭುಜಾಮಸ್ತಿ ತಥೇಂದ್ರಃ ಪಾಕಶಾಸನಃ ॥೩೩೬॥

ದೇವತಾನಾಂ ನಿಧಿಶ್ಚಾಸ್ತಿ ಜ್ವಲನಃ ಸರ್ವಕಾಮಕೃತ್ ।
ವಾಯುರಸ್ತಿ ಜಗದ್ಧಾತಾ ಯಃ ಪ್ರಾಣಃ ಸರ್ವದೇಹಿನಾಂ ॥೩೩೭॥

ತಥಾ ವೈಶ್ರವಣೋ ರಾಜಾ ಸರ್ವಾರ್ಥಮತಿಮಾನ್ ವಿಭುಃ ।
ಏಭ್ಯ ಏಕತಮಂ ಕಸ್ಮಾನ್ನ ತ್ವಂ ಸಂಪ್ರಾಪ್ತುಮಿಚ್ಛಸಿ ॥೩೩೮॥

ಉತಾನ್ಯದೇಹಸಂಪ್ರಾಪ್ತ್ಯಾ ಸುಖಂ ತೇ ಮನಸೇಪ್ಸಿತಂ ।
ಏವಮೇತತ್ತಥಾಪ್ಯತ್ರ ಪ್ರಭಾವೋ ನಾಕಸಂಪದಾಂ ।
ಅಸ್ಮಿನ್ನೇವ ಪರಾಃ ಸರ್ವಾಃ ಕಲ್ಯಾಣಪ್ರಾಪ್ತಯಸ್ತವ ॥೩೩೯॥

ಪಿತುರೇವಾಸ್ತಿ ತತ್ಸರ್ವಂ ಸುರೇಭ್ಯೋ ಯನ್ನ ವಿದ್ಯತೇ ।
ಅತಸ್ತತ್ಪ್ರಾಪ್ತಯೇ ಕ್ಲೇಶಃ ಸ ವಾಽಪ್ಯತ್ರಾಫಲಸ್ತವ ॥೩೪೦॥

---

ಪಾದಗಳಿಗೆ ಸೋಕಿಸಿ ನಮಸ್ಕರಿಸುತ್ತಾರೆ. ದೇವತೆಗಳ ಅಧಿಪತಿಯಾದ ಇಂದ್ರ ನಿದ್ದಾನೆ. ಪಾಕನೆಂಬ ಮಹಾಸುರನನ್ನು ಕೊಂದ ವೀರಾಗ್ರೇಸರನವನು.

೩೩೭. ಇಷ್ಟಾರ್ಥಗಳೆಲ್ಲವನ್ನೂ ಸಲ್ಲಿಸುವ ದೇವತೆಗಳ ನಿಧಿಯೆನಿಸಿದ ಅಗ್ನಿ ಯಿದ್ದಾನೆ. ಪ್ರಾಣಿಗಳಿಗೆಲ್ಲ ಪ್ರಾಣಭೂತನೂ ಜಗದ್ರಕ್ಷಕನೂ ಆದ ವಾಯು ವಿದ್ದಾನೆ.

೩೩೮. ಸಕಲೈಶ್ವರ್ಯದ ಅಧಿಪತಿಯೆನಿಸಿ ಪ್ರಾಜ್ಞನೂ ವಿಭುವೂ ಆಗಿರುವ ಕುಬೇರನಿದ್ದಾನೆ. ಇವರಲ್ಲೊಬ್ಬನನ್ನು ಪತಿಯನ್ನಾಗಿ ಪಡೆಯಲು ನೀನೇಕೆ ಇಷ್ಟ ಪಡುವುದಿಲ್ಲ ?

೩೩೯. ಹಾಗಲ್ಲದೆ ದೇಹಾಂತರ ಪ್ರಾಪ್ತಿಯಿಂದ ಸ್ವರ್ಗಾದಿಸುಖವನ್ನು ಅನುಭವಿಸಬೇಕೆಂದು ನಿನ್ನ ಮನಸ್ಸಿನಲ್ಲಿದೆಯೋ ? ಹಾಗೆಯೇ ಆಗಲಿ. ಆದರೂ ಈ ಜನ್ಮದಲ್ಲೇ ನಿನಗೆ ಸ್ವರ್ಗಸಂಪತ್ತಿನ ಮಹತ್ವವಿದೆ.

೩೪೦. ದೇವತೆಗಳಿಗೆ ಕೂಡ ಇಲ್ಲದಿರುವ ಐಶ್ವರ್ಯವಷ್ಟೂ ನಿಮ್ಮ ತಂದೆಗೇ ಇದೆ. ಆದುದರಿಂದ ಸ್ವರ್ಗಸುಖಕ್ಕಾಗಿ ನೀನು ಕ್ಲೇಶ ಪಡುವುದೂ ಸಹ ವ್ಯರ್ಥವೇ ಸರಿ.

ಪ್ರಾಯೇಣ ಪ್ರಾರ್ಥಿತೋ ಭದ್ರೇ ಸುಸ್ವಲ್ಪೋ ಹ್ಯತಿದುರ್ಲಭಃ ।
ಅಸ್ಯ ತೇ ವಿಧಿಯೋಗಸ್ಯ ಧಾತಾ ಕರ್ತಾಽತ್ರ ಚೈವ ಹಿ ॥೩೪೧॥

॥ ಸೂತ ಉವಾಚ ॥

ಇತ್ಯುಕ್ತ್ವಾ ಸಾ ತು ಕುಪಿತಾ ಮುನಿವರ್ಯೇಷು ಶೈಲಜಾ ।
ಉವಾಚ ಕೋಪರಕ್ತಾಕ್ಷೀ ಸ್ಫುರದ್ಭಿರ್ದಶನಚ್ಛದೈಃ ॥೩೪೨॥

॥ ದೇವ್ಯುವಾಚ ॥

ಅಸದ್ಗ್ರಹಸ್ಯ ಕಾ ನೀತಿರ್ವ್ಯಸನಸ್ಯ ಕ್ವ ಯಂತ್ರಣಾ ।
ವಿಪರೀತಾರ್ಥಬೋದ್ಧಾರಃ ಸತ್ಪಥೇ ಕೇನ ಯೋಜಿತಾಃ ॥೩೪೩॥

ಏವಂ ಮಾಂ ವೇತ್ಥ ದುಷ್ಪ್ರಜ್ಞಾಂ ಹ್ಯಸ್ಥಾನಾಸದ್ಗ್ರಹಪ್ರಿಯಾಂ ।
ನ ಮಾಂ ಪ್ರತಿ ವಿಚಾರೋಽಸ್ತಿ ತತೋಽಹಂಕಾರಮಾನಿನೀ ॥೩೪೪॥

---

೩೪೧. ಎಲೌ ಕಲ್ಯಾಣೀ! ಸಾಮಾನ್ಯವಾಗಿ ಅಪೇಕ್ಷಿಸಿದ ಸ್ವಲ್ಪ ಸುಖವಾದರೂ ದೊರೆಯುವುದು ಬಹಳ ಕಷ್ಟ. ಹೀಗಿರುವಾಗ ಈ ನಿನ್ನ ಭಾಗ್ಯಯೋಗದ ಕರ್ತನೂ ವಿಧಾತನೂ ಆದ ನಿಮ್ಮ ತಂದೆ ಇಲ್ಲೇ ಇರುವನಲ್ಲಾ.

೩೪೨. ಸೂತಪೌರಾಣಿಕನು ಹೇಳಿದನು.—ಮುನಿಗಳು ಹೀಗೆ ಹೇಳಲು ಪಾರ್ವತಿಗೆ ಕೋಪ ಬಂದಿತು. ಕ್ರೋಧದಿಂದ ಅವಳ ಕಣ್ಣುಗಳು ಕೆಂಪೇರಿದುವು. ತುಟಿಗಳು ನಡುಗಿದುವು. ಅವಳು ಅವರಿಗೆ ಉತ್ತರವಿತ್ತಳು.

೩೪೩. ಪಾರ್ವತಿ ಹೇಳಿದಳು.—ಹಟಮಾರಿತನಕ್ಕೆ ನೀತಿಯುಂಟೇ? ವಾಕ್ಪಾರುಷ್ಯ ಮೊದಲಾದ ವ್ಯಸನಕ್ಕೆ ಮನಸ್ಸನ್ನು ಕೊಟ್ಟ ಮೇಲೆ ಅದಕ್ಕೆ ತಡೆಯೆಲ್ಲಿಯದು? ಎಲೈ ತಪ್ಪು ತಿಳುವಳಿಕೆಯುಳ್ಳವರೇ, ನಿಮ್ಮನ್ನು ಧರ್ಮಸಂಸ್ಥಾಪನ ರೂಪವಾದ ಸತ್ಕಾರ್ಯದಲ್ಲಿ ನಿಯಮಿಸಿದವರಾರು?

೩೪೪. ಪಾತ್ರಾಪಾತ್ರವಿಮರ್ಶೆಯಿಲ್ಲದೆ ಅನರ್ಹನಾದವನ ಕೈಹಿಡಿಯುವ ಕೆಟ್ಟ ಬುದ್ಧಿಯವಳೆಂದು ನೀವು ನನ್ನನ್ನು ತಿಳಿದಿರುವಿರಿ. ನಾನೇನೋ ಈ ವಿಷಯವಾಗಿ ವಿಚಾರಮಾಡುವುದಿಲ್ಲ. ಹಾಗೆ ಮಾಡಿದರೆ ನನ್ನಲ್ಲಿ ಅಹಂಕಾರವು ಮೂಡೀತು.

ಪ್ರಜಾಪತಿಸಮಾಃ ಸರ್ವೇ ಭವಂತಃ ಸರ್ವದರ್ಶಿನಃ ।
ನೂನಂ ನ ವೇತ್ಥ ತಂ ದೇವಂ ಶಾಶ್ವತಂ ಜಗತಃ ಪ್ರಭುಂ ||೩೪೫||

ಅಜಮೀಶಾನಮವ್ಯಕ್ತಮಮೇಯಮಹಿಮೋದಯಂ ||೩೪೬||

ಆಸ್ತಾಂ ತದ್ಧರ್ಮಸದ್ಭಾವಸಂಬೋಧಸ್ತಾವದದ್ಭುತಃ ।
ವಿದುರ್ಯಂ ನ ಹರಿರ್ಬ್ರಹ್ಮಪ್ರಮುಖಾ ಹಿ ಸುರೇಶ್ವರಾಃ ||೩೪೭||

ಯತ್ತಸ್ಯ ವಿಭವಾತ್ ಸ್ಫೋತ್ಥಂ ಭುವನೇಷು ವಿಜೃಂಭಿತಂ ।
ಪ್ರಕಟಂ ಸರ್ವಭೂತಾನಾಂ ತದಪ್ಯತ್ರ ನ ವೇತ್ಥ ಕಿಂ ||೩೪೮||

ಕಸ್ಯೈತದ್ಗಗನಂ ಮೂರ್ತಿಃ ಕಸ್ಯಾಗ್ನಿಃ ಕಸ್ಯ ಮಾರುತಃ ।
ಕಸ್ಯ ಭೂಃ ಕಸ್ಯ ವರುಣಃ ಕಶ್ಚಂದ್ರಾರ್ಕವಿಲೋಚನಃ ||೩೪೯||

---

೩೪೫-೩೪೬. ನೀವೆಲ್ಲರೂ ಬ್ರಹ್ಮನಿಗೆ ಸಮಾನರು, ಸರ್ವಜ್ಞರು. ಆದರೂ ಶಾಶ್ವತನೂ ಜಗತ್ಪ್ರಭುವೂ ಆದ ಆ ಮಹೇಶ್ವರನನ್ನು ನಿಜವಾಗಿಯೂ ಅರಿತಿಲ್ಲ. ಅವನು ಉತ್ಪತ್ತಿರಹಿತ, ಈಶ್ವರ, ಅವ್ಯಕ್ತ, ಊಹಿಸುವುದಕ್ಕೆ ಅಸಾಧ್ಯವಾದ ಮಹಿಮೆಯುಳ್ಳವನು.

೩೪೭. ಅವನಿರಲಿ ; ಅವನು ಉಪದೇಶಮಾಡಿರುವ ಧರ್ಮದ ಸ್ವರೂಪವನ್ನರಿಯುವುದೂ ಆಶ್ಚರ್ಯಕರವೇ ಸರಿ. ಬ್ರಹ್ಮ, ವಿಷ್ಣು ಮೊದಲಾದ ಸುರಪ್ರಮುಖರೂ ಸಹ ಅದನ್ನರಿಯರು.

೩೪೮. ಅವನ ಮಹಿಮೆಯಿಂದ ಅವನಲ್ಲೇ ಉತ್ಪನ್ನವಾಗಿ, ಲೋಕಗಳಲ್ಲೆಲ್ಲ ವ್ಯಾಪಿಸಿ, ಸಕಲ ಪ್ರಾಣಿಗಳಿಗೂ ಗೊತ್ತಿರುವ ಸಂಗತಿಯೂ ಕೂಡ ನಿಮಗೆ ತಿಳಿಯದೆ ಹೋಯಿತೇನು ?

೩೪೯. ಈ ಆಕಾಶ, ಅಗ್ನಿ, ವಾಯು, ಭೂಮಿ, ವರುಣ ಇವರೆಲ್ಲರೂ ಯಾರಿಗೆ ಶರೀರಭೂತರು ? ಚಂದ್ರಸೂರ್ಯರು ಯಾರ ಕಣ್ಣೆನಿಸಿರುವರು ?

ಕಸ್ಯಾರ್ಚಯಂತಿ ಲೋಕೇಷು ಲಿಂಗಂ ಭಕ್ತ್ಯಾ ಸುರಾಸುರಾಃ ।
ಯಂ ಬ್ರುವಂತೀಶ್ವರಂ ದೇವಾ ವಿಧೀಂದ್ರಾದ್ಯಾ ಮಹರ್ಷಯಃ ||೩೫೦||

ಪ್ರಭಾವಂ ಪ್ರಭವಂ ಚೈವ ತೇಷಾಮಪಿ ನ ವೇತ್ಥ ಕಿಂ ।
ಅದಿತಿಃ ಕಸ್ಯ ಮಾತೇಯಂ ಕಸ್ಮಾಜ್ಜಾತೋ ಜನಾರ್ದನಃ ||೩೫೧||

ಅದಿತೇಃ ಕಶ್ಯಪಾಜ್ಜಾತಾ ದೇವಾ ನಾರಾಯಣಾದಯಃ ।
ಮರೀಚೇಃ ಕಶ್ಯಪಃ ಪುತ್ರೋ ಹ್ಯದಿತಿರ್ದಕ್ಷಪುತ್ರಿಕಾ ||೩೫೨||

ಮರೀಚಿಶ್ಚಾಪಿ ದಕ್ಷಶ್ಚ ಪುತ್ರೌ ತೌ ಬ್ರಹ್ಮಣಃ ಕಿಲ ।
ಬ್ರಹ್ಮಾ ಹಿರಣ್ಮಯಾತ್ತ್ವಂಡಾದ್ದಿವ್ಯಸಿದ್ಧಿವಿಭೂಷಿತಾತ್ ||೩೫೩||

ಕಸ್ಯ ಪ್ರಾದುರಭೂದ್ಧ್ಯಾನಾತ್ಪ್ರಕ್ಷುಬ್ಧಾಃ ಪ್ರಾಕೃತಾಂಶಕಾಃ ।
ಪ್ರಕೃತೌ ತು ತೃತೀಯಾಯಾಮಂಬುಜಾಜ್ಜನನಕ್ರಿಯಾ ||೩೫೪||

---

೩೫೦. ಲೋಕದಲ್ಲಿ ಸುರರೂ ಅಸುರರೂ ಯಾರ ಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಾರೆ? ಬ್ರಹ್ಮೇಂದ್ರಾದಿ ದೇವತೆಗಳೂ ಮಹರ್ಷಿಗಳೂ ಯಾರನ್ನು ಈಶ್ವರನೆಂದು ಹೇಳುತ್ತಾರೆ?

೩೫೧. ಅವರ ಮಹಿಮೆ, ಉತ್ಪತ್ತಿ ಇವುಗಳು ಕೂಡ ನಿಮಗೆ ತಿಳಿಯದೇನು? ಈ ಅದಿತಿ ಯಾರ ತಾಯಿ? ವಿಷ್ಣುವು ಯಾರಿಂದ ಜನಿಸಿದನು?

೩೫೨. ನಾರಾಯಣ ಮೊದಲಾದ ದೇವತೆಗಳು ಕಶ್ಯಪನಿಂದ ಅದಿತಿಯಲ್ಲಿ ಜನಿಸಿದರು. ಕಶ್ಯಪನು ಮರೀಚಿಯ ಮಗ. ಅದಿತಿಯು ದಕ್ಷನ ಮಗಳು.

೩೫೩-೩೫೫. ಅವನು ಜನಿಸಿದುದು ಯಾರ ಸಂಕಲ್ಪದಿಂದ? ಪ್ರಕೃತಿಯ ಅಂಶಗಳು ಪ್ರಕ್ಷೋಭವನ್ನು ಹೊಂದಿದುದು ಯಾರ ಇಚ್ಛೆಯಿಂದ? ಪ್ರಕೃತಿಯ ಮೂರನೆಯ ವಿಕಾರವಾದ ಅಹಂಕಾರ ತತ್ವದಿಂದ ಜಗತ್ತಿನಲ್ಲಿ ಸೃಷ್ಟಿಕಾರ್ಯವು ನಡೆದುದು ಯಾರಿಂದ? ತಮ್ಮ ತಮ್ಮ ಕರ್ಮಾನುಸಾರವಾಗಿ ದೇಹವೆತ್ತಿದ ಬುದ್ಧಿಪೂರ್ವವಾದ ಆರು ಬಗೆಯ ಜೀವರಾಶಿಗಳನ್ನು ಸೃಷ್ಟಿಸಿದವರಾರು?

ಜಾತಾ ಸಸರ್ಜ ಷಡ್ವರ್ಗಾನ್ ಬುದ್ಧಿಪೂರ್ವಾನ್ ಸ್ವಕರ್ಮಜಾನ್ ।
ಅಜಾತಕೋಽಭವದ್ವೇಧಾ ಬ್ರಹ್ಮಣೋಽವ್ಯಕ್ತಜನ್ಮನಃ ॥೩೫೫॥

ಯಃ ಸ್ವಯೋಗೇನ ಸಂಕ್ಷೋಭ್ಯ ಪ್ರಾಕೃತಂ ಕೃತವಾನಿದಂ ।
ಬ್ರಹ್ಮಣಃ ಸಿದ್ಧಸರ್ವಾರ್ಥಮೈಶ್ವರ್ಯಂ ಲೋಕಕರ್ತೃತಾಂ ॥೩೫೬॥

ವಿಮುರ್ವಿಷ್ಣ್ವಾದಯೋ ಯಚ್ಚ ಸ್ವಮಹಿಮ್ನಾ ಸದೈವ ಹಿ ।
ಕೃತ್ವಾನ್ಯಂ ದೇಹಮನ್ಯಾದೃಕ್ ತಾದೃಕ್ಕೃತ್ವಾ ಪುನರ್ಹರಿಃ ॥೩೫೭॥

ಕುರುತೇ ಜಗತಃ ಕೃತ್ಯಮುತ್ತಮಾಧಮಮಧ್ಯಮಂ ।
ಏವಮೇವ ಹಿ ಸಂಸಾರೋ ಯೋ ಜನ್ಮಮರಣಾತ್ಮಕಃ ॥೩೫೮॥

ಕರ್ಮಣಶ್ಚ ಫಲಂ ಹ್ಯೇತನ್ನಾನಾರೂಪಸಮುದ್ಭವಂ ।
ಅಥ ನಾರಾಯಣೋ ದೇವಃ ಸ್ವಕಾಂ ಛಾಯಾಂ ಸಮಾಶ್ರಯತ್ ॥೩೫೯॥

---

ಅಯೋನಿಜನೆನಿಸಿದ ಬ್ರಹ್ಮನು ಅವ್ಯಕ್ತಜನ್ಮನಾದ ಯಾವ ಪರಬ್ರಹ್ಮನ ಸಂಕಲ್ಪದಿಂದ ಉದಿಸಿದನು ?

೩೫೬. ತನ್ನ ಯೋಗಬಲದಿಂದ ಪ್ರಕೃತಿಯಲ್ಲಿ ವಿಕಾರವನ್ನುಂಟುಮಾಡಿ ಈ ಬ್ರಹ್ಮಾಂಡವನ್ನು ನಿರ್ಮಿಸಿದಾತನು ಯಾರು? ಬ್ರಹ್ಮನಿಗೆ ಸಕಲಾರ್ಥಸಿದ್ಧಿರೂಪವಾದ ಐಶ್ವರ್ಯವನ್ನೂ ಲೋಕಕರ್ತೃತ್ವವನ್ನೂ ಕೊಟ್ಟವನಾರು ?

೩೫೭-೩೫೮. ಆತನ ಮಹಿಮೆಯಿಂದ ವಿಷ್ಣು ಮೊದಲಾದವರು ಯಾವಾಗಲೂ ಜಗದ್ರಕ್ಷಣಾದಿ ಕಾರ್ಯವನ್ನರಿಯುವರು. ವಿಷ್ಣುವು ಅಸಾಧಾರಣವಾದ ದೇಹವನ್ನು ಮತ್ತೆ ಮತ್ತೆ ಧರಿಸಿ ಉತ್ತಮಮಧ್ಯಮಾಧಮರೂಪವಾದ ಜಗದ್ವ್ಯಾಪಾರವನ್ನು ನಡೆಸುವನು. ಜನ್ಮಮರಣರೂಪವಾದ ಸಂಸಾರದ ಕ್ರಮವೇ ಹೀಗೆ.

೩೫೯-೩೬೦. ಜೀವರಾಶಿಗಳು ನಾನಾರೂಪದಿಂದ ಹುಟ್ಟುವುದು ಅವುಗಳ ಕರ್ಮದ ಫಲದಿಂದ. ಪೂಜ್ಯನಾದ ನಾರಾಯಣನು ತನ್ನ ಮಾಯೆಯನ್ನಾಶ್ರಯಿಸಿ ಸ್ವಸಂಕಲ್ಪದಿಂದ ಪ್ರೇರಿತನಾಗಿ ನಾನಾಪ್ರಕಾರವಾದ ಜನ್ಮಗಳನ್ನು ತಾಳುವನು.

ತತ್ಪ್ರೇರಿತಃ ಪ್ರಕುರುತೇ ಜನ್ಮ ನಾನಾಪ್ರಕಾರಕಂ ।
ಸಾಽಪಿ ಕರ್ಮಣ ಏವೋಕ್ತಾ ಪ್ರೇರಣಾ ವಿವಶಾತ್ಮನಾಂ ॥೩೬೦॥

ಯಥೋನ್ಮಾದಾದಿಜುಷ್ಟಸ್ಯ ಮತಿರೇವ ಹಿ ಸಾ ಭವೇತ್ ।
ಇಷ್ಟಾನ್ಯೇವ ಯಥಾರ್ಥಾನಿ ವಿಪರೀತಾನಿ ಮನ್ಯತೇ ॥೩೬೧॥

ಲೋಕಸ್ಯ ವ್ಯವಹಾರೇಷು ಸ್ಪಷ್ಟೇಷು ಹಸತೇ ಸದಾ ।
ಧರ್ಮಾಧರ್ಮಫಲಾವಾಪ್ತೌ ವಿಷ್ಣುರೇವ ನಿಬೋಧಿತಃ ॥೩೬೨॥

ಅಥಾನಾದಿತ್ವಮಸ್ಯಾಸ್ತಿ ಸಾಮಾನ್ಯಾತ್ತು ತದಾತ್ಮನಾ ।
ನ ಹ್ಯಸ್ಯ ಜೀವಿತಂ ದೀರ್ಘಂ ದೃಷ್ಟಂ ದೇಹೇ ತು ಕುತ್ರಚಿತ್ ॥೩೬೩॥

ಭವದ್ಭಿರ್ಯಸ್ಯ ನೋ ದೃಷ್ಟಮಂತಮಗ್ರಮಥಾಪಿ ವಾ ।
ದೇಹಿನಾಂ ಧರ್ಮ ಏವೈಷ ಕ್ವಚಿಜ್ಜಾಯೇತ್ಕ್ವಚಿನ್ಮ್ರಿಯೇತ್ ॥೩೬೪॥

---

ಕರ್ಮವಶರಾದ ಜೀವಾತ್ಮರಿಗೆ ಆ ಜನ್ಮಪ್ರಾಪ್ತಿಯೂ ಸಹ ಕರ್ಮದ ಪ್ರೇರಣೆಯಿಂದಲೇ ಆಗುತ್ತದೆ.

೩೬೧. ಉನ್ಮಾದ ಮುಂತಾದುವು ಹತ್ತಿದವನ ಬುದ್ಧಿಯೇ ಹೀಗೆ. ಇಷ್ಟವಾದ ವಿಷಯಗಳೇ ಅವನಿಗೆ ವಿರೋಧವಾಗಿ ಕಾಣುತ್ತವೆ. ವಾಸ್ತವವಾದ ಸಂಗತಿಯು ಅವನಿಗೆ ಭ್ರಾಂತಿಯಾಗುತ್ತದೆ.

೩೬೨. ಬಳಕೆಯಾದ ಲೋಕವ್ಯವಹಾರಗಳನ್ನು ನೋಡಿ ಅವನು ಯಾವಾಗಲೂ ನಗುತ್ತಾನೆ. ಹೀಗೆಯೇ ಕರ್ಮವಶನಾದ ಆತ್ಮನ ಪಾಡು. ಧರ್ಮದ ಮತ್ತು ಅಧರ್ಮದ ಫಲವನ್ನು ಕರ್ಮಾನುಗುಣವಾಗಿ ಕೊಡುವಾತನು ವಿಷ್ಣುವೆಂದೇ ಹೇಳಿದೆ.

೩೬೩. ಸಾಮಾನ್ಯವಾಗಿ ಆತ್ಮನೇನೋ ಅನಾದಿಯೇ ಅಹುದು. ಆದರೆ ಇವನು ಯಾವುದೊಂದು ದೇಹದಲ್ಲಿಯೂ ದೀರ್ಘಕಾಲವಿರುವುದಿಲ್ಲ. ದೇಹ ಸಂಬಂಧವಾದ ಇವನ ಆದ್ಯಂತಗಳು ನಿಮ್ಮಂತಹವರಗೂ ತಿಳಿಯುವುದಿಲ್ಲ.

೩೬೪-೩೬೫. ಪ್ರಾಣಿಗಳ ಲಕ್ಷಣವೇ ಇದು. ಒಂದೆಡೆಯಲ್ಲಿ ಹುಟ್ಟುವುದು ; ಒಂದೆಡೆಯಲ್ಲಿ ಸಾಯುವುದು ; ಒಂದು ಕಡೆ ಗರ್ಭದಲ್ಲಿರುವಾಗಲೇ ನಾಶವಾಗುವುದು.

ಕ್ವಚಿದ್ಗರ್ಭಗತೋ ನಶ್ಯೇತ್ಕ್ವಚಿಜ್ಜೀವೇಜ್ಜರಾಮಯಃ ।
ಕ್ವಚಿತ್ಸಮಾಃ ಶತಂ ಜೀವೇತ್ಕ್ವಚಿದ್ಬಾಲ್ಯೇ ವಿಪದ್ಯತೇ ॥೩೬೫॥

ಶತಾಯುಃ ಪುರುಷೋ ಯಸ್ತು ಸೋಽನಂತಃ ಸ್ವಲ್ಪಜನ್ಮನಃ ।
ಜೀವಿತೋ ನ ಮ್ರಿಯತ್ಯಗ್ರೇ ತಸ್ಮಾತ್ಸೋಽಮರ ಉಚ್ಯತೇ ॥೩೬೬॥

ಅದೃಷ್ಟಜನ್ಮನಿಧನಾ ಹ್ಯೇವಂ ವಿಷ್ಣ್ವಾದಯೋ ಮತಾಃ ।
ಏತತ್ಸಂಶುದ್ಧಮೈಶ್ವರ್ಯಂ ಸಂಸಾರೇ ಕೋ ಲಭೇದಿಹ ॥೩೬೭॥

ತತ್ರ ಕ್ಷಯಾದಿಯೋಗಾತ್ತು ನಾನಾಶ್ಚರ್ಯಸ್ವರೂಪಿಣಿ ।
ತಸ್ಮಾದ್ದಿವಶ್ಚರಾನ್ ಸರ್ವಾನ್ ಮಲಿನಾನ್ ಸ್ವಲ್ಪಭೂತಿಕಾನ್ ॥೩೬೮॥

ನಾಹಂ ಭದ್ರಾಃ ಕಿಲೇಚ್ಛಾಮಿ ಋತೇ ಶರ್ವಾತ್ಪಿನಾಕಿನಃ ।
ಸ್ಥಿತಂ ಚ ತಾರತಮ್ಯೇನ ಪ್ರಾಣಿನಾಂ ಪರಮಂ ತ್ವಿದಂ ॥೩೬೯॥

---

ಮತ್ತೊಂದು ಕಡೆ ಹಣ್ಣು ಹಣ್ಣು ಮುಪ್ಪು ಬರುವವರೆಗೆ ಬದುಕುವುದು. ಒಂದು ಕಡೆ ನೂರು ವರ್ಷ ಜೀವಿಸುವುದು. ಇನ್ನೊಂದು ಕಡೆ ಬಾಲ್ಯದಲ್ಲಿಯೇ ಮೃತಿಯೈದುವುದು.

೩೬೬. ಸ್ವಲ್ಪಕಾಲ ಬದುಕಿದವನಿಗಿಂತಲೂ ನೂರು ವರ್ಷ ಬದುಕಿದವನು ಅನಂತನೆನಿಸುವನು. ಅವನಿಗಿಂತ ಮೊದಲು ಸಾಯದೆ ಇನ್ನೂ ಸ್ವಲ್ಪಕಾಲ ಬದುಕುವನನ್ನು ಅಮರನೆಂದೇ ಹೇಳುವರು.

೩೬೭. ಹೀಗೆ ವಿಷ್ಣು ಮುಂತಾದವರು ಅರಿವಿಗೆ ಮೀರಿದ ಹುಟ್ಟು ಸಾವುಗಳಿಗೆ ಸಿಕ್ಕಿಬಿದ್ದಿದ್ದಾರೆ. ಈ ಸಂಸಾರದಲ್ಲಿ ದುಃಖದ ಸಂಬಂಧವೇ ಇಲ್ಲದೆ ಶುದ್ಧವಾದ ಐಶ್ವರ್ಯವನ್ನು ಪಡೆಯುವವರಾರು?

೩೬೮. ಬಗೆಬಗೆಯ ಆಶ್ಚರ್ಯರೂಪದಿಂದ ಕೂಡಿದ ಸಂಸಾರದಲ್ಲಿ ನಾಶ ಮೊದಲಾದ ದೋಷಗಳು ತುಂಬಿವೆ. ಆದುದರಿಂದ ಎಲೈ ಪೂಜ್ಯರೇ! ಪಿನಾಕವೆಂಬ ಧನುಸ್ಸನ್ನು ಧರಿಸಿದ ಈಶ್ವರನನ್ನು ಹೊರತು ದೇವತೆಗಳಾರನ್ನೂ ನಾನು ಇಚ್ಛಿಸುವುದಿಲ್ಲ. ಅವರೆಲ್ಲರಲ್ಲೂ ದೋಷಗಳುಂಟು. ಅವರ ಐಶ್ವರ್ಯವೂ ಅಲ್ಪವಾದುದು.

೩೬೯. ಬುದ್ಧಿ, ಬಲ, ಐಶ್ವರ್ಯ, ಕಾರ್ಯಸಾಧನ ಮುಂತಾದ ಗುಣಗಳು ಪ್ರಾಣಿಗಳಲ್ಲಿ ತಾರತಮ್ಯದಿಂದ ಇದ್ದೇ ಇವೆ. ಆದರೆ ಮಹಾಪುರುಷರಲ್ಲಿ ಮಾತ್ರ ಇವುಗಳ ಪ್ರಮಾಣವು ಅಧಿಕವಾಗಿದೆ.

ಧೀಬಲೈಶ್ವರ್ಯಕಾರ್ಯಾದಿಪ್ರಮಾಣಂ ಮಹತಾಂ ಮಹತ್ ।
ಯಸ್ಮಾನ್ನ ಕಿಂಚಿದಪರಂ ಸರ್ವಂ ಯಸ್ಮಾತ್ಪ್ರವರ್ತತೇ ॥೩೭೦॥

ಯಸ್ಯೈಶ್ವರ್ಯಮನಾದ್ಯಂತಂ ತಮಹಂ ಶರಣಂ ಗತಾ ।
ಏಷ ಮೇ ವ್ಯವಸಾಯಶ್ಚ ದೀರ್ಘೋಽತಿ ವಿಪರೀತಕಃ ॥೩೭೧॥

ಯಾತ ವಾ ತಿಷ್ಠತೈವಾಥ ಮುನಯೋ ಮದ್ವಿಧಾಯಕಾಃ ।
ಏವಂ ನಿಶಮ್ಯ ವಚನಂ ದೇವ್ಯಾ ಮುನಿವರಾಸ್ತದಾ ।  ॥೩೭೨॥

ಆನಂದಾಶ್ರುಪರೀತಾಕ್ಷಾಃ ಸಸ್ವಜುಸ್ತಾಂ ತಪಸ್ವಿನೀಂ ।
ಊಚುಶ್ಚ ಪರಮಪ್ರೀತಾಃ ಶೈಲಜಾಂ ಮಧುರಂ ವಚಃ ॥೩೭೩॥

॥ ಋಷಯ ಊಚುಃ ॥

ಅತ್ಯದ್ಭುತಾಸ್ಯಹೋ ಪುತ್ರಿ ಜ್ಞಾನಮೂರ್ತಿರಿವಾಮಲಾ ।
ಪ್ರಸಾದಯಸಿ ನೋ ಭಾವಂ ಭವಭಾವಪ್ರತಿಶ್ರಯಾತ್ ॥೩೭೪॥

---

೩೭೦. ಯಾರಿಗಿಂತ ಬೇರೆ ಉತ್ತಮವಾದ ವಸ್ತುವಾವುದೂ ಇಲ್ಲವೋ, ಯಾರಿಂದ ಎಲ್ಲವೂ ನಡೆಯುತ್ತದೆಯೋ, ಯಾರ ಐಶ್ವರ್ಯಕ್ಕೆ ಆದ್ಯಂತಗಳಿಲ್ಲವೋ, ಅಂತಹ ಪರಮೇಶ್ವರನನ್ನು ನಾನು ಮರೆಹೊಕ್ಕಿರುವೆನು.

೩೭೧. ಸಹಜವಾದ ಆಲೋಚನೆಯಿಂದ ನಾನು ಮಾಡಿರುವ ದೃಢಸಂಕಲ್ಪ ಇದು. 'ಮಾನ್ಯರಾದ ಓ ಮುನಿಗಳಿರಾ! ನಿಮ್ಮ ಇಷ್ಟವಿದ್ದರೆ ಹೋಗಬಹುದು. ಇಲ್ಲವೇ ಇಲ್ಲೇ ಇರಬಹುದು.

೩೭೨-೩೭೩. ಪಾರ್ವತಿಯ ಈ ಮಾತನ್ನು ಕೇಳಿ ಸಪ್ತರ್ಷಿಗಳ ಕಣ್ಣುಗಳಲ್ಲಿ ಆನಂದಬಾಷ್ಪವು ತುಂಬಿತು. ಅವರು ಬಹಳ ಪ್ರೀತಿಯಿಂದ ಅವಳನ್ನು ಅಪ್ಪಿಕೊಂಡರು. ಮಧುರವಚನದಿಂದಿಂತೆಂದರು.

೩೭೪. ಋಷಿಗಳು ಹೇಳಿದರು.—ಓಹೋ! ಮಗಳೇ, ನೀನು ಅತ್ಯದ್ಭುತಳಾಗಿರುವೆ. ಆಕಾರವನ್ನು ತಳೆದು ಬಂದ ಜ್ಞಾನದಂತೆ ನಿರ್ಮಲಳಾಗಿರುವೆ. ಈಶ್ವರನಲ್ಲಿ ನಿನ್ನ ಮನಸ್ಸನ್ನು ನಿಲ್ಲಿಸಿ ಆ ಮೂಲಕವಾಗಿ ನಮ್ಮ ಮನಸ್ಸನ್ನೂ ನಿರ್ಮಲಗೊಳಿಸುವೆ.

ನ ತು ವಿದ್ಮೋ ವಯಂ ತಸ್ಯ ದೇವಸ್ಯೈಶ್ವರ್ಯಮದ್ಭುತಂ ।
ತ್ವನ್ನಿಶ್ಚಯಸ್ಯ ದೃಢತಾಂ ವೇತ್ತುಂ ವಯಮಿಹಾಗತಾಃ ॥೩೭॥

ಅಚಿರಾದೇವ ತನ್ವಂಗಿ ಕಾಮಸ್ತೇಽಯಂ ಭವಿಷ್ಯತಿ ।
ಕ್ವಾದಿತ್ಯಸ್ಯ ಪ್ರಭಾ ಯಾತಿ ರತ್ನೇಭ್ಯಃ ಕ್ವ ದ್ಯುತಿಃ ಪೃಥಕ್ ॥೩೮॥

ಕೋಽರ್ಥೋ ವರ್ಣಾವಲಿಕಾವ್ಯಕ್ತಃ ಕಥಂ ತ್ವಂ ಗಿರಿಶಂ ವಿನಾ ।
ಯಾಮೋ ನೈಕಾಭ್ಯುಪಾಯೇನ ತಮಭ್ಯರ್ಥಯಿತುಂ ವಯಂ ॥೩೯॥

ಅಸ್ಮಾಕಮಪಿ ವೈ ಸೋಽರ್ಥಃ ಸುತರಾಂ ಹೃದಿ ವರ್ತತೇ ।
ಅತಸ್ತ್ವಮೇವ ಸಾ ಬುದ್ಧಿರ್ಯತೋ ನೀತಿಸ್ತ್ವಮೇವ ಹಿ ॥೪೦॥

---

೩೭. ಆ ಮಹಾದೇವನ ಲೋಕೋತ್ತರವಾದ ಐಶ್ವರ್ಯವನ್ನು ನಾವೇನೋ ಅರಿಯೆವು. ನಿನ್ನ ಮನಸ್ಸಿನ ಸ್ಥೈರ್ಯವನ್ನು ಪರೀಕ್ಷಿಸಬೇಕೆಂದು ನಾವು ಇಲ್ಲಿಗೆ ಬಂದೆವು.

೩೮. ಎಲೌ ಲತಾಂಗೀ, ಬೇಗನೆ ನಿನ್ನ ಇಷ್ಟಾರ್ಥವು ಕೈಗೂಡುವುದು. ಸೂರ್ಯನ ಕಾಂತಿಯು ಸೂರ್ಯನನ್ನೂ, ರತ್ನಗಳ ಪ್ರಕಾಶವು ರತ್ನಗಳನ್ನೂ ಬಿಟ್ಟು ಬೇರೆ ಎಲ್ಲಿ ಹೋಗುವುವು ?

೩೯. ಅಕ್ಷರರಾಶಿರೂಪವಾದ ಶಬ್ದವನ್ನುಳಿದು ಅರ್ಥವು ಸ್ವತಂತ್ರವಾಗಿ ನಿಲ್ಲಬಲ್ಲುದೆ? ನೀನು ಆ ಮಹಾದೇವನನ್ನು ಅಗಲಿರುವುದು ಹೇಗೆ ತಾನೆ ಸಾಧ್ಯ? ಇನ್ನು ನಾವು ಹೊರಡುವೆವು. ನಿನ್ನಲ್ಲಿ ಅನುಗ್ರಹಮಾಡುವಂತೆ ಪರಮೇಶ್ವರನನ್ನು ಹಲವು ಉಪಾಯಗಳಿಂದ ಪ್ರಾರ್ಥಿಸುವೆವು.

೪೦. ನೀನು ಹೇಳಿದ ವಿಷಯವೇ ನಮ್ಮ ಮನಸ್ಸಿನಲ್ಲಿಯೂ ಬಲವಾಗಿ ನಿಂತಿದೆ. ಆದುದರಿಂದ ನಮ್ಮ ಮತ್ತು ನಿನ್ನ ನಿಶ್ಚಯವೂ, ಅದನ್ನು ಸಾಧಿಸುವುದಕ್ಕಾಗಿ ಅನುಸರಿಸುವ ಕಾರ್ಯನೀತಿಯೂ ಅಭಿನ್ನವಾಗಿವೆ.

ಅತೋ ನಿಸ್ಸಂಶಯಂ ಕಾರ್ಯಂ ಶಂಕರೋಽಪಿ ವಿಧಾಸ್ಯತಿ ।
ಇತ್ಯುಕ್ತ್ವಾ ಪೂಜಿತಾ ಯಾತಾ ಮುನಯೋ ಗಿರಿಕನ್ಯಯಾ ॥೩೭೯॥

ಪ್ರಯಯುರ್ಗಿರಿಶಂ ದ್ರಷ್ಟುಂ ಪ್ರಸ್ಥಂ ಹಿಮವತೋ ಮಹತ್ ।
ಗಂಗಾಬುಪ್ಲಾವಿತಾತ್ಮಾನಂ ಪಿಂಗಬದ್ಧಜಟಾಸಟಂ ॥೩೮೦॥

ಭೃಂಗಾನುಯಾತಪಾಣಿಸ್ಥಮಂದಾರಕುಸುಮಸ್ರಜಂ ।
ಗಿರೇಃ ಸಂಪ್ರಾಪ್ಯ ತೇ ಪ್ರಸ್ಥಂ ದದೃಶುಃ ಶಂಕರಾಶ್ರಮಂ ॥೩೮೧॥

ಪ್ರಶಾಂತಾಶೇಷಸತ್ತ್ವೌಘಂ ನವಸ್ತಿಮಿತಕಾನನಂ ।
ನಿಶ್ಶಬ್ದಾಕ್ಷೋಭಸಲಿಲಪ್ರಪಾತಂ ಸರ್ವತೋದಿಶಂ ॥೩೮೨॥

ತತ್ರಾಪಶ್ಯಂಸ್ತತೋ ದ್ವಾರಿ ವೀರಕಂ ವೇತ್ರಪಾಣಿನಂ ।
ಸಪ್ತ ತೇ ಮುನಯಃ ಪೂಜ್ಯಾ ವಿನೀತಾಃ ಕಾರ್ಯಗೌರವಾತ್ ॥೩೮೩॥

---

೩೭೯. ಆದಕಾರಣ ಶಂಕರನೂ ಈ ಕಾರ್ಯವನ್ನು ನಡೆಸಿಕೊಡುವನು. ಸಂದೇಹವಿಲ್ಲ." ಹೀಗೆಂದು ಹೇಳಿ ಸಪ್ತರ್ಷಿಗಳು ಪಾರ್ವತಿಯಿಂದ ಸತ್ಕೃತರಾಗಿ ಅಲ್ಲಿಂದ ಹೊರಟರು.

೩೮೦. ಅವರು ಮಹೇಶ್ವರನನ್ನು ನೋಡುವುದಕ್ಕಾಗಿ ಹಿಮಾಚಲದ ವಿಸ್ತಾರವಾದ ತಪ್ಪಲಿಗೆ ಹೋದರು. ಗಂಗಾನದಿಯ ನೀರಿನ ಹನಿಗಳಿಂದ ಆ ಮಹಾತ್ಮನ ದೇಹವು ತೊಯ್ದು ಹೋಗಿತ್ತು. ಹೊಂಬಣ್ಣದ ಜಟೆಯನ್ನು ಅವನು ಕಟ್ಟಿದ್ದನು. ಅವನ ಕೈಯಲ್ಲಿದ್ದ ಮಂದಾರಪುಷ್ಪದ ಮಾಲೆಗೆ ದುಂಬಿಗಳು ಮುತ್ತುತ್ತಿದ್ದುವು.

೩೮೧-೩೮೨. ಅವರು ಹಿಮಾಚಲದ ತಪ್ಪಲನ್ನು ಸೇರಿ ಮಹಾದೇವನ ಆಶ್ರಮವನ್ನು ನೋಡಿದರು. ಅಲ್ಲಿನ ಪ್ರಾಣಿಗಳೆಲ್ಲವೂ ಪ್ರಶಾಂತವಾಗಿದ್ದುವು. ವನಪ್ರದೇಶವು ರಮ್ಯವಾಗಿಯೂ ಸ್ತಿಮಿತವಾಗಿಯೂ ಇದ್ದಿತು. ದಿಕ್ಕುಗಳೆಲ್ಲ ನಿಶ್ಶಬ್ದವೂ ಪ್ರಕಾಶವೂ ಆಗಿದ್ದುವು. ಜಲಪಾತಗಳು ಅಲ್ಲಲ್ಲಿ ಕಂಗೊಳಿಸುತ್ತಿದ್ದುವು.

೩೮೩. ಪೂಜ್ಯರಾದ ಆ ಸಪ್ತರ್ಷಿಗಳು ಕೈಯಲ್ಲಿ ಬೆತ್ತವನ್ನು ಹಿಡಿದುಕೊಂಡು ಬಾಗಿಲ ಬಳಿಯಲ್ಲಿ ನಿಂತಿದ್ದ ವೀರಕನನ್ನು ಕಂಡರು. ವಾಕ್ಕೌಶಲವುಳ್ಳ ಅವರು ಕಾರ್ಯಗೌರವದಿಂದ ವಿನೀತರಾಗಿ ಮಧುರ ವಚನದಿಂದ ಇಂತೆಂದರು.

ಊಚುರ್ಮಧುರಭಾಷಿಣ್ಯಾ ವಾಚಾ ತೇ ವಾಗ್ಮಿನಾಂ ವರಾಃ ।
ದ್ರಷ್ಟುಂ ವಯಮಿಹಾಯಾತಾಃ ಶರಣ್ಯಂ ಗಣನಾಯಕಂ ॥೩೮೪॥

ತ್ರಿಲೋಚನಂ ವಿಜಾನೀಹಿ ಸುರಕಾರ್ಯಪ್ರಚೋದಿತಾಃ ।
ತ್ವಮೇವ ನೋ ಗತಿಸ್ತತ್ವಂ ಯಥಾ ಕಾಲಾನತಿಕ್ರಮಃ ॥೩೮೫॥

ಸಾ ಪ್ರಾರ್ಥನೈಷಾ ಪ್ರಾಯೇಣ ಪ್ರತೀಹಾರಮಯಃ ಪ್ರಭುಃ ।
ಇತ್ಯುಕ್ತೋ ಮುನಿಭಿಃ ಸೋಽಥ ಗೌರವಾತ್ತಾನುವಾಚ ಸಃ ॥೩೮೬॥

ಸಮುಸ್ನಾಸ್ಯಾಪರಾಂ ಸಂಧ್ಯಾಂ ಸ್ನಾತುಂ ಮಂದಾಕಿನೀಜಲೇ ।
ಕ್ಷಣೇನ ಭವಿತಾ ವಿಪ್ರಾಸ್ತತ್ರ ದ್ರಕ್ಷ್ಯಥ ಶೂಲಿನಂ ॥೩೮೭॥

ಇತ್ಯುಕ್ತಾ ಮುನಯಸ್ತಸ್ಥುಸ್ತೇ ತತ್ಕಾಲಪ್ರತೀಕ್ಷಿಣಃ ।
ಗಂಭೀರಾಂಬುಧರಂ ಪ್ರಾವೃಟ್ತೃಷಿತಾಶ್ಚಾತಕಾ ಯಥಾ ॥೩೮೮॥

---

೩೮೪-೩೮೫. "ಎಲ್ಲರ ರಕ್ಷಕನೂ ಪ್ರಮಥ ಗಣಗಳ ಅಧಿಪತಿಯೂ ಆದ ಮಹೇಶ್ವರನನ್ನು ದೇವಕಾರ್ಯಕ್ಕೋಸ್ಕರವಾಗಿ ನೋಡಬೇಕೆಂದು ನಾವು ಬಂದಿರುವೆವು. ನಮಗೆ ನೀನೇ ಗತಿ. ಆದುದರಿಂದ ಕಾಲಹರಣವಾಗದಂತೆ ನಮ್ಮ ಈ ಪ್ರಾರ್ಥನೆಯನ್ನು ನಡೆಸಿಕೊಡಬೇಕು. ಸಾಮಾನ್ಯವಾಗಿ ಪ್ರಭುಪ್ರಸಾದವು ದ್ವಾರಪಾಲಕನ ವಿಶ್ವಾಸಕ್ಕೆ ಅನುಗುಣವಾಗಿರುವುದು."

೩೮೬-೩೮೭. ಮುನಿಗಳು ಹೀಗೆ ಹೇಳಲು ವೀರಕನು ಗೌರವದಿಂದ ಅವರಿಗೆ ಹೇಳಿದನು. "ಎಲೈ ಬ್ರಾಹ್ಮಣೋತ್ತಮರೇ! ಈಶ್ವರನು ಸಾಯಂಕಾಲದ ಸಂಧ್ಯಾವಂದನೆಯನ್ನು ನೆರವೇರಿಸುವ ಸಲುವಾಗಿ ಗಂಗಾನದಿಯ ಜಲದಲ್ಲಿ ಸ್ನಾನಮಾಡಬೇಕೆಂದು ಇನ್ನೊಂದು ಕ್ಷಣದಲ್ಲಿ ಬರುವನು. ಅಲ್ಲಿ ಅವನನ್ನು ನೋಡುವಿರಂತೆ."

೩೮೮. ವೀರಕನು ಇಂತೆನಲು ಆ ಮುನಿಗಳು ಮಳೆಗಾಲದಲ್ಲಿ ಬಾಯಾರಿದ ಚಾತಕಗಳು ಗಂಭೀರವಾದ ಮೋಡವನ್ನು ಎದುರುನೋಡುತ್ತಿರುವಂತೆ, ಈಶ್ವರನ ಸಮಯವನ್ನು ಕಾಯುತ್ತಿದ್ದರು.

ತತಃ ಕ್ಷಣೇನ ನಿಷ್ಪನ್ನಸಮಾಧಾನಕ್ರಿಯಾವಿಧಿಃ ।
ವೀರಾಸನಂ ಬಿಭೇದೇಶೋ ಮೃಗಚರ್ಮನಿವಾಸಿತಂ ॥೩೮೯॥

ತತೋ ವಿನೀತೋ ಜಾನುಭ್ಯಾಮವಲಂಬ್ಯ ಮಹೀಸ್ಥಿತಂ ।
ಉವಾಚ ವೀರಕೋ ದೇವಂ ಪ್ರಣಾಮೈಕಸಮಾಶ್ರಯಃ ॥೩೯೦॥

ಸಂಪ್ರಾಪ್ತಾಃ ಮುನಯಃ ಸಪ್ತ ತ್ವಾಂ ದ್ರಷ್ಟುಂ ದೀಪ್ತತೇಜಸಃ ।
ವಿಭೋ ಸಮಾದಿಶ ದ್ರಷ್ಟುಮನಂತರಮಿಹಾರ್ಹಸಿ ।
ತೇಽಬ್ರುವನ್ ದೇವಕಾರ್ಯೇಣ ತವ ದರ್ಶನಲಾಲಸಾಃ ॥೩೯೧॥

ಇತ್ಯುಕ್ತೋ ಧೂರ್ಜಟಿಸ್ತೇನ ವೀರಕೇಣ ಮಹಾತ್ಮನಾ ।
ಭ್ರೂಭಂಗಸಂಜ್ಞಯಾ ತೇಷಾಂ ಪ್ರವೇಶಾಜ್ಞಾಂ ದದೌ ತದಾ ॥೩೯೨॥

ಮೂರ್ಧಕಂಪೇನ ತಾನ್ ಸರ್ವಾನ್ವೀರಕೋಽಪಿ ಮಹಾಮುನೀನ್ ।
ಆಜುಹಾವಾವಿದೂರಸ್ಥಾನ್ ದರ್ಶನಾಯ ಪಿನಾಕಿನಃ ॥೩೯೩॥

---

೩೮೯. ಬಳಿಕ ಒಂದು ಕ್ಷಣದಲ್ಲಿ ಕೃಷ್ಣಾಜಿನದ ಮೇಲೆ ಕುಳಿತು ಸಮಾಧಿ ಸ್ಥಿತಿಯಲ್ಲಿದ್ದ ಮಹೇಶ್ವರನು ತಪಸ್ಸನ್ನು ಮುಗಿಸಿ ವೀರಾಸನವನ್ನು ಸಡಿಲಿಸಿದನು.

೩೯೦. ಆ ಮೇಲೆ ವೀರಕನು ವಿನಯದಿಂದ ಮಂಡಿಯೂರಿ ನಮಸ್ಕಾರಮಾಡಿ ಏಕಾಂತ ಭಕ್ತಿಯಿಂದ ನೆಲದಮೇಲೆ ಕುಳಿತಿದ್ದ ಪರಮೇಶ್ವರನಿಗಿಂತೆಂದನು. ಆ ಭಗವಂತನನ್ನು ಆಶ್ರಯಿಸಲು ಇರುವ ಉಪಾಯವೆಂದರೆ ಪ್ರಣಾಮವೊಂದೇ ಅಲ್ಲವೆ?

೩೯೧. "ದೇವಾ, ನಿನ್ನ ದರ್ಶನಕ್ಕಾಗಿ ಮಹಾತೇಜಸ್ವಿಗಳಾದ ಏಳು ಜನ ಮುನಿಗಳು ಬಂದಿದ್ದಾರೆ. ನಿನ್ನನ್ನು ಕಾಣಲು ಅವರಿಗೆ ಅಪ್ಪಣೆಕೊಡು. ಅಥವಾ ಮುಂದೇನು ಮಾಡಬೇಕೋ ಅದು ನಿನಗೆ ಸೇರಿದುದು. ದೇವತೆಗಳ ಕಾರ್ಯಕ್ಕೋಸ್ಕರ ನಿನ್ನನ್ನು ನೋಡಬೇಕೆಂದಿರುವುದಾಗಿ ಅವರು ಹೇಳಿದರು."

೩೯೨. ಮಹಾತ್ಮನಾದ ವೀರಕನು ಹೀಗೆ ಬಿನ್ನೈಸಲು, ಶಂಕರನು ಹುಬ್ಬನ್ನು ಹಾರಿಸಿ ಸನ್ನೆಮಾಡಿ ಅವರನ್ನು ಒಳಗೆ ಬಿಡಲು ಅಪ್ಪಣೆಯಿತ್ತನು.

೩೯೩. ವೀರಕನೂ ಸಹ ಹತ್ತಿರದಲ್ಲೇ ಇದ್ದ ಮಹರ್ಷಿಗಳೆಲ್ಲರನ್ನೂ ಈಶ್ವರನ ದರ್ಶನಕ್ಕಾಗಿ ಬರುವಂತೆ ತಲೆಯನ್ನಲ್ಲಾಡಿಸಿ ಕರೆದನು.

ತ್ವರಾಬದ್ಧಾರ್ಧಜೂಡಾಸ್ತೇ ಲಂಬಮಾನಾಜಿನಾಂಬರಾಃ ।
ವಿವಿಶುರ್ವೇದಿಕಾಂ ಸಿದ್ಧಾಂ ಗಿರಿಶಸ್ಯ ವಿಭೂತಿಭಿಃ ||೩೯೪||

ಬದ್ಧಪಾಣಿಪುಟಾಕ್ಷಿಪ್ತನಾಕಪುಷ್ಪೋತ್ಕರಾಸ್ತತಃ ।
ಪಿನಾಕಿಪಾದಯುಗಲಂ ಯಥಾ ನಾಕನಿವಾಸಿನಃ ||೩೯೫||

ತತಃ ಸ್ನಿಗ್ಧೇಕ್ಷಿತಾಃ ಶಾಂತಾ ಮುನಯಃ ಶೂಲಪಾಣಿನಾ ।
ಮನ್ಮಥಾರಿಂ ತತೋ ಹೃಷ್ಟಾಃ ಸಮ್ಯಕ್ತುಷ್ಟುವುರಾದೃತಾಃ ||೩೯೬||

ಅಹೋ ಕೃತಾರ್ಥಾ ವಯಮೇವ ಸಾಂಪ್ರತಂ
  ಸುರೇಶ್ವರೋಽಪ್ಯತ್ರ ವರೋ ಭವಿಷ್ಯತಿ ।
ಭವತ್ಪ್ರಸಾದಾಮಲವಾರಿಸೇಕತಃ
  ಫಲೇನ ಕಾಚಿತ್ತಪಸೋ ನಿಯುಜ್ಯತೇ ||೩೯೭||

---

೩೯೪. ಅವರು ಸಡಗರದಿಂದ ಜುಟ್ಟನ್ನು ಅರೆವಾಸಿ ಕಟ್ಟಿಕೊಂಡು, ಕೃಷ್ಣಾಜಿನವೂ ಹೊದ್ದಿದ್ದ ಬಟ್ಟೆಯೂ ಜೋಲಾಡುತ್ತಿರಲು, ಈಶ್ವರನ ಮಹಿಮಾಯುಕ್ತವಾದ ಸಿದ್ಧವೇದಿಕೆಯನ್ನು ಪ್ರವೇಶಿಸಿದರು.

೩೯೫. ಅವರು ಬೊಗಸೆಯ ತುಂಬ ಕಲ್ಪವೃಕ್ಷದ ಹೂಗಳನ್ನು ತುಂಬಿಕೊಂಡು ದೇವತೆಗಳು ಅರ್ಚಿಸುವ ರೀತಿಯಲ್ಲಿ ಪರಮೇಶ್ವರನ ಪಾದಗಳೆರಡನ್ನೂ ಅರ್ಚಿಸಿದರು.

೩೯೬. ತರುವಾಯ ಶಂಕರನು ಶಾಂತಚಿತ್ತನಾದನು. ಆ ಮುನಿಗಳನ್ನು ಸ್ನೇಹದಿಂದ ನೋಡಿದನು. ಅವರು ಹರ್ಷದಿಂದಲೂ ಆದರದಿಂದಲೂ ಆ ಮನ್ಮಥಾಂತಕನನ್ನು ಬಹುವಾಗಿ ಸ್ತೋತ್ರಮಾಡಿದರು.

೩೯೭. ಓಹೋ! ನಾವೇ ಈಗ ಧನ್ಯರು. ನಮ್ಮನ್ನಿಲ್ಲಿಗೆ ಕಳುಹಿಸಿಕೊಟ್ಟ ದೇವೇಂದ್ರನು ಪ್ರಖ್ಯಾತನೇ ಆಗುವನು. ನಿನ್ನ ಅನುಗ್ರಹವೆಂಬ ದಿವ್ಯೋದಕದಲ್ಲಿ ಸ್ನಾನಮಾಡಿ ಒಬ್ಬಾಳೊಬ್ಬ ನಾರಿಯು ತನ್ನ ತಪಸ್ಸಿನ ಫಲವನ್ನು ಇಷ್ಟರಲ್ಲೇ ಪಡೆಯುವಳು.

ಜಯತ್ಯಸೌ ಧನ್ಯತರೋ ಹಿಮಾಚಲ
ಸ್ತ್ವದಾಶ್ರಯಂ ಯಸ್ಯ ಸುತಾ ತಪಸ್ಯತಿ ।
ಸ ದೈತ್ಯರಾಜೋಽಪಿ ಮಹಾಫಲೋದಯೋ
ವಿಮೂಲಿತಾಶೇಷಸುರೋ ಹಿ ತಾರಕಃ ॥೯೮॥

ತ್ವದೀಯಮಂಶಂ ಪ್ರವಿಲೋಕ್ಯ ಕಲ್ಮಷಾತ್
ಸ್ವಕಂ ಶರೀರಂ ಪರಿಮೋಕ್ಷ್ಯತೇ ಹಿ ಯಃ ।
ಸ ಧನ್ಯಧೀರ್ಲೋಕಪಿತಾ ಚತುರ್ಮುಖೋ
ಹರಿಶ್ಚ ಯತ್ಸಂಭ್ರಮವಹ್ನಿದೀಪಿತಃ ॥೯೯॥

ತ್ವದಂಘ್ರಿಯುಗ್ಮಂ ಹೃದಯೇನ ಬಿಭ್ರತೋ
ಮಹಾಭಿತಾಪಪ್ರಶಮೈಕಹೇತುಕಂ ।
ತ್ವಮೇವ ಚೈಕೋ ವಿವಿಧಾ ಕೃತಕ್ರಿಯಃ
ಕಿಲೇತಿ ವಾಚಾ-ವಿಧುರೈರ್ವಿಭಾವ್ಯತೇ ॥೧೦೦॥

---

೯೮. ಬಹು ಧನ್ಯನಾದ ಈ ಹಿಮವಂತನು ಸರ್ವೋತ್ಕೃಷ್ಟನಾಗುತ್ತಾನೆ. ಏಕೆಂದರೆ ಅವನ ಮಗಳು ನಿನ್ನಲ್ಲೇ ಮನಸ್ಸನ್ನು ನಿಲ್ಲಿಸಿ ತಪಸ್ಸು ಮಾಡುತ್ತಿರುವಳು. ದೇವತೆಗಳೆಲ್ಲರನ್ನೂ ನಿರ್ಮೂಲಮಾಡಿದ ದೈತ್ಯರಾಜನಾದ ಆ ತಾರಕನೂ ಸಹ ಒಂದು ವಿಧದಲ್ಲಿ ಅತ್ಯಧಿಕವಾದ ಫಲವನ್ನೇ ಪಡೆಯುವನು.

೯೯. ಏಕೆಂದರೆ ಆತನು ನಿನ್ನ ಅಂಶದಿಂದ ಜನಿಸುವ ಕುಮಾರಸ್ವಾಮಿಯನ್ನು ನೋಡಿ ಹಲವು ಜನ್ಮಗಳಲ್ಲಿ ತನ್ನ ದೇಹೇಂದ್ರಿಯಗಳಿಂದ ಮಾಡಿದ ಪಾಪವನ್ನು ಕಳೆದುಕೊಂಡು ಪವಿತ್ರನಾಗುವನು. ಲೋಕಜನಕನೂ ಮಹಾಕುಶಲನೂ ಆದ ಬ್ರಹ್ಮನೇ ಧನ್ಯನು. ಆ ಷಣ್ಮುಖನ ಸಂಭ್ರಮವೆಂಬ ಅಗ್ನಿಯಿಂದ ಉತ್ತೇಜನಗೊಳ್ಳುವ ವಿಷ್ಣುವೂ ಸಹ ಕೃತಾರ್ಥನೇ ಸರಿ.

೧೦೦. ಇವರಿಬ್ಬರೂ ನಿನ್ನ ಪಾದಯುಗ್ಮವೇ ಆಧ್ಯಾತ್ಮಿಕಾದಿ ತಾಪಗಳ ಪರಿಹಾರಕ್ಕೆ ಮುಖ್ಯಸಾಧನವೆಂದು ನಂಬಿ ಅದನ್ನು ಹೃದಯದಲ್ಲಿ ಧಾರಣ ಮಾಡುವರು. ನೀನೊಬ್ಬನೇ ಬ್ರಹ್ಮಾದಿ ವಿವಿಧ ರೂಪಗಳಿಂದ ಸೃಷ್ಟಿ ಮೊದಲಾದ ನಾನಾ ಕಾರ್ಯಗಳನ್ನು ಮಾಡುವೆಯೆಂದು ತಿಳಿದು ಯೋಗಿಗಳು ನಿನ್ನ ಮಹಿಮೆಯನ್ನು ಮಾತುಗಳಿಂದ ವರ್ಣಿಸಲು ಅಸಮರ್ಥರಾಗಿ ಮನಸ್ಸಿನಲ್ಲೇ ಅನುಸಂಧಾನ ಮಾಡುವರು.

ಅಥಾದ್ಯ ಏಕಸ್ತ್ವಮನ್ವೈಷಿ ನಾನ್ಯಥಾ
ಜಗತ್ತಥಾ ನಿರ್ಘೃಣತಾಂ ತವ ಸ್ಪೃಶೇತ್ ।
ನ ವೇತ್ಸಿ ವಾ ದುಃಖಮಿದಂ ಭವಾತ್ಮಕಂ
ವಿಹನ್ಯತೇ ತೇ ಖಲು ಸರ್ವತಃ ಕ್ರಿಯಾ ॥೪೦೧॥

ಉಪೇಕ್ಷಸೇ ಚೇಜ್ಜಗತಾಮುಪದ್ರವಂ
ದಯಾಮಯತ್ವಂ ತವ ಕೇನ ಕಥ್ಯತೇ ।
ಸ್ವಯೋಗಮಾಯಾಮಹಿಮಾಗುಹಾಶ್ರಯಂ
ನ ವಿದ್ಯತೇ ನಿರ್ಮಲಭೂತಿಗೌರವಂ ॥೪೦೨॥

---

೪೦೧. ಜಗತ್ತಿನಲ್ಲಿ ಎಲ್ಲವನ್ನೂ ಬಲ್ಲವನೆಂದರೆ ನೀನೊಬ್ಬನೇ. ಬೇರೆ ಯಾರೂ ಇಲ್ಲ. ಹಾಗಿರುವುದಾದರೆ ಲೋಕವು ನಿನ್ನ ಈ ಇಷ್ಟೊಂದು ದಯೆಗೆ ಪಾತ್ರವಾಗದೆ ಹೋಗುತ್ತಿತ್ತು. ಈ ಸಂಸಾರರೂಪವಾದ ದುಃಖದ ಅನುಭವವೇ ನಿನಗೆ ಇಲ್ಲ. ಆದರೂ ಲೋಕಾನುಗ್ರಹಕ್ಕಾಗಿ ಈ ಸಂಸಾರದ ಸಂಬಂಧವನ್ನು ನೀನು ತಾಳದಿದ್ದರೆ ಈಗಿನ ನಿನ್ನ ಸೃಷ್ಟ್ಯಾದಿಕಾರ್ಯಗಳೆಲ್ಲ ನಿರರ್ಥಕವಾಗುವುವು.*

೪೦೨. ದೇವಾ, ಸ್ವರ್ಗ ಮರ್ತ್ಯಾದಿ ಸಕಲ ಲೋಕಗಳಲ್ಲಿಯೂ ಪ್ರಾಣಿಗಳು ಅನುಭವಿಸುತ್ತಿರುವ ಕಷ್ಟಪರಂಪರೆಯನ್ನು ನೀನು ಉಪೇಕ್ಷಿಸುವುದಾದರೆ ನಿನ್ನನ್ನು ದಯಾಮಯನೆಂದು ಹೇಳುವವರು ಯಾರು? ಯೋಗಮಾಯೆಯ ಮಹಿಮೆಯಿಂದ ಸಕಲ ಜಂತುಗಳ ಹೃದಯಾಂತರಾಳದಲ್ಲಿಯೂ ನೀನು ನೆಲಸಿರುವೆ. ಹೀಗೆ ಸರ್ವಜ್ಞನಾಗಿದ್ದೂ ಕೂಡ ಅವುಗಳ ದುಃಖವನ್ನು ಪರಿಹರಿಸದಿದ್ದರೆ ನಿನ್ನ ನಿಷ್ಕಳಂಕವಾದ ಮಹಿಮೆಗೆ ಗೌರವವು ಬಂದೀತೆ?

---

* ಹಿಮವಂತನ ಪುತ್ರಿಯಾದ ಪಾರ್ವತಿಯನ್ನು ವಿವಾಹವಾಗುವುದರ ಮೂಲಕ ಗೃಹಸ್ಥಾಶ್ರಮವನ್ನು ಸ್ವೀಕರಿಸಿ, ಲೋಕಕಂಟಕನಾದ ತಾರಕಾಸುರನನ್ನು ಸಂಹರಿಸಬಲ್ಲ ಕುಮಾರನಿಗೆ ಜನ್ಮವನ್ನು ಕೊಡಬೇಕೆಂದು ಭಾವ.

ವಯಂ ಚ ತೇ ಧನ್ಯತರಾಃ ಶರೀರಿಣಾಂ
ಯದೀದೃಶಂ ತ್ವಾಂ ಪ್ರವಿಲೋಕಯಾಮಹೇ ।
ಅದರ್ಶನಂ ತೇನ ಮನೋರಥೋ ಯಥಾ
ಪ್ರಯಾತಿ ಸಾಫಲ್ಯತಯಾ ಮನೋಗತಂ ॥೪೦೩॥

ಜಗದ್ವಿಧಾನೈಕವಿಧೌ ಜಗನ್ಮುಖೇ
ಕರಿಷ್ಯಸೇಽತೋ ಬಲಭಿಚ್ಚರಾ ವಯಂ ।
ವಿನೇಮುರಿತ್ಥಂ ಮುನಯೋ ವಿಸೃಜ್ಯ ತಾಂ
ಗಿರಂ ಗಿರೀಶಶ್ರುತಿಭೂಮಿಸನ್ನಿಧೌ ।
ಉತ್ಕೃಷ್ಟಕೇದಾರ ಇವಾವನೀತಲೇ
ಸುಬೀಜಮುಷ್ಟಿಂ ಸುಫಲಾಯ ಕರ್ಷಕಾಃ ॥೪೦೪॥

ತೇಷಾಂ ಶ್ರುತ್ವಾ ತತೋ ರಮ್ಯಾಂ ಪ್ರಕ್ರಮೋಪಕ್ರಮಕ್ರಿಯಾಂ ।
ವಾಚಂ ವಾಚಸ್ಪತಿರಿವ ಪ್ರೋವಾಚ ಸ್ಮಿತಸುಂದರಃ ॥೪೦೫॥

---

೪೦೩. ಇಂತಹ ಮಹಾಮಹಿಮನಾದ ನಿನ್ನನ್ನು ಕಣ್ಣಾರೆ ನೋಡುತ್ತಿರುವ ನಾವೇ ಪ್ರಾಣಿಗಳಲ್ಲೆಲ್ಲ ಅತ್ಯಂತ ಧನ್ಯರು. ನಿನ್ನ ದರ್ಶನವಾಗದಿದ್ದರೆ ನಾವು ಭಗ್ನ ಮನೋರಥರಾಗುತ್ತಿದ್ದೆವು. ಈಗ ನೀನು ಮೈದೋರಿದ ಕಾರಣ ನಮ್ಮ ಬಯಕೆ ಸಫಲವಾಯಿತು.

೪೦೪. ಓ ಪರಮೇಶ್ವರಾ! ಜಗತ್ತಿನ ಸೃಷ್ಟಿಗಿಂತಲೂ ಪೂರ್ವದಲ್ಲಿಯೇ ನೀನು ಅದರ ನಿರ್ಮಾಣ, ಪಾಲನ ಮುಂತಾದುವುಗಳನ್ನು ತೀವ್ರವಾಗಿ ಆಲೋಚಿಸುವೆ. (ಆದುದರಿಂದ ಈ ಜಗತ್ತಿಗೆ ಒದಗಿರುವ ಕಷ್ಟವನ್ನು ಪರಿಹರಿಸುವ ಭಾರವೂ ಕೂಡ ನಿನಗೇ ಸೇರಿದೆಯೆಂದು ಅಭಿಪ್ರಾಯ). ನಾವು ದೇವೇಂದ್ರನ ದೂತರು" ಎಂದು ಹೇಳಿ ಮಹರ್ಷಿಗಳು ಮಹಾದೇವನಿಗೆ ನಮಸ್ಕಾರ ಮಾಡಿದರು. ಹುಲಸಾಗಿ ಬೆಳೆ ಬೆಳೆಯಲೆಂದು ಫಲವತ್ತಾದ ನೆಲದಲ್ಲಿ ಒಳ್ಳೆಯ ಬೀಜವನ್ನು ಹಿಡಿಯಲ್ಲೆತ್ತಿ ಬಿತ್ತುವ ಬೇಸಾಯಗಾರರಂತೆ ಆ ಸಪ್ತರ್ಷಿಗಳು ಸಕಲ ಲೋಕಗಳ ಕ್ಷೇಮವನ್ನು ಚಿಂತಿಸಿ ಪರಮೇಶ್ವರನ ಕಿವಿಯಲ್ಲಿ ಅಮೋಘವಾದ ತಮ್ಮ ಬಿನ್ನಪವನ್ನು ಸಲ್ಲಿಸಿದರು.

೪೦೫. ಸರಿಯಾದ ಪೀಠಿಕೆಯೊಡನೆ ಋಷಿಗಳು ಹೇಳಿದ ಇಂಪಾದ ನುಡಿಗಳನ್ನು ಕೇಳಿ, ಮಹೇಶ್ವರನು ಬಳಿಕ ಮುಗುಳುನಗೆ ನಗುತ್ತ ಬೃಹಸ್ಪತಿಯಂತೆ ಪ್ರೌಢವಾದ ವಚನಗಳಿಂದ ಉತ್ತರವಿತ್ತನು.

|| ಶರ್ವ ಉವಾಚ ||

ಜಾನೇ ಲೋಕವಿಧಾನಸ್ಯ ಕನ್ಯಾ ಸತ್ಕಾರ್ಯಮುತ್ತಮಂ |
ಜಾತಾ ಪ್ರಾಲೇಯಶೈಲಸ್ಯ ಸಂಕೇತಕನಿರೂಪಣಾಃ ||೪೦೬||

ಸತ್ಯಮುತ್ಕಂಠಿತಾಃ ಸರ್ವೇ ದೇವಕಾರ್ಯಾರ್ಥಮುದ್ಯತಾಃ |
ತೇಷಾಂ ತ್ವರಂತಿ ಚೇತಾಂಸಿ ಕಿಂತು ಕಾರ್ಯಂ ವಿವಕ್ಷಿತಂ ||೪೦೭||

ಲೋಕಯಾತ್ರಾನುಗಂತವ್ಯಾ ವಿಶೇಷೇಣ ವಿಚಕ್ಷಣೈಃ |
ಸೇವಂತೇ ತೇ ಯತೋ ಧರ್ಮಂ ತತ್ಪ್ರಮಾಣ್ಯಾತ್ಪರೇ ಸ್ಥಿತಾಃ ||೪೦೮||

ಇತ್ಯುಕ್ತಾ ಮುನಯೋ ಜಗ್ಮುಸ್ತ್ವರಿತಾಸ್ತು ಹಿಮಾಚಲಂ |
ತತ್ರ ತೇ ಪೂಜಿತಾಸ್ತೇನ ಹಿಮಶೈಲೇನ ಸಾದರಂ |
ಊಚುರ್ಮುನಿವರಾಃ ಪ್ರೀತಾಃ ಸ್ವಲ್ಪವರ್ಣಂ ತ್ವರಾನ್ವಿತಾಃ ||೪೦೯||

---

೪೦೬. ಈಶ್ವರನು ಹೇಳಿದನು.—ಎಲೈ ಮಹರ್ಷಿಗಳೇ, ನೀವು ಇಂದ್ರನ ಮಾತಿನಂತೆ ನನ್ನ ಬಳಿಗೆ ಬಂದಿದ್ದೀರಿ. ಲೋಕಕ್ಷೇಮಕ್ಕಾಗಿ ನೀವು ಈ ಸತ್ಕಾರ್ಯವನ್ನು ಕೈಗೊಂಡಿರಿ. ಹಿಮವಂತನಿಗೆ ಕನ್ಯೆಯು ಹುಟ್ಟಿದ್ದಾಳೆ. ಇದೆಲ್ಲವೂ ನನಗೆ ಗೊತ್ತು.

೪೦೭. ದೇವತೆಗಳ ಕಾರ್ಯಕ್ಕಾಗಿ ಎಲ್ಲರೂ ಅಕ್ಕರೆಯಿಂದ ಪ್ರಯತ್ನಿಸುತ್ತಿದ್ದಾರೆ. ಅವರ ಮನಸ್ಸು ತವಕಪಡುತ್ತಿದೆ. ಆದರೆ ನಾನೊಂದು ವಿಚಾರವನ್ನು ಹೇಳಬೇಕೆಂದಿದ್ದೇನೆ.

೪೦೮. ಮುಖ್ಯವಾಗಿ ಜ್ಞಾನಿಗಳು ಲೋಕದ ನಡೆವಳಿಕೆಯನ್ನು ಬಿಡದೆ ಅನುಸರಿಸಬೇಕು. ಅವರು ಧರ್ಮವನ್ನು ಆಚರಿಸಿದರೆ ಉಳಿದವರೂ ಸಹ ಅದೇ ಪ್ರಮಾಣವೆಂದು ನಂಬಿ ತಾವೂ ಹಾಗೆಯೇ ನಡೆಯುವರು.

೪೦೯. ಶಂಕರನು ಹೀಗೆ ಹೇಳಲು ಸಪ್ತರ್ಷಿಗಳು ಹಿಮಾಚಲಕ್ಕೆ ತ್ವರೆಯಿಂದ ಹೋದರು. ಹಿಮವಂತನು ಆದರದಿಂದ ಅವರಿಗೆ ಸತ್ಕಾರವನ್ನು ಮಾಡಿದನು. ಅವರು ಪ್ರೀತರಾಗಿ ಸಾವಕಾಶಮಾಡದೆ ಸಂಗ್ರಹವಾಗಿ ಹೀಗೆ ಹೇಳಿದರು.

|| ಮುನಯ ಊಚುಃ ||

ದೇವೋ ದುಹಿತರಂ ಸಾಕ್ಷಾತ್ಪಿನಾಕೀ ತವ ಮಾರ್ಗತೇ |
ತಚ್ಛೀಘ್ರಂ ಪಾವಯಾತ್ಮಾನಮಾಹುತ್ಯೇವಾನಲಾರ್ಪಣಾತ್ ||೪೧೦||

ಕಾರ್ಯಮೇತಚ್ಚ ದೇವಾನಾಂ ಸುಚಿರಂ ಪರಿವರ್ತತೇ |
ಜಗದುದ್ಧರಣಾಯೈಷ ಕ್ರಿಯತಾಂ ವೈ ಸಮುದ್ಯಮಃ ||೪೧೧||

ಇತ್ಯುಕ್ತಸ್ತೈಸ್ತದಾ ಶೈಲೋ ಹರ್ಷಾವಿಷ್ಟೋಽವದನ್ಮುನೀನ್ |
ಅಸಮರ್ಥೋಽಭವದ್ವಕ್ತುಮುತ್ತರಂ ಪ್ರಾರ್ಥಯ ಇತ್ಯೇವಂ ||೪೧೨||

ತತೋ ಮೇನಾ ಮುನೀನ್ ವಂದ್ಯ ಪ್ರೋವಾಚ ಸ್ನೇಹವಿಕ್ಲವಾ |
ದುಹಿತುಸ್ತಾನ್ ಮುನೀಂಶ್ಚೈವ ಚರಣಾಶ್ರಯಮರ್ಥವತ್ ||೪೧೩||

---

೪೧೦. ಮುನಿಗಳು ಹೇಳಿದರು.—ಭಗವಂತನಾದ ಪರಮೇಶ್ವರನೇ ಸಾಕ್ಷಾತ್ತಾಗಿ ನಿನ್ನ ಕನ್ನೆಯನ್ನು ಇಚ್ಛಿಸುತ್ತಾನೆ. ಆದುದರಿಂದ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸುವಂತೆ ಪಾರ್ವತಿಯನ್ನು ಆ ಮಹಾತ್ಮನಿಗೆ ಅರ್ಪಿಸಿ ಬೇಗನೆ ನಿನ್ನನ್ನು ಪವಿತ್ರನನ್ನಾಗಿ ಮಾಡಿಕೋ.

೪೧೧. ಇದು ದೇವತೆಗಳಿಗೆ ಸಂಬಂಧಪಟ್ಟ ಕೆಲಸ. ಇದರ ಫಲವು ಶಾಶ್ವತವಾಗಿ ನಿಲ್ಲತಕ್ಕದು. ಲೋಕದ ಕ್ಷೇಮಕ್ಕಾಗಿ ಈ ಸತ್ಕಾರ್ಯವನ್ನು ನೀನು ಕೈಗೊಳ್ಳಬೇಕು.

೪೧೨. ಮುನಿಗಳು ಹೀಗೆ ನುಡಿಯಲು ಹಿಮವಂತನು ಸಂತುಷ್ಟನಾಗಿ ಅವರಿಗೆ ಹೇಳತೊಡಗಿದನು. ಈಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡಿದನು. ಆ ಭಾವಾವೇಶದಲ್ಲಿ ಅವನಿಗೆ ಮಾತನಾಡುವುದಕ್ಕೆ ಆಗದೆ ಹೋಯಿತು.

೪೧೩. ಬಳಿಕ ಮೇನಾದೇವಿಯು ಮಹರ್ಷಿಗಳನ್ನೂ ಸರ್ವಾಶ್ರಯವೆನಿಸಿದ ಪರಮೇಶ್ವರನ ಪಾದಗಳನ್ನೂ ವಂದಿಸಿ, ಮಗಳ ಮೇಲಣ ಪ್ರೀತಿಯಿಂದ ವ್ಯಾಕುಲಳಾಗಿ ಅರ್ಥಗರ್ಭಿತವಾದ ವಾಕ್ಯವನ್ನಿಂತು ಹೇಳಿದಳು.

## || ಮೇನೋವಾಚ ||

ಯದರ್ಥಂ ದುಹಿತುರ್ಜನ್ಮ ನೇಚ್ಛಂತ್ಯಪಿ ಮಹಾಫಲಂ ।
ತದೇವೋಪಸ್ಥಿತಂ ಸರ್ವಂ ಪ್ರಕ್ರಮೋಽತ್ರೈವ ಸಾಂಪ್ರತಂ ||೪೧೪||

ಕುಲಜನ್ಮವಯೋರೂಪವಿಭೂತ್ಯೃದ್ಧಿಯುತೋಽಪಿ ಯಃ ।
ವರಸ್ತಸ್ಯಾಪಿ ಚಾಹೂಯ ಸುತಾ ದೇಯಾ ಹ್ಯಯಾಚತಃ ||೪೧೫||

ತತ್ಸಮಸ್ತತಪೋಘೋರಂ ಕಥಂ ಪುತ್ರೀ ಪ್ರಯಾಸ್ಯತಿ ।
ಪುತ್ರೀವಾಕ್ಯಾದ್ಯದತ್ರಾಸ್ತಿ ವಿಧೇಯಂ ತದ್ವಿಧೀಯತಾಂ ||೪೧೬||

ಇತ್ಯುಕ್ತಾ ಮುನಯಸ್ತೇ ತು ಪ್ರಿಯಯಾ ಹಿಮಭೂಭೃತಃ ।
ಊಚುಃ ಪುನರುದಾರಾರ್ಥಂ ನಾರೀಚಿತ್ತಪ್ರಸಾದಕಂ ||೪೧೭||

---

೪೧೪. ಮೇನೆ ಹೇಳಿದಳು.—ಮಗಳು ಹುಟ್ಟಿದರೆ ತಂದೆತಾಯಿಗಳಿಗೆ ಅತಿಶಯವಾದ ಫಲವೇನೋ ಉಂಟು. ಆದರೂ ಅವರು ತಮಗೆ ಹೆಣ್ಣು ಹುಟ್ಟಲೆಂದು ಬಯಸುವುದಿಲ್ಲ. ಈಗ ನಡೆಯುತ್ತಿರುವುದನ್ನೆಲ್ಲ ನೋಡಿದರೆ ಯಾವ ಕ್ಲೇಶವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಮಗಳು ಹುಟ್ಟದಿರಲೆಂದು ಅಪೇಕ್ಷಿಸುತ್ತಾರೋ ಅದೇ ಕ್ಲೇಶವು ಬಂದು ಒದಗಿದೆ. (ಯೋಗ್ಯನಾದ ವರನನ್ನು ಸಂಪಾದಿಸುವುದೇ ಕಷ್ಟವೆಂಬುದು ಮೇನಾದೇವಿಯ ಅಭಿಪ್ರಾಯ).

೪೧೫. ಕುಲ, ಜನ್ಮ, ವಯಸ್ಸು, ರೂಪ, ಐಶ್ವರ್ಯ, ಸಂಪತ್ತು ಇವುಗಳಿಂದ ಕೂಡಿದ ಅನುರೂಪನಾದ ವರನನ್ನು, ಅವನು ತಾನಾಗಿ ಅಪೇಕ್ಷಿಸದಿದ್ದರೂ ಪ್ರಯತ್ನದಿಂದ ಕರೆದು ಕನ್ಯೆಯನ್ನು ಕೊಡಬೇಕು.

೪೧೬. ಬಗೆಬಗೆಯ ತಪಸ್ಸುಗಳನ್ನು ಮಾಡುತ್ತ ಭಯಂಕರರೂಪನಾಗಿರುವ ಪರಮೇಶ್ವರನನ್ನು ನನ್ನ ಮಗಳು ಹೇಗೆ ವರಿಸಿಯಾಳು? ಈ ವಿಷಯದಲ್ಲಿ ಅವಳನ್ನೇ ಕೇಳಿ ಹೇಗೆ ಉಚಿತವೋ ಹಾಗೆ ಮಾಡಬಹುದು.

೪೧೭. ಹಿಮವಂತನ ಪತ್ನಿಯಾದ ಮೇನೆಯು ಹೀಗೆ ಹೇಳಲು, ಆ ಮುನಿಗಳು ಹೆಂಗಸರ ಮನಸ್ಸಿಗೆ ಪ್ರಿಯವಾದ, ಉದಾರವಾದ ಅಭಿಪ್ರಾಯದಿಂದ ತುಂಬಿದ ಮಾತನ್ನು ಆಡಿದರು.

|| ಮುನಯ ಊಚುಃ ||

ಐಶ್ವರ್ಯಮವಗಚ್ಛಸ್ವ ಶಂಕರಸ್ಯ ಸುರಾಸುರೈಃ।
ಆರಾಧ್ಯಮಾನಪಾದಾಬ್ಜ ಯುಗಲತ್ವಾತ್ಸುನಿರ್ವೃತ್ತೈಃ ||೪೧೮||

ಯಸ್ಯೋಪಯೋಗಿ ಯದ್ರೂಪಂ ಸಾ ಚ ತತ್ಪ್ರಾಪ್ತಯೇ ಚಿರಂ।
ಘೋರಂ ತಪಸ್ಯತೇ ಬಾಲಾ ತೇನ ರೂಪೇಣ ನಿರ್ವೃತಿಃ ||೪೧೯||

ಯಸ್ತದ್ವ್ರತಾನಿ ದಿವ್ಯಾನಿ ನಯಿಷ್ಯತಿ ಸಮಾಪನಂ।
ತತ್ರ ಸಾವಹಿತಾ ತಾವತ್ತಸ್ಮಾತ್ಸೈವ ಭವಿಷ್ಯತಿ ||೪೨೦||

ಇತ್ಯುಕ್ತ್ವಾ ಗಿರಿಣಾ ಸಾರ್ಧಂ ತೇ ಯಯುರ್ಯತ್ರ ಶೈಲಜಾ।
ಜಿತಾರ್ಕಜ್ವಲನಜ್ವಾಲಾ ತಪಸ್ತೇಜೋಮಯೀ ಹ್ಯುಮಾ ||೪೨೧||

---

೪೧೮. ಮುನಿಗಳು ಹೇಳಿದರು.—ಸಕಲ ಸುಖಸಾಧನಗಳಿಂದಲೂ ಪೂರ್ಣರಾದ ದೇವತೆಗಳು ಮತ್ತು ರಾಕ್ಷಸರು ಪರಮೇಶ್ವರನ ಅಡಿದಾವರೆಗಳನ್ನು ಪೂಜಿಸುವರು. ಅವನು ಅತುಲೈಶ್ವರ್ಯಸಂಪನ್ನನೆಂಬುದನ್ನು ಇದರಿಂದಲೇ ತಿಳಿದುಕೋ.

೪೧೯. ಆ ಮಹಾದೇವನ ಮನಸ್ಸಿಗೆ ಯಾವ ರೂಪವು ಪ್ರಿಯವಾಗಿ ತೋರುವುದೋ ಅದನ್ನು ಪಡೆಯುವುದಕ್ಕಾಗಿ ಬಾಲೆಯಾದ ಪಾರ್ವತಿ ತೀವ್ರವಾಗಿ ತಪಸ್ಸು ಮಾಡುತ್ತಿರುವಳು. ಆ ರೂಪದಿಂದಲೇ ಅವಳಿಗೆ ಸುಖವುಂಟು.

೪೨೦. ಆ ಶಂಕರನು ಕೈಗೊಂಡ ಮಹಾವ್ರತಗಳು ಸಾಂಗವಾಗಿ ಮುಗಿದಾವೇ ಎಂದು ಆಕೆಯು ಅಕ್ಕರೆಯಿಂದ ಗಮನಿಸುತ್ತಿರುವಳು. ಆದಕಾರಣ ಅವನಿಗೆ ಅವಳೇ ತಕ್ಕವಳು.

೪೨೧. ಹೀಗೆ ಹೇಳಿ ಸಪ್ತರ್ಷಿಗಳು ಹಿಮವಂತನನ್ನು ಕರೆದುಕೊಂಡು ಪಾರ್ವತಿ ತಪಸ್ಸುಮಾಡುತ್ತಿದ್ದ ಕಡೆಗೆ ಹೋದರು. ಅವಳ ತೇಜಸ್ಸು ಸೂರ್ಯ ಮತ್ತು ಅಗ್ನಿಗಳ ಜ್ವಾಲೆಯನ್ನು ಮೀರಿಸಿತ್ತು.

ಪ್ರೋಚುಸ್ತಾಂ ಮುನಯಃ ಸ್ನಿಗ್ಧಂ ಸನ್ಮಾರ್ಗಪಥಮಾಗತಂ ।
ರಮ್ಯಂ ಪ್ರಿಯಂ ಮನೋಹಾರಿ ಮಾ ರೂಪಂ ತಪಸಾ ದಹ ॥೪೨೨॥

ಪ್ರಾತಸ್ತೇ ಶಂಕರಃ ಪಾಣಿಮೇಷ ಪುತ್ರಿ ಗ್ರಹೀಷ್ಯತಿ ।
ವಯಮರ್ಥಿತವಂತಸ್ತೇ ಪಿತರಂ ಪೂರ್ವಮಾಗತಾಃ ॥೪೨೩॥

ಪಿತ್ರಾ ಸಹ ಗೃಹಂ ಗಚ್ಛ ವಯಂ ಯಾಮಃ ಸ್ವಮಂದಿರಂ ॥೪೨೪॥

ಇತ್ಯುಕ್ತಾ ತಪಸಃ ಸತ್ಯಂ ಫಲಮಸ್ತೀತಿ ಚಿಂತ್ಯ ಸಾ ।
ತ್ವರಮಾಣಾ ಯಯೌ ವೇಶ್ಮ ಪಿತುರ್ದಿವ್ಯಾರ್ಥಶೋಭಿತಂ ॥೪೨೫॥

ಸಾ ತತ್ರ ರಜನೀಂ ಮೇನೇ ವರ್ಷಾಯುತಸಮಾಂ ಸತೀ ।
ಹರದರ್ಶನಸಂಜಾತಮಹೋತ್ಕಂಠಾ ಹಿಮಾದ್ರಿಜಾ ॥೪೨೬॥

---

೪೨೨. ಮುನಿಗಳು ಸನ್ಮಾರ್ಗಸಾಧನವಾದ ಹಿತವಚನವನ್ನು ಆಕೆಗೆ ಪ್ರೀತಿಯಿಂದ ಹೇಳಿದರು. ನಿನ್ನ ರೂಪವು ರಮ್ಯವೂ, ಪ್ರಿಯವೂ, ಮನೋಹರವೂ ಆಗಿದೆ. ತಪಸ್ಸಿನ ಕ್ಲೇಶದಿಂದ ಅದನ್ನು ಬಾಡಿಸಬೇಡ.

೪೨೩-೪೨೪. ಎಲೌ ಮಗಳೇ, ನಾಳೆ ಬೆಳಿಗ್ಗೆ ಪರಮೇಶ್ವರನು ನಿನ್ನನ್ನು ಮದುವೆಯಾಗುವನು. ನಾವು ಮೊದಲು ಬಂದು ನಿನ್ನ ತಂದೆಯನ್ನು ಪ್ರಾರ್ಥಿಸಿದ್ದೇವೆ. ಇನ್ನು ನೀನು ಅವನೊಡನೆ ಮನೆಗೆ ಹೋಗು. ನಾವೂ ನಮ್ಮ ವಾಸಸ್ಥಳಕ್ಕೆ ತೆರಳುವೆವು.''

೪೨೫. ಮಹರ್ಷಿಗಳು ಹೀಗೆ ಹೇಳಲು "ನಿಜವಾಗಿಯೂ ತಪಸ್ಸಿಗೆ ಫಲವುಂಟು" ಎಂದು ಪಾರ್ವತಿಯು ನಿಶ್ಚಯಿಸಿದಳು. ದಿವ್ಯೈಶ್ವರ್ಯ ಶೋಭಿತವಾದ ತನ್ನ ತಂದೆಯ ಮನೆಗೆ ಅವಳು ಬಲು ಸಡಗರದಿಂದ ಹೋದಳು.

೪೨೬. "ಪರಮೇಶ್ವರನ ದರ್ಶನವು ಎಷ್ಟು ಹೊತ್ತಿಗೆ ಆದೀತು ?" ಎಂದು ಪರ್ವತರಾಜಪುತ್ರಿ ತವಕಪಡುತ್ತಿದ್ದಳು. ಆದಕಾರಣ ಆ ರಾತ್ರಿಯು ಅವಳಿಗೆ ಹತ್ತು ಸಾವಿರ ವರ್ಷಗಳಂತೆ ತೋರಿತು.

ತತೋ ಮುಹೂರ್ತೇ ಬ್ರಾಹ್ಮೇ ತು ತಸ್ಯಾಶ್ಚಕ್ರುಃ ಸುರಸ್ತ್ರಿಯಃ।
ನಾನಾಮಂಗಲಸಂದೋಹಾ೯ ಯಥಾವತ್ಕ್ರಮಪೂರ್ವಕಂ ॥೪೨೭॥

ದಿವ್ಯಮಂಡನಮಂಗಾನಾಂ ಮಂದಿರೇ ಬಹುಮಂಗಲೇ।
ಉಪಾಸತ ಗಿರಿಂ ಮೂರ್ತಾ ಋತವಃ ಸಾರ್ವಕಾಮಿಕಾಃ ॥೪೨೮॥

ವಾಯವೋ ವಾರಿದಾಶ್ಚಾಸ೯ ಸಮ್ಮಾರ್ಜನವಿಧೌ ಗಿರೇಃ।
ಹರ್ಮ್ಯೇಷು ಶ್ರೀಃ ಸ್ವಯಂ ದೇವೀ ಕೃತನಾನಾಪ್ರಸಾಧನಾ ॥೪೨೯॥

ಕಾಂತಿಃ ಸರ್ವೇಷು ಭಾವೇಷು ಋದ್ಧಿಶ್ಚಾಭವದಾಕುಲಾ।
ಚಿಂತಾಮಣಿಪ್ರಭೃತಯೋ ರತ್ನಾಃ ಶೈಲಂ ಸಮಂತತಃ ॥೪೩೦॥

ಉಪತಸ್ಥುರ್ನಗಾಶ್ಚಾಪಿ ಕಲ್ಪಕಾಮಮಹಾದ್ರುಮಾಃ।
ಓಷಧ್ಯೋ ಮೂರ್ತಿಮತ್ಯಶ್ಚ ದಿವ್ಯೌಷಧಿಸಮನ್ವಿತಾಃ ॥೪೩೧॥

---

೪೨೭. ಬಳಿಕ ಬ್ರಾಹ್ಮಮುಹೂರ್ತದಲ್ಲಿ ದೇವತಾಸ್ತ್ರೀಯರು ನಾನಾ ವಿಧವಾದ ಮಂಗಲಕಾರ್ಯಗಳನ್ನು ಕ್ರಮವಾಗಿ ನಡೆಸಿ, ವಸ್ತ್ರಭೂಷಣಾದಿಗಳಿಂದ ಅವಳ ಅಂಗಗಳನ್ನು ಅಲಂಕರಿಸಿದರು. ಹಿಮವಂತನ ಅರಮನೆಯು ಮಂಗಲಮಯವಾಗಿ ಕಂಗೊಳಿಸಿತು.

೪೨೮-೪೨೯. ಋತುಗಳು ಶರೀರವನ್ನು ಧರಿಸಿ ಬಂದು, ಬೇಡಿದ ಬಯಕೆಗಳನ್ನೆಲ್ಲ ಸಲ್ಲಿಸುತ್ತ ಹಿಮವಂತನನ್ನು ಓಲೈಸಿದುವು. ಆವಹ, ಪ್ರವಹ ಮೊದಲಾದ ವಾಯುಗಳು ನೆಲವನ್ನು ಗುಡಿಸಿದುವು. ಮೋಡಗಳು ನೀರನ್ನು ಚಿಮುಕಿಸಿದುವು. ಲಕ್ಷ್ಮಿಯೇ ಸಾಕ್ಷಾತ್ತಾಗಿ ಉಪ್ಪರಿಗೆ ಮನೆಗಳನ್ನು ಶೃಂಗರಿಸಿದಳು.

೪೩೦-೪೩೧. ಎಲ್ಲ ಭಾವಗಳಲ್ಲಿಯೂ ಕಾಂತಿ ಮತ್ತು ಸಮೃದ್ಧಿಗಳು ತುಂಬಿದ್ದುವು. ಚಿಂತಾಮಣಿ ಮೊದಲಾದ ದಿವ್ಯರತ್ನಗಳು ಹಿಮಾಚಲದ ಎಲ್ಲೆಡೆಗಳಲ್ಲಿಯೂ ತಮ್ಮತಮ್ಮ ಕಾಂತಿಯನ್ನು ಬೀರುತ್ತಿದ್ದುವು. ಪರ್ವತಗಳೂ, ಕಲ್ಪವೃಕ್ಷಗಳೂ, ಇಷ್ಟಾರ್ಥಪ್ರದಗಳಾದ ಇತರ ಮಹಾವೃಕ್ಷಗಳೂ ಶ್ರೇಷ್ಠವಾದ ಮೂಲಿಕೆಗಳೂ, ವನಸ್ಪತಿಗಳೂ ಪ್ರಶಸ್ತವಾದ ರೂಪವನ್ನು ತಾಳಿ ಬಂದುವು.

ರಸಾಶ್ಚ ಧಾತವಶ್ಚೈವ ಸರ್ವೇ ಶೈಲಸ್ಯ ಕಿಂಕರಾಃ ।
ಕಿಂಕರಾಸ್ತಸ್ಯ ಶೈಲಸ್ಯ ವ್ಯಗ್ರಾಶ್ಚಾಜ್ಞಾನುವರ್ತಿನಃ ||೪೩೨||

ನದ್ಯಃ ಸಮುದ್ರಾ ನಿಖಿಲಾಃ ಸ್ಥಾವರಂ ಜಂಗಮಂ ಚ ಯತ್ ।
ತತ್ಸರ್ವಂ ಹಿಮಶ್ಶೈಲಸ್ಯ ಮಹಿಮಾನಮವರ್ಧಯತ್ ||೪೩೩||

ಅಭವನ್ಮುನಯೋ ನಾಗಾ ಯಕ್ಷಗಂಧರ್ವಕಿನ್ನರಾಃ ।
ಶಂಕರಸ್ಯಾಪಿ ವಿಬುಧಾ ಗಂಧಮಾದನಪರ್ವತೇ ||೪೩೪||

ಸರ್ವೇ ಮಂಡನಸಂಭಾರಾಸ್ತಸ್ಥುರ್ನಿರ್ಮಲಮೂರ್ತಯಃ ।
ಶರ್ವಸ್ಯಾಪಿ ಜಟಾಜೂಟೇ ಚಂದ್ರಖಂಡಂ ಪಿತಾಮಹಃ ||೪೩೫||

ಕಪಾಲಮಾಲಾಂ ವಿಪುಲಾಂ ಚಾಮುಂಡಾ ಮೂರ್ಧ್ನ್ಯಬಂಧತ ||೪೩೬||

ಉವಾಚ ಚಾಪಿ ವಚನಂ ಪುತ್ರಂ ಜನಯ ಶಂಕರ ।
ಯೋ ದೈತ್ಯೇಂದ್ರಕುಲಂ ಹತ್ವಾ ಮಾಂ ರಕ್ತೈಸ್ತರ್ಪಯಿಷ್ಯತಿ ||೪೩೭||

---

೪೩೨. ರಸಗಳೂ ಧಾತುಗಳೂ ಹಿಮವಂತನ ಕಿಂಕರರಾಗಿ ಬಹಳ ಆಸಕ್ತಿಯಿಂದ ಅವನ ಅಪ್ಪಣೆಯನ್ನು ನಡೆಸುವುದಕ್ಕೆ ಕಾದಿದ್ದುವು.

೪೩೩. ನದಿಗಳು, ಎಲ್ಲ ಸಮುದ್ರಗಳು, ಚರಾಚರಜೀವರಾಶಿಗಳು ಇವೆಲ್ಲವೂ ಸೇವೆಗೋಸ್ಕರ ಬಂದು ಆ ಪರ್ವತರಾಜನ ಮಹಿಮೆಯನ್ನು ಹೆಚ್ಚಿಸಿದುವು.

೪೩೪. ಮುನಿಗಳು, ನಾಗರು, ಯಕ್ಷರು, ಗಂಧರ್ವರು, ಕಿನ್ನರರು, ದೇವತೆಗಳು, ಇವರೆಲ್ಲರೂ ಗಂಧಮಾದನ ಪರ್ವತದಲ್ಲಿ ಈಶ್ವರನ ಕಿಂಕರರಾಗಿ ಸೇವೆ ಸಲ್ಲಿಸುತ್ತಿದ್ದರು. ಹೊಳೆಹೊಳೆವ ಅಲಂಕಾರ ಸಾಮಗ್ರಿಗಳೆಲ್ಲವೂ ಸಿದ್ಧವಾದುವು.

೪೩೫. ಪ್ರೀತಿಯಿಂದ ಕಣ್ಣುಗಳು ಅರಳಲು ಬ್ರಹ್ಮನು ಈಶ್ವರನ ಜಟಾಪಾಶದಲ್ಲಿ ಅರ್ಧಚಂದ್ರನನ್ನು ಮುಡಿಸಿದನು.

೪೩೬-೪೩೭. ಚಾಮುಂಡಿಯು ದೊಡ್ಡ ಕಪಾಲಮಾಲೆಯನ್ನು ಅವನ ತಲೆಯಲ್ಲಿ ಬಿಗಿಯಾಗಿ ಕಟ್ಟಿ, “ಶಂಕರಾ, ದೈತ್ಯೇಂದ್ರನ ಕುಲವನ್ನು ಸಂಹರಿಸಿ ನನ್ನನ್ನು ರಕ್ತದಿಂದ ತೃಪ್ತಿಗೊಳಿಸಬಲ್ಲ ಮಗನನ್ನು ಪಡೆ” ಎಂದು ಹೇಳಿದಳು.

**ಸೌರಿರ್ಜ್ವಲಚ್ಛಿರೋರತ್ನಮುಕುಟಂ ಚಾನಲೋಲ್ಬಣಂ ।**
**ಭುಜಗಾಭರಣಂ ಗೃಹ್ಯ ಸಜ್ಜಂ ಶಂಭೋಃ ಪುರೋಽಭವತ್ ॥೪೩೮॥**

**ಶಕ್ರೋ ಗಜಾಜಿನಂ ತಸ್ಯ ವಸಾಭ್ಯಕ್ತಾಗ್ರಪಲ್ಲವಂ ।**
**ದಧ್ರೇ ಸರಭಸಂ ಸ್ವಿದ್ಯದ್ವಿಸ್ತೀರ್ಣಮುಖಪಂಕಜಂ ॥೪೩೯॥**

**ವಾಯುಶ್ಚ ವಿಪುಲಂ ತೀಕ್ಷ್ಣಶೃಂಗಂ ಹಿಮಗಿರಿಪ್ರಭಂ ।**
**ವೃಷಂ ವಿಭೂಷಯಾಮಾಸ ಹರಯಾನಂ ಮಹೌಜಸಂ ॥೪೪೦॥**

**ವಿತೇನುರ್ನಯನಾಂತಃಸ್ಥಾಃ ಶಂಭೋಃ ಸೂರ್ಯಾನಲೇಂದವಃ ।**
**ಸ್ವಾಂ ದ್ಯುತಿಂ ಲೋಕನಾಥಸ್ಯ ಜಗತಃ ಕರ್ಮಸಾಕ್ಷಿಣಃ ॥೪೪೧॥**

---

೪೩೮. ಶನಿಯು ಪ್ರಕಾಶಿಸುವ ಶಿಖರರತ್ನಸಹಿತವಾದ ಕಿರೀಟವನ್ನೂ ಜ್ವಾಲೆಯಿಂದ ಉಗ್ರವಾದ ಸರ್ಪಾಭರಣವನ್ನೂ ತೆಗೆದುಕೊಂಡು ಬಂದು ಈಶ್ವರನ ಮುಂದೆ ನಿಂತನು.

೪೩೯. ಸೆರಗಿನ ಅಂಚಿನಲ್ಲಿ ಮೇದಸ್ಸು ಹತ್ತಿಕೊಂಡಿರಲು, ಶಂಕರನು ಹೊದ್ದುಕೊಂಡಿದ್ದ ಗಜಚರ್ಮವನ್ನು ಅದು ನೆಲಕ್ಕೆ ಸೋಕದಂತೆ ಇಂದ್ರನು ಸಡಗರದಿಂದ ಎತ್ತಿ ಹಿಡಿದುಕೊಂಡನು. ತಾವರೆಯಂತೆ ಕಾಂತಿಯುಕ್ತವಾದ ಅವನ ಮುಖವು ಅರಳಿತ್ತು. ಬೆವರಿನ ಹನಿಗಳು ಅದರಲ್ಲಿ ಮೂಡಿದ್ದುವು.

೪೪೦. ಮೊನಚಾದ ಕೊಂಬೂ ಹಿಮಾಚಲದಂತಹ ಕಾಂತಿಯೂ ಆಗಿ ಬಹು ಪರಾಕ್ರಮದಿಂದ ಕೂಡಿದ ಈಶ್ವರನ ವಾಹನವಾದ ವೃಷಭವನ್ನು ವಾಯುವು ಅಲಂಕರಿಸಿದನು.

೪೪೧. ಸೂರ್ಯ, ಚಂದ್ರ ಮತ್ತು ಅಗ್ನಿಗಳು ಲೋಕಗಳ ಅಧಿಪತಿಯೂ ಕರ್ಮಸಾಕ್ಷಿಯೂ ಆದ ಮಹಾದೇವನ ಕಣ್ಣುಗಳೊಳಗೆ ನೆಲಸಿ ತಮ್ಮ ತೇಜಸ್ಸನ್ನು ಬೀರಿದರು.

ಚಿತಾಭಸ್ಮ ಸಮಾಧಾಯ ಕಪಾಲೇ ರಜತಪ್ರಭಂ ।
ಮನುಜಾಸ್ಥಿಮಯೀಂ ಮಾಲಾಮಾಬಬಂಧ ಚ ಪಾಣಿನಾ ॥೪೪೨॥

ಪ್ರೇತಾಧಿಪಃ ಪುರೋದ್ವಾರೇ ಸಗದಃ ಸಮವರ್ತತ ।
ನಾನಾಕಾರಮಹಾರತ್ನಭೂಷಣಂ ಧನದಾಹೃತಂ ॥೪೪೩॥

ವಿಹಾಯೋದಗ್ರಸರ್ಪೇಂದ್ರಕಟಕೇನ ಸ್ವಪಾಣಿನಾ ।
ಕರ್ಣೋತ್ತಂಸಂ ಚಕಾರೇಶೋ ವಾಸುಕಿಃ ತಕ್ಷಕಂ ಸ್ವಯಂ ॥೪೪೪॥

ಜಲಾಧೀಶಾಹೃತಾಂ ಸ್ಥಾಸ್ನು ಪ್ರಸೂನಾವೇಷ್ಟಿತಾಂ ಪೃಥಕ್ ।
ತತಸ್ತು ತೇ ಗಣಾಧೀಶಾ ವಿನಯಾತ್ತತ್ರ ವೀರಕಂ ॥೪೪೫॥

ಪ್ರೋಚುರ್ವ್ಯಗ್ರಾಕೃತೇ ತ್ವಂ ನೋ ಸಮಾವೇದಯ ಶೂಲಿನೇ ।
ನಿಷ್ಪನ್ನಾಭರಣಂ ದೇವಂ ಪ್ರಸಾಧ್ಯೇಶಂ ಪ್ರಸಾಧನೈಃ ॥೪೪೬॥

---

೪೪೨. ಯಮನು ತಲೆಬುರುಡೆಯ ಚಿಪ್ಪಿನಲ್ಲಿ ಬೆಳ್ಳಿಯಂತೆ ಶುಭ್ರವಾದ ಚಿತೆಯ ಬೂದಿಯನ್ನಿರಿಸಿಕೊಂಡು ಬಂದು, ಮನುಷ್ಯರ ಮೂಳೆಯಿಂದಾದ ಮಾಲೆಯನ್ನು ತನ್ನ ಕೈಯಿಂದ ಶಂಕರನಿಗೆ ಹಾಕಿ ಗದಾಧಾರಿಯಾಗಿ ಮುಂಬಾಗಿಲಲ್ಲಿ ನಿಂತನು.

೪೪೩-೪೪೪. ಕುಬೇರನು ನಾನಾಕಾರವಾದ ದಿವ್ಯರತ್ನ ಭೂಷಣಗಳನ್ನು ತಂದೊಪ್ಪಿಸಲು, ಮಹಾದೇವನು ಅವುಗಳನ್ನು ಬಿಟ್ಟು ಭುಜಗವಲಯಗಳನ್ನು ಧರಿಸಿಕೊಂಡಿರುವ ತನ್ನ ಕೈಗಳಿಂದ ವಾಸುಕಿಯನ್ನೂ ತಕ್ಷಕನನ್ನೂ ಕಿವಿಯ ಒಡವೆಗಳಾಗಿ ಹಾಕಿಕೊಂಡನು. ಜಲಾಧಿಪತಿಯಾದ ವರುಣನು ಕಾಣಿಕೆಯಾಗಿ ಕೊಟ್ಟ ದಿವ್ಯವಾದ ಪುಷ್ಪಮಾಲಿಕೆಯನ್ನೂ ಸಹ ಧರಿಸಿದನು.

೪೪೫. ಬಳಿಕ ಗಣನಾಯಕರು ವೀರಕನ ಬಳಿಗೆ ಬಂದು ವಿನಯದಿಂದ "ಎಲೈ ಜಾಗರೂಕನೇ, ನಾವು ಬಂದಿರುವ ವಿಚಾರವನ್ನು ಪರಮೇಶ್ವರನಿಗೆ ತಿಳಿಸು" ಎಂದು ಹೇಳಿದರು.

೪೪೬. ಮಹಾದೇವನು ವಿಧವಿಧವಾದ ಭೂಷಣಗಳಿಂದ ಅಲಂಕೃತನಾದ ಬಳಿಕ ಸಪ್ತಸಮುದ್ರಗಳು ಕನ್ನಡಿಯಲ್ಲಿ ಕಾಣುವಂತೆ ಆತನ ಪ್ರತಿಬಿಂಬವನ್ನು ತಮ್ಮಲ್ಲಿ ತೋರಿಸಿ ಸೇವೆಯನ್ನು ಮಾಡಲೋಸುಗ ಬಂದು ನಿಂತುವು.

ಸಪ್ತ ವಾರಿಧಯಸ್ತಸ್ಥುಃ ಕರ್ತುಂ ದರ್ಪಣವಿಭ್ರಮಂ ।
ತತೋ ವಿಲೋಕಿತಾತ್ಮಾನಂ ಮಹಾಂಬುಧಿಜಲೋದರೇ ॥೪೪೭॥

ಧರಾಮಾಲಿಂಗ್ಯ ಜಾನುಭ್ಯಾಂ ಸ್ಥಾಣುಂ ಪ್ರೋವಾಚ ಕೇಶವಃ ।
ಶೋಭಸೇ ದೇವ ರೂಪೇಣ ಜಗದಾನಂದದಾಯಿನಾ ॥೪೪೮॥

ಮಾತರಃ ಪ್ರೇರಯರ್ನ್ ಕಾಮವಧೂಂ ವೈಧವ್ಯಚಿಹ್ನಿತಾಂ ।
ಕಾಲೋಽಯಮಿತಿ ಚಾಲಕ್ಷ್ಯ ಪ್ರಕಾರೇಂಗಿತಸಂಜ್ಞಯಾ ॥೪೪೯॥

ತತಸ್ತಾಶ್ಚೋದಿತಾ ದೇವಮೂಚುಃ ಪ್ರಹಸಿತಾನನಾಃ ।
ರತಿಃ ಪುರಸ್ತವ ಪ್ರಾಪ್ತಾ ನಾಭಾತಿ ಮದನೋಜ್ಝಿತಾ ॥೪೫೦॥

ತತಸ್ತಾಂ ಸನ್ನಿವಾರ್ಯಾಹ ವಾಮಹಸ್ತಾಗ್ರಸಂಜ್ಞಯಾ ।
ಪ್ರಯಾಣೇ ಗಿರಿಜಾವಕ್ತ್ರದರ್ಶನೋತ್ಸುಕಮಾನಸಃ ॥೪೫೧॥

---

೪೪೭-೪೪೮. ತರುವಾಯ ಶಂಕರನು ಆ ಮಹಾಸಮುದ್ರಗಳ ಜಲದಲ್ಲಿ ತನ್ನ ಪ್ರತಿಬಿಂಬವನ್ನು ನೋಡಿಕೊಂಡನು. ವಿಷ್ಣುವು ಮಂಡಿಗಳನ್ನು ನೆಲದಲ್ಲೂರಿ ನಮಸ್ಕರಿಸಿ, "ದೇವಾ, ಲೋಕಕ್ಕೆಲ್ಲ ಆನಂದವನ್ನು ಬೀರುವ ಸುಂದರರೂಪದಿಂದ ನೀನು ಒಪ್ಪುತ್ತಿರುವೆ" ಎಂದು ಬಿನ್ನವಿಸಿದನು.

೪೪೯. ಸಪ್ತಮಾತೃಕೆಯರು ವೈಧವ್ಯಲಕ್ಷಣಗಳನ್ನು ಧರಿಸಿದ್ದ ರತಿಯನ್ನು ನೋಡಿ ಇದೇ ಸಮಯವೆಂದು ಸಂಜ್ಞೆಮಾಡಿ ಪರಮೇಶ್ವರನನ್ನು ಬೇಡಿಕೊಳ್ಳುವಂತೆ ಸೂಚಿಸಿದರು.

೪೫೦. ಬಳಿಕ ರತಿಯ ಪ್ರಾರ್ಥನೆಯಂತೆ ಅವರು ಮುಗುಳು ನಗೆಯಿಂದ ಮಹಾದೇವನಲ್ಲಿಗೆ ಹೋಗಿ "ದೇವಾ, ತಮ್ಮ ಸನ್ನಿಧಿಗೆ ರತಿ ಬಂದಿದ್ದಾಳೆ. ಮನ್ಮಥ ನಿಲ್ಲದೆ ಆಕೆಯು ಎಂದಿನಂತೆ ಶೋಭಿಸುತ್ತಿಲ್ಲ" ಎಂದು ಬಿನ್ನೈಸಿದರು.

೪೫೧. ಬಳಿಕ ಪಾರ್ವತಿಯ ಮುಖವನ್ನು ನೋಡಬೇಕೆಂಬ ಆಸಕ್ತಿಯಿಂದ ಪ್ರಯಾಣೋನ್ಮುಖನಾಗಿದ್ದ ಪರಮೇಶ್ವರನು ಎಡಗೈಬೆರಳಿನ ಸಂಜ್ಞೆಯಿಂದ ಅವರನ್ನು ತಡೆದು ಹೇಳಿದನು.

ತತೋ ಹರೋ ಹಿಮಗಿರಿಕಂದರಾಕೃತಿಂ
ಸಿತಂ ಕಶಾಮೃದುಹತಿಭಿಃ ಪ್ರಚೋದಯನ್ ।
ಮಹಾವೃಷಂ ಗಣತುಮುಲಾಹಿತೇಕ್ಷಣಂ
ಸ ಭೂಧರಾನಶನಿರಿವ ಪ್ರಕಂಪಯನ್ ॥೪೫೨॥

ತತೋ ಹರಿರ್ದ್ರುತಪದಪದ್ಧತಿಃ ಪುರಃ
ಸರಃ ಶ್ರಮಾದ್ದ್ರುಮನಿಕರೇಷು ವಿಶ್ರಮನ್ ।
ಧರಾರಜಶ್ಶಬಲಿತಭೂಷಣೋಽಬ್ರವೀತ್
ಪ್ರಯಾತ ಮಾ ಕುರುತ ಪಥೋಽಸ್ಯ ಸಂಕಟಂ ॥೪೫೩॥

ಪ್ರಭೋಃ ಪುನಃ ಪ್ರಥಮನಿಯೋಗಮೂರ್ಜಯಂ
ಸ್ತತೋಽಬ್ರವೀದ್ಭ್ರುಕುಟಿಮುಖೋಽಪಿ ವೀರಕಃ ।
ವಿಯಚ್ಚರಾ ವಿಯತಿ ಕಿಮಸ್ತಿ ಕಾಂತಕಂ
ಪ್ರಯಾತ ನೋ ಧರಣಿಧರಾ ವಿದೂರತಃ ॥೪೫೪॥

---

೪೫೨. ಬಳಿಕ ಈಶ್ವರನು ಹಿಮಾಚಲದ ಗುಹೆಯಂತೆ ದೊಡ್ಡ ಆಕಾರವನ್ನು ತಾಳಿ ಬೆಳ್ಳಗಿದ್ದ ವೃಷಭವನ್ನು ಚಾವಟಿಯಿಂದ ಮೆತ್ತಗೆ ಹೊಡೆದು ನಡೆಸಿದನು. ಅದು ಪ್ರಮಥಗಣಗಳನ್ನು ನಡುಗಿಸುತ್ತ ತೆರಳಿತು.

೪೫೩. ಬಳಿಕ ವಿಷ್ಣುವು ಬೇಗಬೇಗನೆ ಮುಂದೆ ನಡೆಯುತ್ತ ಹೋಗಿ ಶ್ರಮದಿಂದ ಮರಗಳ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದನು. ನೆಲದಿಂದೆದ್ದ ಧೂಳು ಅವನ ಒಡವೆಗಳ ಮೇಲೆ ಬಿದ್ದಿತು. "ಮುಂದೆ ನಡೆಯಿರಿ; ಗುಂಪುಗುಂಪಾಗಿ ದಾರಿಯಲ್ಲಿ ನಿಲ್ಲಬೇಡಿ" ಎಂದು ಎಲ್ಲರಿಗೂ ಕೂಗಿ ಹೇಳುತ್ತಿದ್ದನು.

೪೫೪. ತರುವಾಯ ಪ್ರಭುವು ತನಗೆ ನೇರವಾಗಿ ಇತ್ತ ಆಜ್ಞೆಯನ್ನು ಮನ್ನಿಸುತ್ತ ವೀರಕನು ಹುಬ್ಬು ಗಂಟಿಕ್ಕಿ ಹೇಳಿದನು. ದೇವತೆಗಳೇ! ಆಕಾಶದ ಕಡೆ ಏನು ನೋಡುತ್ತೀರಿ! ಅಲ್ಲಿ ನಿಮ್ಮ ಮನಸ್ಸನ್ನು ಎಳೆಯುವ ವಸ್ತು ಏನಿದೆ? ಓ ಗಿರಿಗಳೇ! ಬಹುದೂರವಾಗಿ ಹೋರಟು ಹೋಗಬೇಡಿರಿ.

ಮಹಾರ್ಣವಾಃ ಕುರುತ ಶಿಲೋಪಮಂ ಪಯಃ
ಸುರದ್ವಿಷಾಂ ಗಮನಮಹಾತಿಕರ್ದಮಂ ।
ಗಣೇಶ್ವರಾಶ್ಚಪಲತಯಾ ನ ಗಮ್ಯತಾಂ
ಸುರೇಶ್ವರೈಃ ಸ್ಥಿರಗತಿಭಿಶ್ಚ ಗಮ್ಯತಾಂ ॥೪೫೫॥

ನ ಭೃಂಗಿಣಾ ಸ್ವತನುಮವೇಕ್ಷ್ಯ ನೀಯತೇ ।
ಪಿನಾಕಿನಃ ಪೃಥುಮುಖಮಂಡಲಾಗ್ರತಃ ।
ವೃಥಾ ಯಮ ಪ್ರಕಟಿತದಂತಕೋಟರಂ
ತ್ವಮಾಯುಧಂ ವಹಸಿ ವಿಹಾಯ ಸಂಭ್ರಮಂ ॥೪೫೬॥

ಪದಂ ನ ಯದ್ರಥತುರಗೈಃ ಪುರದ್ವಿಷಃ
ಪ್ರಮುಚ್ಯತೇ ಬಹುತರಮಾತೃಸಂಕುಲಂ ।
ಅಮೀ ಸುರಾಃ ಪೃಥಗನುಯಾಯಿಭಿರ್ವೃತಾಃ
ಪದಾತಯೋ ದ್ವಿಗುಣಪಥಾ ಹರಪ್ರಿಯಾಃ ॥೪೫೭॥

---

೪೫೫. ಓ ಮಹಾಸಾಗರಗಳೇ! ದೈತ್ಯರ ಸಂಚಾರದಿಂದ ಕೆಸರಾಗಿರುವ ನೀರನ್ನು ಕಲ್ಲಿನಂತೆ ಗಟ್ಟಿಯಾಗಿ ಮಾಡಿರಿ. ಗಣಾಧಿಪತಿಗಳೇ! ಚಪಲತೆಯಿಂದ ಮುಂದೆ ಹೋಗಬೇಡಿ. ಸುರಪ್ರಮುಖರು ನೆಟ್ಟಗೆ ಹೆಜ್ಜೆಯೂರಿ ನಡೆಯಲಿ.

೪೫೬-೪೫೭. ಭೃಂಗಿಯು ತನ್ನ ಮೈಯನ್ನೇ ನೋಡಿಕೊಳ್ಳುತ್ತ ಪರಮೇಶ್ವರನ ವಿಶಾಲವಾದ ಮುಖಮಂಡಲದ ಎದುರಿಗೆ ಅಡ್ಡಲಾಗಿ ನಿಲ್ಲದಿರಲಿ. ಓ ಯಮಾ, ಪೊಟರೆಯಂತೆ ಸಂದು ಬಿಟ್ಟಿರುವ ನಿನ್ನ ಹಲ್ಲುಗಳನ್ನು ಸುಮ್ಮನೆ ತೋರಿಸುತ್ತಿರುವೆ. ನೀನು ಆಯುಧವನ್ನು ಹಿಡಿದಿರುವುದು ವ್ಯರ್ಥ; ನಿನಗೆ ಕಾರ್ಯದಲ್ಲಿ ಆತುರವೆಂಬುದೇ ಇಲ್ಲ. ಏಕೆಂದರೆ ಪರಮೇಶ್ವರನು ಬರುವ ದಾರಿಯಲ್ಲಿ ಮಾತೃಕೆಯರು ಗುಂಪುಕಟ್ಟಿ ಕೊಂಡಿದ್ದಾರೆ. ನಿನ್ನ ತೇರಿನ ಕುದುರೆಗಳಿಂದ ಅವರನ್ನು ಪಕ್ಕಕ್ಕೆ ಸರಿಸಿ ದಾರಿ ಬಿಡಿಸಬಾರದೇ? ಇಗೋ ಹರನ ಭಕ್ತರಾದ ಈ ದೇವತೆಗಳು ತಮ್ಮ ಅನುಯಾಯಿ ಗಳೊಡನೆ ಕಾಲುನಡಿಗೆಯಲ್ಲಿ ಬೇರೆ ಬೇರೆ ಗುಂಪಾಗಿ ನಡೆಯುತ್ತ ತಮಗೆ ಬೇಕಾ ಗುವುದಕ್ಕಿಂತ ಇಮ್ಮಡಿಯಾಗಿ ದಾರಿಯನ್ನು ಆಕ್ರಮಿಸಿಕೊಂಡಿದ್ದಾರೆ.

ಸ್ವನಾಹನ್ಯೈಃ ಪವನವಿಧೂತಚಾಮರೈ
ಶ್ಚಲಧ್ವಜೈರ್ವ್ರಜತ ವಿಹಾರಶಾಲಿಭಿಃ ।
ಸುರಾಃ ಸ್ವಕಂ ಕಿಮಿತಿ ನ ರಾಗಮೂರ್ಜಿತಂ
ವಿಚಾರ್ಯತೇ ನಿಯತಲಯತ್ರಯಾನುಗಂ ॥೪೫೮॥

ನ ಕಿನ್ನರೈರಭಿಭವಿತುಂ ಹಿ ಶಕ್ಯತೇ
ವಿಭೂಷಣಪ್ರಚಯಸಮುದ್ಭವೋ ಧ್ವನಿಃ ।
ಅಜಾತಿಜಾಃ ಕಿಮಿತಿ ನ ಷಡ್ಜಮಧ್ಯಮ
ಪೃಥುಸ್ವರಂ ಬಹುತರಮತ್ರ ವಕ್ಷ್ಯತೇ ॥೪೫೯॥

ನತಾಸ್ತನುತನುತಾಂ ನತಾನತಾಂ ಗತಾಃ
ಪೃಥಕ್ತಯಾ ಸಮಯಕೃತಾ ವಿಭಿನ್ನತಾಂ ।
ವಿಶಂಕಿತಾ ಭವದತಿಭೇದಶೀಲಿನಃ
ಪ್ರಯಾಂತ್ಯಮೀ ದ್ರುತಪದಮೇವ ಗೌಡಕಾಃ ॥೪೬೦॥

---

೪೫೮. ಓ ದೇವತೆಗಳಿರಾ, ಗಾಳಿಯಿಂದ ಚಾಮರಗಳು ಅಲುಗುತ್ತಿರಲು, ಬಾವುಟಗಳು ಚಲಿಸುತ್ತಿರಲು ಉತ್ಸಾಹಗೊಂಡ ವಾಹನಗಳನ್ನೇರಿ ನಡೆಯಿರಿ. ಮೂರು ಬಗೆಯ ಲಯಗಳಿಗನುಸಾರವಾಗಿ ಆನಂದಪೂರ್ಣವಾದ ನಿಮ್ಮ ರಾಗಾಲಾಪನವನ್ನು ನಡೆಸಲು ಏಕೆ ನೀವು ಮನಸ್ಸು ಮಾಡಿಲ್ಲ ?

೪೫೯. ಎಲೈ ಕಿನ್ನರರೇ, ಮೈತುಂಬ ಹಾಕಿಕೊಂಡಿರುವ ನಿಮ್ಮ ಒಡವೆಗಳು ಒಂದಕ್ಕೊಂದು ತಗುಲಿ ಹೆಚ್ಚಾಗಿ ಸದ್ದಾಗದಂತೆ ನೋಡಿಕೊಳ್ಳಲಾರಿರಲ್ಲಾ ! ಎಲೈ ವಿಲಕ್ಷಣಪುರುಷರೇ, ಷಡ್ಜ, ಮಧ್ಯಮ ಮೊದಲಾದ ಸ್ವರಗಳಲ್ಲಿ ಗೀತವರ್ಣಾದಿಗಳನ್ನು ಗಟ್ಟಿಯಾಗಿ ನೀವು ಈಗ ಏತಕ್ಕಾಗಿ ಹಾಡಬಾರದು.

೪೬೦. ಇಗೋ ! ಕೃಶಾಂಗರಾದ ಈ ಗೌಡಕರು ದಡದಡನೆ ಹೆಜ್ಜೆಯಿಡುತ್ತ ತಲೆ ತಗ್ಗಿಸಿಕೊಂಡು ಬೇಗಬೇಗನೆ ಹೋಗುತ್ತಿದ್ದಾರೆ. ಅವರು ಸಂಕೇತಮಾಡಿಕೊಂಡು ಬೇರೆ ಬೇರೆ ಗುಂಪಾಗಿದ್ದಾರೆ. ಏನೋ ಸಂದೇಹವಿಟ್ಟುಕೊಂಡು ಅವರು ಭೇದವನ್ನು ಕಲ್ಪಿಸುವ ಹಾಗೆ ತೋರುತ್ತದೆ.

ವಿಸಂಹತಾಃ ಕಿಮಿತಿ ನ ಷಾಡ್ಗವಾದಯಃ
ಸ್ವಗೀತಕೈರ್ಲಲಿತಪದಪ್ರಯೋಗಜೈಃ ।
ಪ್ರಭೋಃ ಪುರೋ ಭವತಿ ಹಿ ಯಸ್ಯ ಚಾಕ್ಷತಂ
ಸಮುದ್ಗತಾರ್ಥಕಮಿತಿ ತತ್ಪ್ರತೀಯತೇ ॥೪೬೧॥

ಅಮೀ ಪೃಥಗ್ವಿರಚಿತರಮ್ಯರಾಸಕಂ
ವಿಲಾಸಿನೋ ಬಹುಗಮಕಸ್ವಭಾವಕಂ ।
ಪ್ರಯುಂಜತೇ ಗಿರಿಶಯಶೋ ವಿಸಾರಿಣಂ
ಪ್ರಕೀರ್ಣಕಂ ಬಹುತರನಾಗಜಾತಯಃ ॥೪೬೨॥

ಅಮೀ ಕಥಂ ಕಕುಭಿ ಕಥಾಃ ಪ್ರತಿಕ್ಷಣಂ
ಧ್ವನಂತಿ ತೇ ವಿವಿಧವಧೂವಿಮಿಶ್ರಿತಾಃ ।
ನ ಜಾತಯೋ ಧ್ವನಿಮುರಜಾಸಮೀರಿತಾ
ನ ಮೂರ್ಛಿತಾಃ ಕಿಮಿತಿ ಚ ಮೂರ್ಛನಾತ್ಮಕಾಃ ॥೪೬೩॥

---

೪೬೧. ಷಾಡ್ಗವ ಮೊದಲಾದವರು ಒಟ್ಟಿಗೆ ಒಂದು ಕಡೆ ಸೇರದೆ ಏತಕ್ಕಾಗಿ ಬಿಡಿಬಿಡಿಯಾಗಿದ್ದಾರೆ? ಅರ್ಥವು ಮನೋಹರವಾಗಿ ವ್ಯಕ್ತವಾಗುವಂತೆ, ಇಂಪಾದ ಪದಗಳನ್ನು ಪ್ರಯೋಗಿಸಿ ಪರಮೇಶ್ವರನ ಮುಂದೆ ಅವರು ಏಕೆ ಗಾನಮಾಡುವುದಿಲ್ಲವೋ ತಿಳಿಯದು.

೪೬೨. ವಿಲಾಸಪ್ರಿಯರಾದ ಈ ನಾಗರು ಬೇರೆಬೇರೆ ಗುಂಪುಸೇರಿ ಮನೋಹರವಾಗಿ ನರ್ತಿಸುತ್ತ, ಒಳ್ಳೆಯ ಗಮಕಲಕ್ಷಣಗಳಿಂದ ಕೂಡಿದ ಪರಮೇಶ್ವರನ ಕೀರ್ತಿಯನ್ನು ಹೊಗಳುವ ಪದ್ಯಗಳನ್ನು ಹಾಡುತ್ತಿರುವರು.

೪೬೩. ಪ್ರತಿಕ್ಷಣದಲ್ಲಿಯೂ ದಿಕ್ಕುಗಳಲ್ಲಿ ಬಗೆಬಗೆಯ ಹೆಂಗಸರು ಸೇರಿ ಆಡುವ ಕಥಾವೃತ್ತಾಂತಗಳು ಕೇಳಿಬರುತ್ತವಲ್ಲಾ ಇದು ಹೇಗೆ? ಮೃದಂಗಧ್ವನಿ ಸಹಿತವಾದ ಉತ್ತಮ ಗೀತಿಕೆಗಳಲ್ಲ. ಮೂರ್ಛನಾರೂಪಗಳಾದ ಮುಕ್ತಾಯಗಳಲ್ಲ.

ಶ್ರುತಿಪ್ರಿಯಕ್ರಮಗತಿಭೇದಸಾಧನಂ
ತತಾದಿಕಂ ಕಿಮಿತಿ ನ ತುಂಬರೇರಿತಂ ।
ನ ಹನ್ಯತೇ ಬಹುವಿಧವಾದ್ಯಡಂಬರಂ
ಪ್ರಕೀರ್ಣವೀಣಾಮುರಜಾದಿ ನಾಮ ಯತ್ ॥೪೬೪॥

ಇತೀರಿತಾಂ ಗಿರಮವಧಾರ್ಯ ಶಾಲಿನೀಂ
ಸುರಾಸುರಾಃ ಸಪದಿ ತು ವೀರಕಾಜ್ಞಯಾ ।
ನಿಯಾಮಿತಾಃ ಪ್ರಯಯುರತೀವ ಹರ್ಷಿತಾ
ಶ್ಚರಾಚರಂ ಜಗದಖಿಲಂ ಹ್ಯಪೂರಯರ್ನ್ ॥೪೬೫॥

ಇತಿ ಸ್ತನತ್ಕಕುಭಿ ರಸನ್ಮಹಾರ್ಣವೇ
ಸ್ತನದ್ಘನೇ ವಿದಳಿತಶೈಲಕಂದರೇ ।
ಜಗತ್ಯಭೂತ್ತುಮುಲ ಇವಾಽಽಕುಲೀಕೃತಃ
ಪಿನಾಕಿನಾ ತ್ವರಿತಗತೇನ ಭೂಧರಃ ॥೪೬೬॥

---

೪೬೪. ಕಿವಿಗೆ ಇಂಪಾದ, ಕ್ರಮವರಿತ ಗತಿಭೇದದೊಡಗೂಡಿದ ವೀಣಾದಿ ವಾದ್ಯಗಳನ್ನು ತುಂಬರ ಮುನಿಯು ಏತಕ್ಕಾಗಿ ಬಾಜಿಸುತ್ತಿಲ್ಲ? ವೀಣೆ, ಮೃದಂಗ ಮುಂತಾದ ನಾನಾಬಗೆಯ ವಾದ್ಯಗಳ ವಾದನದ ಕೋಲಾಹಲಧ್ವನಿ ಕೇಳಿ ಬರುವುದಿಲ್ಲವೇಕೆ?

೪೬೫. ಈ ರೀತಿಯಾಗಿ ಮನೋಹರವಾದ ಮಾತುಗಳನ್ನು ಸುರಾಸುರರು ಗಮನದಿಂದ ಕೇಳಿದರು. ವೀರಕನ ಅಪ್ಪಣೆಯಾದ ಕೂಡಲೇ ಅವರು ಉತ್ಸಾಹದಿಂದ ನಡೆದರು. ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವನ್ನೂ ತಮ್ಮ ಹರ್ಷಧ್ವನಿಯಿಂದ ತುಂಬಿದರು.

೪೬೬. ಹೀಗೆ ಪರಮೇಶ್ವರನು ತ್ವರಿತಗತಿಯಿಂದ ಹೋಗುತ್ತಿರಲು ದಿಕ್ಕುಗಳು ಪ್ರತಿಧ್ವನಿಮಾಡುತ್ತಿದ್ದುವು. ಮಹಾಸಮುದ್ರಗಳು ಅಬ್ಬರಿಸಿದುವು. ಮೋಡಗಳು ಗುಡುಗಿದುವು. ಬೆಟ್ಟದ ಗುಹೆಗಳು ಬಿರಿದುವು. ಜಗತ್ತಿನಲ್ಲಿ ಕೋಲಾಹಲವೆದ್ದಿತು. ಇದನ್ನು ಕಂಡು ಹಿಮವಂತನು ಗಾಬರಿಗೊಂಡನು.

ಪರಿಜ್ವಲತ್ಕನಕಸಹಸ್ರತೋರಣಂ
ಕ್ವಚಿನ್ಮಿಲನ್ಮರಕತವೇಶ್ಮವೇದಿಕಂ ।
ಕ್ವಚಿತ್ಕ್ವಚಿದ್ವಿಮಲವಿದೂರ್ಯಭೂಮಿಕಂ
ಕ್ವಚಿದ್ಗಲಜ್ಜಲಧರರಮ್ಯನಿರ್ಝರಂ ॥೪೬೭॥

ಚಲದ್ಧ್ವಜಪ್ರವರಸಹಸ್ರಮಂಡಿತಂ
ಸುರದ್ರುಮಸ್ತಬಕವಿಕೀರ್ಣಚತ್ವರಂ ।
ಸಿತಾಸಿತಾರುಣರುಚಿಧಾತುವರ್ಣಕಂ
ಶ್ರಿಯೋಜ್ವಲಂ ಪ್ರವಿತತಮಾರ್ಗಗೋಪುರಂ ॥೪೬೮॥

ವಿಜೃಂಭಿತಾಪ್ರತಿಸಮಧೂಮವಾರಿದಂ
ಸುಗಂಧಿಭಿಃ ಪುರಪವನೈರ್ಮನೋಹರಂ ।
ಹರೋ ಮಹಾಗಿರಿನಗರಂ ಸಮಾಸದತ್
ಕ್ಷಣಾದಿವ ಪ್ರವರಸುರಾಸುರಸ್ತುತಃ ॥೪೬೯॥

---

೪೬೭-೪೬೯. ಸುರರ ಮತ್ತು ಅಸುರರ ಪ್ರಮುಖರು ಹೊಗಳುತ್ತಿರಲು, ಪರಮೇಶ್ವರನು ಸ್ವಲ್ಪಹೊತ್ತಿನಲ್ಲೇ ಹಿಮವಂತನ ರಾಜಧಾನಿಯನ್ನು ಸೇರಿದನು. ಅಲ್ಲಿ ಒಂದು ಕಡೆ ಸಾವಿರಾರು ಚಿನ್ನದ ತೋರಣಗಳು ಹೊಳೆಯುತ್ತಿದ್ದುವು. ಇನ್ನೊಂದುಕಡೆ ಪಚ್ಚೆಯ ರತ್ನದ ಜಗಲಿಗಳು ಶೋಭಿಸುತ್ತಿದ್ದುವು. ಮತ್ತೊಂದು ಕಡೆ ನಿರ್ಮಲವಾದ ವೈಡೂರ್ಯರತ್ನಭೂಮಿಗಳು ಕಂಗೊಳಿಸಿದುವು. ಬೇರೊಂದು ಕಡೆ ಮೋಡಗಳು ಮಳೆಗರೆದು ರಮ್ಯವಾದ ಪ್ರವಾಹವು ಹರಿಯುತ್ತಿತ್ತು. ಸಾವಿರಾರು ಬಾವುಟಗಳು ಹಾರಾಡುತ್ತಿದ್ದುವು. ಬೀದಿಯ ಚೌಕಗಳು ಕಲ್ಪವೃಕ್ಷದ ಹೂಗೊಂಚಲುಗಳಿಂದ ಅಲಂಕೃತವಾಗಿದ್ದುವು. ಬಿಳಿಯ, ಕರಿಯ ಮತ್ತು ಕೆಂಪು ಬಣ್ಣದ ಕಾವಿ ಮೊದಲಾದ ಕಲ್ಲುಗಳು ಮನೋಹರವಾಗಿ ಕಾಂತಿಯನ್ನು ಬೀರುತ್ತಿದ್ದುವು. ವಿಸ್ತಾರವಾದ ಗೋಪುರಮಾರ್ಗಗಳು ಅಂದವಾಗಿ ಮೆರೆದುವು. ಹೊಗೆಯಂತೆ ಕಂಗೊಳಿಸುತ್ತಿದ್ದ ಮೋಡಗಳು ಗಂಭೀರವಾಗಿ ಮೊಳಗಿದುವು. ನಗರದ ಉದ್ಯಾನಗಳಿಂದ ಪರಿಮಳಯುಕ್ತವಾಗಿಯೂ ಮನೋಹರವಾಗಿಯೂ ವಾಯು ಬೀಸುತ್ತಿತ್ತು.

ತಂ ಪ್ರವಿಶಂತಮುಗಾತ್ತ್ರವಿಲೋಕ್ಯ
ವ್ಯಾಕುಲತಾಂ ನಗರಂ ಗಿರಿಭರ್ತುಃ ।
ವ್ಯಗ್ರಪುರಂಧ್ರಿಜನಂ ಜಯಯುಕ್ತಂ
ಧಾವಿತಮಾರ್ಗಜನಾಕುಲರಥ್ಯಂ ॥೪೭೦॥

ಹರ್ಮ್ಯಗವಾಕ್ಷಗತಾಮರನಾರೀ
ಲೋಚನನೀಲಸರೋರುಹಮಾಲಂ ।
ಸುಪ್ರಕಟಾಪಿ ನ ದೃಶ್ಯತ ಕಾಚಿತ್
ಸ್ವಾಭರಣಾಂಶುವಿತಾನವಿಗೂಢಾ ॥೪೭೧॥

ಕಾಪ್ಯಖಿಲೀಕೃತಮಂಡನಭೂಷಾ
ತ್ಯಕ್ತಸಖೀಪ್ರಣಯಾ ಹರಮೈಕ್ಷತ್ ।
ಕಾಚಿದುವಾಚ ವಿಲಂಬಿತಮಾಲಾ
ಕಾತರತಾಂ ಸಖಿ ಮಾ ಕುರು ಮುಗ್ಧೇ ॥೪೭೨॥

---

೪೭೦. ಪರಮೇಶ್ವರನು ಪ್ರವೇಶಿಸುತ್ತಿರುವುದನ್ನು ನೋಡಿ ಹಿಮವಂತನ ನಗರವು ಸಡಗರಗೊಂಡಿತು. ಸ್ತ್ರೀಯರು ಆಸಕ್ತಿಯಿಂದ ಜಯಕಾರಮಾಡುತ್ತಿದ್ದರು. ಬೀದಿಯ ತುಂಬ ಜನರು ಸಂಭ್ರಮದಿಂದ ಓಡಾಡುತ್ತಿದ್ದರು.

೪೭೧. ಉಪ್ಪರಿಗೆಗಳ ಕಿಟಕಿಗಳಲ್ಲಿ ದೇವತಾಸ್ತ್ರೀಯರು ನಿಂತು ನೋಡುತ್ತಿರಲು ಅವರ ಕಣ್ಣುಗಳು ಕನ್ನೈದಿಲೆಯ ಮಾಲೆಯಂತೆ ತೋರುತ್ತಿದ್ದುವು. ಒಬ್ಬಾಕೆಯು ಪ್ರಕಟವಾಗಿ ನಿಂತಿದ್ದರೂ ಅವಳ ಒಡವೆಗಳ ಕಾಂತಿಯಿಂದ ಮರೆಯಾಗಿ ಯಾರಿಗೂ ಗೋಚರವಾಗದಿದ್ದಳು.

೪೭೨. ಇನ್ನೊಬ್ಬಳು ಅಲಂಕಾರವು ಪೂರ್ಣವಾಗುವುದಕ್ಕೆ ಮುಂಚೆಯೇ ತನ್ನ ಗೆಳತಿಯ ಮೇಲಣ ಸ್ನೇಹವನ್ನು ತೊರೆದು ಈಶ್ವರನನ್ನು ನೋಡಹೋದಳು. ಹಾರವನ್ನು ಹಾಕಿಕೊಳ್ಳಲು ತಡವಾದ ಮತ್ತೊಬ್ಬಳು "ಎಲೌ ಮುಗ್ಧೇ, ಸಡಗರ ಪಟ್ಟುಕೊಳ್ಳಬೇಡ. ಮನ್ಮಥನನ್ನು ಸುಟ್ಟ ಪರಮೇಶ್ವರನು ತಾನೇ ಈಗ ಪಾರ್ವತಿಯೊಡನೆ ಕ್ರೀಡೆಯಾಡಲು ಬಯಸುತ್ತಾನೆ" ಎಂದು ನುಡಿದಳು.

ದಗ್ಧಮನೋಭವ ಏವ ಪಿನಾಕೀ
ಕಾಮಯತೇ ಸ್ವಯಮೇವ ವಿಹರ್ತುಂ।
ಕಾಚಿದಪಿ ಸ್ವಯಮೇವ ಪತಂತೀ
ಪ್ರಾಹ ಪರಾಂ ವಿರಹಸ್ಖಲಿತಾಂಗೀಂ ॥೪೭೩॥

ಮಾ ಚಪಲೇ ಮದನವ್ಯತಿಷಂಗಂ
ಶಂಕರಜಂ ಸ್ಖಲನೇನ ವದ ತ್ವಂ ।
ಕಾಪಿ ಕೃತವ್ಯವಧಾನಮದೃಷ್ಟ್ವಾ
ಯುಕ್ತಿವಶಾದ್ಗಿರಿಶೋ ಹ್ಯಯಮೂಚೇ ॥೪೭೪॥

ಏಷ ಸ ಯತ್ರ ಸಹಸ್ರಮುಖಾದ್ಯಾ
ನಾಕಸದಾಮಧಿಪಾಃ ಸ್ವಯಮುಕ್ತ್ಯೈಃ ।
ನಾಮಭಿರಿಂದುಜಟಂ ನಿಜಸೇವಾ
ಪ್ರಾಪ್ತಿಫಲಾಯ ನತಾಸ್ತು ಘಟಂತೇ ॥೪೭೫॥

---

೪೭೩-೪೭೪. ಒಬ್ಬಳು ತಾನೇ ಬೀಳುತ್ತಿದ್ದರೂ ವಿರಹದಿಂದ ಎಡವುತ್ತಿರುವ ಮತ್ತೊಬ್ಬಳಿಗೆ "ಎಲೌ ಚಪಲೇ, ನೀನು ಹೀಗೆ ಎಡವಿಬೀಳುತ್ತ ಈಶ್ವರನ ವಿರಹದಿಂದ ನಿನ್ನಲ್ಲಿ ಉಂಟಾದ ಮನ್ಮಥವಿಕಾರವನ್ನು ತೋರ್ಪಡಿಸಿಕೊಳ್ಳಬೇಡ" ಎಂದು ಹೇಳಿದಳು. ಯಾವುದೋ ಅಡ್ಡಿಯಿಂದ ಈಶ್ವರನು ಮರೆಯಾಗಲು ಆವನನ್ನು ಕಾಣದೆ ಮತ್ತೊಬ್ಬಳು "ಇವನಲ್ಲವೇ ಶಂಕರನು"? ಎಂದು ಯುಕ್ತಿಯಿಂದ ಹೇಳಿದಳು.

೪೭೫. "ಇಗೋ! ಇಲ್ಲೇ ಅವನು! ಇಂದ್ರನೇ ಮುಂತಾದ ಸುರಪ್ರಮುಖರು ಚಂದ್ರಧರನ ದಿವ್ಯನಾಮಗಳನ್ನು ಹೇಳುತ್ತ, ತನ್ನ ಸೇವೆಯು ಫಲಪ್ರದವಾಗಲೆಂದು ಪ್ರಾರ್ಥಿಸುತ್ತ ನಮಸ್ಕಾರಮಾಡುತ್ತಿರುವರು.

ಏಷ ನ ಚೈಷ ಸ ಏಷ ಯದಗ್ರೇ
ಚರ್ಮಪರೀತತನುಃ ಶಶಿಮೌಲೀ ।
ಧಾವತಿ ವಜ್ರಧರೋಽಮರರಾಜೋ
ಮಾರ್ಗಮಮುಂ ವಿವೃತೀಕರಣಾಯ ॥೪೭೬॥

ಏಷ ಸ ಪದ್ಮಭವೋ ಯಮುಪೇತ್ಯ
ಪ್ರಾಂಶುಜಟಾಮೃಗಚರ್ಮನಿಗೂಢಃ ।
ಸಪ್ರಣಯಂ ಕರಘಟ್ಟಿತವಕ್ತ್ರಃ
ಕಿಂಚಿದುವಾಚ ಮಿತಂ ಶ್ರುತಿಮೂಲೇ ॥೪೭೭॥

ಏವಮಭೂತ್ಸುರನಾರಿಕುಲಾನಾಂ
ಚಿತ್ತವಿಸಂಷ್ಠುಲತಾ ಗುರುರಾಗಾತ್ ।
ಶಂಕರಸಂಶ್ರಯಣಾದ್ಗಿರಿಜಾಯಾ
ಜನ್ಮಫಲಂ ಪರಮಂ ತ್ವಿತಿ ಚೋಚುಃ ॥೪೭೮॥

---

೪೭೬. ಇವನಲ್ಲ; ಅಗೋ! ಅವನೇ ಇವನು. ಗಜಚರ್ಮವನ್ನು ಹೊದೆದು ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿದ ಪರಮೇಶ್ವರನನ್ನು ಅಗೋ! ಅಲ್ಲಿ ನೋಡು. ಮುಂದೆ ವಜ್ರಾಯುಧಧಾರಿಯಾದ ದೇವೇಂದ್ರನು ದಾರಿಯನ್ನು ಬಿಡಿಸುವುದಕ್ಕಾಗಿ ಓಡುತ್ತಿದ್ದಾನೆ.

೪೭೭. ಇಗೋ! ದೀರ್ಘವಾದ ಜಟೆಯನ್ನು ಧರಿಸಿ, ಕೃಷ್ಣಾಜಿನವನ್ನು ಹೊದೆದು ಬ್ರಹ್ಮನು ಬಾಯಿಗೆ ಕೈಯನ್ನು ಮರೆಮಾಡಿಕೊಂಡು ಬಂದು ಪ್ರೀತಿಯಿಂದ ಅವನ ಕಿವಿಯ ಹತ್ತಿರ ಏನನ್ನೋ ಮಿತವಾಗಿ ಹೇಳಿದನು.''

೪೭೮. ಹೀಗೆ ಅನುರಾಗಾತಿಶಯದಿಂದ ದೇವತಾಸ್ತ್ರೀಯರ ಮನಸ್ಸಿನಲ್ಲಿ ವಿಷಮಭಾವನೆಗಳು ಮೂಡಿದುವು. '' ಪರಮೇಶ್ವರನನ್ನು ಸೇರಿದ ಪಾರ್ವತಿಯ ಜನ್ಮವು ಸಫಲವಾಯಿತು '' ಎಂದು ಅವರು ಹೊಗಳಿದರು.

ತತೋ ಹಿಮಗಿರೇರ್ವೇಶ್ಮ ವಿಶ್ವಕರ್ಮನಿವೇದಿತಂ ।
ಮಹಾನೀಲಮಯಸ್ತಂಭಂ ಜ್ವಲತ್ಕಾಂಚನಕುಟ್ಟಿಮಂ ॥೪೭೯॥

ಮುಕ್ತಾಜಾಲಪರಿಷ್ಕಾರಂ ಜ್ವಲಿತೌಷಧಿದೀಪಿತಂ ।
ಕ್ರೀಡೋದ್ಯಾನಸಹಸ್ರಾಢ್ಯಂ ಕಾಂಚನಾಂಬುಜದೀರ್ಘಿಕಂ ॥೪೮೦॥

ಮಹೇಂದ್ರಪ್ರಮುಖಾಃ ಸರ್ವೇ ಸುರಾ ದೃಷ್ಟ್ವಾ ತದದ್ಭುತಂ ।
ನೇತ್ರಾಣಿ ಸಫಲಾನ್ಯದ್ಯ ಮನೋಭಿರಿತಿ ತೇ ದಧುಃ ॥೪೮೧॥

ವಿಮರ್ದಕೀರ್ಣಕೇಯೂರಾ ಹರಿಣಾ ದ್ವಾರಿ ರೋಧಿತಾಃ ।
ಕಥಂಚಿತ್ಪ್ರಮುಖಾಸ್ತತ್ರ ವಿವಿಶುರ್ನಾಕವಾಸಿನಃ ॥೪೮೨॥

ಪ್ರಣತೇನಾಚಲೇಂದ್ರೇಣ ಪೂಜಿತೋಽಥ ಚತುರ್ಮುಖಃ ।
ಚಕಾರ ವಿಧಿನಾ ಸರ್ವಂ ವಿಧಿಮಂತ್ರಪುರಸ್ಸರಂ ॥೪೮೩॥

---

೪೭೯-೪೮೧. ಬಳಿಕ ವಿಶ್ವಕರ್ಮನು "ಇದೇ ಹಿಮವಂತನ ದಿವ್ಯಮಂದಿರ" ಎಂದು ಇಂದ್ರಾದಿ ದೇವತೆಗಳಿಗೆ ತಿಳಿಸಿದನು. ಅದರ ಕಂಬಗಳು ನೀಲರತ್ನದಿಂದ ಆಗಿದ್ದುವು. ನೆಲಕ್ಕೆ ಹೊಳೆಹೊಳೆವ ಚಿನ್ನದ ತಗಡನ್ನು ಹಾಸಿದ್ದರು. ಮೇಲ್ಗಡೆ ಮುತ್ತಿನ ಕುಚ್ಚುಗಳನ್ನು ತೂಗುಬಿಟ್ಟಿದ್ದರು. ಜ್ಯೋತಿರ್ಲತೆಗಳು ಬೆಳಗುತ್ತ ಕಾಂತಿಯನ್ನು ಬೀರುತ್ತಿದ್ದುವು. ಸಾವಿರಾರು ಕ್ರೀಡಾವನಗಳು ಕಂಗೊಳಿಸುತ್ತಿದ್ದುವು. "ಇಂದಿಗೆ ನಮ್ಮ ಕಣ್ಣುಗಳು ಸಫಲವಾದುವು" ಎಂದು ಆ ದೇವತೆಗಳು ಮನಸ್ಸಿನಲ್ಲಿ ಭಾವಿಸಿದರು.

೪೮೨. ನೂಕುನುಗ್ಗಲಿನಲ್ಲಿ ಆ ಸುರನಾಯಕರ ತೋಳುಬಳೆಗಳು ಸಡಿಲವಾಗಿ ಕೆಳಗೆ ಎರಚಾಡಿ ಬಿದ್ದುವು. ಗದ್ದಲವಾಗದಂತೆ ವಿಷ್ಣುವು ಬಾಗಿಲಲ್ಲಿ ನಿಂತು ಅವರನ್ನು ತಡೆದು ತಡೆದು ಬಿಡುತ್ತಿದ್ದನು. ಅತಿಪ್ರಯಾಸದಿಂದ ಅವರು ಒಳಹೊಕ್ಕರು.

೪೮೩. ಗಿರಿರಾಜನು ಬಂದು ಬ್ರಹ್ಮದೇವನಿಗೆ ನಮಸ್ಕರಿಸಿ ಪೂಜಿಸಿದನು. ತರುವಾಯ ಚತುರ್ಮುಖನು ಶಾಸ್ತ್ರೋಕ್ತರೀತಿಯಲ್ಲಿ ವೈವಾಹಿಕ ಕರ್ಮವನ್ನೆಲ್ಲ ಮಂತ್ರಪೂರ್ವಕವಾಗಿ ನಡೆಸಿದನು.

ಶರ್ವೇಣ ಪಾಣಿಗ್ರಹಣಮಗ್ನಿಸಾಕ್ಷಿಕಮುತ್ಕೃತಂ ।
ದಾತಾ ಮಹೀಭೃತಾಂ ನಾಥೋ ಹೋತಾ ದೇವಶ್ಚತುರ್ಮುಖಃ ॥೪೪೪॥

ವರಃ ಪಶುಪತಿಃ ಸಾಕ್ಷಾತ್ಕನ್ಯಾ ವಿಶ್ವಾರಣಿಸ್ತಥಾ ।
ಚರಾಚರಾಣಿ ಭೂತಾನಿ ಸುರಾಸುರವರಾಣಿ ಚ ॥೪೪೫॥

ತತ್ರ ಪ್ರೇಕ್ಷ್ಯಾ ನಿಯಮತೋ ಹ್ಯಭರ್ವ ವ್ಯಗ್ರಮೂರ್ತಯಃ ।
ಮನೋಚಾಭಿನವಾ ಸರ್ವಾ ಸಸ್ಯಶಾಲೀಃ ರಸೌಷಧೀಃ ॥೪೪೬॥

ವ್ಯಗ್ರಾ ತು ಪೃಥಿವೀ ದೇವೀ ಸರ್ವಭಾವಮನೋರಮಾ ।
ಗೃಹೀತ್ವಾ ವರುಣಃ ಸರ್ವರತ್ನಾನ್ಯಾಭರಣಾನಿ ಚ ॥೪೪೭॥

ಪುಣ್ಯಾನಿ ಚ ಪವಿತ್ರಾಣಿ ನಾನಾರತ್ನಮಯಾನಿ ತು ।
ತಸ್ಥೌ ಸಾಭರಣೋ ದೇವೋ ಹರ್ಷದಃ ಸರ್ವದೇಹಿನಾಂ ॥೪೪೮॥

---

೪೪೪-೪೪೫. ಪರಮೇಶ್ವರನು ಲೋಪವೇನೂ ಇಲ್ಲದಂತೆ ಅಗ್ನಿಸಾಕ್ಷಿಕವಾಗಿ ಪಾರ್ವತಿಯ ಕೈಯನ್ನು ಹಿಡಿದನು. ಕನ್ಯೆಯನ್ನು ದಾನಮಾಡುವಾತನು ಪರ್ವತಗಳ ಅಧಿರಾಜನಾದ ಹಿಮವಂತ. ಪುರೋಹಿತನು ಭಗವಂತನಾದ ಚತುರ್ಮುಖ ಬ್ರಹ್ಮ. ಸಾಕ್ಷಾಚ್ಛಂಕರನೇ ವರ. ಲೋಕಮಾತೆಯಾದ ಪಾರ್ವತಿಯೇ ವಧು. ಚರಾಚರಭೂತಗಳೂ, ಸುರಾಸುರರೂ ಎಚ್ಚರಿಕೆಯಿಂದ ಕಾದುಬಿದ್ದಿರುವ ದಾಸವರ್ಗದವರು.

೪೪೬. ಸಕಲ ಭಾವಗಳಲ್ಲಿಯೂ ಸುಂದರಳಾದ ಭೂದೇವಿಯು ಆಸಕ್ತಿಯಿಂದ ಸೊಗಸಾದ ಬತ್ತದ ಪೈರುಗಳನ್ನೂ, ದಿವ್ಯರಸಭರಿತಗಳಾದ ಮೂಲಿಕೆಗಳನ್ನೂ ಕಾಣಿಕೆಯಾಗಿ ಒಪ್ಪಿಸಿದಳು.

೪೪೭-೪೪೮. ಪ್ರಾಣಿಗಳಿಗೆಲ್ಲ ಸಂತೋಷವನ್ನು ಕೊಡುವ ವರುಣರಾಜನು ಆಭರಣಗಳಿಂದ ಅಲಂಕೃತನಾಗಿ ಸಕಲರತ್ನಗಳನ್ನೂ ನಾನಾರತ್ನಖಚಿತವಾದ ದಿವ್ಯ ಭೂಷಣಗಳನ್ನೂ ಉಪಹಾರವಾಗಿ ತಂದು ಕಾದು ನಿಂತಿದ್ದನು.

ಧನದಶ್ಚಾಪಿ ದಿವ್ಯಾನಿ ಹೈಮಾನ್ಯಾಭರಣಾನಿ ಚ ।
ಜಾತರೂಪವಿಚಿತ್ರಾಣಿ ಪ್ರಯತಃ ಸಮುಪಸ್ಥಿತಃ ॥೪೮೯॥

ವಾಯುರ್ವವೌ ಸುಸುರಭಿಃ ಸುಖಸಂಸ್ಪರ್ಶನೋ ವಿಭುಃ ।
ಛತ್ರಮಿಂದುಕರೋದ್ಭಾಸಿ ಸುಸಿತಂ ಚ ಶತಕ್ರತುಃ ॥೪೯೦॥

ಜಗ್ರಾಹ ಮುದಿತಃ ಸ್ರಗ್ವೀ ಬಾಹುಭಿರ್ಬಹುಭೂಷಣೈಃ ।
ಜಗುರ್ಗಂಧರ್ವಮುಖ್ಯಾಶ್ಚ ನನೃತುಶ್ಚಾಪ್ಸರೋಗಣಾಃ ॥೪೯೧॥

ವಾದಯಂತೋಽತಿಮಧುರಂ ಜಗುರ್ಗಂಧರ್ವಕಿನ್ನರಾಃ ।
ಮೂರ್ತಾಶ್ಚ ಋತವಸ್ತತ್ರ ಜಗುಶ್ಚ ನನೃತುಶ್ಚ ವೈ ॥೪೯೨॥

ಚಪಲಾಶ್ಚ ಗಣಾಸ್ತಸ್ಥುರ್ಲೋಡಯಂತೋ ಹಿಮಾಚಲಂ ।
ಉತ್ತಿಷ್ಠ ಕ್ರಮಶಶ್ಚಾತ್ರ ವಿಶ್ವಭುಗ್ಭಗನೇತ್ರಹಾ ॥೪೯೩॥

---

೪೮೯. ಕುಬೇರನೂ ಸಹ ದೇವಯೋಗ್ಯವಾದ, ಚಿತ್ರವಿಚಿತ್ರವಾದ ಸುವರ್ಣಾಭರಣಗಳನ್ನು ತೆಗೆದುಕೊಂಡು ಬಂದು ಜಾಗರೂಕನಾಗಿ ಸಮಯವನ್ನು ನಿರೀಕ್ಷಿಸುತ್ತಿದ್ದನು.

೪೯೦. ಸರ್ವವ್ಯಾಪಕನಾದ ವಾಯು ಪರಿಮಳಯುಕ್ತನಾಗಿ ಹಿತವಾಗುವಂತೆ ಬೀಸಿದನು. ಪುಷ್ಪಮಾಲಾಲಂಕೃತನಾದ ದೇವೇಂದ್ರನು ಹರ್ಷಿತನಾಗಿ ಚಂದ್ರನ ಕಿರಣಗಳಂತೆ ನಿರ್ಮಲವಾದ ಬೆಳ್ಗೊಡೆಯನ್ನು ಹಲವು ಒಡವೆಗಳಿಂದ ಕಂಗೊಳಿಸುವ ತನ್ನ ಕೈಗಳಿಂದ ಹಿಡಿದನು.

೪೯೧-೪೯೨. ಅಪ್ಸರಸ್ತ್ರೀಯರು ನರ್ತಿಸಿದರು. ಗಂಧರ್ವರೂ ಕಿನ್ನರರೂ ಬಹು ಮಧುರವಾಗಿ ವಾದ್ಯಗಳನ್ನು ಬಾಜಿಸುತ್ತ ಗಾನಮಾಡಿದರು. ಋತುಗಳು ಶರೀರವನ್ನು ಧರಿಸಿ ಬಂದು ಗಾನವನ್ನೂ ನರ್ತನವನ್ನೂ ನಡೆಸಿದುವು.

೪೯೩-೪೯೪. ಚಪಲಸ್ವಭಾವದ ಪ್ರಮಥಗಣಗಳು ಹಿಮವತ್ಪರ್ವತದಲ್ಲೆಲ್ಲ ಮನಸ್ಸು ಬಂದಂತೆ ಓಡಾಡುತ್ತಿದ್ದು ವಿವಾಹ ಸಮಯದಲ್ಲಿ ಕ್ರಮವಾಗಿ ಬಂದು

ಚಕಾರೌದ್ವಾಹಿಕಂ ಕೃತ್ಯಂ ಪತ್ನ್ಯಾ ಸಹ ಯಥೋಚಿತಂ ।
ದತ್ತಾರ್ಘ್ಯೋ ಗಿರಿರಾಜೇನ ಸುರವೃಂದೈರ್ವಿನೋದಿತಃ ॥೪೯೪॥

ಅವಸತ್ತಾಂ ಕ್ಷಪಾಂ ತತ್ರ ಪತ್ನ್ಯಾ ಸಹ ಪುರಾಂತಕಃ ।
ತತೋ ಗಂಧರ್ವಗೀತೇನ ನೃತ್ಯೇನಾಪ್ಸರಸಾಮಪಿ ॥೪೯೫॥

ಸ್ತುತಿಭಿರ್ದೇವದೈತ್ಯಾನಾಂ ವಿಬುದ್ಧೋ ವಿಬುಧಾಧಿಪಃ ।
ಆಮಂತ್ರ್ಯ ಹಿಮಶೈಲೇಂದ್ರಂ ಪ್ರಭಾತೇ ಚೋಮಯಾ ಸಹ ।
ಜಗಾಮ ಮಂದರಗಿರಿಂ ವಾಯುವೇಗೇನ ಶೃಂಗಿಣಾ ॥೪೯೬॥

ತತೋ ಗತೇ ಭಗವತಿ ನೀಲಲೋಹಿತೇ
ಸಹೋಮಯಾ ರತಿಮಲಭನ್ನ ಭೂಧರಃ ।

ನಿಂತುಕೊಂಡರು. ಜಗತ್ಸಂಹಾರಕನೂ, ಭಗನ ಕಣ್ಣುಗಳನ್ನು ಕಿತ್ತವನೂ* ಆದ ಪರಮೇಶ್ವರನು ಗಿರಿರಾಜನಿಂದ ಸತ್ಕಾರವನ್ನು ಸ್ವೀಕರಿಸಿ, ದೇವತೆಗಳು ವಿನೋದ ಮಾಡುತ್ತಿರಲು, ಪತ್ನಿಯಾದ ಪಾರ್ವತಿಯೊಡಗೂಡಿ ಶಾಸ್ತ್ರೋಕ್ತವಾಗಿ ವೈವಾಹಿಕ ಕರ್ಮವನ್ನು ನೆರವೇರಿಸಿದನು.

೪೯೫-೪೯೬. ತ್ರಿಪುರಸಂಹಾರಕನಾದ ಪರಮೇಶ್ವರನು ಪತ್ನಿಯೊಡನೆ ಆ ರಾತ್ರಿ ಅಲ್ಲೇ ಇದ್ದನು. ಬಳಿಕ ಗಂಧರ್ವರು ಗಾನಮಾಡುತ್ತಿರಲು, ಅಪ್ಸರಸ್ತ್ರೀಯರು ನರ್ತಿಸುತ್ತಿರಲು, ದೇವತೆಗಳೂ ದೈತ್ಯರೂ ಸ್ತುತಿಸುತ್ತಿರಲು ಪ್ರಾತಃಕಾಲದಲ್ಲಿ ಎಚ್ಚತ್ತು ಆ ಮಹಾದೇವನು ಹಿಮವಂತನನ್ನು ಬೀಳ್ಕೊಂಡು, ಪಾರ್ವತೀ ಸಹಿತನಾಗಿ ವಾಯುವಿನಂತೆ ವೇಗಶಾಲಿಯಾದ ನಂದೀಶ್ವರನ ಮೇಲೇರಿ ಮಂದರ ಪರ್ವತಕ್ಕೆ ತೆರಳಿದನು.

೪೯೭. ಪೂಜ್ಯನಾದ ಮಹೇಶ್ವರನು ಪಾರ್ವತಿಯೊಡನೆ ಪ್ರಯಾಣಮಾಡಿದ ಬಳಿಕ ಹಿಮವಂತನಿಗೂ ಅವನ ಬಂಧುಗಳಿಗೂ ಮನಸ್ಸಿನಲ್ಲಿ ನೆಮ್ಮದಿಯಿಲ್ಲ

* ಸ್ವಾಯಂಭುವ ಮನ್ವಂತರದಲ್ಲಿ ದಕ್ಷಬ್ರಹ್ಮನು ಈಶ್ವರನನ್ನು ಕರೆಯದೆ ಯಾಗವೊಂದನ್ನು ಮಾಡಿದನು. ದ್ವಾದಶಾದಿತ್ಯರಲ್ಲಿ ಒಬ್ಬನಾದ ಭಗನು ಅಲ್ಲಿಗೆ ಹೋಗಿದ್ದನು. ಈಶ್ವರನು ವೀರಭದ್ರನ ರೂಪವನ್ನು ತಾಳಿ ಯಜ್ಞವನ್ನು ಧ್ವಂಸಮಾಡಿದುದಲ್ಲದೆ ಭಗನ ಕಣ್ಣುಗಳನ್ನೂ ಕಿತ್ತುಹಾಕಿದನು.

ಸಬಾಂಧವೋ ಭವತಿ ಚ ಕಸ್ಯ ನೋ ಮನೋ
ವಿಹ್ವಲಂ ಚ ಜಗತಿ ಹಿ ಕನ್ಯಕಾಪಿತುಃ ॥೯೭॥

ಜ್ವಲನ್ಮಣಿಸ್ಫಟಿಕಹಾಟಕೋತ್ಕಟಂ
ಸ್ಫುಟದ್ಯುತಿ ಸ್ಫಟಿಕಗೋಪುರಂ ಪುರಂ ।
ಹರೋ ಗಿರೌ ಚಿರಮನುಕಲ್ಪಿತಂ ತದಾ
ವಿಸರ್ಜಿತಾಮರನಿವಹೋಽವಿಶತ್ಸ್ವಕಂ ॥೯೮॥

ತದೋಮಾಸಹಿತೋ ದೇವೋ ವಿಜಹಾರ ಭಗಾಕ್ಷಿಹಾ ।
ಪುರೋದ್ಯಾನೇಷು ರಮ್ಯೇಷು ವಿವಿಕ್ತೇಷು ವನೇಷು ಚ ॥೯೯॥

ಸುರಕ್ತಹೃದಯೋ ದೇವ್ಯಾ ಮಕರಾಂಕಪುರಃಸರಃ ।
ತತೋ ಬಹುತಿಥೇ ಕಾಲೇ ಸುತಕಾಮಾ ಗಿರೇಃಸುತಾ ॥೩೦೦॥

---

ವಾಯಿತು. ಲೋಕದಲ್ಲಿ ಕನ್ಯಾಪಿತೃವೆನಿಸಿಕೊಂಡ ಯಾರ ಮನಸ್ಸು ತಾನೆ ಮಗಳ ಅಗಲಿಕೆಯಿಂದ ಕೊರಗದೆ ಇದ್ದೀತು ?

೯೮. ಶಂಕರನು ದೇವತೆಗಳನ್ನು ಅವರವರ ಸ್ಥಳಗಳಿಗೆ ಕಳುಹಿಸಿ ಕೊಟ್ಟು ಮಂದರಪರ್ವತದಲ್ಲಿ ನಿರ್ಮಿತವಾಗಿದ್ದ ತನ್ನ ನಗರವನ್ನು ಸೇರಿದನು. ಅದು ರತ್ನ, ಸ್ಫಟಿಕಮಣಿ, ಸುವರ್ಣ ಇವುಗಳಿಂದ ಸಮೃದ್ಧವಾಗಿತ್ತು. ಸ್ಫಟಿಕ ಮಯವಾದ ಗೋಪುರಗಳು ಅಲ್ಲಿ ಮನೋಹರವಾಗಿ ಬೆಳಗುತ್ತಿದ್ದುವು.

೯೯. ಆಗ ಮಹಾದೇವನು ಕಾಮವಶನಾಗಿ ಪಾರ್ವತಿಯೊಡನೆ ರಮ್ಯ ವಾದ ಪುರೋದ್ಯಾನಗಳಲ್ಲಿಯೂ ಜನರಹಿತವಾದ ವನಗಳಲ್ಲಿಯೂ ಅನುರಾಗದಿಂದ ವಿಹರಿಸಿದನು.

೩೦೦. ಬಹುಕಾಲ ಕಳೆದ ಬಳಿಕ ಪಾರ್ವತಿಗೆ ಮಕ್ಕಳಾಗಬೇಕೆಂಬ ಆಸೆ ಹುಟ್ಟಿತು. ಅವಳು ಬೊಂಬೆಗಳನ್ನಿಟ್ಟುಕೊಂಡು ಗೆಳತಿಯರೊಡನೆ ಆಟವಾಡು ತ್ತಿದ್ದಳು.

ಸಖೀಭಿಃ ಸಹಿತಾ ಕ್ರೀಡಾಂ ಚಕ್ರೇ ಕೃತ್ರಿಮಪುತ್ರಕೈಃ ।
ಕದಾಚಿದ್ಗಂಧತೈಲೇನ ಗಾತ್ರಮಭ್ಯಜ್ಯ ಶೈಲಜಾ ॥೫೦೧॥

ಚೂರ್ಣೈರುದ್ವರ್ತಯಾಮಾಸ ಮಲಿನಾಂತರಿತಾಂ ತನುಂ ।
ತದುದ್ವರ್ತನಕಂ ಗೃಹ್ಯ ನರಂ ಚಕ್ರೇ ಗಜಾನನಂ ॥೫೦೨॥

ಪುತ್ರಕಂ ಕ್ರೀಡತೀ ದೇವೀ ತಂ ಚಾಪ್ಯರ್ಪಯದಂಭಸಿ ।
ಜಾಹ್ನವ್ಯಾಸ್ತು ಶಿವಾ ಸಖ್ಯಾಸ್ತತಃ ಸೋಽಭೂದ್ಬೃಹದ್ವಪುಃ ॥೫೦೩॥

ಕಾಯೇನಾತಿವಿಶಾಲೇನ ಜಗದಾಪೂರಯತ್ತದಾ ।
ಪುತ್ರೇತ್ಯುವಾಚ ತಂ ದೇವೀ ಪುತ್ರೇತ್ಯೂಚೇ ಚ ಜಾಹ್ನವೀ ॥೫೦೪॥

ಗಾಂಗೇಯ ಇತಿ ದೇವೈಸ್ತು ಪೂಜಿತೋಽಭೂದ್ಗಜಾನನಃ ।
ವಿನಾಯಕಾಧಿಪತ್ಯಂ ಚ ದದಾವಸ್ಯ ಪಿತಾಮಹಃ ॥೫೦೫॥

---

೫೦೧. ಒಂದಾನೊಂದು ದಿನ ಪಾರ್ವತಿಯು ಪರಿಮಳ ತೈಲವನ್ನು ಹಚ್ಚಿಕೊಂಡು ಕೊಳೆ ಹೋಗಲೆಂದು ಸ್ನಾನಚೂರ್ಣದಿಂದ ಮೈಯನ್ನು ಉಜ್ಜಿಕೊಂಡಳು.

೫೦೨-೫೦೩. ಪಾರ್ವತಿಯು ಆ ಸ್ನಾನಚೂರ್ಣವನ್ನು ತೆಗೆದುಕೊಂಡು ಆನೆಯ ಮುಖವೂ ಮನುಷ್ಯಾಕಾರವೂ ಆದ ಪುರುಷನನ್ನು ಮಾಡಿದಳು. ಬಳಿಕ ಅವಳು ಆಡುತ್ತ ಆಡುತ್ತ ತನ್ನ ಗೆಳತಿಯಾದ ಗಂಗಾನದಿಯ ನೀರಿನಲ್ಲಿ ಅವನನ್ನು ಹಾಕಿಬಿಟ್ಟಳು. ಬಳಿಕ ಆತನ ದೇಹವು ಬಹು ದೊಡ್ಡದಾಯಿತು.

೫೦೪. ಕ್ರಮವಾಗಿ ಅವನು ಬೆಳೆದು ಬೆಳೆದು ಜಗತ್ತನ್ನು ವ್ಯಾಪಿಸಿದನು. ಅವನನ್ನು ಪಾರ್ವತಿಯೂ ಗಂಗಾದೇವಿಯೂ ಮಗನೆಂದು ಕರೆದರು.

೫೦೫. ಆ ಗಜಮುಖನನ್ನು ದೇವತೆಗಳು ಗಾಂಗೇಯನೆಂದು ಪೂಜಿಸಿದರು. ಬ್ರಹ್ಮನು ಅವನಿಗೆ ವಿಘ್ನಗಳ ಆಧಿಪತ್ಯವನ್ನು ಕರುಣಿಸಿದನು.

ಪುನಃ ಸಾ ಕ್ರೀಡನಂ ಚಕ್ರೇ ಪುತ್ರಾರ್ಥಂ ವರವರ್ಣಿನೀ ।
ಮನೋಜ್ಞಮಂಕುರಂ ರೂಢಮಶೋಕಸ್ಯ ಶುಭಾನನಾ ॥೫೦೭॥

ವರ್ಧಯಾಮಾಸ ತಂ ಚಾಪಿ ಕೃತಸಂಸ್ಕಾರಮಂಗಲಾ ।
ಬೃಹಸ್ಪತಿಮುಖೈರ್ವಿಪ್ರೈರ್ದಿವಸ್ಪತಿಪುರೋಗಮೈಃ ॥೫೦೮॥

ತತೋ ದೇವೈಶ್ಚ ಮುನಿಭಿಃ ಪ್ರೋಕ್ತಾ ದೇವೀ ತ್ವಿದಂ ವಚಃ ।
ಭವಾನಿ ಭವತೀ ಭವ್ಯಾ ಸಂಭೂತಾ ಲೋಕಭೂತಯೇ ॥೫೦೯॥

ಪ್ರಾಯಃ ಸುತಫಲೋ ಲೋಕಃ ಪುತ್ರಿ ಪುಣ್ಯೈಶ್ಚ ಲಭ್ಯತೇ ।
ಅಪುತ್ರಾಶ್ಚ ಪ್ರಜಾಃ ಪ್ರಾಯೋ ದೃಶ್ಯಂತೇ ದೈವಹೇತುತಃ ॥೫೧೦॥

ಅಧುನಾ ದರ್ಶಿತೇ ಮಾರ್ಗೇ ಮರ್ಯಾದಾಂ ಕರ್ತುಮರ್ಹಸಿ ।
ಫಲಂ ಕಿಂ ಭವಿತಾ ದೇವಿ ಕಲ್ಪಿತೈಸ್ತರುಪುತ್ರಕೈಃ ।
ಇತ್ಯುಕ್ತಾ ಹರ್ಷಪೂರ್ಣಾಂಗೀ ಪ್ರೋವಾಚೇಮಾ ಶುಭಾಂ ಗಿರಂ ॥೫೧೧॥

---

೫೦೭-೫೦೮. ಆ ಸುಂದರಾಂಗಿಯು ಮರಳಿ ಮಕ್ಕಳನ್ನು ಸಾಕುವ ಆಟವನ್ನು ಆಡಿದಳು. ಅಶೋಕವೃಕ್ಷದ ಸುಂದರವಾದ ಸಸಿಯೊಂದು ಹುಟ್ಟಿರಲು ಅದನ್ನು ಬೆಳಸಿದಳು. ಅದಕ್ಕೆ ಬೃಹಸ್ಪತಿ ಮೊದಲಾದ ಬ್ರಾಹ್ಮಣರಿಂದಲೂ ಇಂದ್ರನೇ ಮುಂತಾದ ದೇವತೆಗಳಿಂದಲೂ ಸಂಸ್ಕಾರ ಮಂಗಲವನ್ನು ಮಾಡಿಸಿದಳು.

೫೦೯. ಬಳಿಕ ದೇವತೆಗಳೂ ಮುನಿಗಳೂ ಪಾರ್ವತಿಗೆ ಹೀಗೆ ಹೇಳಿದರು. "ಓ ಭವಾನೀ, ಮಂಗಳರೂಪಿಣಿಯಾದ ನೀನು ಲೋಕಕಲ್ಯಾಣಕ್ಕಾಗಿ ಹುಟ್ಟಿರುವೆ.

೫೧೦. ಮಗಳೇ! ಲೋಕದಲ್ಲಿ ಪುತ್ರಲಾಭವೇ ಜೀವನದ ಫಲ. ಅದು ಪುಣ್ಯದಿಂದ ಲಭ್ಯವಾಗತಕ್ಕದ್ದು. ಸಾಮಾನ್ಯವಾಗಿ ಜನರಿಗೆ ಸಂತಾನವಾಗದಿರುವುದಕ್ಕೆ ಅದೃಷ್ಟವೇ ಕಾರಣ.

೫೧೧. ದೇವೀ! ಈಗ ರೂಢಿಯಲ್ಲಿರುವ ಮಾರ್ಗವನನ್ನುಸರಿಸಿ ನೀನು ಲೋಕಮರ್ಯಾದೆಯನ್ನು ಪಾಲಿಸಬೇಕು. ಮರಗಳನ್ನು ಮಕ್ಕಳೆಂದು ಭಾವಿಸಿ ಸಾಕುವುದರಿಂದ ಫಲವೇನು ಬಂದೀತು?" ದೇವತೆಗಳ ಈ ಮಾತನ್ನು ಕೇಳಿ ಹರ್ಷಪೂರ್ಣಳಾದ ಪಾರ್ವತಿಯು ಶುಭವಾಕ್ಯವನ್ನಿಂತು ಹೇಳಿದಳು.

|| ದೇವ್ಯುವಾಚ ||

ಏವಂ ನಿರುದಕೇ ದೇಶೇ ಯಃ ಕೂಪಂ ಕಾರಯೇದ್ಬುಧಃ ।
ಬಿಂದೌ ಬಿಂದೌ ಚ ತೋಯಸ್ಯ ವಸೇತ್ಸಂವತ್ಸರಂ ದಿವಿ ||೫೧||

ದಶಕೂಪಸಮಾ ವಾಪೀ ದಶವಾಪೀಸಮೋ ಹ್ರದಃ ।
ದಶಹ್ರದಸಮಃ ಪುತ್ರೋ ದಶಪುತ್ರಸಮೋ ದ್ರುಮಃ ।
ಏಷೈವ ಮಮ ಮರ್ಯಾದಾ ನಿಯತಾ ಲೋಕಭಾವಿನೀ ||೫೨||

ಇತ್ಯುಕ್ತಾಸ್ತು ತತೋ ವಿಪ್ರಾ ಬೃಹಸ್ಪತಿಪುರೋಗಮಾಃ ।
ಜಗ್ಮುಃ ಸ್ವಮಂದಿರಾಣ್ಯೇವ ಭವಾನೀಂ ವಂದ್ಯ ಸಾದರಂ ||೫೩||

ಗತೇಷು ತೇಷು ದೇವೋಽಪಿ ಶಂಕರಃ ಪರ್ವತಾತ್ಮಜಾಂ ।
ಪಾಣಿನಾಲಂಬ್ಯ ವಾಮೇನ ಶನೈಃ ಪ್ರಾವೇಶಯಚ್ಛುಭಾಂ ||೫೪||

ಚಿತ್ತಪ್ರಸಾದಜನನಂ ಪ್ರಾಸಾದಂ ರತ್ನಗೋಪುರಂ ।
ಲಂಬಮೌಕ್ತಿಕದಾಮಾನಂ ಮಾಲಿಕಾಕುಲವೇದಿಕಂ ||೫೫||

---

೫೧. ನೀರಿಗೆ ಕಷ್ಟವಾಗಿರುವ ಕಡೆಯಲ್ಲಿ ಬಾವಿಯನ್ನು ತೋಡಿಸುವ ಪ್ರಾಜ್ಞನು ಅದರಲ್ಲಿರುವ ಒಂದೊಂದು ತೊಟ್ಟು ನೀರಿಗೂ ಒಂದೊಂದು ವರ್ಷದಂತೆ ಸ್ವರ್ಗದಲ್ಲಿ ಅನಂತಕಾಲ ವಾಸಿಸುವನು.

೫೨. ಹತ್ತು ಬಾವಿಗಳಿಗೆ ಒಂದು ಕೊಳವು ಸಮ. ಹತ್ತು ಕೊಳಗಳಿಗೆ ಒಂದು ಮಡು ಸಮ. ಹತ್ತು ಮಡುಗಳಿಗೆ ಒಬ್ಬ ಮಗನು ಸಮ. ಒಂದು ಮರವು ಹತ್ತು ಜನ ಮಕ್ಕಳಿಗೆ ಸಮ. ಇದೇ ನಾನರಿತಿರುವ ಲೋಕನೀತಿ. ಲೋಕದಲ್ಲಿ ಇದು ತಪ್ಪದೆ ಪ್ರಚಾರದಲ್ಲಿರುವುದು.

೫೩. ಪಾರ್ವತಿಯು ಹೀಗೆ ಹೇಳಲು ಬೃಹಸ್ಪತಿ ಮೊದಲಾದ ಬ್ರಾಹ್ಮಣರು ಅವಳಿಗೆ ಆದರದಿಂದ ನಮಸ್ಕಾರಮಾಡಿ ತಮ್ಮ ಮನೆಗಳಿಗೆ ತೆರಳಿದರು.

೫೪-೫೫. ಅವರು ಹೊರಟುಹೋದ ಬಳಿಕ ಪರಮೇಶ್ವರನು ಮಂಗಳ ರೂಪಿಣಿಯಾದ ಪಾರ್ವತಿಯನ್ನು ತನ್ನ ಎಡಗೈಯಲ್ಲಿ ಹಿಡಿದು ಮೆಲ್ಲಗೆ ತನ್ನ ಅರಮನೆಯೊಳಕ್ಕೆ ಕರೆದುಕೊಂಡು ಹೋದನು. ಅದು ರತ್ನದ ಗೋಪುರಗಳಿಂದ ಕೂಡಿ ಮನಸ್ಸಿಗೆ ಪ್ರಶಾಂತಿಯನ್ನು ಕೊಡುತ್ತಿತ್ತು. ಮುತ್ತಿನ ಕುಚ್ಚುಗಳು ಅಲ್ಲಿ ಜೋಲಾಡುತ್ತಿದ್ದವು. ವೇದಿಕೆಗಳು ರತ್ನಮಾಲಿಕೆಗಳಿಂದ ಶೋಭಿಸುತ್ತಿದ್ದವು.

**ನಿರ್ಧೌತಕಲಧೌತಂ ಚ ಕ್ರೀಡಾಗೃಹಮನೋರಮಂ ।**
**ಪ್ರಕೀರ್ಣಕುಸುಮೋದ್ದಾಮಮತ್ತಾಲಿಕುಲಕೂಜಿತಂ ॥೫೧೬॥**

**ಕಿನ್ನರೋದ್ಗೀತಸಂಗೀತಗೃಹಾಂತರಿತಭಿತ್ತಿಕಂ ।**
**ಸುಗಂಧಿಧೂಪಸಂಘಾತಮನಃಪ್ರಾರ್ಥ್ಯಮಲಕ್ಷಿತಂ ॥೫೧೭॥**

**ಕ್ರೀಡನ್ಮಯೂರನಾರೀಭಿರ್ವೃತಂ ವೈ ತತವಾದಿಭಿಃ ।**
**ಹಂಸಸಂಘಾತಸಂಘುಷ್ಟಂ ಸ್ಫಟಿಕಸ್ತಂಭತೋರಣಂ ॥೫೧೮॥**

**ಅನಾರತಮತಿಪ್ರೀತ್ಯಾ ಬಹುಶಃ ಕಿನ್ನರಾಕುಲಂ ।**
**ಶುಕೈರ್ಯತ್ರಾಭಿಹನ್ಯಂತೇ ಪದ್ಮರಾಗವಿನಿರ್ಮಿತಾಃ ॥೫೧೯॥**

---

೫೧೬. ಆ ಮಂದಿರವು ಹೊಳೆಹೊಳೆವ ಚಿನ್ನ ಬೆಳ್ಳಿಗಳಿಂದ ಪ್ರಕಾಶಿಸುತ್ತಿತ್ತು. ಕ್ರೀಡಾಗೃಹಗಳಿಂದ ರಮಣೀಯವಾಗಿತ್ತು. ಅಲ್ಲಲ್ಲಿ ಬಿಟ್ಟಿರುವ ಸೊಗಸಾದ ಹೂಗಳ ಮೇಲೆ ಮದಿಸಿದ ದುಂಬಿಗಳು ಇಂಪಾಗಿ ಕೂಗುತ್ತ ಹಾರಾಡುತ್ತಿದ್ದುವು.

೫೧೭. ಪ್ರಶಸ್ತವಾದ ಗೋಡೆಗಳಿಂದ ಕೂಡಿದ ಸಂಗೀತಗೃಹಗಳಲ್ಲಿ ಕಿನ್ನರರು ಉಚ್ಚಸ್ವರದಿಂದ ಗಾನಮಾಡುತ್ತಿದ್ದರು. ಧೂಪದ ಹೊಗೆಯು ಒಳ್ಳೆಯ ವಾಸನೆಯನ್ನು ಬೀರುತ್ತಿತ್ತು. ಮನಸ್ಸಿನಲ್ಲಿ ಅಪೇಕ್ಷಿಸಬಹುದಾದ ಸುಖಭೋಗಗಳೆಲ್ಲವೂ ಅದರಲ್ಲಿ ಸಮೃದ್ಧವಾಗಿದ್ದುವು. ಅಂತಹುದನ್ನು ಯಾರೂ ಎಂದೂ ಕಂಡಿರಲಿಲ್ಲ.

೫೧೮. ಹೆಣ್ಣು ನವಿಲುಗಳು ಆಟವಾಡುತ್ತ ಗಂಭೀರವಾಗಿ ಕೇಕೇ ಹಾಕುತ್ತಿದ್ದುವು. ಹಂಸಪಕ್ಷಿಗಳು ಗುಂಪುಗುಂಪಾಗಿ ಕೂಡಿ ಧ್ವನಿಮಾಡುತ್ತಿದ್ದುವು. ಸ್ಫಟಿಕಶಿಲೆಯ ಕಂಭಗಳೂ ತೋರಣಗಳೂ ರಂಜಿಸುತ್ತಿದ್ದುವು.

೫೧೯. ಕಿನ್ನರರು ಎಡೆಬಿಡದೆ ಬಹು ಸಂತೋಷದಿಂದ ಗುಂಪು ಗುಂಪಾಗಿ ಕೂಡುತ್ತಿದ್ದರು. ಪದ್ಮರಾಗರತ್ನದ ಗೋಡೆಗಳಲ್ಲಿ ಮುತ್ತುಗಳು ಪ್ರತಿಫಲಿತವಾಗಿರಲು ದಾಳಿಂಬೆಹಣ್ಣಿನ ಬೀಜಗಳೆಂಬ ಭ್ರಾಂತಿಯಿಂದ ಗಿಳಿಗಳು ಬಂದು ಅವುಗಳನ್ನು ಕುಕ್ಕುತ್ತಿದ್ದುವು.

ಭಿತ್ತಯೋ ದಾಡಿಮಭ್ರಾಂತ್ಯಾ ಪ್ರತಿಬಿಂಬಿತವನೌಕ್ತಿಕಾಃ ।
ತತ್ರಾಕ್ಷಕ್ರೀಡಯಾ ದೇವೀ ವಿಹರ್ತುಮುಪಚಕ್ರಮೇ ॥೫೨೦॥

ಸ್ವಚ್ಛೇಂದ್ರನೀಲಫಲಕೇ ಕ್ರೀಡತೋರ್ಯತ್ರ ಬಿಂಬಿತಂ ।
ವಪುಃಸಹಾಯತಾಂ ಪ್ರಾಪ್ತಂ ವಿನೋದರಸನಿರ್ವೃತೌ ॥೫೨೧॥

ಏವಂ ಪ್ರಕ್ರೀಡತೋಸ್ತತ್ರ ದೇವೀಶಂಕರಯೋಸ್ತದಾ ।
ಪ್ರಾದುರ್ಭವನ್ಮಹಾಶಬ್ದಸ್ತದ್ಗೃಹೋದರಗೋಚರಃ ॥೫೨೨॥

ತಚ್ಛ್ರುತ್ವಾ ಕೌತುಕಾದ್ದೇವೀ ಕಿಮೇತದಿತಿ ಶಂಕರಂ ।
ಪಪ್ರಚ್ಛ ತಂ ಶುಭತನುರ್ಹರಂ ವಿಸ್ಮಯಪೂರ್ವಕಂ ॥೫೨೩॥

ಉವಾಚ ದೇವೀಂ ನೈತತ್ತೇ ದೃಷ್ಟಪೂರ್ವಂ ಸುವಿಸ್ಮಿತೇ ।
ಏತೇ ಗಣೇಶಾಃ ಕ್ರೀಡಂತೇ ಶೈಲೇಽಸ್ಮಿನ್ ಮತ್ಪ್ರಿಯಾಃ ಸದಾ ॥೫೨೪॥

---

೫೨೦-೫೨೧. ಅಲ್ಲಿ ಪಾರ್ವತಿಯು ವಿನೋದವಾಗಿ ಪಗಡೆಯಾಡಲು ತೊಡಗಿದಳು. ದಂಪತಿಗಳಿಬ್ಬರೂ ನಿರ್ಮಲವಾದ ಇಂದ್ರನೀಲರತ್ನದ ಹಲಗೆಯ ಮೇಲೆ ಆಡುತ್ತಿರಲು ಅದರಲ್ಲಿ ಅವರ ಪ್ರತಿಬಿಂಬವು ಬಿದ್ದಿತು. ಅವರ ಪ್ರತಿಚ್ಛಾಯೆ ಮಾತ್ರವೇ ಅವರಿಗೆ ಜೊತೆಯಾಯಿತು. ಅವರು ವಿನೋದಪರವಶರಾಗಿದ್ದರು.

೫೨೨. ಹೀಗೆ ಪಾರ್ವತೀಪರಮೇಶ್ವರರು ಆಟವಾಡುತ್ತಿರಲು ಆ ಮನೆಯೊಳಗಡೆಯಿಂದ ಬಲು ದೊಡ್ಡ ಸದ್ದು ಕೇಳಬಂದಿತು.

೫೨೩. ಅದನ್ನು ಕೇಳಿ ಮಂಗಳಾಂಗಿಯಾದ ಪಾರ್ವತಿಯು ಕುತೂಹಲದಿಂದಲೂ ಆಶ್ಚರ್ಯದಿಂದಲೂ ಇದೇನೆಂದು ಶಂಕರನನ್ನು ಕೇಳಿದಳು.

೫೨೪. ಪಾರ್ವತಿಗೆ ಶಂಕರನು ಹೇಳಿದನು. "ದೇವೀ, ನೀನು ಬಹಳ ಆಶ್ಚರ್ಯಗೊಂಡಿರುವೆ. ಇದನ್ನು ನೀನು ಎಂದೂ ಕಂಡಿಲ್ಲ. ಯಾವಾಗಲೂ ನನಗೆ ಪ್ರಿಯರೆನಿಸಿದ ಗಣಾಧಿನಾಯಕರು ಈ ಪರ್ವತದಲ್ಲಿ ಆಡುತ್ತಾರೆ.

ತಪಸಾ ಬ್ರಹ್ಮಚರ್ಯೇಣ ನಿಯಮೈಃ ಕ್ಷೇತ್ರಸೇವನೈಃ ।
ಯೈರಹಂ ತೋಷಿತಃ ಪೂರ್ವಂ ತ ಏತೇ ಮನುಜೋತ್ತಮಾಃ ॥೫೨೫॥

ಮತ್ಸಮೀಪಮನುಪ್ರಾಪ್ತಾ ಮಮ ಹೃದ್ಯಾಃ ಶುಭಾನನೇ ।
ಕಾಮರೂಪಾ ಮಹೋತ್ಸಾಹಾ ಮಹಾರೂಪಗುಣಾನ್ವಿತಾಃ ॥೫೨೬॥

ಕರ್ಮಭಿರ್ವಿಸ್ಮಯಂ ತೇಷಾಂ ಪ್ರಯಾಮಿ ಬಲಶಾಲಿನಾಂ ।
ಸಾಮರಸ್ಯಾಸ್ಯ ಜಗತಃ ಸೃಷ್ಟಿಸಂಹರಣಕ್ಷಮಾಃ ॥೫೨೭॥

ಬ್ರಹ್ಮವಿಷ್ಣ್ವಿಂದ್ರಗಂಧರ್ವೈಃ ಸಕಿನ್ನರಮಹೋರಗೈಃ ।
ವಿವರ್ಜಿತೋಽಪ್ಯಹಂ ನಿತ್ಯಂ ನೈಭಿರ್ವಿರಹಿತೋ ರಮೇ ॥೫೨೮॥

ಹೃದ್ಯಾ ಮೇ ಚಾರುಸರ್ವಾಂಗಾಸ್ತ ಏತೇ ಕ್ರೀಡಿತಾ ಗಿರೌ ।
ಇತ್ಯುಕ್ತಾ ತು ತತೋ ದೇವೀ ತ್ಯಕ್ತ್ವಾ ತದ್ವಿಸ್ಮಯಾವಕುಲಾ ॥೫೨೯॥

---

೫೨೫. ತಪಸ್ಸು, ಬ್ರಹ್ಮಚರ್ಯ, ವ್ರತಗಳು, ತೀರ್ಥಕ್ಷೇತ್ರಯಾತ್ರೆಗಳು ಇವುಗಳಿಂದ ನನ್ನನ್ನು ಹಿಂದೆ ತೃಪ್ತಿಪಡಿಸಿದ ಮನುಜಶ್ರೇಷ್ಠರೇ ಈ ಗಣಾಧಿಪತಿಗಳು.

೫೨೬. ಓ ಮಂಗಳಮುಖೀ! ನನ್ನ ಪ್ರೀತಿಪಾತ್ರರಾದ ಅವರು ನನ್ನ ಬಳಿಗೆ ಬಂದಿದ್ದಾರೆ. ಅವರು ಸ್ವೇಚ್ಛಾ ರೂಪಿಗಳು. ಬಹಳ ಉತ್ಸಾಹಶಾಲಿಗಳು. ಒಳ್ಳೆಯ ರೂಪವೂ ಗುಣವೂ ಇರತಕ್ಕವರು.

೫೨೭. ಬಲಶಾಲಿಗಳಾದ ಅವರ ಕಾರ್ಯಗಳಿಂದ ನನಗೆ ಆಶ್ಚರ್ಯವಾಗುತ್ತದೆ. ದೇವತೆಗಳ ಸಹಿತವಾದ ಈ ಜಗತ್ತನ್ನು ಅವರು ಸೃಷ್ಟಿಸಬಲ್ಲರು; ಮತ್ತು ಸಂಹರಿಸಬಲ್ಲರು.

೫೨೮. ಬ್ರಹ್ಮ, ವಿಷ್ಣು, ಇಂದ್ರ, ಗಂಧರ್ವರು, ಕಿನ್ನರರು ಮತ್ತು ಸರ್ಪಗಳನ್ನು ದಿನವೂ ಬಿಟ್ಟಿರಬಲ್ಲೆನು. ಆದರೆ ಇವರನ್ನು ಬಿಟ್ಟಿದ್ದರೆ ಮಾತ್ರ ನನಗೆ ಸಂತೋಷವೇ ಇರುವುದಿಲ್ಲ.

೫೨೯. ಸರ್ವಾಂಗಸುಂದರರೂ ನನ್ನ ಪ್ರೀತಿಪಾತ್ರರೂ ಆದ ಆ ಗಣಗಳು ಈ ಪರ್ವತದಲ್ಲಿ ವಿಹರಿಸುತ್ತಿದ್ದಾರೆ". ಹೀಗೆಂದು ಈಶ್ವರನು ಹೇಳಲು ಪಾರ್ವತಿಯು ಆಟವನ್ನು ಬಿಟ್ಟು ವಿಸ್ಮಯದಿಂದ ಕಿಟಕಿಯ ಬಳಿಗೆ ಹೋಗಿ ನೋಡಿದಳು. ಅವಳ ಮುಖವು ಆಶ್ಚರ್ಯದಿಂದ ಅರಳಿತು.

ಗವಾಕ್ಷಾಂತರಮಾಸಾದ್ಯ ಪ್ರೇಕ್ಷತೇ ವಿಸ್ಮಿತಾನನಾ ।
ಯಾವಂತಸ್ತೇ ಕೃಶಾ ದೀರ್ಘಾ ಹ್ರಸ್ವಾಃ ಸ್ಥೂಲಾ ಮಹೋದರಾಃ ॥೫೩೦॥
ವ್ಯಾಘ್ರೇಭವದನಾಃ ಕೇಚಿತ್ಕೇಚಿನ್ಮೇಷಾಜರೂಪಕಾಃ ।
ಅನೇಕಪ್ರಾಣಿರೂಪಾಶ್ಚ ಜ್ವಾಲಾಸ್ಯಾಃ ಕೃಷ್ಣಪಿಂಗಲಾಃ ॥೫೩೧॥
ಸೌಮ್ಯಾ ಭೀಮಾಃ ಸ್ಮಿತಮುಖಾಃ ಕೃಷ್ಣಪಿಂಗಜಟಾಸಟಾಃ ।
ನಾನಾವಿಹಂಗವದನಾ ನಾನಾವಿಧಮೃಗಾನನಾಃ ॥೫೩೨॥
ಕೌಶೇಯಚರ್ಮವಸನಾ ನಗ್ನಾಶ್ಚಾನ್ಯೇ ವಿರೂಪಿಣಃ ।
ಗೋಕರ್ಣಾ ಗಜಕರ್ಣಾಶ್ಚ ಬಹುವಕ್ತ್ರೇಕ್ಷಣೋದರಾಃ ॥೫೩೩॥
ಬಹುಪಾದಾ ಬಹುಭುಜಾ ದಿವ್ಯನಾನಾಸ್ತ್ರಪಾಣಯಃ ।
ಅನೇಕಕುಸುಮಾಪೀಡಾ ನಾನಾವ್ಯಾಲವಿಭೂಷಣಾಃ ॥೫೩೪॥

---

೫೩೦-೫೩೧. ಅಲ್ಲಿದ್ದವರೆಲ್ಲರೂ ಒಂದೊಂದು ತೆರನಾಗಿದ್ದರು. ತೆಳ್ಳಗಿರುವವರು, ಎತ್ತರವಾಗಿರುವವರು, ಹ್ರಸ್ವಾಕಾರದವರು, ಸ್ಥೂಲದೇಹರು ಮತ್ತು ದಪ್ಪ ಹೊಟ್ಟೆಯವರು. ಕೆಲವರಿಗೆ ಆನೆಯ ಮುಖ; ಮತ್ತೆ ಕೆಲವರಿಗೆ ಹುಲಿಯ ಮುಖ. ಹೋತನಂತೆಯೂ ಆಡಿನಂತೆಯೂ ಮುಖವು ಕೆಲವರಿಗೆ. ಇನ್ನೂ ಅನೇಕ ಪ್ರಾಣಿಗಳ ರೂಪವುಳ್ಳವರು ಹಲವರು. ಅವರ ಬಾಯಿಯಲ್ಲಿ ಉರಿಯೇಳುತ್ತಿತ್ತು. ಅವರು ಕಪ್ಪು ಬೆರೆತ ಕಿತ್ತಲೆ ಬಣ್ಣದವರಾಗಿದ್ದರು.

೫೩೨. ಅವರಲ್ಲಿ ಸೌಮ್ಯರೂ, ಭಯಂಕರಸ್ವರೂಪರೂ, ಮುಗುಳು ನಗೆಯವರೂ ಇದ್ದರು. ಅವರ ಜಟೆಯು ಕಪ್ಪುಸೇರಿದ ಕಿತ್ತಳೆಯ ಬಣ್ಣವಾಗಿತ್ತು. ಅವರ ಮುಖಗಳು ಬಗೆಬಗೆಯ ಪಕ್ಷಿಗಳ ಮತ್ತು ಮೃಗಗಳ ಮುಖದಂತಿದ್ದುವು.

೫೩೩. ಕೆಲವರು ರೇಷ್ಮೆಯ ಬಟ್ಟೆಯನ್ನೂ ಕೆಲವರು ಚರ್ಮವನ್ನೂ ಉಟ್ಟಿದ್ದರು. ಇನ್ನು ಕೆಲವರು ಬೆತ್ತಲೆಯಾಗಿ ವಿಕಾರ ರೂಪದಿಂದಿದ್ದರು. ಹಸುವಿನ ಕಿವಿಗಳನ್ನೂ ಆನೆಯ ಕಿವಿಗಳನ್ನೂ ಅವರ ಕಿವಿಗಳು ಹೋಲುತ್ತಿದ್ದುವು. ಅವರಿಗೆ ಮುಖಗಳೂ ಹೊಟ್ಟೆಗಳೂ ಅನೇಕವಾಗಿದ್ದುವು.

೫೩೪. ಹಲವು ಕಾಲುಗಳೂ ತೋಳುಗಳೂ ಅವರಿಗಿದ್ದು ಅವರು ಕೈಗಳಲ್ಲಿ ಬಗೆಬಗೆಯ ಅಸ್ತ್ರಗಳನ್ನು ಹಿಡಿದಿದ್ದರು. ನಾನಾವಿಧವಾದ ಹೂಗಳನ್ನು ಮುಡಿದಿದ್ದರು. ವಿಧವಿಧವಾದ ಸರ್ಪಗಳನ್ನು ಒಡವೆಗಳಂತೆ ಧರಿಸಿದ್ದರು.

ವೃಕಾನನಾಯುಧಧರಾ ನಾನಾಕವಚಭೂಷಣಾಃ ।
ವಿಚಿತ್ರವಾಹನಾರೂಢಾ ದಿವ್ಯರೂಪಾ ವಿಯಚ್ಚರಾಃ ॥೫೩೫॥

ವೀಣಾವಾದ್ಯಮುಖೋದ್ಘುಷ್ಟಾ ನಾನಾಸ್ಥಾನಕನರ್ತಕಾಃ ।
ಗಣೇಶಾಂಸ್ತಾಂಸ್ತಥಾ ದೃಷ್ಟ್ವಾ ದೇವೀ ಪ್ರೋವಾಚ ಶಂಕರಂ ॥೫೩೬॥

॥ ದೇವ್ಯುವಾಚ ॥

ಗಣೇಶಾಃ ಕತಿ ಸಂಖ್ಯಾತಾಃ ಕಿಂನಾಮಾನಃ ಕಿಮಾತ್ಮಕಾಃ ।
ಏಕೈಕಶೋ ಮಮ ಬ್ರೂಹಿ ಧಿಷ್ಠಿತಾ ಯೇ ಪೃಥಕ್ಪೃಥಕ್ ॥೫೩೭॥

॥ ಶಂಕರ ಉವಾಚ ॥

ಕೋಟಿಸಂಖ್ಯಾ ಹ್ಯಸಂಖ್ಯಾತಾ ನಾನಾವಿಖ್ಯಾತಪೌರುಷಾಃ ।
ಜಗದಾಪೂರಿತಂ ಸರ್ವೈರೇಭಿರ್ಭೀಮೈರ್ಮಹಾಬಲೈಃ ॥೫೩೮॥

---

೫೩೫. ತೋಳದ ಮುಖದ ಆಯುಧಗಳನ್ನು ಹಿಡಿದು ನಾನಾಕಾರವಾದ ಕವಚಗಳನ್ನೂ ಭೂಷಣಗಳನ್ನೂ ತೊಟ್ಟಿದ್ದರು. ವಿಚಿತ್ರಾಕಾರದ ವಾಹನಗಳನ್ನೇರಿದ್ದರು. ದಿವ್ಯರೂಪದಲ್ಲಿ ಅಂತರಿಕ್ಷದಲ್ಲಿ ಸಂಚರಿಸುವವರಾಗಿದ್ದರು.

೫೩೬. ವೀಣಾದಿವಾದ್ಯಗಳನ್ನು ಬಾಜಿಸುತ್ತ ನಾನಾವಿಧವಾಗಿ ನರ್ತನ ಮಾಡುತ್ತಿದ್ದರು. ಇಂತಹ ಗಣಾಧಿಪತಿಗಳನ್ನು ನೋಡಿ ಪಾರ್ವತಿಯು ಈಶ್ವರನಿಗೆ ಹೇಳಿದಳು.

೫೩೭. ದೇವಿ ಹೇಳಿದಳು.—ಗಣೇಶ್ವರರ ಸಂಖ್ಯೆಯೆಷ್ಟು? ಅವರ ಹೆಸರೇನು? ಅವರ ಸ್ವಭಾವವೆಂತಹುದು? ಬೇರೆಬೇರೆ ಗುಂಪಾಗಿ ಕುಳಿತಿರುವರಲ್ಲಾ! ಒಬ್ಬೊಬ್ಬರನ್ನಾಗಿ ನನಗೆ ತಿಳಿಯ ಹೇಳು.

೫೩೮. ಶಂಕರನು ಹೇಳಿದನು.—ಇವರು ಕೋಟಿಗಟ್ಟಲೆಯಾಗಿರುವರು. ಎಣಿಸುವುದಕ್ಕೇ ಆಗುವುದಿಲ್ಲ. ಇವರ ಪೌರುಷವು ನಾನಾವಿಧವಾಗಿ ಪ್ರಖ್ಯಾತವಾಗಿದೆ. ಭೀಮರೂಪರೂ ಮಹಾಬಲರೂ ಆದ ಇವರಿಂದ ಜಗತ್ತೆಲ್ಲ ತುಂಬಿ ಹೋಗಿದೆ.

ಸಿದ್ಧಕ್ಷೇತ್ರೇಷು ರಥ್ಯಾಸು ಜೀರ್ಣೋದ್ಯಾನೇಷು ವೇಶ್ಮಸು
ದಾನವಾನಾಂ ಶರೀರೇಷು ಬಾಲೇಷೂನ್ಮತ್ತಕೇಷು ಚ ।
ಏತೇ ವಿಶಂತಿ ಮುದಿತಾ ನಾನಾಹಾರವಿಹಾರಿಣಃ ॥೫೯॥

ಊಷ್ಮಪಾಃ ಫೇನಪಾಶ್ಚೈವ ಧೂಮಪಾ ಮಧುಪಾಯಿನಃ ।
ರಕ್ತಪಾಃ ಸರ್ವಭಕ್ಷಾಶ್ಚ ವಾಯುಪಾ ಹ್ಯಂಬುಭೋಜನಾಃ ॥೬೦॥

ಗೇಯನೃತ್ಯೋಪಹಾರಾಶ್ಚ ನಾನಾವಾದ್ಯರವಪ್ರಿಯಾಃ ।
ನ ಹ್ಯೇಷಾಂ ವೈ ಅನಂತತ್ವಾದ್ಗುಣಾನ್ವಕ್ತುಂ ಹಿ ಶಕ್ಯತೇ ॥೬೧॥

॥ ದೇವ್ಯುವಾಚ ॥

ಮಾರ್ಗತ್ವಗುತ್ತರಾಸಂಗಃ ಶುದ್ಧಾಂಗೋ ಮುಂಜಮೇಖಲೀ ।
ಪಾಮಸ್ಥೇನ ಚ ಶಿಕ್ಯೇನ ಚಪಲೋ ರಂಜಿತಾನನಃ ॥೬೨॥

---

೫೯. ಸಿದ್ಧಕ್ಷೇತ್ರಗಳಲ್ಲಿ, ಬೀದಿಗಳಲ್ಲಿ, ಪಾಳುತೋಟಗಳಲ್ಲಿ, ಮನೆಗಳಲ್ಲಿ, ದಾನವರ ಶರೀರಗಳಲ್ಲಿ, ಬಾಲಕರಲ್ಲಿ, ಉನ್ಮತ್ತರಲ್ಲಿ ಇವರು ಸಂತೋಷದಿಂದ ಸೇರಿ ವಾಸಿಸುವರು. ಇವರ ಆಹಾರವೂ ವಿಹಾರವೂ ನಾನಾವಿಧವಾಗಿವೆ.

೬೦. ಹಬೆ, ನೊರೆ, ಹೊಗೆ, ಜೇನು, ರಕ್ತ ಇವುಗಳನ್ನು ಇವರು ಪಾನ ಮಾಡುತ್ತಾರೆ. ಸಿಕ್ಕಿದುದನ್ನೆಲ್ಲ ತಿನ್ನುವವರೂ ಉಂಟು. ಕೆಲವರಿಗೆ ಗಾಳಿಯೂ ಮತ್ತೆ ಕೆಲವರಿಗೆ ನೀರೂ ಆಹಾರವಾಗಿರುವುವು.

೬೧. ಗಾನವೂ ನರ್ತನವೂ ಇವರ ವಿನೋದ ಸಾಧನಗಳು. ಬಗೆಬಗೆಯ ವಾದ್ಯವಾದನದಲ್ಲಿ ಇವರಿಗೆ ಪ್ರೀತಿ ಹೆಚ್ಚು. ಇವರ ಗುಣಗಳು ಅನಂತವಾಗಿವೆ. ಅವುಗಳನ್ನು ಹೇಳುವುದಕ್ಕೆ ಸಾಧ್ಯವಿಲ್ಲ.

೬೨-೬೪. ಪಾರ್ವತಿ ಹೇಳಿದಳು.—ಕಿನ್ನರರೊಡಗೂಡಿದ ಪೂಜ್ಯನಾದ ಈ ಗಣೇಶ್ವರನು ಯಾರು? ಇವನು ಕೃಷ್ಣಾಜಿನವನ್ನು ಹೊದೆದಿದ್ದಾನೆ. ಇವನ ದೇಹವು ನಿರ್ಮಲವಾಗಿದೆ. ಸೊಂಟಕ್ಕೆ ನೊದೆಹುಲ್ಲಿನ ಮೇಖಲೆಯನ್ನು ಸುತ್ತಿ

ವ್ಯಗದಂಷ್ಟ್ರೋ ಹ್ಯುತ್ಪಲಾನಾಂ ಸ್ರಗ್ದಾಮೋ ಮಧುರಾಕೃತಿಃ ।
ಪಾಷಾಣಶಕಲೋತ್ತಾನಕಾಂಸ್ಯತಾಲಪ್ರವರ್ತಕಃ ॥೫೪೩॥

ಅಸೌ ಗಣೇಶ್ವರೋ ದೇವಃ ಕಿನ್ನಾಮಾ ಕಿನ್ನರಾನುಗಃ ।
ಯ ಏಷ ಗಣಗೀತೇಷು ದತ್ತಕರ್ಣೋ ಮುಹುರ್ಮುಹುಃ ॥೫೪೪॥

॥ ಶರ್ವ ಉವಾಚ ॥

ಸ ಏಷ ವೀರಕೋ ದೇವಿ ಸದಾ ಮದ್ಧೃದಯಪ್ರಿಯಃ ।
ನಾನಾಶ್ಚರ್ಯಗುಣಾಧಾರೋ ಗಣೇಶ್ವರಗಣಾರ್ಚಿತಃ ॥೫೪೫॥

॥ ದೇವ್ಯುವಾಚ ॥

ಈದೃಶಸ್ಯ ಸುತಸ್ಯಾಸ್ತಿ ಮನೋತ್ಕಂಠಾ ಪುರಾಂತಕ
ಕದಾಹಮೀದೃಶಂ ಪುತ್ರಂ ದ್ರಕ್ಷ್ಯಾಮ್ಯಾನಂದದಾಯಿನಂ ॥೫೪೬॥

---

ದ್ದಾನೆ. ಎಡಗೈಯಲ್ಲಿ ಕಲ್ಲಿಯ ಚೀಲವು ತೂಗಾಡುತ್ತಿದೆ. ಚಂಚಲನಾಗಿ ಕಾಂತಿಯುಕ್ತವಾದ ಮುಖದಿಂದ ಕೂಡಿದ್ದಾನೆ. ಹಲ್ಲುಗಳು ಮೃಗದ ಕೋರೆಯ ಹಲ್ಲುಗಳಂತಿವೆ. ಸೈದಿಲೆ ಹೂಗಳ ಹಾರವನ್ನು ಧರಿಸಿದ್ದಾನೆ. ಆಕಾರವು ಮಧುರವಾಗಿದೆ. ಕಂಚಿನ ತಾಳವನ್ನು ಮೇಲು ಮೊಗವಾಗಿಟ್ಟುಕೊಂಡು ಕಲ್ಲಿನ ಚೂರಿನಿಂದ ಹೊಡೆದು ಶಬ್ದಮಾಡುತ್ತಿದ್ದಾನೆ. ಇವನ ಹೆಸರೇನು? ಇವನು ಗಣೇಶ್ವರರ ಗಾನಗಳನ್ನು ಅಡಿಗಡಿಗೆ ಕಿವಿಗೊಟ್ಟು ಕೇಳುತ್ತಿರುವನು.

೫೪೫. ಈಶ್ವರನು ಹೇಳಿದನು.—ಎಲೌ ದೇವೀ! ಇವನೇ ವೀರಕನು. ಯಾವಾಗಲೂ ನನ್ನ ಮನಸ್ಸಿಗೆ ಬಹಳ ಪ್ರಿಯನಾದವನು. ನಾನಾವಿಧವಾದ ಆಶ್ಚರ್ಯ ಗುಣಗಳಿಗೆ ನೆಲೆಯೆನಿಸಿರುವನು. ಗಣೇಶ್ವರರೆಲ್ಲರೂ ಇವನನ್ನು ಗೌರವಿಸುವರು.

೫೪೬. ಪಾರ್ವತಿ ಹೇಳಿದಳು.—ತ್ರಿಪುರದಾಹಕನಾದ ಎಲೈ ಪರಮೇಶ್ವರನೇ! ಈ ಬಗೆಯ ಮಗನನ್ನು ಪಡೆಯಬೇಕೆಂದು ನನಗೆ ತೀವ್ರವಾದ ಆಶೆಯಿದೆ. ಆನಂದಪ್ರದನಾದ ಇಂತಹ ಪುತ್ರನನ್ನು ನಾನು ಕಾಣುವುದು ಯಾವಾಗ?

|| ಶರ್ವ ಉವಾಚ ||

ಏಷ ಏವ ಸುತಸ್ತೇಽಸ್ತು ನಯನಾನಂದಹೇತುಕಃ |
ತ್ವಯಾ ಮಾತ್ರಾ ಕೃತಾರ್ಥಸ್ತು ವೀರಕೋಽಪಿ ಸುಮಧ್ಯಮೇ ||೫೪೭||

ಇತ್ಯುಕ್ತಾ ಪ್ರೇಷಯಾಮಾಸ ವಿಜಯಾಂ ಹರ್ಷಣೋತ್ಸುಕಾ |
ವೀರಕಾನಯನಾಯಾಶು ದುಹಿತಾ ಹಿಮಭೂಭೃತಃ ||೫೪೮||

ಸಾವರುಹ್ಯ ತ್ವರಾಯುಕ್ತಾ ಪ್ರಾಸಾದಾದಂಬರಸ್ಪೃಶಃ |
ವಿಜಯೋವಾಚ ಗಣಪಂ ಗಣಮಧ್ಯೇ ಪ್ರವರ್ತಿತಾ ||೫೪೯||

|| ವಿಜಯೋವಾಚ ||

ಏಹಿ ವೀರಕ ಚಾಪಲ್ಯಾತ್ತ್ವಯಾ ದೇವಃ ಪ್ರಕೋಪಿತಃ |
ಕಿಮುತ್ತರಂ ವದತ್ಯರ್ಥೇ ನೃತ್ಯರಂಗೇ ತು ಶೈಲಜಾ ||೫೫೦||

ಇತ್ಯುಕ್ತಸ್ತ್ಯಕ್ತಪಾಷಾಣಶಕಲೋ ಮಾರ್ಜಿತಾನನಃ |
ಆಹೂತಸ್ತು ತಯೋದ್ಭೂತಮೂಲಪ್ರಸ್ತಾವಶಂಸಕಃ ||೫೫೧||

---

೫೪೭. ಈಶ್ವರನು ಹೇಳಿದನು.—ಓ ಸುಂದರೀ! ನಿನ್ನ ಕಣ್ಣುಗಳಿಗೆ ಆನಂದವನ್ನು ಬೀರುತ್ತಿರುವ ಇವನೇ ನಿನಗೆ ಮಗನಾಗಲಿ. ನಿನ್ನನ್ನು ತಾಯಿಯೆಂದು ತಿಳಿದು ಈತನೂ ಕೂಡ ಧನ್ಯನಾಗಲಿ.

೫೪೮. ಈಶ್ವರನು ಹೀಗೆ ಹೇಳಲು, ಪಾರ್ವತಿಯು ಸಂತೋಷಗೊಂಡು ವೀರಕನನ್ನು ಕರೆತರುವುದಕ್ಕಾಗಿ ತನ್ನ ಗೆಳತಿಯಾದ ವಿಜಯೆಯನ್ನು ಔತ್ಸುಕ್ಯದಿಂದ ಕಳುಹಿಸಿದಳು.

೫೪೯. ಆ ವಿಜಯೆಯು ಆಕಾಶವನ್ನು ಮುಟ್ಟುತ್ತಿರುವ ಉಪ್ಪರಿಗೆಯಿಂದ ಬೇಗಬೇಗನೆ ಇಳಿದು ಗಣೇಶ್ವರರ ನಡುವೆ ಹೋಗಿ ವೀರಕನಿಗೆ ಹೇಳಿದಳು.

೫೫೦. ವಿಜಯೆಯು ಹೇಳಿದಳು.—ಓ ವೀರಕಾ! ಬಾ, ನಿನ್ನ ಚಪಲ ಸ್ವಭಾವದಿಂದ ಪರಮೇಶ್ವರನಿಗೆ ಕೋಪ ಬಂದಿದೆ. ಈ ವಿಷಯದಲ್ಲಿ ನೀನು ಉತ್ತರ ವೇನು ಹೇಳುವೆ? ಪಾರ್ವತಿಯು ನೃತ್ಯಶಾಲೆಯಲ್ಲಿದ್ದಾಳೆ.

೫೫೧-೫೫೨. ವಿಜಯೆಯು ಹೀಗೆ ಹೇಳಿ ಕರೆಯಲು, ವೀರಕನು ಕೈಯಲ್ಲಿದ್ದ ಕಲ್ಲಿನ ಚೂರನ್ನು ಬಿಸುಟು ಮುಖವನ್ನು ತೊಳೆದುಕೊಂಡನು. ಅವಳು ಎತ್ತಿದ

ದೇವ್ಯಾಃ ಸಮೀಪಮಾಗಚ್ಛದ್ವಿಜಯಾನುಗತಃ ಶನೈಃ ।
ಪ್ರಾಸಾದಶಿಖರಾತ್ಫುಲ್ಲರಕ್ತಾಂಬುಜನಿಭದ್ಯುತಿಃ ||೫೫೨||

ತಂ ದೃಷ್ಟ್ವಾ ಪ್ರಸ್ನುತಾನಲ್ಪಸ್ವಾದುಕ್ಷೀರಪಯೋಧರಾ ।
ಗಿರಿಜೋವಾಚ ಸಸ್ನೇಹಂ ಗಿರಾ ಮಧುರವರ್ಣಯಾ ||೫೫೩||

|| ಉಮೋವಾಚ ||

ಏಹ್ಯೇಹಿ ಯಾತೋಽಸಿ ಮೇ ಪುತ್ರತಾಂ ।
ದೇವದೇವೇನ ದತ್ತೋಽಧುನಾ ವೀರಕ ||೫೫೪||

ಇತ್ಯೇವಮಂಕೇ ನಿಧಾಯಾಥ ತಂ ।
ಪರ್ಯಚುಂಬತ್ಕಪೋಲೇ ಕಲವಾದಿನಂ ||೫೫೫||

ಮೂರ್ಧ್ನ್ಯಾಘ್ರಾಯ ಸಮ್ಮಾರ್ಜ್ಯ ಗಾತ್ರಾಣಿ
ಭೂಷಯಾಮಾಸ ದಿವ್ಯೈಃ ಸ್ವಯಂ ಭೂಷಣೈಃ ।
ಕಿಂಕಿಣೀಮೇಖಲಾನೂಪುರೈರ್ಮಾಣಿಕ್ಯಕೇಯೂರ
ಹಾರೋರುಮೂಲಗುಣೈಃ ||೫೫೬||

---

ವಿಷಯವನ್ನು ಆಮೂಲವಾಗಿ ಹೇಳಬೇಕೆಂದು ವಿಜಯೆಯೊಡಗೂಡಿ ಅರಮನೆಯ ಮೇಲು ಮಹಡಿಯಲ್ಲಿದ್ದ ದೇವಿಯ ಬಳಿಗೆ ಬಂದನು. ಅವನು ಅರಳಿದ ಕೆಂದಾವರೆಯಂತೆ ಕಾಂತಿಯುಕ್ತನಾಗಿದ್ದನು.

೫೫೩. ಅವನನ್ನು ನೋಡಿ ಪಾರ್ವತಿಯ ಸ್ತನಗಳಲ್ಲಿ ಮಧುರವಾದ ಕ್ಷೀರವು ಮೇಲೆ ಮೇಲೆ ತೊಟ್ಟಿಕ್ಕಿತು. ಅವಳು ಪ್ರೀತಿಯೊಡನೆ ಮೃದುವಚನಗಳಿಂದ ಹೇಳಿದಳು.

೫೫೪. ಪಾರ್ವತಿ ಹೇಳಿದಳು.—ವೀರಕಾ ! ಬಾ ಬಾ ; ನನಗೆ ನೀನು ಮಗನಾದೆ. ದೇವದೇವನು ನಿನ್ನನ್ನು ನನಗೆ ಕೊಟ್ಟಿದ್ದಾನೆ.

೫೫೫. ಹೀಗೆ ಹೇಳಿ ಆತನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡಳು. ಅವನ ಮುದ್ದುಮಾತನ್ನು ಕೇಳಿ ಕೆನ್ನೆಯನ್ನು ಮುತ್ತಿಕ್ಕಿದಳು.

೫೫೬. ನೆತ್ತಿಯನ್ನು ಮೂಸಿ ನೋಡಿದಳು. ಅಂಗಗಳನ್ನು ಸವರಿದಳು. ಕಿರುಗೆಜ್ಜೆ, ನಡುವಿನ ಪಟ್ಟಿ, ಕಾಲಂದಿಗೆ ಮಾಣಿಕ್ಯದ ತೋಳುಬಳೆ, ಹಾರ, ಮೊದಲಾದ ಉತ್ತಮವಾದ ಭೂಷಣಗಳಿಂದ ಅವನಿಗೆ ತಾನೇ ಅಲಂಕರಿಸಿದಳು.

ಕೋಮಲೈಃ ಪಲ್ಲವೈಶ್ಚಿತ್ರೈಶ್ಚಾರುಭಿರ್ದಿವ್ಯಮಂತ್ರೋದ್ಧವೈಸ್ತಸ್ಯ
ಶುಭ್ರೈಸ್ತತೋ ಭೂರಿಭಿಶ್ಚ ಕಾರೋನ್ಮಿಶ್ರ
ಸಿದ್ಧಾರ್ಥಕೈರಂಗರಕ್ಷಾವಿಧಿಂ ||೫೫೭||

ಏವಮಾದಾಯ ಚೋವಾಚ ಕೃತ್ವಾ ಸ್ರಜಂ ಮೂರ್ಧ್ನಿ
ಗೋರೋಚನಾಪತ್ರಭಂಗೋಜ್ವಲೈಃ ||೫೫೮||

ಗಚ್ಛ ಗಚ್ಛಾಧುನಾ ಕ್ರೀಡ ಸಾರ್ಧಂ ಗಣೈರಪ್ರಮತ್ತೋ
ನಗೇ ಶ್ವಭ್ರವರ್ಜಂ ಶನೈರ್ವ್ಯಾಲಮಾಲಾಕುಲಾಃ
ಶೈಲಸಾನುದ್ರುಮದಂತಿಭಿರ್ಭಿನ್ನಸಾರಾಃ ಪರೇ ಸಂಗಿನಃ ||೫೫೯||

ಜಾಹ್ನವೀಯಂ ಜಲಂ ಕ್ಷುಬ್ಧತೋಯಾಕುಲಂ
ಕೂಲಂ ಮಾ ವಿಶೇಥಾ ಬಹುವ್ಯಾಘ್ರದುಷ್ಟೇ ವನೇ ||೫೬೦||

---

೫೫೭. ಕೋಮಲವಾದ, ಬಗೆಬಗೆಯ ಬಣ್ಣದ, ಮನೋಹರವಾದ, ಹಲವು ಚಿಗುರುಗಳೊಡನೆ ಬಿಳಿಯ ಸಾಸುವೆಕಾಳನ್ನು ಬೆರಸಿ, ದಿವ್ಯಮಂತ್ರಗಳನ್ನಭಿಮಂತ್ರಿಸಿ ಅವನ ಅಂಗಗಳಿಗೆ ರಕ್ಷೆಯಿಟ್ಟಳು.

೫೫೮. ಹೀಗೆ ಅಲಂಕಾರಸಾಮಗ್ರಿಗಳನ್ನು ತಂದು, ತಲೆಗೆ ಹೂವನ್ನು ಮುಡಿಸಿ, ಕೆನ್ನೆಯ ಮೇಲೆ ಗೋರೋಚನದಿಂದ ಮನೋಹರವಾದ ಪತ್ರಭಂಗಗಳನ್ನು ವಿರಚಿಸಿ ಇಂತು ಹೇಳಿದಳು.

೫೫೯. ಇನ್ನು ಹೋಗು ಹೋಗು. ಪ್ರಮಥಗಣಗಳೊಡನೆ ಬೆಟ್ಟದಲ್ಲಿ ಎಚ್ಚರಿಕೆಯಿಂದ ಮೆಲ್ಲಗೆ ಆಟವಾಡು. ಹಳ್ಳಗಳ ಹತ್ತಿರಕ್ಕೆ ಹೋಗಬೇಡ. ನಿನ್ನ ಉಳಿದ ಸ್ನೇಹಿತರು ಹಾವನ್ನು ಮಾಲೆಗಳಂತೆ ಹಾಕಿಕೊಳ್ಳುವರು. ಬೆಟ್ಟದ ತಪ್ಪಲಲ್ಲಿರುವ ಮರಗಳ ಮೇಲೂ ಆನೆಗಳ ಮೇಲೂ ತಮ್ಮ ಶಕ್ತಿಯನ್ನು ತೋರಿಸುವರು.

೫೬೦. ಪ್ರವಾಹ ಬಂದು ಗಂಗಾನದಿಯ ನೀರೆಲ್ಲ ಬಗ್ಗಡವಾಗಿದೆ. ಅದರ ದಡದಲ್ಲಿ ಆಡಬೇಡ. ಕಾಡು ಹುಲಿಗಳಿಂದ ತುಂಬಿ ಬಹು ಭೀಕರವಾಗಿದೆ. ಅಲ್ಲಿ ಸುಳಿದಾಡಬೇಡ.

ವತ್ಸಸಂಖ್ಯೇಷು ದುರ್ಗಾ ಗಣ್ಯೇಶೇಷ್ವೇತಸ್ಮಿನ್ವೀರಕೇ
ಪುತ್ರಭಾವೋಪತುಷ್ಟಾಂತಃಕರಣಾ ತಿಷ್ಠತಿ ||೫೬೧||

ಸ್ವಸ್ಯ ಪಿತೃಜನಪ್ರಾರ್ಥಿತಂ ಭವ್ಯಮಾಯಾತಿಭಾವಿನ್ಯಸೌ ಭವ್ಯತಾ ||೫೬೨||

ಸೋಽಪಿ ನಿವೃತ್ಯ ಸರ್ವಗಣ್ಯೈಃ ಸಸ್ಮಯಮಾಹ ಬಾಲತ್ವ
ಲೀಲಾರಸಾವಿಷ್ಟಧೀಃ ||೫೬೩||

ಏಷ ಮಾತ್ರಾ ಸ್ವಯಂ ಚಿತ್ರಿತೋ ಭೂಷಣೈಶ್ಚೈಷ
ದತ್ತಃ ಪಟಃ ಪಾಟಲೈರ್ಬಿಂದುಭಿಃ ಸಿಂದುವಾರಸ್ಯ
ಪುಷ್ಪೈರಿಯಂ ಮಾಲತೀಮಿಶ್ರಿತಾ ಮಾಲಿಕಾ ಮೇ ಶಿರಸ್ಯಾಹಿತಾ ||೫೬೪||

ಕೋಽಯಮಾತೋದ್ಯಧಾರೀ ಗಣಸ್ತಸ್ಯ
ದಾಸ್ಯಾಮಿ ಹಸ್ತಾದಿದಂ ಕ್ರೀಡನಂ ||೫೬೫||

---

೫೬೧. ಅಸಂಖ್ಯಾಕರಾದ ಗಣಾಧೀಶ್ವರರೆಲ್ಲರೂ ಮಕ್ಕಳಂತೆಯೇ ಇದ್ದರೂ ಪಾರ್ವತಿಯು ಈ ವೀರಕನಲ್ಲಿ ಮಾತ್ರ ಪುತ್ರಭಾವವನ್ನು ತಾಳಿ ಸಂತುಷ್ಟಮನಸ್ಕಳಾಗಿದ್ದಳು.

೫೬೨. ಪಾರ್ವತಿಯ ಈ ಮಂಗಳಮಯವಾದ ಭಾವನೆಯು ಅವಳ ತಾಯಿ ತಂದೆಗಳಿಗೆ ಇಷ್ಟವಾದುದಾಗಿತ್ತು. ಆದರೆ ಸಾಮಾನ್ಯವಾದ ಸಂಸಾರಿಗಳನ್ನು ಆವರಿಸುವ ಮಾಯೆಯನ್ನು ಅದು ಅತಿಕ್ರಮಿಸಿದ್ದಿತು.

೫೬೩. ಅವನೂ ಸಹ ಅಲ್ಲಿಂದ ಹೋಗಿ ಬಾಲ್ಯಕ್ಕೆ ತಕ್ಕಂತೆ ಹುಡುಗಾಟದ ಬುದ್ಧಿಯಿಂದ ಎಲ್ಲ ಗಣಗಳೊಡನೆಯೂ ಹೆಮ್ಮೆಯಿಂದ ಹೇಳಿದನು.

೫೬೪. "ತಾಯಿಯು ನನಗೆ ತಾನೇ ಒಡವೆಗಳಿಂದ ಅಲಂಕರಿಸಿದಳು. ಕೆಂಪು ಚುಕ್ಕಿಗಳ ಈ ಬಟ್ಟೆಯನ್ನು ತೊಡಿಸಿದಳು. ಸಿಂದುವಾರದ ಹೂವನ್ನೂ ಜಾಜಿಯ ಹೂವನ್ನೂ ಸೇರಿಸಿ ಕಟ್ಟಿದ ಈ ಮಾಲೆಯನ್ನು ನನ್ನ ತಲೆಗೆ ಮುಡಿಸಿದಳು."

೫೬೫-೫೬೬. ಪಾರ್ವತಿಯೂ ಸಹ ತನ್ನ ಗೆಳತಿಯೊಡಗೂಡಿ ದಕ್ಷಿಣದಿಂದ ಪಶ್ಚಿಮಕ್ಕೂ, ಪಶ್ಚಿಮದಿಂದ ಉತ್ತರಕ್ಕೂ, ಉತ್ತರದಿಂದ ಪೂರ್ವಕ್ಕೂ ನಡೆಯುತ್ತ

ದಕ್ಷಿಣಾತ್ಪಶ್ಚಿಮಂ ಪಶ್ಚಿಮಾದುತ್ತರಮುತ್ತರಾತ್ಪೂರ್ವಮಭ್ಯೇತ್ಯ
ಸಖ್ಯಾ ಯುತಾ ಪ್ರೇಕ್ಷತೀ ತಂ ಗವಾಕ್ಷಾಂತರಾದ್ವೀರಕಂ ।
ಶೈಲಪುತ್ರೀ ಬಹಿಃ ಕ್ರೀಡನಂ ಯಜ್ಜಗನ್ಮಾತುರಪ್ಯೇಷ ಚಿತ್ತಭ್ರಮಃ ||೫೬೬||

ಪುತ್ರಲುಬ್ಧೋ ಜನಸ್ತತ್ರ ಕೋ ಮೋಹಮಾಯಾತಿ
ನ ಸ್ವಲ್ಪಚೇತಾ ಜಡೋ ಮಾಂಸವಿಣ್ಮೂತ್ರ ಸಂಘಾತದೇಹಃ ||೫೬೭||

ದ್ರಷ್ಟುಮಭ್ಯಂತರಂ ನಾಕವಾಸಿಷ್ವಿಂದುಮೌಲಿಂ
ಪ್ರವಿಷ್ಟೇಷು ಕಕ್ಷಾಂತರಂ ||೫೬೮||

ವಾಹನಾತ್ಯಾವರೋಹಾ ಗಣಾಸ್ತ್ರೈಯುರ್ಗತೋ ಲೋಕ
ಪಾಲಾಸ್ತ್ರಮೂರ್ತೋರ್ಗ ಹ್ಯಯಂ ಖಡ್ಗೋ ನಿಖಡ್ಗಕೋ
ನಿರ್ಮರ್ಗಮಃ ಕೃತಾಂತಃ ಕಸ್ಯ ಕೇನಾಹತೋ ಬ್ರೂತ ।
ಮೌನೇ ಭವಂತೋಽಸ್ತ್ರದಂಡೇನ ಕಿಂ ದುಸ್ಪೃಹಾಃ* ||೫೬೯||

---

ಹೊರಗಡೆ ಆಡುತ್ತಿರುವ ವೀರಕನನ್ನು ಕಿಟಕಿಯ ಸಂದಿಯಿಂದ ನೋಡುತ್ತಿದ್ದಳು. ಲೋಕಗಳ ತಾಯಿಯಾದ ಆಕೆಗೂ ಇದೇನು ಚಿತ್ತಮೋಹವೋ!

೫೬೭. ಇನ್ನು ಅಲ್ಪಬುದ್ಧಿಯೂ ಜಡನೂ, ಮಾಂಸಮಲಮೂತ್ರಮಯವಾದ ದೇಹವುಳ್ಳವನೂ ಆದ ಸಾಮಾನ್ಯ ಮನುಷ್ಯನು ಪುತ್ರಲೋಭದಿಂದ ಮೋಹಗೊಳ್ಳದಿರುವನೇನು?

೫೬೮. ಸುರಪ್ರಮುಖರು ಪರಮೇಶ್ವರನನ್ನು ನೋಡುವುದಕ್ಕೆಂದು ಅರಮನೆಯ ಹಜಾರದ ಒಳಗಡೆ ಹೋದರು.

೫೬೯-೫೭೧. ದೇವತೆಗಳು ಹೊರಗೆ ಬಿಟ್ಟುಹೋದ ವಾಹನಗಳನ್ನು ಪ್ರಮಥಗಣಗಳು ಹತ್ತಿ ಇಳಿಯುತ್ತಿದ್ದರು. ಲೋಕಪಾಲಕರ ಅಸ್ತ್ರಗಳೇ ಆಕೃತಿಯನ್ನು ತಳೆದು ಬಂದುವೋ ಎನ್ನುವಂತಿದ್ದ ವೀರಕನು ಖಡ್ಗಧರನಾಗಿ ಅವರಲ್ಲಿಗೆ ಹೋದನು. "ಕೈಯಲ್ಲಿ ಕತ್ತಿಯನ್ನು ಕೂಡ ಹಿಡಿಯದೆ ಗರ್ವರಹಿತನಾಗಿರುವ ಈ ಯಮನನ್ನು ಹೊಡೆದವರು ಯಾರು? ಏತಕ್ಕಾಗಿ? ಹೇಳಿ. ಸುಮ್ಮನಿರುವಿರಲ್ಲಾ! ನಿಮ್ಮ ಅಸ್ತ್ರ

* ಈ ಗದ್ಯಭಾಗದಲ್ಲಿ ಹಲವು ಪದಗಳು ಅಸಂಬದ್ಧವಾಗಿವೆ. ಅರ್ಥಸಾಮಂಜಸ್ಯವು ಕಾಣುವುದಿಲ್ಲ. ಎಲ್ಲ ಪ್ರತಿಗಳಲ್ಲೂ ಪಾಠವು ಅಶುದ್ಧವಾಗಿದೆ.

ಭೀಮಮೂರ್ತ್ಯಾನನೇನಾಸ್ತಿ ಕೃತ್ಯಂ
ಗಿರೌ ಯ ಏಷೋಽಸ್ತ್ರಜ್ಞೇನ ಕಿಂ ವಧ್ಯತೇ ||೩೭೦||

ಮಾ ವೃಥಾ ಲೋಕಪಾಲಾನುಗಚಿತ್ತತಾ ಏವಮೇವೈತ
ದಿತ್ಯೂಚುರಸ್ಮೈ ತದಾ ದೇವತಾಃ ||೩೭೧||

ದೇವದೇವಾನುಗಂ ವೀರಕಂ ರಕ್ಷಣಾತ್ಪ್ರಾಹ ದೇವೀ ವನಂ
ಪರ್ವತಾನ್ನಿರ್ಝರಾಣ್ಯಗ್ನಿದೇವಾನ್ಪಥೋ ಭೂತಸಾ
ಗಚ್ಛತೋ ನಿಕುಂಜಾಂಭೋನಿಪಾತೇಷು ನಿಮಜ್ಜತಃ ||೩೭೨||

ಪುಷ್ಪಜಾಲಾವನದ್ಧೇಷು ಧಾಮಸ್ವಪಿ ಪ್ರೋತ್ತುಂಗನಾನಾದ್ರಿ
ಕುಂಜೇಷ್ವನುಗರ್ಜಂತು ಹೇ ಮಾರುತಾಃ ಸ್ಫೋಟ
ಸಂಕ್ಷೇಪಣಾತ್ಕಾಮತಃ ||೩೭೩||

---

ಗಳಿಂದ ವ್ಯರ್ಥವಾಗಿ ಇತರರನ್ನು ದಂಡಿಸಬೇಕೆಂಬ ದುರಭಿಲಾಷೆಯೇಕೆ? ಭಯಂಕರವಾದ ಶರೀರವೂ ಮುಖವೂ ಉಳ್ಳ ಈತನಿಂದ ಈ ಬೆಟ್ಟದಲ್ಲಿ ನಡೆಯಬೇಕಾದ ಕಾರ್ಯವುಂಟು. ಹೀಗಿರುವಾಗ ಅಸ್ತ್ರ ವಿದ್ಯೆಯನ್ನರಿತ ಯಾವನು ಇವನನ್ನು ಹಿಂಸಿಸಿದವನು? ಬೇಡ ಬೇಡ; ಲೋಕಪಾಲಕರ ಗೊಡವೆಗೆ ಹೋಗುವುದು ವ್ಯರ್ಥವಾದ ಕೆಲಸ." ಎಂದು ಅವರಿಗೆ ಹೇಳಲು "ನಿಜ ನಿಜ; ನೀನು ಹೇಳಿದುದೇ ಸರಿ" ಎಂದು ದೇವತೆಗಳು ಅವನ ಅಭಿಪ್ರಾಯವನ್ನು ಪುಷ್ಟೀಕರಿಸಿದರು. "ಲೋಕಪಾಲಕರ ವಿಷಯವಾಗಿ ಚಿಂತಿಸಬೇಡಿ. ಇದು ನಡೆದದ್ದೇ ಹೀಗೆ" ಎಂದು ಅವನಿಗೆ ಅವರು ಹೇಳಿದರು.

೩೭೨. ಮಹಾದೇವನ ಭಕ್ತನಾದ ವೀರಕನ ರಕ್ಷಣಾರ್ಥವಾಗಿ ಪಾರ್ವತಿಯು ವನ, ಪರ್ವತ, ಗಿರಿಪ್ರವಾಹ, ಅಗ್ನಿ, ದೇವತೆಗಳ ಮಾರ್ಗಗಳು, ಅಲ್ಲಿ ಸಂಚರಿಸುವ ಮತ್ತು ಲತಾಗೃಹಗಳ ಜಲಾಶಯಗಳಲ್ಲಿ ಸ್ನಾನಮಾಡುವ ಭೂತಮುಖ್ಯರು ಇವರನ್ನು ಕುರಿತು ಇಂತೆಂದಳು.

೩೭೩. ಓ ವಾಯುಗಳಿರಾ! ಹೂಗೊಂಚಲುಗಳಿಂದ ತುಂಬಿದೆಡೆಗಳಲ್ಲೂ, ಎತ್ತರವಾದ ಬಗೆಬಗೆಯ ಬೆಟ್ಟದ ಲತಾಗೃಹಗಳಲ್ಲಿಯೂ ನೀವು ನಿಮ್ಮ ಅಬ್ಬರವನ್ನು ಕಡಿಮೆಮಾಡಿಕೊಂಡು ಮಂದಧ್ವನಿಯಿಂದ ಬೀಸಿರಿ.

**ಕಾಂಚನೋತ್ತುಂಗಶೃಂಗಾವರೋಹಕ್ಷಿತೌ ಹೇಮರೇ**
**ಣೂತ್ಕರಾಸಂಗದ್ಯುತಿಂ ಖೇಚರಾಣಾಂ ವನಾಧಾಯಿನಿ**
**ರಮ್ಯೇ ಬಹುರೂಪಸಂಪತ್ತ್ರಕರೇ ಗಣಾನ್ವಾಸಿತಂ**
**ಮಂದರಕಂದರೇ ಸುಂದರಮಂದಾರಪುಷ್ಪಪ್ರವಾಲಾಂ**
**ಬುಜೇ ಸಿದ್ಧನಾರೀಭಿರಾಪೀತರೂಪಾನ್ವಿತಂ**
**ವಿಸ್ತೃತೈರ್ನೇತ್ರಪಾತ್ರೈರನುನ್ಮೇಷಿಭಿರ್ವೀರಕಂ**
**ಶೈಲಪುತ್ರೀ ನಿಮೇಷಾಂತರಾದಸ್ಮರತ್ಪುತ್ರಗೃಧ್ನೀ ವಿನೋದಾರ್ಥಿನೀ** ||೫೭೪||

**ಸೋऽಪಿ ತಾದೃಕ್ ಕ್ಷಣಾವಾಪ್ತಪುಣ್ಯೋದಯೋ**
**ಯೋऽಪಿ ಜನ್ಮಾಂತರಸ್ಯಾತ್ಮಜತ್ವಂ ಗತಃ ಕ್ರೀಡತಸ್ತಸ್ಯ**
**ತೃಪ್ತಿಃ ಕಥಂ ಜಾಯತೇ ಯೋऽಪಿ ~~ಭಾ~~ ಜಗದ್ವೇಧಸಾ**
**ತೇಜಸಾ ಕಲ್ಪಿತಃ ಪ್ರತಿಕ್ಷಣಂ ದಿವ್ಯಗೀತಕ್ಷಣೋ**
**ನೃತ್ಯಲೋಲೋ ಗಣೇಶೈಃ ಪ್ರಣತಃ** ||೫೭೫||

---

೫೭೪. ವೀರಕನು ಉನ್ನತವಾದ ಸುವರ್ಣಶಿಖರದ ಇಳಿಜಾರು ಭೂಮಿಯಲ್ಲಿ ಆಡುತ್ತ ಚಿನ್ನದ ಧೂಳು ಮೈಮೇಲೆಲ್ಲ ತುಂಬಿಕೊಳ್ಳಲು ಕಾಂತಿಯಿಂದ ಪ್ರಕಾಶಿಸಿದನು. ಬಹು ಸಂಪತ್ಸಮೃದ್ಧವಾಗಿ ರಮ್ಯವಾದ ವಿದ್ಯಾಧರ ವಿಹಾರೋದ್ಯಾನದಲ್ಲಿ ಗಣಾಧೀಶ್ವರರೊಡನೆ ಕೂಡಿ ಕ್ರೀಡಿಸುತ್ತಿದ್ದನು. ಸುಂದರವಾದ ಮಂದಾರದ ಹೂಗಳಿಂದಲೂ ಚಿಗುರುಗಳಿಂದಲೂ ತಾವರೆಗಳಿಂದಲೂ ತುಂಬಿದ ಮಂದರ ಪರ್ವತದ ಗುಹಾಪ್ರದೇಶಗಳಲ್ಲಿ ವಿಹರಿಸುತ್ತ ಸಿದ್ಧನಾರಿಯರಿಗೆ ತನ್ನ ದಿವ್ಯರೂಪದಿಂದ ನೇತ್ರಾನಂದವನ್ನುಂಟುಮಾಡುತ್ತಿದ್ದನು. ವಿನೋದಪ್ರಿಯೆಯಾದ ಪಾರ್ವತಿಯು ಪುತ್ರಪ್ರೇಮದಿಂದ ಕಣ್ಣುಗಳು ಅರಳಲು, ರೆಪ್ಪೆಗಳನ್ನು ಬಡಿಯದೆ ನೋಡುತ್ತ ಸ್ವಲ್ಪ ಹೊತ್ತಿನಲ್ಲೇ ಮೈಮರೆತಳು.

೫೭೫. ವೀರಕನೂ ಸಹ ಆ ಬಗೆಯ ಹರ್ಷದಿಂದ ತಾನು ಭಾಗ್ಯಶಾಲಿಯೆಂದೂ, ಜನ್ಮಾಂತರದಲ್ಲಿಯೂ ಆಕೆಗೆ ಮಗನಾಗಿದ್ದಿರಬೇಕೆಂದೂ ತಿಳಿದು ಕ್ರೀಡಿಸುತ್ತಿದ್ದನು. ಅವನಿಗೆ ತೃಪ್ತಿಯೇ ಹುಟ್ಟಲಿಲ್ಲ. ಜಗತ್ಕರ್ತನ ದಿವ್ಯತೇಜಸ್ಸಿನಿಂದ ನಿರ್ಮಿತನಾದ ಆತನು ಪ್ರತಿಕ್ಷಣದಲ್ಲೂ ದೇವತಾಸ್ತ್ರೀಯರ ಗಾನದಲ್ಲಿಯೂ ನರ್ತನದಲ್ಲಿಯೂ ಆಸಕ್ತನಾದನು. ಮಿಕ್ಕ ಗಣೇಶರು ಅವನನ್ನು ನಮಸ್ಕರಿಸಿ ಗೌರವಿಸುತ್ತಿದ್ದರು.

ಕ್ಷಣಂ ಸಿಂಹನಾದಾಕುಲೇ ಗಂಡಶೈಲೇ ಸೃಜದ್ರತ್ನ
ಜಾಲೇ ಬೃಹತ್ಸಾಲತಾಲೇ ।
ಕ್ಷಣಂ ಫುಲ್ಲನಾನಾತಮಾಲಾಲಿಕಾಲೇ ಕ್ಷಣಂ ವೃಕ್ಷ
ಮೂಲೇ ವಿಲೋಲೋ ಮರಾಲೇ ॥೫೭೬॥

ಕ್ಷಣೇ ಸ್ವಲ್ಪಪಂಕೇ ಜಲೇ ಪಂಕಜಾಢ್ಯೇ ಕ್ಷಣಂ
ಮಾತುರಂಕೇ ಶುಭೇ ನಿಷ್ಕಲಂಕೇ ।
ಪರಿಕ್ರೀಡಿತೇ ಬಾಲಲೀಲಾವಿಹಾರೀ ಗಣೇಶಾಧಿಪೋ
ದೇವತಾನಂದಕಾರೀ ।
ನಿಕುಂಜೇಷು ವಿದಾಧರೈರ್ಗೀತಶೀಲಃ ಪಿನಾಕೀವ
ಲೀಲಾವಿಲಾಸ್ಯೈಃ ಸಲೀಲಃ ॥೫೭೭॥

ಪ್ರಕಾಶ್ಯ ಭುವನಾಭೋಗಂ ತತೋ ದಿನಕರೇ ಗತೇ ।
ದೇಶಾಂತರಂ ತದಾ ಪಶ್ಚಾದ್ದೂರಮಸ್ತಾವನೀಧರಂ ॥೫೭೮॥

---

೫೭೬. ರತ್ನಗಳ ಕಾಂತಿಯನ್ನು ಬೀರುತ್ತಿರುವ ದೊಡ್ಡ ಬಂಡೆಯ ಮೇಲೆ ಸಿಂಹದ ಗರ್ಜನೆಯನ್ನು ಕೇಳುತ್ತ ಸ್ವಲ್ಪ ಹೊತ್ತು ಕಳೆದನು. ದೊಡ್ಡದೊಡ್ಡ ಸಾಲ ವೃಕ್ಷಗಳೂ ತಾಲವೃಕ್ಷಗಳೂ ಬೆಳೆದಿರಲು, ಅನೇಕ ಹೊಂಗೆಯ ಮರಗಳಿಂದಲೂ ದುಂಬಿಗಳಿಂದಲೂ ಕಗ್ಗತ್ತಲು ಕವಿದು ದಟ್ಟವಾಗಿದ್ದ ಅರಣ್ಯದಲ್ಲಿ ಸ್ವಲ್ಪಕಾಲ ಕ್ರೀಡಿಸಿದನು. ಹಂಸಗಳು ನಡೆಯಾಡುವ ಮರಗಳ ಬುಡದಲ್ಲಿ ಸ್ವಲ್ಪಹೊತ್ತು ಆಡಿದನು.

೫೭೭. ಗಣೇಶರ ಅಧಿಪತಿಯೂ, ದೇವತೆಗಳಿಗೆ ಆನಂದಪ್ರದನೂ ಆದ ವೀರಕನು ಬಾಲ್ಯಲೀಲಾವಿನೋದದಿಂದ ಕೆಸರು ವಿಶೇಷವಾಗಿಲ್ಲದ ತಿಳಿಗೊಳದಲ್ಲಿ ಸ್ವಲ್ಪಕಾಲವೂ, ತಾವರೆಗಳಿಂದ ತುಂಬಿದ ಸರೋವರದಲ್ಲಿ ಕ್ಷಣಕಾಲವೂ ಕ್ರೀಡಿಸುವನು. ಸ್ವಲ್ಪಹೊತ್ತು ಮಂಗಲಮಯವಾದ ತನ್ನ ತಾಯಿಯ ತೊಡೆಯಲ್ಲಿ ಆಡುವನು. ಲತಾಗೃಹಗಳಲ್ಲಿ ವಿದ್ಯಾಧರರೊಡನೆ ಗಾನಮಾಡುವನು. ಹೀಗೆ ಈಶ್ವರನಂತೆ ಲೀಲಾವಿಲಸಗಳಿಂದ ವಿನೋದಿಸುತ್ತಿದ್ದನು.

೫೭೮. ವಿಸ್ತಾರವಾದ ಪ್ರಪಂಚವನ್ನು ತನ್ನ ಕಾಂತಿಯಿಂದ ಬೆಳಗಿ ಸೂರ್ಯದೇವನು ಕೊನೆಗೆ ಅಸ್ತಪರ್ವತದಲ್ಲಿಳಿದು ಬಲುದೂರದ ದೇಶಾಂತರಕ್ಕೆ ತೆರಳಿದನು.

ಉದಯಾಸ್ತೇ ಪುರೋಭಾವೀ ಯೋ ಹಿ ಚಾಸ್ತೇಽವನೀಧರಃ ।
ಮಿತ್ರತ್ವಮಸ್ಯ ಸುದೃಢಂ ಹೃದಯೇ ಪರಿಚಿಂತ್ಯತಾಂ ॥೫೭॥

ನಿತ್ಯಮಾರಾಧಿತಃ ಶ್ರೀಮಾರ್ನ್ ಪೃಥುಮೂಲಃ ಸಮುನ್ನತಃ ।
ನಾಕರೋತ್ಸವಿತುರ್ಮೇರುರುಪಕಾರಂ ಪತಿಷ್ಯತಃ ॥೫೮॥

ಜಾತದೋಷಂ ವ್ಯವಸ್ಥೇತಿ ಸಂಶ್ರಯೇನ್ನ ಖಲಂ ಬುಧಃ ।
ದಿನಾಂತಾನುಗತೋ ಭಾನುಃ ಸ್ವಜನತ್ವಮಪೂರಯತ್ ॥೫೯॥

ಸಂಧ್ಯಾಬದ್ಧಾಂಜಲಿಪುಟಾ ಮುನಯೋಽಭಿಮುಖಾ ರವಿಂ ।
ಯಾಚಂತ್ಯಾಗಮನಂ ಶೀಘ್ರಂ ನಿವಾರ್ಯಾತ್ಮನಿ ಭಾವಿತಾಂ ॥೬೦॥

---

೫೭. ಉದಿಸುವಾಗಲೂ, ಅಸ್ತಮಿಸುವಾಗಲೂ ಮೇರುಪರ್ವತವನ್ನೇ ನೋಡುತ್ತ ಸೂರ್ಯನು ಅದಕ್ಕೆ ಅಭಿಮುಖವಾಗಿಯೇ ಇರುವನು. ಅವನು ಅದರ ಮಿತ್ರನೆನಿಸುವನು. ಅವನ ಮನಸ್ಸಿನಲ್ಲಿ ಬೇರೂರಿರುವ ಮಿತ್ರತ್ವವನ್ನು ಯೋಚಿಸಿರಿ. (ಸೂರ್ಯವಾಚಕವಾದ ಮಿತ್ರಶಬ್ದವನ್ನು ಇಲ್ಲಿ ಶ್ಲೇಷೆಯಿಂದ ಉಪಯೋಗಿಸಿದೆ).

೫೮. ವಿಶಾಲವಾದ ಮೂಲದಿಂದಲೂ ಅತಿಶಯವಾದ ಔನ್ನತ್ಯದಿಂದಲೂ ಕೂಡಿ ಶ್ರೀಮಂತನೆನಿಸಿದ ಮೇರುವನ್ನು ಸೂರ್ಯನು ನಿತ್ಯವೂ ಎಡೆಬಿಡದೆ ಸೇವಿಸುತ್ತಿರುವನು. ಆದರೆ ಅವನು (ಸೂರ್ಯನು) ಅಂತರಿಕ್ಷದಿಂದ ಬೀಳುವಾಗ ಆ ಮೇರುವು ಮಾತ್ರ ಅವನಿಗೆ ಉಪಕಾರವೇನನ್ನೂ ಮಾಡಲಾರದೆ ಹೋದನು.

೫೯. ಸಂಪ್ರದಾಯವೆಂಬ ಬುದ್ಧಿಯಿಂದ ದೋಷದ ಸಂಬಂಧವುಳ್ಳ ನೀಚನನ್ನು ಪ್ರಾಜ್ಞನು ಆಶ್ರಯಿಸಬಾರದು. (ರಾತ್ರಿಯ ಹೊತ್ತು ಬೆಳಗುವ, ಆಕಾಶಗಾಮಿಯಾದ ಚಂದ್ರನೊಡನೆ ಸೂರ್ಯನು ಸೇರುವುದಿಲ್ಲವೆಂದು ಮತ್ತೊಂದು ಅರ್ಥ.) ದಿನವು ಅವಸಾನವನ್ನೈದಲು ಸೂರ್ಯನು ಅದನ್ನು ಅನುಸರಿಸಿ ಹೋಗಿ (ಎಂದರೆ ತಾನೂ ಅದೃಶ್ಯನಾಗಿ) ತನ್ನ ಬಂಧುತ್ವವನ್ನು ಪ್ರಕಾಶಗೊಳಿಸಿದನು.

೬೦. ಮುನಿಗಳು ಸಂಧ್ಯಾಸಮಯದಲ್ಲಿ ಸೂರ್ಯನಿಗೆ ಅಭಿಮುಖವಾಗಿ ಕೈಮುಗಿದು ನಿಂತು, ತಮ್ಮ ಮನಸ್ಸಿನಲ್ಲಿ ಹುಟ್ಟಿದ ಉದ್ವೇಗ ಭಾವವನ್ನಡಗಿಸಿಕೊಂಡು ಸೂರ್ಯನು ಮರಳಿ ಬೇಗನೆ ಬರಲೆಂದು ಯಾಚಿಸಿದರು.

ವ್ಯಜೃಂಭದಥ ಲೋಕೇಽಸ್ಮಿನ್ ಕ್ರಮಾದ್ವೈಭಾವರಂ ತಮಃ ।
ಕುಟಿಲಸ್ಯೇವ ಹೃದಯಂ ಕಾಲುಷ್ಯಂ ದೂಷಯನ್ಮನಃ ॥೫೮೩॥

ಜ್ವಲತ್ಫಣಿಫಣಾರತ್ನದೀಪ್ತೋದ್ದ್ಯೋತಿತಭಿತ್ತಿಕೇ ।
ಶಯನಂ ಶಶಿಸಂಘಾತಶುಭ್ರವಿಸ್ತ್ರೋತ್ತರಚ್ಛದಂ ॥೫೮೪॥

ನಾನಾರತ್ನದ್ಯುತಿಲಸಚ್ಛಕ್ರಚಾಪವಿಡಂಬಕಂ ।
ರತ್ನಕಿಂಕಿಣಿಕಾಜಾಲಂ ಲಂಬಮುಕ್ತಾಕಲಾಪಕಂ ॥೫೮೫॥

ಕಮನೀಯಚಲಲ್ಲೋಲವಿತಾನಾಚ್ಛಾದಿತಾಂಬರಂ ।
ಮಂದಿರೇ ಮಂದಸಂಚಾರಃ ಶನೈರ್ಗಿರಿಸುತಾಯುತಃ ॥೫೮೬॥

ತಸ್ಥೌ ಗಿರಿಸುತಾಬಾಹುಲತಾಮೀಲಿತಕಂಧರಃ ।
ಶಶಿಮೌಲಿಸಿತಜ್ಯೋತ್ಸ್ನಾಶುಚಿಪೂರಿತಗೋಚರಃ ॥೫೮೭॥

---

೫೮೩. ತರುವಾಯ ರಾತ್ರಿಯ ಕತ್ತಲೆಯು ಲೋಕದಲ್ಲೆಲ್ಲ ವ್ಯಾಪಿಸಿತು. ಕಾಪಟ್ಯವು ವಂಚಕನ ಮನಸ್ಸನ್ನು ದೋಷಯುಕ್ತವಾಗಿ ಮಾಡುವಂತೆ ಅದು ಜನರ ಮನಸ್ಸನ್ನು ಉತ್ಸಾಹರಹಿತವಾಗಿ ಮಾಡಿತು.

೫೮೪-೫೮೭. ಪರಮೇಶ್ವರನು ತನ್ನ ಶಯನಮಂದಿರದಲ್ಲಿ ಪಾರ್ವತಿಯೊಡಗೂಡಿ ಮೆಲ್ಲಗೆ ಸಂಚರಿಸುತ್ತಿದ್ದನು. ಅಲ್ಲಿನ ಗೋಡೆಗಳು ಸರ್ಪಗಳ ಹೆಡೆಯ ರತ್ನಗಳ ಕಾಂತಿಯಿಂದ ಬೆಳಗುತ್ತಿದ್ದುವು. ಹಾಸಿಗೆಗೆ ಅನೇಕ ಚಂದ್ರರಷ್ಟು ಶುಭ್ರವಾದ ಮೇಲು ಹೊದಿಕೆಯನ್ನು ಹೊದಿಸಿತ್ತು. ಬಗೆಬಗೆಯ ರತ್ನಗಳ ಕಾಂತಿಯು ಮಿಶ್ರವಾಗಿ ಕಾಮನ ಬಿಲ್ಲಿನ ಸೊಬಗನ್ನು ಬೀರುತ್ತಿತ್ತು. ರತ್ನದ ಕಿರುಗೆಜ್ಜೆಗಳನ್ನು ಸಾಲಾಗಿ ಕಟ್ಟಿ ಮುತ್ತುಗಳ ಕುಚ್ಚನ್ನು ತೂಗುಬಿಟ್ಟಿದ್ದರು. ಅಂದವಾಗಿ ಕಟ್ಟಿದ್ದ ಮೇಲ್ಗಟ್ಟು ಗಾಳಿಗೆ ಅಲುಗಾಡುತ್ತಿತ್ತು. ಚಂದ್ರನ ನಿರ್ಮಲವಾದ ಬೆಳದಿಂಗಳು ಮೈಮೇಲೆ ಬಿದ್ದಿರಲು ಪಾರ್ವತಿಯು ಬಳ್ಳಿಯಂತಿದ್ದ ತನ್ನ ತೋಳನ್ನು ಆತನ ಕಂಠದ ಮೇಲೆ ಹಾಕಿದಳು.

**ಗಿರಿಜಾಪ್ಯಸಿತಾಪಾಂಗೀ ನೀಲೋತ್ಪಲದಳಚ್ಛವಿಃ ।
ವಿಭಾವರ್ಯಾ ಚ ಸಂಪೃಕ್ತಾ ಬಭೂವಾತಿತಮೋಮಯೀ ।
ತಾಮುವಾಚ ಹರ್ಸ ದೇವಃ ಕ್ರೀಡಾಕೇಳಿಕಲಾಯುತಾಂ ॥೫೮೮॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕುಮಾರಸಂಭವೇ
ಚತುಃಪಂಚಾಶದಧಿಕಶತತಮೋಽಧ್ಯಾಯಃ**

---

೫೮೮. ಕರಿಯ ಕಡೆಗಣ್ಣೂ ಕನ್ನೈದಿಲೆಯಂತಹ ಮೈಬಣ್ಣವೂ ಆದ ಪಾರ್ವತಿಯು ರಾತ್ರಿಯ ಸಂಪರ್ಕದಿಂದ ಮತ್ತಷ್ಟು ಕಪ್ಪಗೆ ಕಂಡಳು. ಕ್ರೀಡಾನಿರತಳಾದ ಆಕೆಯನ್ನು ನೋಡಿ ಪರಮೇಶ್ವರನು ನಗುತ್ತ ಹೇಳಿದನನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪಾರ್ವತೀ ಪರಮೇಶ್ವರರ ವಿವಾಹವನ್ನು ವರ್ಣಿಸಿದೆ.

ತಾರಕಾಸುರನಿಂದ ಪರಾಜಿತರಾದ ವಿಷ್ಣು ಮೊದಲಾದ ದೇವತೆಗಳು ಬ್ರಹ್ಮನಲ್ಲಿಗೆ ಹೋಗಿ ತಮ್ಮ ಪಾಡನ್ನು ಹೇಳಿಕೊಂಡರು. ಆತನು ತನ್ನ ದೇಹದಲ್ಲಿ ಹುಟ್ಟಿದವಳಾದ ವಿಭಾವರಿಯನ್ನು ಸ್ಮರಿಸಿದನು. ಕೂಡಲೇ ಆಕೆ ಬಂದಳು. ಅವಳ್ಳ ದೇವಕಾರ್ಯಕ್ಕಾಗಿ .ಮಾಡಬೇಕಾಥ ಸಾಹಾಯ್ಯವನ್ನು ತಿಳಿಸಿ ಬ್ರಹ್ಮನ್ನು ಅವಳನ್ನು ಕಳುಹಿಸಿಬಿಟ್ಟನು. ತಪೋನಿಷ್ಠನಾದ ಮಹಾದೇವನ ಮನಸ್ಸನ್ನು ಅನುರಾಗದ ಕಡೆಗೆ ತಿರುಗಿಸಬೇಕೆಂದು ಮನ್ಮಥನು ಪ್ರಯತ್ನಪಟ್ಟು ಅವನ ಹಣೆಗಣ್ಣಿನ ಉರಿಯಿಂದ ಸುಟ್ಟು ಬೂದಿಯಾದನು.

ಅತ್ತ ಹಿಮವಂತನ ಪತ್ನಿಯಾದ ಮೇನೆಯಲ್ಲಿ ಪಾರ್ವತಿ ಹುಟ್ಟಿ ಕ್ರಮವಾಗಿ ರೂಪಯೌವನಗಳಿಂದ ಪ್ರಕಾಶಿಸುತ್ತಿದ್ದಳು. ದೇವೇಂದ್ರನ ಪ್ರಾರ್ಥನೆಯಂತೆ ನಾರದಮುನಿಗಳು ಗಿರಿರಾಜನಲ್ಲಿಗೆ ಹೋಗಿ, ಅವನಿಂದ ಸತ್ಕೃತರಾಗಿ ಪಾರ್ವತಿಯು ಮುಂದೆ ಪರಮೇಶ್ವರನ ಪತ್ನಿಯಾಗುವಳೆಂದು ಹೇಳಿದರು. ನಾರದಮುನಿಯ ವಾಕ್ಯದಂತೆ ಹಿಮವಂತನು ಪಾರ್ವತಿಯನ್ನು ಸಕಲಾಭರಣಗಳಿಂದ ಶೃಂಗರಿಸಿ ಪರಮೇಶ್ವರನ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಮನ್ಮಥ

ಸಂಹಾರದ ವಿಷಯ ಗೊತ್ತಾಯಿತು. ಮಹಾದೇವನು ತನ್ನನ್ನು ಸ್ವೀಕರಿಸಲಾರನೆಂದು ನಂಬಿ ಪಾರ್ವತಿಯು ತಪಸ್ಸಿನ ಕಡೆಗೆ ಮನಸ್ಸನ್ನು ಕೊಟ್ಟಳು. ಬೇಡವೆಂದು ತಂದೆಯು ಎಷ್ಟು ಹೇಳಿದರೂ ಕೇಳಲಿಲ್ಲ. ಅವಳ ಘೋರತಪಸ್ಸಿನ ಜ್ವಾಲೆಯಿಂದ ಲೋಕವೆಲ್ಲವೂ ತಪ್ತವಾಯಿತು.

ಸಪ್ತರ್ಷಿಗಳು ಪಾರ್ವತಿಯ ಮನಸ್ಸನ್ನು ಪರೀಕ್ಷಿಸಬೇಕೆಂದು ಅವಳ ಆಶ್ರಮಕ್ಕೆ ಹೋದರು. ಅವಳ ಉದ್ದೇಶವನ್ನು ಅವಳಿಂದಲೇ ತಿಳಿದರು. ಈಶ್ವರನಲ್ಲಿ ಹಲವು ದೋಷಗಳನ್ನು ಉದಾಹರಿಸಿ ಅವನನ್ನು ವರಿಸುವುದಕ್ಕಾಗಿ ಆಶಿಪಡುವುದು ಹಾಸ್ಯಾಸ್ಪದವೆಂದು ಹೇಳಿದರು. ಆದರೂ ಅವಳ ಮನಸ್ಸು ವ್ಯತ್ಯಾಸವಾಗಲಿಲ್ಲ. ಶಿವನಿಂದೆಗಾಗಿ ಅವಳು ಅವರನ್ನೇ ಆಕ್ಷೇಪಿಸಿದಳು. ಮುನಿಗಳು ಅವಳ ಮನೋದಾರ್ಢ್ಯವನ್ನು ಕಂಡು ಮೆಚ್ಚಿ ಹೊರಟುಹೋದರು.

ಅನಂತರ ಅವರು ಈಶ್ವರನ ತಪೋವನಕ್ಕೆ ಹೋಗಿ, ಪಾರ್ವತಿಯ ವೃತ್ತಾಂತವೆಲ್ಲವನ್ನೂ ಅರುಹಿ ಅವಳಲ್ಲಿ ಕೃಪೆಮಾಡುವಂತೆ ಮಹಾದೇವನನ್ನು ಪ್ರಾರ್ಥಿಸಿದರು. ಅವನು ಪ್ರಸನ್ನನಾದುದನ್ನು ಕಂಡು ಮರಳಿ ಪರ್ವತರಾಜನ ಹತ್ತಿರಕ್ಕೆ ಹೋಗಿ ಮಗಳ ವಿವಾಹಕ್ಕೆ ಸನ್ನಾಹಮಾಡುವಂತೆ ಅವನಿಗೆ ಹೇಳಿದರು.

ಹಿಮಾಚಲದಲ್ಲಿ ಪಾರ್ವತಿಗೂ, ಗಂಧಮಾದನ ಪರ್ವತದಲ್ಲಿ ಪರಮೇಶ್ವರನಿಗೂ ವಿವಾಹಯೋಗ್ಯವಾದ ಅಲಂಕಾರಗಳು ನಡೆದುವು. ಇಂದ್ರಾದಿ ಸಕಲ ದೇವತಗಳಿಂದ ಪರಿವೃತನಾಗಿ ಮಹಾದೇವನು ಹಿಮಾಲಯ ಪರ್ವತಕ್ಕೆ ಹೊರಟನು. ಪುರಜನರ ಆನಂದವು ಮಿತಿಮೀರಿತು. ಎಲ್ಲರೂ ಸಂತೋಷಸಾಗರದಲ್ಲಿ ಮುಳುಗಿದರು. ದೇವದೇವಿಯರ ವಿವಾಹೋತ್ಸವವು ಸಂಭ್ರಮದಿಂದ ನಡೆಯಿತು.

ವಿವಾಹಾನಂತರ ಪರಮೇಶ್ವರನು ಪತ್ನೀಸಹಿತನಾಗಿ ಮಂದರಪರ್ವತಕ್ಕೆ ತೆರಳಿದನು. ಇಬ್ಬರೂ ವಿಧವಿಧವಾಗಿ ಕ್ರೀಡಿಸಿದರು. ಒಂದು ದಿನ ಪಾರ್ವತಿಯು ಸ್ನಾನಚೂರ್ಣದಿಂದ ಮನುಷ್ಯಾಕಾರವೂ ಆನೆಯ ಮುಖವೂ ಆದ ಒಂದು ಬೊಂಬೆಯನ್ನು ಆಟಕ್ಕಾಗಿ ಮಾಡಿದಳು. ಅದೇ ಗಣಪತಿಯಾಯಿತು. ಅಶೋಕವೃಕ್ಷದ ಸಸಿಯೊಂದನ್ನು ಪುತ್ರಪ್ರೇಮದಿಂದ ಸಾಕಿ ದೇವತೆಗಳಿಂದ ಅದಕ್ಕೆ ಸಂಸ್ಕಾರಗಳನ್ನು ಮಾಡಿಸಿದಳು.

## ಅಧ್ಯಾಯ ೧೫೪

ಒಂದು ದಿನ ಪಾರ್ವತೀಪರಮೇಶ್ವರರು ಪಗಡೆಯಾಡುತ್ತಿದ್ದರು. ಇಬ್ಬರಿಗೂ ಮಾತು ಕಥೆಗಳು ನಡೆಯುತ್ತಿರುವಾಗ ಪ್ರಮಥಗಣಗಳ ಸ್ವರೂಪವನ್ನೂ ಅವರಲ್ಲಿ ತನಗಿರುವ ಪ್ರೀತಿಯನ್ನೂ ಅವನು ಹೇಳಿದನು. ಪಾರ್ವತಿಗೆ ವೀರಕನೆಂಬ ಗಣಾಧಿಪನಲ್ಲಿ ಪುತ್ರಮೋಹವುಂಟಾಯಿತು. ಪತಿಯ ಅನುಮತಿಯಂತೆ ಅವನನ್ನೇ ತನ್ನ ಮಗನೆಂದು ಭಾವಿಸಿದಳು. ಅವನಿಗೆ ವಿಧವಿಧವಾದ ಅಲಂಕಾರಗಳನ್ನು ತನ್ನ ಕೈಯಿಂದಲೇ ಮಾಡಿದಳು. ಅವನು ಎಲ್ಲರ ಪ್ರೀತಿಗೂ ಪಾತ್ರನಾಗಿ ಸಂತೋಷದಿಂದ ಎಲ್ಲೆಡೆಗಳಲ್ಲಿಯೂ ವಿಹರಿಸುತ್ತಿದ್ದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕುಮಾರಸಂಭವ ಪ್ರಕರಣದಲ್ಲಿ
ನೂರೈವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಪಂಚಪಂಚಾಶದಧಿಕಶತತಮೋಽಧ್ಯಾಯಃ

|| ಶರ್ವ ಉವಾಚ ||

ಶರೀರೇ ಮಮ ತನ್ವಂಗಿ ಸಿತೇ ಭಾಸ್ಯಸಿತದ್ಯುತಿಃ ।
ಭುಜಂಗೀವಾಸಿತಾ ಶುದ್ಧಾ ಸಂಶ್ಲಿಷ್ಟಾ ಚಂದನೇ ತರೌ || ೧ ||

ಚಂದ್ರಾತಪೇನ ಸಂಪೃಕ್ತಾ ರುಚಿರಾಂಬರಯಾ ತಥಾ ।
ರಜನೀವಾಸಿತೇ ಪಕ್ಷೇ ದೃಷ್ಟಿದೋಷಂ ದದಾಸಿ ಮೇ || ೨ ||

ಇತ್ಯುಕ್ತಾ ಗಿರಿಜಾ ತೇನ ಮುಕ್ತಕಂಠಾ ಪಿನಾಕಿನಾ ।
ಉವಾಚ ಕೋಪರಕ್ತಾಕ್ಷೀ ಭ್ರುಕುಟೀಕುಟಿಲಾನನಾ || ೩ ||

|| ದೇವ್ಯುವಾಚ ||

ಸ್ವಕೃತೇನ ಜನಃ ಸರ್ವೋ ಜಾಡ್ಯೇನ ಪರಿಭೂಯತೇ ।
ಅವಶ್ಯಮರ್ಥೀ ಪ್ರಾಪ್ನೋತಿ ಖಂಡನಾಂ ಜನಮಂಡಲೇ || ೪ ||

---

೧. ಈಶ್ವರನು ಹೇಳಿದನು.—ಓ ಕೃಶಾಂಗೀ, ಬೆಳ್ಳಗಿರುವ ನನ್ನ ಶರೀರದೊಡನೆ ಕೂಡಿದ ನಿನ್ನ ಕೃಷ್ಣದೇಹವು ಗಂಧದ ಮರಕ್ಕೆ ಸುತ್ತಿಕೊಂಡ ಕರಿಯ ನಾಗರಹಾವಿನಂತೆ ಪ್ರಕಾಶಿಸುತ್ತದೆ.

೨. ನೀಲವರ್ಣದ ಆಕಾಶದಿಂದಲೂ ಬೆಳ್ದಿಂಗಳಿಂದಲೂ ಕೂಡಿದ ಕೃಷ್ಣಪಕ್ಷದ ರಾತ್ರಿಯಂತೆ ನೀನು ನನ್ನ ಕಣ್ಣುಗಳಿಗೆ ಬೇಸರಿಕೆಯನ್ನು ಹುಟ್ಟಿಸುತ್ತಿರುವೆ.

೩. ಈಶ್ವರನು ಹೀಗೆ ಹೇಳಲು ಪಾರ್ವತಿಗೆ ಕೋಪ ಬಂದಿತು. ಅವಳ ಕಣ್ಣುಗಳು ಕೆಂಪಗಾದುವು. ಹುಬ್ಬುಗಳು ಗಂಟಿಕ್ಕಿಕೊಂಡುವು. ಅವಳು ಸ್ಪಷ್ಟವಾಗಿ ಹೇಳಿದಳು.

೪. ದೇವಿ ಹೇಳಿದಳು.—ಜನರೆಲ್ಲರೂ ತಾವಾಗಿ ಮಾಡಿಕೊಂಡ ಬುದ್ಧಿದೋಷದಿಂದ ತಿರಸ್ಕಾರಕ್ಕೆ ಗುರಿಯಾಗುತ್ತಾರೆ. ಯಾಚಕನಿಗೆ ಜನಸಮುದಾಯದಲ್ಲಿ ಖಂಡಿತವಾಗಿ ನಿಂದೆ ಬರುತ್ತದೆ.

ತಪೋಭಿರ್ದೀರ್ಘಚರಿತೈರ್ಯಚ್ಚ ಪ್ರಾರ್ಥಿತವತ್ಯಹಂ ।
ತಸ್ಯಾ ಮೇ ನಿಯುತಸ್ತ್ವೇಷ ಹ್ಯವಮಾನಃ ಪದೇಪದೇ ॥ ೫ ॥

ನೈವಾಸ್ಮಿ ಕುಟಿಲಾ ಶರ್ವ ವಿಷಮಾ ನೈವ ಧೂರ್ಜಟೇ ।
ಸವಿಷಸ್ತ್ವಂ ಗತಃ ಖ್ಯಾತಿಂ ವ್ಯಕ್ತಂ ದೋಷಾಕರಾಶ್ರಯಾತ್ ॥ ೬ ॥

ನಾಹಂ ಪೂಷ್ಣೋऽಪಿ ದಶನಾ ನೇತ್ರೇ ಚಾಸ್ಮಿ ಭಗಸ್ಯ ಹಿ ।
ಆದಿತ್ಯಶ್ಚ ವಿಜಾನಾತಿ ಭಗವಾನ್ ದ್ವಾದಶಾತ್ಮಕಃ ॥ ೭ ॥

---

೫. ನಾನು ಬಹುಕಾಲ ತಪಸ್ಸನ್ನು ಮಾಡಿ ನಿನ್ನನ್ನು ವರಿಸಬೇಕೆಂದು ಹಾರೈಸಿದೆನು. ಅದರ ಫಲವಾಗಿ ನನಗೆ ಮೇಲೆಮೇಲೆ ಈ ಅವಮಾನವು ಒದಗುತ್ತಿದೆ.

೬. ಓ ಪರಮೇಶ್ವರಾ! ನಾನು ಕುಟಿಲೆಯಲ್ಲ. ಎಲೈ ಜಟಾಧಾರೀ! ವಿಷಮಸ್ವಭಾವದವಳೂ ಅಲ್ಲ. ವಿಷವುಳ್ಳವನೆಂದೂ ದೋಷಭಾಗಿಗೆ ಎಡೆಗೊಟ್ಟವನೆಂದೂ ನಿನಗೆ ಪ್ರಖ್ಯಾತಿ ಬಂದಿದೆ. (ವಿಷಪಾನಮಾಡಿದವನೆಂದೂ ಚಂದ್ರನನ್ನು ಧರಿಸಿರುವವನೆಂದೂ ಪ್ರಸಿದ್ಧಿ ಬಂದಿದೆಯೆಂಬುದು ಮತ್ತೊಂದು ಅಭಿಪ್ರಾಯ).

೭. ನಾನು ಪೂಷನ ಹಲ್ಲೂ ಅಲ್ಲ; ಭಗನ ಕಣ್ಣುಗಳೂ ಅಲ್ಲ. ಹನ್ನೆರಡು ಬಗೆಯ ರೂಪಗಳನ್ನು ತಾಳುವ ಪೂಜ್ಯನಾದ ಆದಿತ್ಯನು ಈ ವಿಚಾರವನ್ನು ಬಲ್ಲನು.*

---

* ಹಿಮವಂತನು ಪಾರ್ವತಿಯ ಸ್ವಯಂವರವನ್ನು ಏರ್ಪಡಿಸಿದನು. ದೇವತೆಗಳೆಲ್ಲರೂ ಬಂದರು. ಪರಮೇಶ್ವರನು ಶಿಶುರೂಪವನ್ನು ಧರಿಸಿ ಪಾರ್ವತಿಯ ತೊಡೆಯ ಮೇಲೆ ಮಲಗಿದನು. ಈ ಮಗು ಯಾವುದು ಎಂದು ಕೋಪದಿಂದ ಅದನ್ನು ಹೊಡೆಯಲು ಇಂದ್ರನು ವಜ್ರಾಯುಧವನ್ನು ಎತ್ತಿ ಸ್ತಬ್ಧನಾಗಿ ನಿಂತುಬಿಟ್ಟನು. ಪೂಷನು ಹಲ್ಲು ಕಡಿಯಲಾಗಿ ಅವನ ಹಲ್ಲುಗಳು ಉದುರಿದುವು. ಕೊನೆಗೆ ಬ್ರಹ್ಮನು ದಿವ್ಯಜ್ಞಾನದಿಂದ ನಿಜಾಂಶವನ್ನರಿತು ಮಹಾದೇವನನ್ನು ಸ್ತೋತ್ರಮಾಡಿದನು.

ವೀರಭದ್ರನು ದಕ್ಷಬ್ರಹ್ಮನ ಯಾಗವನ್ನು ಧ್ವಂಸಮಾಡಿದ ಕಾಲದಲ್ಲಿ ಅಲ್ಲಿದ್ದ ಭಗನ ಕಣ್ಣುಗಳನ್ನು ಕಿತ್ತನೆಂಬ ವಿಷಯವನ್ನು ಹಿಂದೆ ವಿವರಿಸಿದೆ.

ಮೂರ್ಧ್ನಿ ಶೂಲಂ ಜನಯಸಿ ಸ್ವೈರ್ದೋಷೈರ್ಮಾಮಧಿಕ್ಷಿಪನ್ ।
ಯಸ್ತ್ವಂ ಮಾಮಾಹ ಕೃಷ್ಣೇತಿ ಮಹಾಕಾಲೇತಿ ವಿಶ್ರುತಃ ॥ ೮ ॥

ಯಾಸ್ಯಾಮ್ಯಹಂ ಪರಿತ್ಯಕ್ತುಮಾತ್ಮಾನಂ ತಪಸಾ ಗಿರಿಂ ।
ಜೀವಂತ್ಯಾ ನಾಸ್ತಿ ಮೇ ಕೃತ್ಯಂ ಧೂರ್ತೇನ ಪರಿಭೂತಯಾ ॥ ೯ ॥

ನಿಶಮ್ಯ ತಸ್ಯಾ ವಚನಂ ಕೋಪತೀಕ್ಷ್ಣಾಕ್ಷರಂ ಭವಃ ।
ಉವಾಚಾವಿಷ್ಟಸಂಭ್ರಾಂತಿಪ್ರಣಯೋನ್ಮಿಶ್ರಯಾ ಗಿರಾ ॥೧೦॥

॥ ಶರ್ವ ಉವಾಚ ॥

ಅನಾತ್ಮಜ್ಞಾಸಿ ಗಿರಿಜೇ ನಾಹಂ ನಿಂದಾಪದಸ್ತವ ।
ಚಾಟೂಕ್ತಿಬುದ್ಧ್ಯಾ ಕೃತವಾಂಸ್ತವಾಹಂ ನರ್ಮಸಂಶ್ರಯಂ ॥೧೧॥

ವಿಕಲ್ಪಃ ಸ್ವಸ್ಥಚಿತ್ತೇಽಪಿ ಗಿರಿಜೇ ನೈವ ಕಲ್ಪನಾ ।
ಯದ್ಯೇವಂ ಕುಪಿತಾ ಭೀರು ತ್ವಂ ತವಾಹಂ ನ ವೈ ಪುನಃ ॥೧೨॥

---

೮. ನಿನ್ನಲ್ಲಿ ದೋಷಗಳನ್ನಿಟ್ಟುಕೊಂಡು ನನ್ನನ್ನು ಬಯ್ಯುತ್ತಿರುವೆ. ನನಗೆ ಇದರಿಂದ ತಲೆನೋವು ಬರುತ್ತಿದೆ. ನನ್ನನ್ನು ಕಪ್ಪುಬಣ್ಣದವಳೆಂದು ಹೇಳಿದೆ. ನಿನಗೆ ಮಹಾಕಾಲ (ಅಚ್ಚಗಪ್ಪಾದವನು) ಎಂಬ ಪ್ರಸಿದ್ಧಿಯಿಲ್ಲವೇ ?

೯. ತಪಸ್ಸಿನ ಮೂಲಕ ಈ ದೇಹವನ್ನು ನೀಗುವುದಕ್ಕಾಗಿ ನಾನು ಪರ್ವತಕ್ಕೆ ಹೋಗುವೆನು. ಧೂರ್ತನಾದ ನೀನು ನನ್ನನ್ನು ತಿರಸ್ಕರಿಸಿದೆ. ನಾನು ಬದುಕಿ ಆಗಬೇಕಾದುದೇನೂ ಇಲ್ಲ.

೧೦. ಅವಳ ಮಾತನ್ನು ಕೇಳಿ ಈಶ್ವರನಿಗೆ ಕೋಪ ಬಂದಿತು. ಸಂಭ್ರಮವೂ ಸ್ನೇಹವೂ ಉಕ್ಕುತ್ತಿರಲು ಅವನು ತೀಕ್ಷ್ಣವಚನಗಳಿಂದ ಇಂತೆಂದನು.

೧೧. ಈಶ್ವರನು ಹೇಳಿದನು.—ಎಲೌ ಪಾರ್ವತೀ, ನಿನಗೆ ನನ್ನ ಸ್ವಭಾವವೇ ತಿಳಿಯದು. ನಾನು ನಿನ್ನ ನಿಂದೆಯಲ್ಲಿ ತೊಡಗಿದವನಲ್ಲ. ಪರಿಹಾಸ ವಚನದಲ್ಲಿ ಮನಸ್ಸಿಟ್ಟು ಸ್ವಲ್ಪ ವಿನೋದವನ್ನು ಮಾಡಿದೆನು.

೧೨-೧೩. ಓ ಗಿರಿಜೇ, ನನ್ನ ಮನಸ್ಸು ನಿರ್ಮಲವಾದುದು. ನಿನಗೆ ಆ ವಿಷಯದಲ್ಲಿ ಸಂದೇಹವೇ ಬೇಡ. ಆದರೂ ನನ್ನ ಮೇಲೆ ನಿನಗೆ ಒಂದು ವೇಳೆ

ನರ್ಮವಾದೀ ಭವಿಷ್ಯಾಮಿ ಜಹಿ ಕೋಪಂ ಶುಚಿಸ್ಮಿತೇ ।
ಶಿರಸಾ ಪ್ರಣತಶ್ಚಾಹಂ ರಚಿತಸ್ತೇ ಮಯಾಂಜಲಿಃ ॥೧೩॥

ಸ್ನೇಹೇನಾಪ್ಯವಮಾನೇನ ನಿಂದಿತೇ ನೈತಿ ವಿಕ್ರಿಯಾಂ ।
ತಸ್ಮಾನ್ನ ಜಾತು ರುಷ್ಟಸ್ಯ ನರ್ಮಸ್ಪೃಷ್ಟೋ ಜನಃ ಕಿಲ ॥೧೪॥

ಅನೇಕೈಶ್ಚಾಟುಭಿರ್ದೇವೀ ದೇವೇನ ಪ್ರತಿಬೋಧಿತಾ ।
ಕೋಪಂ ತೀವ್ರಂ ನ ತತ್ಯಾಜ ಸತೀ ಮರ್ಮಣಿ ಘಟ್ಟಿತಾ ॥೧೫॥

ಅವಷ್ಟಬ್ಧಮಥಾಸ್ಫಾಲ್ಯ ವಾಸಃ ಶಂಕರಪಾಣಿನಾ ।
ವಿಪರ್ಯಸ್ತಾಲಕಾ ವೇಗಾದ್ಯಾತುಮೈಚ್ಛತ ಶೈಲಜಾ ॥೧೬॥

ತಸ್ಯಾ ವ್ರಜಂತ್ಯಾಃ ಕೋಪೇನ ಪುನರಾಹ ಪುರಾಂತಕಃ ।
ಸತ್ಯಂ ಸರ್ವೈರವಯವೈಃ ಸುತಾಸಿ ಸದೃಶೀ ಪಿತುಃ ॥೧೭॥

---

ಕೋಪಬಂದಿದ್ದರೆ ಮತ್ತೆ ನಿನ್ನಲ್ಲಿ ನಾನು ಪರಿಹಾಸವಚನವನ್ನು ಆಡುವುದಿಲ್ಲ. ಎಲೌ ಮಂದಹಾಸಿನೀ, ಕೋಪವನ್ನು ಬಿಡು. ಇಗೋ! ತಲೆಬಾಗಿ ನಮಸ್ಕರಿಸುತ್ತೇನೆ. ಕೈಮುಗಿಯುತ್ತೇನೆ.

೧೪. ಎಷ್ಟೇ ಸ್ನೇಹವಿರಲಿ, ಅವಮಾನವಾಗುವಂತೆ ಹಾಸ್ಯಮಾಡಿದರೆ ಮನುಷ್ಯನಿಗೆ ಮನಸ್ಸು ವ್ಯತ್ಯಾಸವಾಗುತ್ತದೆ. ಆದುದರಿಂದ ಕೋಪಶೀಲನ ವಿಷಯದಲ್ಲಿ ವಿನೋದವನ್ನು ಎಂದಿಗೂ ಮಾಡಬಾರದು.

೧೫. ಈಶ್ವರನು ಹಲವು ಸಮಾಧಾನೋಕ್ತಿಗಳಿಂದ ಸಂತೈಸಿದರೂ ಪಾರ್ವತಿಯು ತನ್ನ ತೀವ್ರವಾದ ಕೋಪವನ್ನು ಬಿಡಲಿಲ್ಲ. ಅವನು ಆಡಿದ ಪರಿಹಾಸ ವಚನವು ಅವಳ ಮರ್ಮವನ್ನು ಭೇದಿಸುತ್ತಿತ್ತು.

೧೬. ಶಂಕರನು ಕೈಯಲ್ಲಿ ಹಿಡಿದುಕೊಂಡಿದ್ದ ತನ್ನ ಸೀರೆಯನ್ನು ಬಿಡಿಸಿಕೊಂಡು, ಮುಂಗುರುಳು ಕೆದರಿರಲು, ಪಾರ್ವತಿಯು ಸರಸರನೆ ಹೊರಡಲಿಚ್ಛಿಸಿದಳು.

೧೭. ಅವಳು ಕೋಪದಿಂದ ಹೋಗುತ್ತಿರಲು ಮಹಾದೇವನು ಅವಳಿಗೆ ಮತ್ತೆ ಹೇಳಿದನು. ಎಲ್ಲ ಅವಯವಗಳಲ್ಲಿಯೂ ನೀನು ನಿನ್ನ ತಂದೆಗೆ ತಕ್ಕ ಮಗಳಾಗಿರುವೆ ನಿಜ.

**ಹಿಮಾಚಲಸ್ಯ ಶೃಂಗೈಸ್ತ್ರೈರ್ಮೇಘಜಾಲಾಕುಲೈರ್ನಭಃ ।**
**ತಥಾ ದುರವಗಾಹ್ಯೇಭ್ಯೋ ಹೃದಯೇಭ್ಯಸ್ತವಾಶಯಃ ॥೧೮॥**

**ಕಾಠಿನ್ಯಂ ದೃಢಮಸ್ಮಭ್ಯಂ ವನೇಭ್ಯೋ ಬಹುಧಾ ಗತಾ ।**
**ಕುಟಿಲತ್ವಂ ಚ ವರ್ತ್ಮಭ್ಯೋ ದುಸ್ಸೇವ್ಯತ್ವಂ ಹಿಮಾದಪಿ ॥೧೯॥**

**ಸಂಕ್ರಾಂತಂ ಸರ್ವಮೇವೈತತ್ತನ್ವಂಗಿ ಹಿಮಭೂಧರಾತ್ ।**
**ಇತ್ಯುಕ್ತಾ ಸಾ ಪುನಃ ಪ್ರಾಹ ಗಿರಿಶಂ ಶೈಲಜಾ ತದಾ ।**
**ಕೋಪಕಂಪಿತಮೂರ್ಧಾ ಚ ಪ್ರಸ್ಫುರದ್ಧಶನಚ್ಛದಾ ॥೨೦॥**

**॥ ಉಮೋವಾಚ ॥**

**ಮಾ ಸರ್ವಾನ್ ದೋಷದಾನೇನ ನಿಂದಾನ್ಯಾನ್ ಗುಣಿನೋ ಜನಾನ್ ।**
**ತವಾಪಿ ದುಷ್ಟಸಂಪರ್ಕಾತ್ಸಂಕ್ರಾಂತಂ ಸರ್ವಮೇವ ಹಿ ॥೨೧॥**

---

೧೮. ಮೇಘಮಾಲೆಗಳಿಂದ ತುಂಬಿದ ಹಿಮಾಚಲದ ಶಿಖರಗಳು ಆಕಾಶವನ್ನು ವ್ಯಾಪಿಸಿರುವ ಹಾಗೆ, ಊಹಿಸುವುದಕ್ಕೆ ಅಸಾಧ್ಯವಾದ ಭಾವನೆಗಳು ನಿನ್ನ ಮನಸ್ಸನ್ನು ಆವರಿಸಿವೆ.

೧೯. ನಮಗೆ ನೀನು ತೋರಿಸಿರುವ ಕಾಠಿನ್ಯವನ್ನು ನೀನು ಕಾಡುಗಳಿಂದ ಸಂಪಾದಿಸಿರಬೇಕು. ಕೌಟಿಲ್ಯವನ್ನು ಕಾಡುದಾರಿಗಳಿಂದಲೂ ಮೆಚ್ಚಿಸುವುದಕ್ಕೆ ಅಸಾಧ್ಯವಾದ ಸ್ವಭಾವನ್ನು ಹಿಮದಿಂದಲೂ ಪಡೆದಿರುವೆ. ಕೋಮಲಾಂಗೀ, ಹೀಗೆ ಈ ಗುಣಗಳೆಲ್ಲವೂ ನಿನಗೆ ಹಿಮವತ್ಪರ್ವತದಿಂದ ಬಂದಿವೆ.

೨೦. ಈಶ್ವರನು ಹೀಗೆ ಹೇಳಲು ಪಾರ್ವತಿಯು ಅವನಿಗೆ ಮರಳಿ ಉತ್ತರವಿತ್ತಳು. ಕೋಪದಿಂದ ಅವಳ ತಲೆ ನಡುಗುತ್ತಿತ್ತು. ತುಟಿಗಳು ಅದುರಿದುವು.

೨೧. ಪಾರ್ವತಿ ಹೇಳಿದಳು.—ಗುಣವಂತರಾದ ಮಿಕ್ಕಜನರನ್ನೆಲ್ಲ ತಪ್ಪು ಹೊರಿಸಿ ನಿಂದಿಸಬೇಡ. ದುಷ್ಟರ ಸಂಪರ್ಕದಿಂದ ನಿನ್ನಲ್ಲಿ ಸಹ ಎಲ್ಲ ದೋಷಗಳೂ ಬಂದಿವೆ.

ವ್ಯಾಲೇಭ್ಯೋಽಧಿಕಜಿಹ್ಮತ್ವಂ ಭಸ್ಮನಾ ಸ್ನೇಹಬಂಧನಂ ।
ಹೃತ್ಕಾಲುಷ್ಯಂ ಶಶಾಂಕಾತ್ತು ದುರ್ಬೋಧತ್ವಂ ವೃಷಾದಪಿ ॥೨೨॥

ತಥಾ ಬಹು ಕಿಮುಕ್ತೇನ ಅಲಂ ವಾಚಾ ಶ್ರಮೇಣ ತೇ ।
ಶ್ಮಶಾನವಾಸಿನ್ನಿರ್ಭೀಸ್ತ್ವಂ ನಗ್ನತ್ವಾನ್ನ ತವ ತ್ರಪಾ ॥೨೩॥

ನಿರ್ಘೃಣಸ್ತ್ವಂ ಕಪಾಲಿತ್ವಾದ್ದಯಾ ತೇ ವಿಗತಾ ಚಿರಂ ।
ಇತ್ಯುಕ್ತ್ವಾ ಮಂದಿರಾತ್ತಸ್ಮಾನ್ನಿರ್ಜಗಾಮ ಹಿಮಾದ್ರಿಜಾ ॥೨೪॥

ತಸ್ಯಾಂ ವ್ರಜಂತ್ಯಾಂ ದೇವೇಶಗಣೈಃ ಕಿಲಕಿಲೋ ಧ್ವನಿಃ ।
ಕ್ವ ಮಾತರ್ಗಚ್ಛಸಿ ತ್ಯಕ್ತ್ವಾ ರುದಂತೋ ಧಾವಿತಾಃ ಪುನಃ ॥೨೫॥

ವಿಷ್ಟಭ್ಯ ಚರಣೌ ದೇವ್ಯಾ ವೀರಕೋ ಬಾಷ್ಪಗದ್ಗದಂ ।
ಪ್ರೋವಾಚ ಮಾತಃ ಕಿಂ ತ್ವೇತತ್ಕ್ವ ಯಾಸಿ ಕುಪಿತಾಂತರಾ ॥೨೬॥

---

೨೨. ಸರ್ಪಗಳಿಂದ ಅಧಿಕವಾದ ವಕ್ರತ್ವವೂ, ಭಸ್ಮದಿಂದ ಸ್ನೇಹಬಂಧನವೂ, ಚಂದ್ರನಿಂದ ಮನಸ್ಸಿನ ಕುಲುಷತೆಯೂ, ವೃಷಭದಿಂದ ಅರಿಯಲಸಾಧ್ಯವಾದ ಸ್ವಭಾವವೂ ನಿನಗೆ ಬಂದಿವೆ.

೨೩. ಹೀಗೆಯೇ ಇನ್ನೂ ಎಷ್ಟೋ ಇದೆ. ಹೇಳಿ ಪ್ರಯೋಜನವೇನು? ಇನ್ನು ಮಾತು ಸಾಕು. ನಿನಗೇಕೆ ಶ್ರಮ? ಓ ಶ್ಮಶಾನವಾಸೀ, ನಿನಗೆ ಹೆದರಿಕೆಯಿಲ್ಲ. ದಿಗಂಬರನಾದುದರಿಂದ ನಾಚಿಕೆಯೂ ಇಲ್ಲ.

೨೪. ನೀನು ಕಪಾಲವನ್ನು ಕೈಯಲ್ಲಿ ಹಿಡಿದುಕೊಂಡಿರುವೆ. ಆದುದರಿಂದ ನೀನು ನಿರ್ಘೃಣ. ನಿನ್ನಿಂದ ದಯೆ ಹೊರಟುಹೋಗಿ ಎಷ್ಟೋ ಕಾಲವಾಯಿತು." ಹೀಗೆ ಹೇಳಿ ಪಾರ್ವತಿಯು ಆ ಮನೆಯಿಂದ ಹೊರಹೊರಟಳು.

೨೫. ಆಕೆಯು ಹೋಗುತ್ತಿರಲು ಮಹಾದೇವನ ಗಣಗಳು ಕಿಲಕಿಲ ಧ್ವನಿ ಮಾಡಿದರು. "ಅಮ್ಮಾ, ನಮ್ಮನ್ನು ಬಿಟ್ಟು ಎಲ್ಲಿ ಹೋಗುವೆ?" ಎಂದು ಅವರು ಅಳುತ್ತಾ ಓಡಿ ಬಂದರು.

೨೬. ವೀರಕನು ದೇವಿಯ ಪಾದಗಳನ್ನು ಹಿಡಿದುಕೊಂಡು ಕಣ್ಣೀರು ಸುರಿಸುತ್ತ ಗದ್ಗದ ಸ್ವರದಿಂದ ಹೇಳಿದನು. "ಅಮ್ಮಾ, ಇದೇನು? ಮನಸ್ಸಿನಲ್ಲಿ ಕೋಪ ಮಾಡಿಕೊಂಡು ಎಲ್ಲಿ ಹೋಗುವೆ?

**ಅಹಂ ತ್ವಾಮನುಯಾಸ್ಯಾಮಿ ವ್ರಜಂತೀಂ ಸ್ನೇಹವರ್ಜಿತಾಂ ।**
**ನೋಚೇತ್ಪತಿಷ್ಯೇ ಶಿಖರಾತ್ತಪೋನಿಷ್ಠೇ ತ್ವಯೋಜ್ಝಿತಃ ॥೨೭॥**

**ಉನ್ನಾಮ್ಯ ವದನಂ ದೇವೀ ದಕ್ಷಿಣೇನ ತು ಪಾಣಿನಾ ।**
**ಉವಾಚ ವೀರಕಂ ಮಾತಾ ಶೋಕಂ ಪುತ್ರಕ ಮಾ ಕೃಥಾಃ ॥೨೮॥**

**ಶೈಲಾಗ್ರಾತ್ಪತಿತುಂ ನೈವ ನ ಚಾಗಂತುಂ ಮಯಾ ಸಹ ।**
**ಯುಕ್ತಂ ತೇ ಪುತ್ರ ವಕ್ಷ್ಯಾಮಿ ಯೇನ ಕಾರ್ಯೇಣ ತಚ್ಛೃಣು ॥೨೯॥**

**ಕೃಷ್ಣೇತ್ಯುಕ್ತ್ವಾ ಹರೇಣಾಹಂ ನಿಂದಿತಾ ಚಾಪ್ಯನಿಂದಿತಾ ।**
**ಸಾಹಂ ತಪಃ ಕರಿಷ್ಯಾಮಿ ಯೇನ ಗೌರೀತ್ವಮಾಪ್ನುಯಾಂ ॥೩೦॥**

**ಏಷ ಸ್ತ್ರೀಲಂಪಟೋ ದೇವೋ ಯಾತಾಯಾಂ ಮಯ್ಯನಂತರಂ ।**
**ದ್ವಾರರಕ್ಷಾ ತ್ವಯಾ ಕಾರ್ಯಾ ನಿತ್ಯಂ ರಂಧ್ರಾನ್ವೇಕ್ಷಿಣಾ ॥೩೧॥**

---

೨೭. ನನ್ನ ಮೇಲೆ ಪ್ರೀತಿಯನ್ನು ಬಿಟ್ಟು ಈಗ ನೀನು ಹೋಗುತ್ತಿರುವೆ. ನಾನೂ ನಿನ್ನೊಡನೆ ಬರುವೆನು. ನೀನು ತಪಸ್ಸಿನಲ್ಲೇ ಮನಸ್ಸಿಟ್ಟು ನನ್ನನ್ನು ತೊರೆಯುವೆಯಾದರೆ ಶಿಖರಾಗ್ರದಿಂದ ಬಿದ್ದು ಪ್ರಾಣಬಿಡುವೆನು.''

೨೮. ಪಾರ್ವತಿಯು ತನ್ನ ಬಲಗೈಯಿಂದ ವೀರಕನ ಮುಖವನ್ನೆತ್ತಿ ಇಂತು ಹೇಳಿದಳು. “ ಅಪ್ಪಾ ಮಗೂ, ದುಃಖಿಸಬೇಡ.

೨೯. ಬೆಟ್ಟದ ತುದಿಯಿಂದ ಬೀಳುವುದಾಗಲಿ ನನ್ನೊಡನೆ ಬರುವುದಾಗಲಿ ನಿನಗೆ ಯುಕ್ತವಲ್ಲ. ಪುತ್ರಾ, ಏಕೆಂದರೆ ಹೇಳುವೆನು ಕೇಳು.

೩೦. ಈಶ್ವರನು ನನ್ನನ್ನು ಕರಿಯ ಬಣ್ಣದವಳೆಂದು ಹಾಸ್ಯಮಾಡಿದನು. ನನ್ನಲ್ಲಿ ದೋಷವಾವುದೂ ಇಲ್ಲದಿದ್ದಾಗ್ಯೂ ನನ್ನನ್ನು ನಿಂದಿಸಿದನು. ಆದುದರಿಂದ ನಾನು ತಪಸ್ಸುಮಾಡಿ, ಗೌರಿ ಎಂದರೆ ಶುಭ್ರವರ್ಣದವಳು ಎನಿಸಿಕೊಳ್ಳುವೆನು.

೩೧. ಈ ಮಹಾದೇವನು ಸ್ತ್ರೀಲಂಪಟನು. ನಾನು ಹೋದಬಳಿಕ ನೀನು ಬಾಗಿಲನ್ನು ಕಾಯುತ್ತಿರುವಾಗಲೂ ಇಲ್ಲಿ ಒದಗಬಹುದಾದ ಲೋಪದೋಷಗಳನ್ನು ಗಮನಿಸು.

ಯಥಾ ನ ಕಾಚಿತ್ಪ್ರವಿಶೇದ್ಯೋಷಿದತ್ರ ಹರಾಂತಿಕಂ ।
ದೃಷ್ಟ್ವಾ ಪರಾಂ ಸ್ತ್ರಿಯಂ ಚಾತ್ರ ವದೇಥಾ ಮಮ ಪುತ್ರಕ ॥೩೨॥
ಶೀಘ್ರಮೇವ ಕರಿಷ್ಯಾಮಿ ಯಥಾ ಯುಕ್ತಮನಂತರಂ ।
ಏವಮಸ್ತ್ವಿತಿ ದೇವೀಂ ಸ ವೀರಕಃ ಪ್ರಾಹ ಸಾಂಪ್ರತಂ ॥೩೩॥
ಮಾತುರಾಜ್ಞಾಮೃತಾಹ್ಲಾದಪ್ಲಾವಿತಾಂಗೋ ಗತಜ್ವರಃ ।
ಜಗಾಮ ಕಕ್ಷ್ಯಾಂ ಸಂದ್ರಷ್ಟುಂ ಪ್ರಣಿಪತ್ಯ ಚ ಮಾತರಂ ॥೩೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕುಮಾರಸಂಭವೇ
ದೇವ್ಯಾಸ್ತಪೋನುಗಮನಂ ನಾಮ
ಪಂಚಪಂಚಾಶದಧಿಕಶತತಮೋಽಧ್ಯಾಯಃ

---

೩೨. ಮಹಾದೇವನ ಬಳಿಗೆ ಯಾವ ಹೆಂಗಸೂ ಸುಳಿಯದಂತೆ ನೋಡಿಕೋ. ಎಲೈ ಮಗೂ, ಪರಸ್ತ್ರೀಯನ್ನು ಇಲ್ಲಿ ಕಂಡರೆ ಕೂಡಲೇ ವಧಿಸು.

೩೩. ಆ ಮೇಲೆ ತಡಮಾಡದೆ ತಕ್ಕುದನ್ನು ಮಾಡುವೆನು'' ಎಂದು ಪಾರ್ವತಿ ಹೇಳಲು, "ಹಾಗೆಯೇ ಆಗಲಿ'' ಎಂದು ವೀರಕನು ಅವಳಿಗೆ ಉತ್ತರ ವಿತ್ತನು.

೩೪. ತಾಯಿಯ ಅಪ್ಪಣೆಯೆಂಬ ಅಮೃತರಸದಲ್ಲಿ ಮುಳುಗಿ ವೀರಕನು ನಿಶ್ಚಿಂತನಾಗಿ, ಅವಳಿಗೆ ನಮಸ್ಕಾರಮಾಡಿ ತನ್ನ ಕೆಲಸವನ್ನು ನೋಡುವುದಕ್ಕಾಗಿ ಒಳತೊಟ್ಟಿಗೆ ಹೋದನು.

## ಅಧ್ಯಾಯದ ಸಾರಾಂಶ

ಪಾರ್ವತಿಯು ಪರಮೇಶ್ವರನನ್ನು ಬಿಟ್ಟು ತಪಸ್ಸಿಗೆ ತೆರಳಿದ ವೃತ್ತಾಂತವು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.

ಒಂದು ದಿನ ಪರಮೇಶ್ವರನು ಪಾರ್ವತಿಯನ್ನು ನೋಡಿ, "ನಿನ್ನ ಬಣ್ಣ ಕಪ್ಪು; ನಿನ್ನನ್ನು ನೋಡಿದರೆ ನನ್ನ ಕಣ್ಣಿಗೆ ಬೇಸರ ಹುಟ್ಟುತ್ತದೆ'' ಎಂದು ವಿನೋದಕ್ಕಾಗಿ ಹಾಸ್ಯಮಾಡಿದನು. ಅವಳಿಗೆ ಕೋಪ ಬಂದಿತು. ಪತಿಯಲ್ಲಿಯೂ ಕೆಲವು ದೋಷಗಳನ್ನು ಎತ್ತಿ ಹೇಳಿ "ತಪಸ್ಸನ್ನು ಮಾಡಿ ನಾನು ಗೌರಿ (ಶುಭ್ರವರ್ಣ

ದವಳು) ಆಗುತ್ತೇನೆ." ಎಂದು ಹೇಳಿ ನಿಲ್ಲದೆ ಹೊರಟಳು. ಪರಮೇಶ್ವರನು ವಾಸ್ತವಾಂಶವನ್ನು ಹೇಳಿ ಎಷ್ಟು ಸಂತೈಸಿದರೂ ಅವಳು ಕೇಳಲಿಲ್ಲ. ಇಬ್ಬರಿಗೂ ಮಾತು ಬೆಳೆಯಿತು. ಪರಸ್ಪರ ದೋಷೋದ್ಘಾಟನೆಗಳು ನಡೆದುವು. ಕೊನೆಗೂ ಅವಳು ಹೊರಟೇ ಬಿಟ್ಟಳು.

ಪಾರ್ವತಿಯ ಸಾಕುಮಗನಾದ ವೀರಕನು ಅವಳನ್ನು ಅಡ್ಡಿಪಡಿಸಿ ತನ್ನನ್ನೂ ಸಂಗಡ ಕರೆದುಕೊಂಡು ಹೋಗುವಂತೆ ಬಲಾತ್ಕರಿಸಿದನು. ಆಕೆಯು ಅವನನ್ನು ಸಮಾಧಾನಪಡಿಸಿ ಈಶ್ವರನ ಮನೆಯ ಬಾಗಿಲನ್ನು ಎಚ್ಚರಿಕೆಯಿಂದ ಕಾಯಬೇಕೆಂದೂ, ಅಲ್ಲಿಗೆ ಯಾವ ಹೆಂಗಸೂ ಸುಳಿಯದಂತೆ ನೋಡಿಕೊಳ್ಳಬೇಕೆಂದೂ, ಹಾಗೆ ಯಾರಾದರೂ ಬಂದರೆ ಕೂಡಲೆ ಅವರನ್ನು ವಧಿಸಬೇಕೆಂದೂ ಕಟ್ಟಪ್ಪಣೆ ಮಾಡಿದಳು. ವೀರಕನು ಅದಕ್ಕೆ ಸಮ್ಮತಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕುಮಾರಸಂಭವ ಪ್ರಕರಣದೊಳಗೆ
ಪಾರ್ವತಿಯ ತಪೋವನ ಗಮನವೆಂಬ ನೂರೈವತ್ತೈದನೆಯ
ಅಧ್ಯಾಯವು ಮುಗಿದುದು.

## ಅಥ ಷಟ್ತ್ರಿಂಶಾಶದಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ದೇವೀಂ ಸಾಪಶ್ಯದಾಯಾಂತೀಂ ಸಖೀಂ ಮಾತುರ್ವಿಭೂಷಿತಾಂ ।
ಕುಸುಮಾಮೋದಿನೀಂ ನಾಮ ತಸ್ಯ ಶೈಲಸ್ಯ ದೇವತಾಂ || ೧ ||

ಸಾಪಿ ದೃಷ್ಟ್ವಾ ಗಿರಿಸುತಾಂ ಸ್ನೇಹವಿಕ್ಲವಮಾನಸಾ ।
ಕ್ವ ಪುತ್ರಿ ಗಚ್ಛಸೀತ್ಯುಚ್ಚೈರಾಲಿಂಗ್ಯೋವಾಚ ದೇವತಾ || ೨ ||

ಸಾ ಚಾಸ್ಯೈ ಸರ್ವಮಾಚಖ್ಯೌ ಶಂಕರಾತ್ಕೋಪಕಾರಣಂ ।
ಪುನಶ್ಚೋವಾಚ ಗಿರಿಜಾ ದೇವತಾಂ ಮಾತೃಸಮ್ಮತಾಂ || ೩ ||

|| ಉಮೋವಾಚ ||

ನಿತ್ಯಂ ಶೈಲಾಧಿರಾಜಸ್ಯ ದೇವತಾ ತ್ವಮನಿಂದಿತೇ ।
ಸರ್ವತಃ ಸನ್ನಿಧಾನಂ ತೇ ಮಮ ಚಾತೀವ ವತ್ಸಲಾ || ೪ ||

---

೧. ಸೂತಪೌರಾಣಿಕನು ಹೇಳಿದನು.—ಪಾರ್ವತಿಯು ಅಲಂಕೃತಳಾಗಿ ಬರುತ್ತಿರುವ ದೇವಿಯೊಬ್ಬಳನ್ನು ನೋಡಿದಳು. ಅವಳು ತನ್ನ ತಾಯಿಯ ಗೆಳತಿಯಾದ ಕುಸುಮಾಮೋದಿನಿ; ಆ ಬೆಟ್ಟದ ಅಧಿದೇವತೆ.

೨. ಅವಳೂ ಸಹ ಪಾರ್ವತಿಯನ್ನು ನೋಡಿದಳು. ಸ್ನೇಹದಿಂದ ಮನಸ್ಸು ವ್ಯಾಕುಲಗೊಂಡಿತು. ಪ್ರೀತಿಯಿಂದ ಆಲಿಂಗನಮಾಡಿ 'ಮಗಳೇ! ಎಲ್ಲಿ ಹೋಗುತ್ತಿರುವೆ'? ಎಂದು ಗಟ್ಟಿಯಾಗಿ ಕೇಳಿದಳು.

೩. ಪಾರ್ವತಿಯು ಶಂಕರನ ಮೇಲೆ ತನಗೆ ಕೋಪಬಂದ ವಿಚಾರವೆಲ್ಲವನ್ನೂ ತಾಯಿಗೆ ಸಮಾನಳಾದ ಅವಳಿಗೆ ವಿವರಿಸಿ ಮತ್ತೆ ಹೇಳಿದಳು.

೪. ಪಾರ್ವತಿ ಹೇಳಿದಳು.—ದೋಷರಹಿತಳಾದ ಓ ದೇವೀ! ನೀನು ಪರ್ವತರಾಜನ ಅಧಿದೇವತೆ. ನಿನ್ನ ಸಾನ್ನಿಧ್ಯವು ಎಲ್ಲೆಡೆಗಳಲ್ಲೂ ಇರುವುದು. ನನ್ನ ಮೇಲೆ ನಿನಗೆ ಬಹಳ ಪ್ರೀತಿಯುಂಟು.

ಅತಸ್ತು ತೇ ಪ್ರವಕ್ಷ್ಯಾಮಿ ಯದ್ವಿಧೇಯಂ ತ್ವಯಾ ಧಿಯಾ ।
ಅನ್ಯಸ್ತ್ರೀಸಂಪ್ರವೇಶಸ್ತು ತ್ವಯಾ ರಕ್ಷ್ಯಃ ಪ್ರಯತ್ನತಃ ॥ ೫ ॥

ರಹಸ್ಯತ್ರ ಪ್ರಯತ್ನೇನ ಚೇತಸಾ ಸತತಂ ಗಿರೌ ।
ಪಿನಾಕಿನಃ ಪ್ರವಿಷ್ಟಾಯಾಂ ವಕ್ತವ್ಯಂ ಮೇ ತ್ವಯಾನಘೇ ॥ ೬ ॥

ತತೋऽಹಂ ಸಂವಿಧಾಸ್ಯಾಮಿ ಯತ್ಕೃತ್ಯಂ ತದನಂತರಂ ।
ಇತ್ಯುಕ್ತಾ ಸಾ ತಥೇತ್ಯುಕ್ತ್ವಾ ಜಗಾಮ ಸ್ವಗಿರಿಂ ಶುಭಂ ॥ ೭ ॥

ಉಮಾಪಿ ಪಿತುರುದ್ಯಾನಂ ಜಗಾಮಾದ್ರಿಸುತಾ ದ್ರುತಂ ।
ಅಂತರಿಕ್ಷಂ ಸಮಾವಿಶ್ಯ ಮೇಘಮಾಲಾಮಿವ ಪ್ರಭಾ ॥ ೮ ॥

ತತೋ ವಿಭೂಷಣಾನ್ಯಸ್ಯ ವೃಕ್ಷವಲ್ಕಲಧಾರಿಣೀ ।
ಗ್ರೀಷ್ಮೇ ಪಂಚಾಗ್ನಿಸಂತಪ್ತಾ ವರ್ಷಾಸು ಚ ಜಲೋಷಿತಾ ॥ ೯ ॥

---

೫. ಆದುದರಿಂದ ನಿನ್ನ ಬುದ್ಧಿಶಕ್ತಿಯಿಂದ ಮಾಡಬೇಕಾದ ಒಂದು ಕಾರ್ಯವನ್ನು ನಿನಗೆ ಹೇಳುವೆನು. ಪರಸ್ತ್ರೀಪ್ರವೇಶವು ಇಲ್ಲಿ ಆಗದಂತೆ ನೀನು ಪ್ರಯತ್ನದಿಂದ ನೋಡಿಕೊಳ್ಳಬೇಕು.

೬. ಎಲೌ ನಿರ್ಮಲಳೇ, ನೀನು ಯಾವಾಗಲೂ ಮನಸ್ಸಿಟ್ಟು ಪ್ರಯತ್ನದಿಂದ ಇಲ್ಲಿ ರಹಸ್ಯವಾಗಿ ನೋಡುತ್ತಿರು. ಈಶ್ವರನ ಬಳಿಗೆ ಯಾವ ಸ್ತ್ರೀಯಾದರೂ ಹೋದರೆ ನನಗೆ ಹೇಳು.

೭. ಮುಂದಿನ ಕಾರ್ಯವನ್ನು ನಾನು ನೋಡಿಕೊಳ್ಳುತ್ತೇನೆ." ಎಂದು ಪಾರ್ವತಿಯು ಹೇಳಲು ಆ ದೇವತೆಯು ಹಾಗೆಯೇ ಆಗಲೆಂದು ಒಪ್ಪಿ ಮಂಗಲ ಮಯವಾದ ತನ್ನ ಪರ್ವತಕ್ಕೆ ಹೋದಳು.

೮. ಕಾಂತಿಯು ಅಂತರಿಕ್ಷದಲ್ಲಿ ಮೇಘಮಾಲೆಯನ್ನು ಸೇರುವಂತೆ ಪಾರ್ವತಿಯು ತನ್ನ ತಂದೆಯ ಉದ್ಯಾನಕ್ಕೆ ಬೇಗನೆ ಹೋದಳು.

೯-೧೦. ಬಳಿಕ ಒಡವೆಗಳನ್ನು ತೆಗೆದುಹಾಕಿ ಮರದ ತೊಗಟೆಗಳನ್ನುಟ್ಟಳು. ಬೇಸಗೆಯಲ್ಲಿ ಪಂಚಾಗ್ನಿಮಧ್ಯದಲ್ಲಿ ತಪಸ್ಸನ್ನು ಮಾಡಿದಳು. ಮಳೆಗಾಲದಲ್ಲಿ ನೀರಿನಲ್ಲಿ ನಿಂತು ವ್ರತವನ್ನು ನೆರವೇರಿಸಿದಳು. ಕಾಡಿನ ಹಣ್ಣುಕಾಯಿಗಳೇ ಮೊದಲು

ವನ್ಯಾಹಾರಾ ನಿರಾಹಾರಾ ಶುಷ್ಕಾ ಸ್ಥಂಡಿಲಶಾಯಿನೀ ।
ಏವಂ ಸಾಧಯತೀ ತತ್ರ ತಪಸಾ ಸಂವ್ಯವಸ್ಥಿತಾ ॥೧೦॥

ಜ್ಞಾತ್ವಾ ತು ತಾಂ ಗಿರಿಸುತಾಂ ದೈತ್ಯಸ್ತತ್ರಾಂತರೇ ವಶೀ ।
ಅಂಧಕಸ್ಯ ಸುತೋ ದೃಪ್ತಃ ಪಿತುರ್ವಧಮನುಸ್ಮರನ್ ॥೧೧॥

ದೇವಾನ್ ಸರ್ವಾನ್ ವಿಜಿತ್ವಾಽಜೌ ಬಕಭ್ರಾತಾ ರಣೋತ್ಕಟಃ ।
ಆಡಿರ್ನಾಮಾಂತರಪ್ರೇಕ್ಷೀ ಸತತಂ ಚಂದ್ರಮೌಲಿನಃ ॥೧೨॥

ಆಜಗಾಮಾಮರರಿಪುಃ ಪುರಂ ತ್ರಿಪುರಘಾತಿನಃ ।
ಸ ತತ್ರಾಗತ್ಯ ದದೃಶೇ ವೀರಕಂ ದ್ವಾರ್ಯವಸ್ಥಿತಂ ॥೧೩॥

ವಿಚಿಂತ್ಯಾಸೀದ್ವರಂ ದತ್ತಂ ಸ ಪುರಾ ಪದ್ಮಜನ್ಮನಾ ।
ಹತೇ ತದಾಂಧಕೇ ದೈತ್ಯೇ ಗಿರಿಶೇನಾಮರದ್ವಿಷಿ ॥೧೪॥

ಆಡಿಶ್ಚಕಾರ ವಿಪುಲಂ ತಪಃ ಪರಮದಾರುಣಂ ।
ತಮಾಗತ್ಯಾಬ್ರವೀದ್ಬ್ರಹ್ಮಾ ತಪಸಾ ಪರಿತೋಷಿತಃ ॥೧೫॥

---

ಮೊದಲು ಅವಳಿಗೆ ಆಹಾರವಾಗಿದ್ದುವು. ಬಳಿಕ ಅವನ್ನು ಬಿಟ್ಟು ಉಪವಾಸಮಾಡಿದಳು. ಅವಳ ಮೈ ಬತ್ತಿತು. ಬರಿಯ ನೆಲದ ಮೇಲೆಯೇ ಅವಳು ಮಲಗುತ್ತಿದ್ದಳು. ಹೀಗೆ ಅವಳು ಸಾಧನಮಾಡುತ್ತ ತಪಸ್ಸಿನಲ್ಲಿದ್ದಳು.

೧೧-೧೩. ಪಾರ್ವತಿಯು ಹೊರಟುಹೋದುದನ್ನರಿತು ಆಡಿಯೆಂಬ ದೈತ್ಯನು ತ್ರಿಪುರಾಂತಕನಾದ ಮಹಾದೇವನ ಪಟ್ಟಣಕ್ಕೆ ಬಂದನು. ಅವನು ಅಂಧಕಾಸುರನ ಮಗ, ಬಕಾಸುರನ ಸಹೋದರ, ಬಹು ಬಲಶಾಲಿ, ಯುದ್ಧವೀರ, ದೇವತೆಗಳೆಲ್ಲರನ್ನೂ ಯುದ್ಧದಲ್ಲಿ ಜಯಿಸಿದವನು. ತನ್ನ ತಂದೆಯ ವಧವನ್ನು ಮನಸ್ಸಿನಲ್ಲಿಟ್ಟುಕೊಂಡು ಸಮಯವನ್ನು ಕಾಯುತ್ತಿದ್ದನು. ಅವನು ಅಲ್ಲಿ ಬಂದು ಬಾಗಿಲಲ್ಲಿ ವೀರಕನಿದ್ದುದನ್ನು ಕಂಡನು.

೧೪-೧೫. ಬ್ರಹ್ಮನು ಹಿಂದೆ ತನಗೆ ಕೊಟ್ಟಿದ್ದ ವರವನ್ನು ಅವನು ಯೋಚಿಸಿದನು. ಅದರ ವಿವರವಿದು:—ಅಂಧಕಾಸುರನು ಈಶ್ವರನಿಂದ ಹತನಾದಾಗ ಆಡಿಯು ಬಹು ಘೋರವಾದ ತಪಸ್ಸನ್ನು ದೀರ್ಘಕಾಲ ಮಾಡಿದನು. ಅದರಿಂದ ಬ್ರಹ್ಮನು ಸಂತುಷ್ಟನಾಗಿ ಅವನ ಬಳಿಗೆ ಬಂದು ಹೇಳಿದನು.

ಕಿಮಾಡೇ ದಾನವಶ್ರೇಷ್ಠ ತಪಸಾ ಪ್ರಾಪ್ತುಮಿಚ್ಛಸಿ ।
ಬ್ರಹ್ಮಾಣಮಾಹ ದೈತ್ಯಸ್ತು ನಿವೃತ್ಯುತ್ವಮಹಂ ವೃಣೇ ॥೧೬॥

॥ ಬ್ರಹ್ಮೋವಾಚ ॥

ನ ಕಶ್ಚಿಚ್ಚ ವಿನಾ ಮೃತ್ಯುಂ ನರೋ ದಾನವ ವಿದ್ಯತೇ ।
ಯತಸ್ತತೋಽಪಿ ದೈತ್ಯೇಂದ್ರ ಮೃತ್ಯುಃ ಪ್ರಾಪ್ಯಃ ಶರೀರಿಣಾ ॥೧೭॥

ಇತ್ಯುಕ್ತೋ ದೈತ್ಯಸಿಂಹಸ್ತು ಪ್ರೋವಾಚಾಂಬುಜಸಂಭವಂ ।
ರೂಪಸ್ಯ ಪರಿವರ್ತೋ ಮೇ ಯದಾ ಸ್ಯಾತ್ಪದ್ಮಸಂಭವ ॥೧೮॥

ತದಾ ಮೃತ್ಯುರ್ಮಮ ಭವೇದನ್ಯಥಾ ತ್ವಮರೋ ಹ್ಯಹಂ ।
ಇತ್ಯುಕ್ತಸ್ತು ತದೋವಾಚ ತುಷ್ಟಃ ಕಮಲಸಂಭವಃ ॥೧೯॥

ಯದಾ ದ್ವಿತೀಯೋ ರೂಪಸ್ಯ ವಿವರ್ತಸ್ತೇ ಭವಿಷ್ಯತಿ ।
ತದಾ ತೇ ಭವಿತಾ ಮೃತ್ಯುರನ್ಯಥಾ ನ ಭವಿಷ್ಯತಿ ॥೨೦॥

---

೧೬. “ದಾನವೋತ್ತಮನಾದ ಓ ಆಡೀ, ತಪಸ್ಸಿನಿಂದ ನಿನಗೆ ಬೇಕಾಗಿರುವುದೇನು?” ಎಂದು ಕೇಳಲು “ಸಾವು ಎಂದಿಗೂ ಬರಬಾರದು. ಇದೇ ನಾನು ಕೇಳವ ವರ ಎಂದು ದೈತ್ಯನು ಬ್ರಹ್ಮನಿಗೆ ಉತ್ತರ ಕೊಟ್ಟನು.

೧೭. ಬ್ರಹ್ಮದೇವನು ಹೇಳಿದನು.—ಎಲೈ ದಾನವಾ, ಸಾವಿಲ್ಲದ ಮನುಷ್ಯನು ಯಾರೂ ಇಲ್ಲ. ದೈತ್ಯೇಂದ್ರಾ, ಶರೀರವೆತ್ತಿದವನಿಗೆ ಯಾವುದಾದರೊಂದು ವಿಧದಿಂದ ಮೃತ್ಯು ಬಂದೇ ಬರಬೇಕು.

೧೮. ಬ್ರಹ್ಮನು ಹೀಗೆ ಹೇಳಲು ದೈತ್ಯಶ್ರೇಷ್ಠನಾದ ಆಡಿ ಅವನಿಗಿಂತೆಂದನು. “ಬ್ರಹ್ಮದೇವಾ! ನನ್ನ ರೂಪದಲ್ಲಿ ವ್ಯತ್ಯಾಸವು ಯಾವಾಗ ಆಗುವುದೋ ಆಗ ನನಗೆ ಮೃತ್ಯುವೊದಗಲಿ. ಹಾಗಾಗದಿದ್ದಾಗ ನಾನು ಮರಣವಿಲ್ಲದವನೇ ಸರಿ”.

೧೯-೨೦. ಆಡಿ ಹೀಗೆ ಹೇಳಲು ಬ್ರಹ್ಮನಿಗೆ ಸಂತೋಷವಾಯಿತು. ಅವನು ಹೇಳಿದನು. “ನಿನ್ನ ಈ ರೂಪವು ಹೋಗಿ ಬೇರೆ ರೂಪವು ಬಂದಾಗ ನಿನಗೆ ಮರಣವಾಗುವುದು ಇಲ್ಲದಿದ್ದರೆ ಇಲ್ಲ.”

ಇತ್ಯುಕ್ತೋಽಮರತಾಂ ಮೇನೇ ದೈತ್ಯಸೂನುರ್ಮಹಾಬಲಃ ।
ತಸ್ಮಿನ್ ಕಾಲೇ ತು ಸಂಸ್ಮೃತ್ಯ ತದ್ವಧೋಪಾಯಮಾತ್ಮನಃ ॥೨೧॥

ಪರಿಹೃತ್ಯ ರ್ಮಾಂ ದೃಷ್ಟಿಪಥಂ ವೀರಕಸ್ಯಾಭವತ್ತದಾ ।
ಭುಜಂಗರೂಪೀ ರಂಧ್ರೇಣ ಪ್ರವಿವೇಶ ಪೃಥಕ್ಪಥಂ ॥೨೨॥

ಪರಿಹೃತ್ಯ ಗಣೇಶಸ್ಯ ದಾನವೋಽಸೌ ಸುದುರ್ಜಯಃ ।
ಅಲಕ್ಷಿತೋ ಗಣೇಶೇನ ಪ್ರವಿಷ್ಟೋಽಥ ಪುರಾಂತಕಂ ॥೨೩॥

ಭುಜಂಗರೂಪಂ ಸಂತ್ಯಜ್ಯ ಬಭೂವಾಥ ಮಹಾಸುರಃ ।
ಉಮಾರೂಪೀ ಛಲಯಿತುಂ ಗಿರಿಶಂ ಮೂಢಚೇತನಃ ॥೨೪॥

ಕೃತ್ವಾ ಮಾಯಾಂ ತತೋ ರೂಪಮಪ್ರತರ್ಕ್ಯಮನೋಹರಂ ।
ಸರ್ವಾವಯವಸಂಪೂರ್ಣಂ ಸರ್ವಾಭಿಜ್ಞಾನಸಂವೃತಂ ॥೨೫॥

---

೨೧-೨೨. ಬ್ರಹ್ಮನು ಹೀಗೆ ಹೇಳಲು ಮಹಾಬಲನೂ ಅಂಧಕಪುತ್ರನೂ ಆದ ಆಡಿ ತನಗೆ ಮರಣವೇ ಇಲ್ಲವೆಂದರಿತನು. ಆ ಸಮಯದಲ್ಲಿ ಈಶ್ವರನನ್ನು ಸಂಹಾರಮಾಡುವ ಉಪಾಯವು ಅವನ ನೆನಪಿಗೆ ಬಂದಿತು. ವೀರಕನ ಕಣ್ಣಿಗೆ ತಾನು ಬೀಳದಿರುವುದಕ್ಕಾಗಿ ಸರ್ಪದ ರೂಪವನ್ನು ತಾಳಿ ಬಿಲದ ಮಾರ್ಗದಿಂದ ಬೇರೆದಾರಿ ಹಿಡಿದು ಒಳಹೊಕ್ಕನು.

೨೩. ಶತ್ರುಗಳಿಗೆ ಜಯಿಸಲಸಾಧ್ಯನಾದ ಈ ದಾನವನು ರಾಜಮಾರ್ಗವನ್ನು ಬಿಟ್ಟು ವೀರಕನ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಂಡು ಈಶ್ವರನ ವಾಸಸ್ಥಳವನ್ನು ಸೇರಿದನು.

೨೪. ಮಂದಬುದ್ಧಿಯುಳ್ಳ ಆ ಮಹಾಸುರನು ಸರ್ಪದ ರೂಪವನ್ನು ಬಿಟ್ಟು ಈಶ್ವರನನ್ನು ಮೋಸಗೊಳಿಸಬೇಕೆಂದು ಪಾರ್ವತಿಯ ರೂಪವನ್ನು ತಾಳಿದನು.

೨೫-೨೬. ಅವನು ಮಾಯಾರೂಪವನ್ನು ಧರಿಸಿದನು. ಅದು ಊಹಿಸುವುದಕ್ಕೆ ಆಗದಷ್ಟು ಮನೋಹರವಾಗಿತ್ತು. ಸಕಲ ಅವಯವಗಳೂ ಸಂಪೂರ್ಣವಾಗಿದ್ದುವು. ಪಾರ್ವತಿಯ ಎಲ್ಲ ಲಕ್ಷಣಗಳೂ ಕಂಡುಬರುತ್ತಿದ್ದುವು. ಮೋಹ

ಕೃತ್ವಾ ಮುಖಾಂತರೇ ದಂತಾನ್ ದೈತ್ಯೋ ವಜ್ರೋಪಮಾನ್ ದೃಢಾನ್ ।
ತೀಕ್ಷ್ಣಾಗ್ರಾನ್ ಬುದ್ಧಿಮೋಹೇನ ಗಿರಿಶಂ ಹಂತುಮುದ್ಯತಃ ॥೨೬॥

ಕೃತ್ವೋಮಾರೂಪಸಂಸ್ಥಾನಂ ಗತೋ ದೈತ್ಯೋ ಹರಾಂತಿಕಂ ।
ಪಾಪೋ ರಮ್ಯಾಕೃತಿಶ್ಚಿತ್ರಭೂಷಣಾಂಬರಭೂಷಿತಃ ॥೨೭॥

ತಂ ದೃಷ್ಟ್ವಾ ಗಿರಿಶಸ್ತುಷ್ಟಸ್ತದಾಽಽಲಿಂಗ್ಯ ಮಹಾಸುರಂ ।
ಮನ್ಯಮಾನೋ ಗಿರಿಸುತಾಂ ಸರ್ವೈರವಯವಾಂತರೈಃ ॥೨೮॥

ಅಪೃಚ್ಛತ್ಸಾಧು ತೇ ಭಾವೋ ಗಿರಿಪುತ್ರಿ ನ ಕೃತ್ರಿಮಃ ।
ಯಾ ತ್ವಂ ಮದಾಶಯಂ ಜ್ಞಾತ್ವಾ ಪ್ರಾಪ್ತೇಹ ವರವರ್ಣಿನಿ ॥೨೯॥

ತ್ವಯಾ ವಿರಹಿತಂ ಶೂನ್ಯಂ ಮನ್ಯಮಾನೋ ಜಗತ್ತ್ರಯಂ ।
ಪ್ರಾಪ್ತಾ ಪ್ರಸನ್ನವದನಾ ಯುಕ್ತಮೇವಂವಿಧಂ ತ್ವಯಿ ॥೩೦॥

---

ಬುದ್ಧಿಯುವನಾದ ಆ ದೈತ್ಯನು ಬಾಯಿಯ ಒಳಗಡೆ ವಜ್ರದಂತೆ ದೃಢವಾಗಿ ಬಲು ಮೊನೆಯಾದ ಹಲ್ಲುಗಳನ್ನು ನಿರ್ಮಿಸಿಕೊಂಡು ಈಶ್ವರನನ್ನು ಕೊಲ್ಲಬೇಕೆಂದು ಯತ್ನಿಸಿದನು.

೨೭. ಪಾಪಿಷ್ಠನಾದ ದೈತ್ಯನು ಸುಂದರಾಕಾರವಾದ ಪಾರ್ವತಿಯ ರೂಪವನ್ನು ತಳೆದು, ದಿವ್ಯವಸ್ತ್ರ ಭೂಷಣಗಳಿಂದ ಅಲಂಕೃತನಾಗಿ ಮಹಾದೇವನ ಸಮೀಪಕ್ಕೆ ಹೋದನು.

೨೮-೨೯. ಅವನನ್ನು ನೋಡಿ ಈಶ್ವರನಿಗೆ ಸಂತೋಷವಾಯಿತು. ಎಲ್ಲಾ ಅವಯವಗಳ ಲಕ್ಷಣಗಳಿಂದಲೂ ಪಾರ್ವತಿಯೆಂದೇ ತಿಳಿದು ಆ ಮಹಾಸುರನನ್ನು ಆಲಿಂಗಿಸಿದನು. ಮತ್ತು ಹೀಗೆ ಹೇಳಿದನು. "ಎಲೌ ಗಿರಿಜೇ, ನಿನ್ನ ಅಭಿಪ್ರಾಯವು ಒಳ್ಳೆಯದು. ನಿಷ್ಕಪಟವಾದುದು. ಏಕೆಂದರೆ ಓ ಸುಂದರೀ, ನನ್ನ ಆಶಯವನ್ನರಿತು ನನ್ನ ಬಳಿಗೆ ಮರಳಿ ಬಂದಿರುವೆ.

೩೦. ನೀನಿಲ್ಲದಿದ್ದರೆ ಮೂರು ಲೋಕವೂ ಶೂನ್ಯವೆಂದು ತಿಳಿದಿದ್ದೆನು. ಈಗ ನೀನು ಪ್ರಸನ್ನಮುಖಿಯಾಗಿ ನನ್ನಲ್ಲಿಗೆ ಬಂದಿರುವೆ. ಇದು ನಿನಗೆ ಯುಕ್ತವಾದುದು.

ಇತ್ಯುಕ್ತೋ ದಾನವೇಂದ್ರಸ್ತು ತದಾಽಭಾಷತ್ಸ್ಮಯನ್ಛನೈಃ ।
ನ ಚಾಬುದ್ಧ್ಯದಭಿಜ್ಞಾನಂ ಪ್ರಾಯಸ್ತ್ರಿಪುರಘಾತಿನಃ ॥೩೧॥

॥ ದೇವ್ಯುವಾಚ ॥

ಯಾತಾಸ್ಮ್ಯಹಂ ತಪಶ್ಚರ್ತುಂ ವಾಲ್ಲಭ್ಯಾಯ ತವಾತುಲಂ ।
ರತಿಶ್ಚ ತತ್ರ ಮೇ ನಾಭೂತ್ತತಃ ಪ್ರಾಪ್ತಾ ತವಾಂತಿಕಂ ॥೩೨॥

ಇತ್ಯುಕ್ತಃ ಶಂಕರಃ ಶಂಕಾಂ ಕಾಂಚಿತ್ಪ್ರಾಪ್ಯಾವಧಾರಯತ್ ।
ಹೃದಯೇನ ಸಮಾಧಾಯ ದೇವಃ ಪ್ರಹಸಿತಾನನಃ ॥೩೩॥

ಕುಪಿತಾ ಮಯಿ ತನ್ವಂಗೀ ಪ್ರಕೃತ್ಯಾ ಚ ದೃಢವ್ರತಾ ।
ಅಪ್ರಾಪ್ತಕಾಮಾ ಸಂಪ್ರಾಪ್ತಾ ಕಿಮೇತತ್ಸಂಶಯೋ ಮಮ ॥೩೪॥

ಇತಿ ಚಿಂತ್ಯ ಹರಸ್ತಸ್ಯ ಅಭಿಜ್ಞಾನಂ ವಿಧಾರಯನ್ ।
ನಾಪಶ್ಯದ್ವಾಮಪಾರ್ಶ್ವೇ ತು ತದಂಗೇ ಪದ್ಮಲಕ್ಷಣಂ ॥೩೫॥

---

೩೧. ಹರನು ಹೀಗೆ ಹೇಳಲು ದಾನವೇಂದ್ರನಾದ ಆಡಿಯು ಮುಗುಳುನಗೆ ನಗುತ್ತ ಉತ್ತರವಿತ್ತನು. ತ್ರಿಪುರಾಂತಕನ ದೇಹದ ಸ್ವಾಭಾವಿಕಚಿಹ್ನೆಗಳು ಬಹು ಮಟ್ಟಿಗೆ ಅವನಿಗೆ ತಿಳಿಯದಿದ್ದುವು.

೩೨. ದೇವಿಯು ಹೇಳಿದಳು.—ನಿನ್ನ ಅತಿಶಯವಾದ ಪ್ರೀತಿಯನ್ನು ಸಂಪಾದಿಸಬೇಕೆಂದು ತಪಸ್ಸು ಮಾಡುವುದಕ್ಕೆ ಹೋದೆನು. ಆದರೆ ಅದರಲ್ಲಿ ನನಗೆ ಅಭಿಲಾಷೆ ಹುಟ್ಟಲಿಲ್ಲ. ಆದುದರಿಂದ ನಿನ್ನ ಸಮೀಪಕ್ಕೆ ಮರಳಿ ಬಂದೆನು.

೩೩. ಪಾರ್ವತಿಯ ರೂಪದಲ್ಲಿದ್ದ ದೈತ್ಯನು ಹೀಗೆ ಹೇಳಲು ಶಂಕರನಿಗೆ ಸಂದೇಹ ತೋರಿತು. ಮನಸ್ಸನ್ನು ಸ್ಥಿರಪಡಿಸಿಕೊಂಡು ಮುಗುಳುನಗೆ ನಗುತ್ತ ಮಹಾದೇವನು ಇಂತು ಯೋಚಿಸಿದನು.

೩೪. "ಪಾರ್ವತಿಯು ನನ್ನ ಮೇಲೆ ಕೋಪಗೊಂಡಿದ್ದಳು. ಸ್ವಭಾವವಾಗಿ ಅವಳು ದೃಢಸಂಕಲ್ಪಳು. ತನ್ನ ಮನೋರಥವು ಈಡೇರುವುದಕ್ಕೆ ಮೊದಲೇ ಇಲ್ಲಿ ಬಂದಿದ್ದಾಳೆ. ಇದು ಹೇಗೆ ಸಾಧ್ಯ ? ನನಗೆ ಈ ವಿಚಾರದಲ್ಲಿ ಸಂದೇಹವಿದೆ."

೩೫. ಈಶ್ವರನು ಹೀಗೆ ಯೋಚಿಸಿ ಅವಳ ಶರೀರ ಲಕ್ಷಣವನ್ನು ಗಮನಿಸಿ ನೋಡಿದನು. ಎಡಭಾಗದ ಅಂಗದಲ್ಲಿ ಪದ್ಮಚಿಹ್ನವು ಕಾಣಬರಲಿಲ್ಲ.

**ಲೋಮಾವರ್ತಂ ತು ರಚಿತಂ ತತೋ ದೇವಃ ಪಿನಾಕಧೃತ್ ।**
**ಅಬುದ್ಧ್ಯದ್ದಾನವೀಂ ಮಾಯಾಮಾಕಾರಂ ಗೂಹಯಂಸ್ತತಃ ॥೩೬॥**

**ಮೇಢ್ರೇ ವಜ್ರಾಸ್ತ್ರಮಾದಾಯ ದಾನವಂ ತಮಸೂದಯತ್ ।**
**ಅಬುದ್ಧ್ಯದ್ವೀರಕೋ ನೈವ ದಾನವೇಂದ್ರಂ ನಿಷೂದಿತಂ ॥೩೭॥**

**ಹರೇಣ ಸೂದಿತಂ ದೃಷ್ಟ್ವಾ ಸ್ತ್ರೀರೂಪಂ ದಾನವೇಶ್ವರಂ ।**
**ಅಪರಿಚ್ಛಿನ್ನತತ್ತ್ವಾರ್ಥಾ ಶೈಲಪುತ್ರ್ಯೈ ನ್ಯವೇದಯತ್ ॥೩೮॥**

**ದೂತೇನ ಮಾರುತೇನಾಶುಗಾಮಿನಾ ನಗದೇವತಾ ।**
**ಶ್ರುತ್ವಾ ವಾಯುಮುಖಾದ್ದೇವೀ ಕ್ರೋಧರಕ್ತವಿಲೋಚನಾ ।**
**ಅಶಪದ್ವೀರಕಂ ಪುತ್ರಂ ಹೃದಯೇನ ವಿದೂಯತಾ ॥೩೯॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕುಮಾರಸಂಭವೇ**
**ಆಡಿವಧೋ ನಾಮ ಷಟ್ಪಂಚಾಶದಧಿಕಶತತಮೋಽಧ್ಯಾಯಃ**

---

೩೬-೩೭. ಅದಕ್ಕೆ ಬದಲು ಕೂದಲಿನ ಸುಳಿಯಿತ್ತು. ಬಳಿಕ ಪಿನಾಕಧಾರಿಯಾದ ಮಹಾದೇವನು ಅದು ದಾನವನ ಮಾಯೆಯೆಂದರಿತನು. ಆದರೆ ತನ್ನ ಅಭಿಪ್ರಾಯವನ್ನು ಹೊರಗೆಡಹದೆ ಗುಹ್ಯಾವಯವದಲ್ಲಿ ವಜ್ರಾಸ್ತ್ರವನ್ನಿಟ್ಟುಕೊಂಡಿದ್ದು ಆ ದಾನವನನ್ನು ಸಂಹರಿಸಿದನು. ವೀರಕನಿಗೆ ಆ ದೈತ್ಯನು ಹತನಾದುದು ಗೊತ್ತೇ ಆಗಲಿಲ್ಲ.

೩೮. ಸ್ತ್ರೀರೂಪದಲ್ಲಿದ್ದ ದಾನವೇಶ್ವರನು ಪರಮೇಶ್ವರನಿಂದ ಸಂಹೃತನಾದುದನ್ನು ನೋಡಿ ಪರ್ವತದ ಅಭಿಮಾನದೇವತೆಯಾದ ಕುಸುಮಾಮೋದಿನಿಯು ವಾಸ್ತವಾಂಶವನ್ನು ವಿಚಾರಿಸದೆ ವಾಯುವನ್ನು ದೂತನನ್ನಾಗಿ ಮಾಡಿ ಬಲು ಬೇಗನೆ ಪಾರ್ವತಿಗೆ, ಹೇಳಿಕಳುಹಿಸಿದಳು.

೩೯. ಪಾರ್ವತಿಯು ವಾಯುವಿನಿಂದ ನಡೆದ ಸಂಗತಿಯನ್ನು ಕೇಳಿದಳು. ಕ್ರೋಧದಿಂದ ಅವಳ ಕಣ್ಣುಗಳು ಕೆಂಪೇರಿದುವು. ಹೃದಯವು ಸಂಕಟಪಡುತ್ತಿತ್ತು. ಅವಳು ತನ್ನ ಮಗನಾದ ವೀರಕನಿಗೆ ಶಾಪವನ್ನು ಕೊಟ್ಟಳು.

## ಅಧ್ಯಾಯದ ಸಾರಾಂಶ

ಪಾರ್ವತಿಯು ಶಂಕರನ ಮನೆಯಿಂದ ಹೊರಟುಬರುತ್ತ ದಾರಿಯಲ್ಲಿ ಆ ಬೆಟ್ಟದ ಅಧಿದೇವತೆಯಾದ ಕುಸುಮಾಮೋದಿನಿಯನ್ನು ಕಂಡಳು. ತನ್ನಲ್ಲಿ ಅವಳಿಗೆ ಬಹು ಪ್ರೀತಿಯಿದ್ದುದರಿಂದ ನಡೆದ ವೃತ್ತಾಂತವನ್ನೆಲ್ಲಾ ಅವಳಿಗೆ ತಿಳಿಸಿ, ಈಶ್ವರನ ಬಳಿಗೆ ಪರನಾರಿಯಾರಾದರೂ ಬಂದರೆ ಆ ವಿಚಾರವನ್ನು ತಿಳಿಸಬೇಕೆಂದು ಬೇಡಿ ಕೊಂಡಳು. ಅವಳು ಹಾಗೆಯೇ ಆಗಲೆಂದು ಒಪ್ಪಿದಳು.

ಹಿಮವಂತನ ಉದ್ಯಾನದಲ್ಲಿ ಗಿರಿಜೆಯು ಘೋರವಾದ ತಪಸ್ಸಿಗೆ ತೊಡಗಿದಳು. ಆಡಿಯೆಂಬ ದೈತ್ಯನಿಗೆ ಇದೆಲ್ಲ ಗೊತ್ತಾಯಿತು. ತನ್ನ ತಂದೆಯಾದ ಅಂಧಕನನ್ನು ಈಶ್ವರನು ಸಂಹರಿಸಿದನೆಂಬ ಪೂರ್ವವೈರವನ್ನು ಸಾಧಿಸಬೇಕೆಂದು ಅವನು ಶಿವನ ಅರಮನೆಗೆ ಬಂದನು. ಬಾಗಿಲಲ್ಲಿ ವೀರಕನು ಕಾವಲಿರಲು ಅವನ ಕಣ್ಣಿಗೆ ಬೀಳದಂತೆ ಸರ್ಪರೂಪದಿಂದ ಒಳಹೊಕ್ಕನು.

ಆಡಿಯು ಪಾರ್ವತಿಯ ರೂಪವನ್ನು ತಾಳಿ ಪರಮೇಶ್ವರನ ಸಮೀಪಕ್ಕೆ ಹೋದನು. ಈಶ್ವರನಿಗೆ ಅಗಲಿದ್ದ ತನ್ನ ಪತ್ನಿ ಮರಳಿ ಬಂದಳೆಂದು ಬಹು ಸಂತೋಷವಾಯಿತು. ಆದರೆ ಕೂಡಲೆ ಸಂದೇಹವು ತಲೆದೋರಿ ಅವಳ ಅಂಗ ಲಕ್ಷಣಗಳನ್ನು ಪರೀಕ್ಷಿಸಿದನು. "ಇವಳು ಪಾರ್ವತಿಯಲ್ಲ; ದಾನವನ ಮಾಯೆ" ಎಂದು ಸ್ಪಷ್ಟವಾಯಿತು. ಕೂಡಲೇ ಅವನನ್ನು ವಜ್ರಾಸ್ತ್ರದಿಂದ ಸಂಹರಿಸಿದನು. ವೀರಕನಿಗೆ ಇದಾವುದೂ ತಿಳಿಯದು. ಕುಸುಮಾಮೋದಿನಿಯಾದರೋ ಸತ್ತವನು ದೈತ್ಯನೆಂದರಿಯದೆ, ಯಾರೋ ಹೆಂಗಸೆಂದು ಭಾವಿಸಿ ಪಾರ್ವತಿಗೆ ವಾಯುವಿನ ಮೂಲಕ ಆ ಸಂಗತಿಯನ್ನು ತಿಳಿಯಪಡಿಸಿದಳು. ಅವಳು ಬಹು ಸಂಕಟದಿಂದ ತನ್ನ ಮಗನಾದ ವೀರಕನಿಗೆ ಶಿಲೆಯಾಗುವಂತೆ ಶಾಪವನ್ನು ಕೊಟ್ಟಳು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕುಮಾರಸಂಭವಪ್ರಕರಣದೊಳಗೆ
ಆಡಿವಧವೆಂಬ ನೂರ ಐವತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತಪಂಚಾಶದಧಿಕಶತತಮೋಽಧ್ಯಾಯಃ

|| ದೇವ್ಯುವಾಚ ||

ಮಾತರಂ ಮಾಂ ಪರಿತ್ಯಜ್ಯ ಯಸ್ಮಾತ್ತ್ವಂ ಸ್ನೇಹವಿಕ್ಲವಾಂ |
ವಿಹಿತಾವಸರಃ ಸ್ತ್ರೀಣಾಂ ಶಂಕರಸ್ಯ ರಹೋವಿಧೌ || ೧ ||

ತಸ್ಮಾತ್ತೇ ಪರುಷಾ ರೂಕ್ಷಾ ಜಡಾ ಹೃದಯವರ್ಜಿತಾ |
ಗಣೇಶ ಕ್ಷಾರಸದೃಶೀ ಶಿಲಾ ಮಾತಾ ಭವಿಷ್ಯತಿ || ೨ ||

ನಿಮಿತ್ತಮೇತದ್ವಿಖ್ಯಾತಂ ವೀರಕಸ್ಯ ಶಿಲೋದಯೇ |
ಸೋಽಭವತ್ಪ್ರಕ್ರಮೇಣೈವ ವಿಚಿತ್ರಾಖ್ಯಾನಸಂಶ್ರಯಃ || ೩ ||

ಏವಮುತ್ಸೃಷ್ಟಶಾಪಾಯಾ ಗಿರಿಪುತ್ರ್ಯಾಸ್ತ್ವನಂತರಂ |
ನಿರ್ಜಗಾಮ ಮುಖಾತ್ಕ್ರೋಧಃ ಸಿಂಹರೂಪೀ ಮಹಾಬಲಃ || ೪ ||

ಸ ತು ಸಿಂಹಃ ಕರಾಲಾಸ್ಯೋ ಜಟಾಜಟಿಲಕಂಧರಃ |
ಪ್ರೋದ್ಧೂತಲಂಬಲಾಂಗೂಲೋ ದಂಷ್ಟ್ರೋತ್ಕಟಮುಖೋದ್ಭಿದಃ || ೫ ||

---

೧-೨. ಪಾರ್ವತಿ ಹೇಳಿದಳು.—ನಾನು ನಿನ್ನ ತಾಯಿ. ನಿನ್ನಲ್ಲಿ ಸ್ನೇಹದಿಂದ ಮರುಕಗೊಳ್ಳುತ್ತಿದ್ದೇನೆ. ಹೀಗಿರುವಲ್ಲಿ ನನ್ನನ್ನುಳಿದು ಪರಸ್ತ್ರೀಯರಿಗೆ ಈಶ್ವರ ನೊಡನೆ ಏಕಾಂತದಲ್ಲಿ ಇರಲು ಅವಕಾಶವನ್ನು ಕೊಟ್ಟಿರುವೆ. ಎಲೈ ಗಣಪಾಲಕನೇ, ಆದುದರಿಂದ ನೀನು ಕಠಿಣವಾದ, ಒರಟಾದ, ಜಡವಾದ, ಹೃದಯವಿಲ್ಲದ ಮತ್ತು ಕ್ಷಾರಸ್ವಭಾವದ ಶಿಲೆಯಾಗಿ ಹುಟ್ಟು.

೩. ವೀರಕನು ಶಿಲಾರೂಪವನ್ನು ತಾಳಲು ಇದೇ ಪ್ರಸಿದ್ಧವಾದ ಕಾರಣ. ಪ್ರಾರಂಭದಿಂದಲೇ ಅವನ ವೃತ್ತಾಂತವು ವಿಚಿತ್ರವಾದದ್ದು.

೪. ಪಾರ್ವತಿಯು ಹೀಗೆ ಶಾಪವನ್ನು ಕೊಟ್ಟ ಬಳಿಕ ಅವಳ ಮುಖದಿಂದ ಕೋಪವು ಮಹಾಬಲಶಾಲಿಯಾದ ಸಿಂಹದ ರೂಪವನ್ನು ತಾಳಿ ಹೊರಹೊರಟಿತು.

೫. ಆ ಸಿಂಹದ ಮುಖವು ಭಯಂಕರವಾಗಿತ್ತು. ಕತ್ತಿನ ಮೇಲೆ ಕೇಸರ ಗಳು ಒತ್ತಾಗಿ ಬೆಳೆದಿದ್ದುವು. ಬಾಲವು ಉದ್ದವಾಗಿ ಅಲ್ಲಾಡುತ್ತಿತ್ತು. ಕೋರೆ ಹಲ್ಲು ಗಳಿಂದ ತುಂಬಿ ಅದರ ಬಾಯಿ ಬಹು ಭಯಂಕರವಾಗಿತ್ತು.

ವ್ಯಾದಿತಾಸ್ಯೋ ಲಲಜ್ಜಿಹ್ವಃ ಕ್ಷಾಮಕುಕ್ಷಿಃ ಖಾದಿಷುಃ ।
ತಸ್ಯಾಶು ವರ್ತಿತುಂ ದೇವೀ ವ್ಯವಸ್ಯತ ಸತೀ ತದಾ ॥ ೬ ॥

ಜ್ಞಾತ್ವಾ ಮನೋಗತಂ ತಸ್ಯಾ ಭಗವಾಂಶ್ಚತುರಾನನಃ ।
ಆಜಗಾಮಾಶ್ರಮಪದಂ ಸಂಪದಾಮಾಶ್ರಯಂ ತದಾ ।
ಆಗಮ್ಯೋವಾಚ ದೇವೇಶೋ ಗಿರಿಜಾಂ ಸ್ಪಷ್ಟಯಾ ಗಿರಾ ॥ ೭ ॥

॥ ಬ್ರಹ್ಮೋವಾಚ ॥

ಕಿಂ ಪುತ್ರಿ ಪ್ರಾಪ್ತುಕಾಮಾಸಿ ಕಿಮಲಭ್ಯಂ ದದಾಮಿ ತೇ ।
ವಿರಮ್ಯತಾಮತಿಕ್ಲೇಶಾತ್ತಪಸೋऽಸ್ಮಾನ್ಮದಾಜ್ಞಯಾ ॥ ೮ ॥

ತಚ್ಛ್ರುತ್ವೋವಾಚ ಗಿರಿಜಾ ಗುರೋರ್ಗೌರವಗರ್ಭಿತಂ ।
ವಾಕ್ಯಂ ವಾಚಾ ಚಿರೋದ್ದಿಷ್ಟವರ್ಣನಿರ್ಣೀತವಾಂಛಿತಂ ॥ ೯ ॥

---

೬. ಅದರ ಬಾಯಿ ತೆರೆದಿತ್ತು. ನಾಲಗೆ ನೀಡಿಕೊಂಡಿತ್ತು. ಹೊಟ್ಟೆ ತೆಳ್ಳಗಿತ್ತು. ಆದು ತಿಂಡಿಗಾಗಿ ಹಾತೊರೆಯುತ್ತಿತ್ತು. ಕೂಡಲೇ ಪಾರ್ವತೀ ದೇವಿಯು ಅದಕ್ಕೆ ತನ್ನನ್ನೇ ಆಹಾರವಾಗಿ ಕೊಡಲು ಯತ್ನಿಸಿದಳು.

೭. ಅವಳ ಅಭಿಪ್ರಾಯವನ್ನು ತಿಳಿದು ಪೂಜ್ಯನಾದ ಬ್ರಹ್ಮನು ಸಂಪತ್ಸಮೃದ್ಧವಾದ ಅವಳ ಆಶ್ರಮಕ್ಕೆ ಬಂದು, ಸ್ಪಷ್ಟವಾದ ವಚನದಿಂದ ಅವಳಿಗೆ ಹೇಳಿದನು.

೮. ಬ್ರಹ್ಮನು ಹೇಳಿದನು.—ಮಗಳೇ! ನಿನಗೆ ಬೇಕಾಗಿರುವುದೇನು? ಇದುವರೆಗೆ ದೊರೆಯದಿರುವ ಯಾವ ಫಲವನ್ನು ಈಗ ನಿನಗೆ ಕೊಡಲಿ? ನನ್ನ ಅಪ್ಪಣೆಯನ್ನು ಮನ್ನಿಸು. ಅತಿಕ್ಲೇಶಕರವಾದ ಈ ತಪಸ್ಸನ್ನು ಸಾಕುಮಾಡು.

೯. ಲೋಕಗುರುವಾದ ಬ್ರಹ್ಮನ ಆ ಮಾತನ್ನು ಕೇಳಿ, ಪಾರ್ವತಿಯು ತನ್ನ ವೈಬಣ್ಣದ ವಿಷಯವಾಗಿ ಈಶ್ವರನು ಆಡಿದ ಮಾತಿನಿಂದ ತನ್ನ ಮನಸ್ಸಿನಲ್ಲಿ ಬಹುಕಾಲದಿಂದ ಕೊರೆಯುತ್ತಿದ್ದ ಬಯಕೆಯನ್ನು ಗಂಭೀರವಾದ ಮಾತಿನಿಂದ ವ್ಯಕ್ತಪಡಿಸಿದಳು.

॥ ದೇವ್ಯುವಾಚ ॥

ತಪಸಾ ದುಷ್ಕರೇಣಾಪ್ತಃ ಪತಿತ್ವೇ ಶಂಕರೋ ಮಯಾ ।
ಸ ಮಾಂ ಶ್ಯಾಮಲವರ್ಣೇತಿ ಬಹುಶಃ ಪ್ರೋಕ್ತವಾನ್ ಭವಃ ॥೧೦॥

ಸ್ಯಾಮಹಂ ಕಾಂಚನಾಕಾರಾ ವಾಲ್ಲಭ್ಯೇನ ಚ ಸಂಯುತಾ ।
ಭರ್ತುರ್ಭೂತಪತೇರಂಗಮೇಕತೋ ನಿರ್ವಿಶೇಽಂಗವತ್ ॥೧೧॥

ತಸ್ಯಾಸ್ತದ್ಭಾಷಿತಂ ಶ್ರುತ್ವಾ ಪ್ರೋವಾಚ ಕಮಲಾಸನಃ ।
ಏವಂ ಭವ ತ್ವಂ ಭೂಯಶ್ಚ ಭರ್ತೃದೇಹಾರ್ಧಹಾರಿಣೀ ॥೧೨॥

ತತಸ್ತತ್ಯಾಜ ಭೃಂಗಾಂಗಂ ಫುಲ್ಲನೀಲೋತ್ಪಲತ್ವಚಂ ॥೧೩॥

ತ್ವಚಾ ಸಾ ಚಾಭವದ್ದೀಪ್ತಾ ಘಂಟಾಹಸ್ತಾ ತ್ರಿಲೋಚನಾ ।
ನಾನಾಭರಣಪೂರ್ಣಾಂಗೀ ಪೀತಕೌಶೇಯಧಾರಿಣೀ ॥೧೪॥

---

೧೦. ಅತಿ ಕಷ್ಟಸಾಧ್ಯವಾದ ತಪಸ್ಸು ಮಾಡಿ ನಾನು ಶಂಕರನನ್ನು ಪತಿಯಾಗಿ ಪಡೆದೆನು. ಅವನು ನನ್ನನ್ನು ಶ್ಯಾಮಲ ವರ್ಣದವಳೆಂದು ಹಲವು ಸಾರಿ ಹಾಸ್ಯಮಾಡಿದನು.

೧೧. ನಾನು ಹೊಂಬಣ್ಣದವಳೂ ಪತಿಯ ಪ್ರೀತಿಗೆ ಪಾತ್ರಳೂ ಆಗ ಬೇಕು. ನನ್ನ ಪತಿಯಾದ ಪರಮೇಶ್ವರನ ಒಂದು ಪಾರ್ಶ್ವವನ್ನು ನನ್ನ ಅಂಗದಂತೆಯೇ ಅನುಭವಿಸತಕ್ಕವಳಾಗಬೇಕು.

೧೨. ಅವಳ ಮಾತನ್ನು ಕೇಳಿ ಬ್ರಹ್ಮನು ಹೇಳಿದನು. "ನಿನ್ನಿಷ್ಟದಂತೆ ನಿನ್ನ ಮೈ ಬಣ್ಣವು ಸುವರ್ಣದಂತಾಗಲಿ. ಮರಳಿ ನೀನು ನಿನ್ನ ಪತಿಯ ಅರ್ಧ ದೇಹದ ಅಧಿಕಾರಿಣಿಯಾಗು."

೧೩-೧೪. ಬಳಿಕ ಆಕೆಯ ಅರಳಿದ ಕನ್ನೈದಿಲೆಯ ಬಣ್ಣದ ಚರ್ಮವೂ ದುಂಬಿಯಂತೆ ನೀಲವರ್ಣದ ಅಂಗಗಳೂ ಮಾಯವಾದುವು. ಅವಳು ಸುವರ್ಣ ಛಾಯೆಯ ಹೊಸಚರ್ಮದಿಂದ ಜಗಜಗಿಸಿದಳು. ಕೈಯಲ್ಲಿ ಗಂಟೆಯನ್ನು ಹಿಡಿದು ಮೂರು ಕಣ್ಣುಗಳಿಂದ ಶೋಭಿಸಿದಳು. ಅವಳ ಅಂಗಗಳಲ್ಲಿ ಬಗೆಬಗೆಯ ಆಭರಣ ಗಳು ಪ್ರಕಾಶಿಸಿದುವು. ಅವಳು ಹೊಂಬಣ್ಣದ ರೇಷ್ಮೆಯ ಸೀರೆಯನ್ನು ಧರಿಸಿದ್ದಳು.

ತಾಮುಬ್ರವೀತ್ತತೋ ಬ್ರಹ್ಮಾ ದೇವೀಂ ನೀಲಾಂಬುಜತ್ವಿಷಂ ।
ನಿಶೇ ಭೂಧರಜಾದೇಹಸಂಪರ್ಕಾತ್ತ್ವಂ ಮಮಾಜ್ಞಯಾ ॥೧೫॥

ಸಂಪ್ರಾಪ್ತಾ ಕೃತಕೃತ್ಯತ್ವಮೇಕಾನಂಶಾ ಪುರಾ ಹ್ಯಸಿ ।
ಯ ಏಷ ಸಿಂಹಃ ಪ್ರೋದ್ಭೂತೋ ದೇವ್ಯಾಂ ಕ್ರೋಧಾದ್ವರಾನನೇ ॥೧೬॥

ಸ ತೇಽಸ್ತು ವಾಹನಂ ದೇವಿ ಕೇತೌ ಚಾಸ್ತು ಮಹಾಬಲಃ ।
ಗಚ್ಛ ವಿಂಧ್ಯಾಚಲಂ ತತ್ರ ಸುರಕಾರ್ಯಂ ಕರಿಷ್ಯಸಿ ॥೧೭॥

ಪಂಚಾಲೋ ನಾಮ ಯಕ್ಷೋಽಯಂ ಯಕ್ಷಲಕ್ಷಪದಾನುಗಃ ।
ದತ್ತಸ್ತೇ ಕಿಂಕರೋ ದೇವಿ ಮಯಾ ಮಾಯಾಶತೈರ್ಯುತಃ ॥೧೮॥

ಇತ್ಯುಕ್ತ್ವಾ ಕೌಶಿಕೀ ದೇವೀ ವಿಂಧ್ಯಶೈಲಂ ಜಗಾಮ ಹ ।
ಉಮಾಪಿ ಪ್ರಾಪ್ತಸಂಕಲ್ಪಾ ಜಗಾಮ ಗಿರಿಶಾಂತಿಕಂ ॥೧೯॥

---

೧೫. ಬಳಿಕ ಬ್ರಹ್ಮನು ಕನ್ನೈದಿಲೆಯಂತೆ ದೇಹಕಾಂತಿಯುಳ್ಳ ನಿಶಾದೇವಿಗೆ ಇಂತೆಂದನು. "ಓ ರಾತ್ರೀ, ನನ್ನ ಅಪ್ಪಣೆಯಂತೆ ಪಾರ್ವತಿಯ ದೇಹದ ಸಂಬಂಧ ದಿಂದ ನೀನು ಕೃತಾರ್ಥಳಾದೆ. ಇನ್ನು ನೀನು ಹಿಂದಿನಂತೆ ಅಂಶರಹಿತಳಾಗಿ ಪೂರ್ಣಳಾದೆ.

೧೬-೧೭. ಎಲೌ ಮಂಗಳಮುಖೀ, ಪಾರ್ವತೀದೇವಿಯ ಕೋಪದಿಂದ, ಇಗೋ ! ಈ ಸಿಂಹವು ಹುಟ್ಟಿತಷ್ಟೆ ! ದೇವೀ, ಮಹಾಬಲಶಾಲಿಯಾದ ಇದು ನಿನಗೆ ವಾಹನವಾಗಲಿ. ನಿನ್ನ ಧ್ವಜದಲ್ಲಿ ಇದು ನೆಲಸಲಿ. ನೀನು ವಿಂಧ್ಯಪರ್ವತಕ್ಕೆ ಹೋಗಿ ದೇವಕಾರ್ಯವನ್ನು ನಡೆಸು.

೧೮. ಪಂಚಾಲನೆಂಬ ಈ ಯಕ್ಷನನ್ನು ಒಂದುಲಕ್ಷ ಜನ ಯಕ್ಷರು ಅನು ವರ್ತಿಸುತ್ತಿರುವರು. ಎಲೌ ದೇವೀ, ನೂರಾರು ಮಾಯೆಗಳನ್ನು ಬಲ್ಲ ಆತನು ನಿನಗೆ ಸೇವಕನಾಗಿರುವಂತೆ ಆಜ್ಞೆಯಿತ್ತಿರುವೆನು."

೧೯. ಬ್ರಹ್ಮನು ಹೀಗೆ ಹೇಳಲು ಕೌಶಿಕೀದೇವಿಯು ವಿಂಧ್ಯಪರ್ವತಕ್ಕೆ ಹೋದಳು. ಪಾರ್ವತಿಯೂ ಸಹ ತನ್ನ ಮನೋರಥವು ಈಡೇರಿತೆಂದು ಈಶ್ವರನ ಬಳಿಗೆ ತೆರಳಿದಳು.

ಪ್ರವಿಶಂತೀಂ ತು ತಾಂ ದ್ವಾರಾದಪಕೃಷ್ಯ ಸಮಾಹಿತಃ ।
ರುರೋಧ ವೀರಕೋ ದೇವೀಂ ಹೇಮವೇತ್ರಲತಾಧರಃ ॥೨೦॥

ತಾಮುವಾಚ ಚ ಕೋಪೇನ ರೂಪಾತ್ತು ವ್ಯಭಿಚಾರಿಣೀಂ ।
ಪ್ರಯೋಜನಂ ನ ತೇಽಸ್ತೀಹ ಗಚ್ಛ ಯಾವನ್ನ ಭೇತ್ಸ್ಯಸೇ ॥೨೧॥

ದೇವ್ಯಾ ರೂಪಧರೋ ದೈತ್ಯೋ ದೇವಂ ವಂಚಯಿತುಂ ತ್ವಿಹ ।
ಪ್ರವಿಷ್ಟೋ ನ ಚ ದೃಷ್ಟೋಽಸೌ ಸ ವೈ ದೇವೇನ ಘಾತಿತಃ ॥೨೨॥

ಘಾತಿತೇ ಚಾಹಮಾಜ್ಞಪ್ತೋ ನೀಲಕಂಠೇನ ಕೋಪಿನಾ ।
ದ್ವಾರೇಷು ನಾವಧಾನಂ ತೇ ಯಸ್ಮಾತ್ಪಶ್ಯಾಮಿ ವೈ ತತಃ ॥೨೩॥

---

೨೦. ಪಾರ್ವತಿಯು ಒಳಗೆ ಪ್ರವೇಶಿಸುತ್ತಿರಲು, ಕೈಯಲ್ಲಿ ಚಿನ್ನದ ಬೆತ್ತವನ್ನು ಹಿಡಿದು ಎಚ್ಚರಿಕೆಯಿಂದ ಕಾದಿದ್ದ ವೀರಕನು ಬಾಗಿಲಿನಿಂದ ಅವಳನ್ನು ಹಿಂದಕ್ಕೆಳೆದು ತಡೆದು ನಿಲ್ಲಿಸಿದನು.

೨೧. ಹಳೆಯ ರೂಪವು ಹೋಗಿ ಹೊಸರೂಪ ಬಂದಿದ್ದ ಪಾರ್ವತಿಯನ್ನು ನೋಡಿ ಅವನು ತಿಳಿಯದೆ ಕೋಪದಿಂದ ಹೇಳಿದನು. "ನಿನಗೆ ಇಲ್ಲಿ ಕೆಲಸವೇನೂ ಇಲ್ಲ. ಬೇಗನೆ ಇಲ್ಲಿಂದ ಹೊರಟುಹೋಗು. ಇಲ್ಲದಿದ್ದರೆ ನಿನ್ನನ್ನು ಸೀಳಿಹಾಕುವೆನು.

೨೨. ಪರಮೇಶ್ವರನನ್ನು ವಂಚಿಸುವುದಕ್ಕಾಗಿ ಪಾರ್ವತಿಯ ರೂಪವನ್ನು ಧರಿಸಿ ದೈತ್ಯನೊಬ್ಬನು ಒಳಹೊಕ್ಕನು. ಅವನನ್ನು ನಾನು ನೋಡಲಿಲ್ಲ. ಅವನು ಮಹಾದೇವನಿಂದಲೇ ಹತನಾದನು.

೨೩-೨೪. ದೈತ್ಯವಧಾನಂತರ ಮಹಾದೇವನು ಕೋಪಿಸಿಕೊಂಡು "ಬಾಗಿಲ ಕಡೆ ಕೂಡ ನಿನಗೆ ಗಮನವಿಲ್ಲ. ನಾನೇ ನೋಡುತ್ತಿದ್ದೇನೆ. ಆದಕಾರಣ ಇನ್ನು ಹಲವು ವರ್ಷಗಳ ಕಾಲ ನೀನು ನನ್ನ ದ್ವಾರಪಾಲಕನಾಗಿರಬೇಡ" ಎಂದು ನನಗೆ

ಭವಿಷ್ಯಸಿ ನ ಮದ್ಧ್ವಾಃಸ್ಥೋ ವರ್ಷಪೂಗಾನ್ಯನೇಕಶಃ ।
ಅತಸ್ತೇಽತ್ರ ನ ದಾಸ್ಯಾಮಿ ಪ್ರವೇಶಂ ಗಮ್ಯತಾಂ ದ್ರುತಂ ॥೨೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಕುಮಾರಸಂಭವೇ
ವೀರಕಶಾಪೋ ನಾಮ ಸಪ್ತಪಂಚಾಶದಧಿಕಶತತಮೋಽಧ್ಯಾಯಃ

---

ಅಪ್ಪಣೆಮಾಡಿದನು. ಆದುದರಿಂದ ನಿನಗೆ ಪ್ರವೇಶಕ್ಕೆ ಅವಕಾಶ ಕೊಡುವುದಿಲ್ಲ. ಬೇಗನೆ ಹೊರಟುಹೋಗು.''

## ಅಧ್ಯಾಯದ ಸಾರಾಂಶ

ವೀರಕನಿಗೆ ಶಾಪಕೊಟ್ಟ ತರುವಾಯ ಪಾರ್ವತಿಯ ಕೋಪವು ಸಿಂಹರೂಪವಾಗಿ ಅವಳ ಮುಖದಿಂದ ಹೊರಹೊರಟಿತು. ಅವಳು ತನ್ನ ದೇಹವನ್ನು ಅದಕ್ಕೆ ಆಹಾರವಾಗಿ ಕೊಡಬೇಕೆಂದು ಯತ್ನಿಸಿದಳು. ಆಗ ಬ್ರಹ್ಮನು ಪ್ರತ್ಯಕ್ಷನಾಗಿ ಬಂದು ಅವಳನ್ನು ಸಂತೈಸಿದನು. ಅವಳ ಶರೀರವು ಹೊಂಬಣ್ಣವಾಗುವಂತೆಯೂ ಅವಳು ಪರಮೇಶ್ವರನ ಅರ್ಧದೇಹಕ್ಕೆ ಅಧಿಕಾರಿಣಿಯಾಗುವಂತೆಯೂ ವರವನ್ನು ಕರುಣಿಸಿದನು. ಅವಳು ಸಂತುಷ್ಟಳಾಗಿ ಪತಿಯ ಬಳಿಗೆ ಹೊರಟಳು. ಅವಳ ಮೈಬಣ್ಣವನ್ನು ನೋಡಿ ವೀರಕನು ಪಾರ್ವತಿಯೆಂದರಿಯದೆ ಬಾಗಿಲಲ್ಲಿ ಅವಳನ್ನು ತಡೆದುಬಿಟ್ಟನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಕುಮಾರಸಂಭವ ಪ್ರಕರಣದೊಳಗೆ
ವೀರಕಶಾಪವೆಂಬ ನೂರ ಐವತ್ತೇಳನೆಯ ಅಧ್ಯಾಯವು ಮುಗಿದುದು.

## ಅಥಾಷ್ಟಪಂಚಾಶದಧಿಕಶತತಮೋಽಧ್ಯಾಯಃ

|| ವೀರಕ ಉವಾಚ ||

ಏವಮುಕ್ತ್ವಾ ಗಿರಿಸುತಾ ಮಾತಾ ಮೇ ಸ್ನೇಹವತ್ಸಲಾ ।
ಪ್ರವೇಶಂ ಲಭತೇ ನಾನ್ಯಾ ನಾರೀ ಕಮಲಲೋಚನೇ || ೧ ||

ಇತ್ಯುಕ್ತಾ ತು ತದಾ ದೇವೀ ಚಿಂತಯಾಮಾಸ ಚೇತಸಾ ।
ನ ಸಾ ನಾರೀತಿ ದೈತ್ಯೋಽಸೌ ವಾಯುರ್ಮೇ ಯಾಮಭಾಷತ || ೨ ||

ವೃಥೈವ ವೀರಕಃ ಶಪ್ತೋ ಮಯಾ ಕ್ರೋಧಪರೀತಯಾ ।
ಅಕಾರ್ಯಂ ಕ್ರಿಯತೇ ಮೂಢೈಃ ಪ್ರಾಯಃ ಕ್ರೋಧಸಮೀರಿತೈಃ || ೩ ||

ಕ್ರೋಧೇನ ನಶ್ಯತೇ ಕೀರ್ತಿಃ ಕ್ರೋಧೋ ಹಂತಿ ಸ್ಥಿರಾಂ ಶ್ರಿಯಂ ।
ಅಪರಿಚ್ಛಿನ್ನತತ್ವಾರ್ಥಾ ಪುತ್ರಂ ಶಪಿತವತ್ಯಹಂ ।
ವಿಪರೀತಾರ್ಥಬುದ್ಧೀನಾಂ ಸುಲಭೋ ವಿಪದೋದಯಃ || ೪ ||

---

೧. ವೀರಕನು ಹೇಳಿದನು.—ಹೀಗೆ ಹೇಳಿ ಮತ್ತೆ ವೀರಕನಿಂತೆಂದನು. "ನನ್ನಲ್ಲಿ ವಾತ್ಸಲ್ಯವನ್ನಿಟ್ಟಿರುವ ನನ್ನ ತಾಯಿಯಾದ ಪಾರ್ವತಿಗೆ ಪ್ರವೇಶವುಂಟು. ಎಲೌ ಕಮಲಾಕ್ಷೀ! ಮತ್ತಾವ ಹೆಂಗಸಿಗೂ ಅವಕಾಶವಿಲ್ಲ."

೨. ವೀರಕನು ಹೀಗೆ ಹೇಳಲು ಪಾರ್ವತಿಯು ಯೋಚನೆಮಾಡಿದಳು. ಯಾರೋ ಒಬ್ಬಳು ಒಳಗೆ ಹೋದಳೆಂದು ವಾಯು ನನಗೆ ಹೇಳಿದನಲ್ಲಾ! ಆಕೆಯು ಹೆಂಗಸಲ್ಲ; ಮಾಯೆಯ ದೈತ್ಯ."

೩. ನಾನು ಕೋಪಕ್ಕೊಳಗಾಗಿ ವೀರಕನಿಗೆ ಅನ್ಯಾಯವಾಗಿ ಶಾಪಕೊಟ್ಟೆನು. ಸಾಮಾನ್ಯವಾಗಿ ಕ್ರೋಧವಶರಾದ ಮೂಢರು ಹೀಗೆಯೇ ಅಕಾರ್ಯವನ್ನೆಸಗುತ್ತಾರೆ.

೪. ಕೋಪದಿಂದ ಕೀರ್ತಿ ಹಾಳಾಗುವುದು. ಕೋಪವು ಶಾಶ್ವತವಾದ ಸಂಪತ್ತನ್ನು ತೊಲಗಿಸುವುದು. ನಾನು ನಿಜವಾದ ಸಂಗತಿಯನ್ನರಿಯದೆ ಮಗನಿಗೆ ಶಾಪವಿತ್ತೆನು. ವಿಚಾರಮಾಡದೆ ತಪ್ಪು ತಿಳಿದುಕೊಳ್ಳುವವರಿಗೆ ಕೇಡು ಅನಾಯಾಸವಾಗಿ ಒದಗುವುದು.

ಸಂಚಿಂತ್ಯೈವಮುವಾಚೇದಂ ವೀರಕಂ ಪ್ರತಿ ಶೈಲಜಾ ।
ಲಜ್ಜಾಸಜ್ಜವಿಕಾರೇಣ ವದನೇನಾಂಬುಜತ್ವಿಷಾ ॥ ೫ ॥

॥ ದೇವ್ಯುವಾಚ ॥

ಅಹಂ ವೀರಕ ತೇ ಮಾತಾ ಮಾ ತೇऽಸ್ತು ಮನಸೋ ಭ್ರಮಃ ।
ಶಂಕರಸ್ಯಾಸ್ಮಿ ದಯಿತಾ ಸುತಾ ತು ಹಿಮಭೂಭೃತಃ ॥ ೬ ॥

ಮಮ ಗಾತ್ರಚ್ಛವಿಭ್ರಾಂತ್ಯಾ ಮಾ ಶಂಕಾಂ ಪುತ್ರ ಭಾವಯ ।
ತುಷ್ಟೇನ ಗೌರತಾ ದತ್ತಾ ಮಮೇಯಂ ಪದ್ಮಜನ್ಮನಾ ॥ ೭ ॥

ಮಯಾ ಶಪ್ತೋऽಸ್ಯವಿದಿತೇ ವೃತ್ತಾಂತೇ ದೈತ್ಯನಿರ್ಮಿತೇ ।
ಜ್ಞಾತ್ವಾ ನಾರೀಪ್ರವೇಶಂ ತು ಶಂಕರೇ ರಹಸಿ ಸ್ಥಿತೇ ॥ ೮ ॥

ನ ನಿವರ್ತಯಿತುಂ ಶಕ್ಯಃ ಶಾಪಃ ಕಿಂ ತು ಬ್ರವೀಮಿ ತೇ ।
ಶೀಘ್ರಮೇಷ್ಯಸಿ ಮೇ ತುಷ್ಟ್ಯಾ ಸರ್ವಕಾಮಸಮನ್ವಿತಃ ॥ ೯ ॥

---

೫. ಗಿರಿಜೆಯು ಹೀಗೆ ಚಿಂತಿಸಿ ವೀರಕನಿಗೆ ಮತ್ತೆ ಹೇಳಿದಳು. ತಾವರೆಯಂತೆ ಕಾಂತಿಯುಕ್ತವಾದ ಅವಳ ಮುಖದಲ್ಲಿ ಲಜ್ಜೆಯ ವಿಕಾರವು ತೋರಿ ಬರುತ್ತಿತ್ತು.

೬. ದೇವಿ ಹೇಳಿದಳು.—ಓ ವೀರಕಾ, ನಾನೇ ನಿನ್ನ ತಾಯಿ. ಶಂಕರನ ಪತ್ನಿ. ಪರ್ವತರಾಜನಾದ ಹಿಮವಂತನ ಮಗಳು, ನಿನ್ನ ಮನಸ್ಸಿನಲ್ಲಿ ಭ್ರಾಂತಿ ಬೇಡ.

೭. ಪುತ್ರಾ! ನನ್ನ ಮೈಬಣ್ಣದಿಂದ ಭ್ರಾಂತನಾಗಿ ನನ್ನ ವಿಷಯದಲ್ಲಿ ಸಂದೇಹ ಪಡಬೇಡ. ಬ್ರಹ್ಮನು ನನ್ನ ತಪಸ್ಸಿಗೆ ಮೆಚ್ಚಿ ಈ ಹೊಂಬಣ್ಣವನ್ನು ಕೊಟ್ಟನು.

೮. ಶಂಕರನು ಏಕಾಂತದಲ್ಲಿರುವಾಗ ಹೆಂಗಸೊಬ್ಬಳು ಪ್ರವೇಶಿಸಿದಳೆಂದು ತಿಳಿದು ದೈತ್ಯನು ಮಾಡಿದ ಕಪಟವೃತ್ತಾಂತವನ್ನರಿಯದೆ ನಿನಗೆ ನಾನು ಶಾಪವನ್ನು ಕೊಟ್ಟೆನು.

೯. ಇನ್ನು ಶಾಪವನ್ನು ಹಿಂದಿರುಗಿಸಲು ಸಾಧ್ಯವಿಲ್ಲ. ಆದರೆ ನಿನಗೆ ಹೇಳುವೆನು ಕೇಳು. ನಾನು ಸಂತುಷ್ಟಳಾಗಿರುವ ಕಾರಣ ನೀನು ಸಕಲ ಮನೋರಥಗಳನ್ನೂ ಪಡೆದು ಬೇಗನೆ ಬರುವೆ.

|| ಸೂತ ಉವಾಚ ||

ಶಿರಸಾ ತು ತತೋ ವಂದ್ಯ ಮಾತರಂ ಪೂರ್ಣಮಾನಸಃ ।
ಉವಾಚೋದಿತಪೂರ್ಣೇಂದುದ್ಯುತಿಂ ಚ ಹಿಮಶೈಲಜಾಂ ||೧೦||

|| ವೀರಕ ಉವಾಚ ||

ನತಸುರಾಸುರಮೌಲಿಮಿಲನ್ಮಣಿ
ಪ್ರಚಯಕಾಂತಿಕರಾಲನಖಾಂಕಿತೇ ।
ನಗಸುತೇ ಶರಣಾಗತವತ್ಸಲೇ
ತವ ನತೋಽಸ್ಮಿ ನತಾರ್ತಿವಿನಾಶಿನಿ ||೧೧||

ತಪನಮಂಡಲಮಂಡಿತಕಂಧರೇ
ಪೃಥುಸುವರ್ಣಸುವರ್ಣನಗದ್ಯುತೇ ।
ವಿಷಭುಜಂಗನಿಷಂಗವಿಭೂಷಿತೇ
ಗಿರಿಸುತೇ ಭವತೀಮಹಮಾಶ್ರಯೇ ||೧೨||

---

೧೦. ಸೂತಪೌರಾಣಿಕನು ಹೇಳಿದನು.—ಬಳಿಕ ವೀರಕನು ಹರ್ಷಪೂರ್ಣನಾಗಿ ಆಗತಾನೆ ಹುಟ್ಟಿದ ಪೂರ್ಣಚಂದ್ರನಂತೆ ಕಾಂತಿಯುಕ್ತಳಾದ ತನ್ನ ತಾಯಿ ಪಾರ್ವತಿಗೆ ತಲೆಬಾಗಿ ನಮಸ್ಕರಿಸಿ ಇಂತು ಹೇಳಿದನು.

೧೧. ವೀರಕನು ಹೇಳಿದನು.—ಶರಣಾಗತರಲ್ಲಿ ವಾತ್ಸಲ್ಯವಿಟ್ಟು ಭಕ್ತರ ಕಷ್ಟಗಳನ್ನು ಪರಿಹರಿಸುವ ಎಲೌ ಪಾರ್ವತೀ, ನಿನ್ನನ್ನು ನಮಸ್ಕರಿಸುವೆನು. ಸುರರೂ ಅಸುರರೂ ಬಂದು ನಮಸ್ಕಾರಮಾಡುವಾಗ ಅವರ ಕಿರೀಟದ ರತ್ನಗಳ ದಿವ್ಯಕಾಂತಿಯಿಂದ ನಿನ್ನ ಪಾದಗಳ ಉಗುರುಗಳು ಬೆಳಗುತ್ತಿವೆ.

೧೨. ನಿನ್ನ ಕಿವಿಯಲ್ಲಿರುವ ಓಲೆಗಳು ಸೂರ್ಯಮಂಡಲದಂತೆ ಪ್ರಕಾಶಿಸುತ್ತ ನಿನ್ನ ಕಂಠದೇಶವನ್ನು ಅಲಂಕರಿಸುತ್ತಿವೆ. ನಿನ್ನ ಮೈಬಣ್ಣವು ಮೇರುಪರ್ವತದ ಕಾಂತಿಯನ್ನು ಹೋಲುತ್ತಿದೆ. ವಿಷಮಯವಾದ ಸರ್ಪಗಳು ನಿನಗೆ ಒಡವೆಗಳಾಗಿವೆ. ಎಲೌ ಪಾರ್ವತೀ, ನಿನ್ನನ್ನು ನಾನು ಆಶ್ರಯಿಸಿರುವೆನು.

ಜಗತಿ ಕಃ ಪ್ರಣತಾಭಿಮತಂ ದದೌ
 ಝಟಿತಿ ಸಿದ್ಧನುತೇ ಭವತೀ ಯಥಾ ।
ಜಗತಿ ಕಾಂ ಚ ನ ವಾಂಛತಿ ಶಂಕರೋ
 ಭುವನಧೃತ್ತನಯೇ ಭವತೀಂ ಯಥಾ ॥೧೩॥

ವಿಮಲಯೋಗವಿನಿರ್ಮಿತದುರ್ಜಯ
 ಸ್ವತನುತುಲ್ಯಮಹೇಶ್ವರಮಂಡಲೀ ।
ವಿದಲಿತಾಂಧಕಬಾಂಧವಸಂಹತಿಃ
 ಸುರವರೈಃ ಪ್ರಥಮಂ ತ್ವಮಭಿಷ್ಟುತಾ ॥೧೪॥

ಸಿತಸಟಾಪಟಲೋದ್ಧತಕಂಧರಾ
 ಭರಮಹಾಮೃಗರಾಜರಥಸ್ಥಿತಾ ।
ವಿಮಲಶಕ್ತಿಮುಖಾನಲಪಿಂಗಳಾ
 ಯುತಭುಜೌಘವಿಪಿಷ್ಟಮಹಾಸುರಾ ॥೧೫॥

---

೧೩. ಸಿದ್ಧರಿಂದ ಸ್ತುತಿಸಲ್ಪಡುವ ಎಲೌ ಗಿರಿಜೇ! ಲೋಕದಲ್ಲಿ ನಿನ್ನಂತೆ ಶೀಘ್ರವಾಗಿ ಭಕ್ತರ ಇಷ್ಟಾರ್ಥವನ್ನು ಕೊಡುವವರು ಬೇರೆ ಯಾರಿದ್ದಾರೆ? ಮಹಾದೇವನು ನಿನ್ನನ್ನು ಪ್ರೀತಿಸುವಷ್ಟು ಮಟ್ಟಿಗೆ ಮತ್ತಾರನ್ನು ಪ್ರೀತಿಸುವನು?

೧೪. ದೇವೀ, ನೀನು ಶ್ರೇಷ್ಠವಾದ ತಪಸ್ಸನ್ನು ಆಚರಿಸಿ ಮಹೇಶ್ವರನ ದಿವ್ಯದೇಹದ ತೇಜೋಮಂಡಲಕ್ಕೆ ಅನುಗುಣವಾದ ಶರೀರಕಾಂತಿಯನ್ನು ಸಂಪಾದಿಸಿದೆ. ಅಂಧಕಾಸುರನ ಬಂಧುವರ್ಗವನ್ನೆಲ್ಲ ಧ್ವಂಸಮಾಡಿದೆ. ಸುರ ಪ್ರಮುಖರು ಇದಕ್ಕಾಗಿ ನಿನ್ನನ್ನು ಈಶ್ವರನಿಗಿಂತ ಮೊದಲು ಅತಿಶಯವಾಗಿ ಸ್ತುತಿಸುವರು.

೧೫. ಓ ಪಾರ್ವತೀ, ಕತ್ತಿನ ಸುತ್ತಲೂ ಬೆಳ್ಳಗಿರುವ ಕೇಸರವು ಜೋಲಾಡುತ್ತಿರುವ ಸಿಂಹದ ಮೇಲೆ ನೀನು ಕುಳಿತಿರುವೆ. ಉತ್ಕೃಷ್ಟವಾದ ಶಕ್ತ್ಯಾಯುಧದ ಮುಖಾಗ್ನಿಯಂತೆ ನೀನು ಪಿಂಗಲವರ್ಣದವಳಾಗಿರುವೆ. ದೀರ್ಘವಾದ ಬಾಹುಗಳಿಂದ ಪ್ರಬಲರಾದ ದೈತ್ಯರನ್ನು ಮರ್ದನಮಾಡಿರುವೆ.

ನಿಗದಿತಾ ಭುವನೈರಿತಿ ಚಂಡಿಕಾ
ಜನನಿ ಶುಂಭನಿಶುಂಭನಿಷೂದಿನೀ ।
ಪ್ರಣತಚಿಂತಿತದಾನವದಾನವ
ಪ್ರಮಥನೈಕರತಿಸ್ತರಸಾ ಭುವಿ ॥೧೬॥

ವಿಯತಿ ವಾಯುಪಥೇ ಜ್ವಲನೋಜ್ವಲೇ
ವನಿತಲೇ ತವ ದೇವಿ ಚ ಯದ್ವಪುಃ ।
ತದಜಿತೇಽಪ್ರತಿಮೇ ಪ್ರಣಮಾಮ್ಯಹಂ
ಭುವನಭಾವಿನಿ ತೇ ಭವವಲ್ಲಭೇ ॥೧೭॥

ಜಲಧಯೋ ಲಲಿತೋದ್ಧತವೀಚಯೋ
ಹುತವಹದ್ಯುತಯಶ್ಚ ಚರಾಚರಂ ।
ಫಣಸಹಸ್ರಭೃತಶ್ಚ ಭುಜಂಗಮಾ
ಸ್ತ್ವದಭಿಧಾಸ್ಯತಿ ಮಯ್ಯಭಯಂಕರಾಃ ॥೧೮॥

---

೧೬. ತಾಯೀ, ಲೋಕದಲ್ಲಿ ನಿನ್ನನ್ನು ಚಂಡಿಕೆ, ಶುಂಭನಿಷೂದಿನಿ, ನಿಶುಂಭಸಂಹಾರಿಣಿ ಎಂದು ಕರೆಯುವರು. ನಿನ್ನನ್ನು ಮರೆಹೊಗಲು ಹಿಂದು ಮುಂದು ನೋಡುತ್ತಿರುವ ಪ್ರತಿಯೊಬ್ಬ ದಾನವನನ್ನೂ ಮರ್ದನಮಾಡಲು ನೀನು ಆಸಕ್ತಳಾಗಿರುವೆ.

೧೭. ಯಾರಿಗೂ ಸೋಲದ ಅಸಮಾನಳಾದ ಎಲೌ ದೇವೀ, ಅಂತರಿಕ್ಷದಲ್ಲಿಯೂ, ವಾಯುಮಾರ್ಗದಲ್ಲಿಯೂ, ಅಗ್ನಿಮಂಡಲದಲ್ಲಿಯೂ, ಭೂಲೋಕದಲ್ಲಿಯೂ ನಿನ್ನ ರೂಪವು ವ್ಯಾಪಿಸಿರುವುದು. ಓ ಜಗದ್ಧಾತ್ರೀ, ಸೃಷ್ಟಿಯ ಅಧೀಶ್ವರೀ, ನಿನ್ನ ವಿಧವಿಧವಾದ ಆ ರೂಪಗಳಿಗೆಲ್ಲ ಇದೋ ನಮಸ್ಕರಿಸುವೆನು.

೧೮. ಅಲೆಗಳಿಂದ ಅಲ್ಲೋಲಕಲ್ಲೋಲವಾದ ಸಮುದ್ರಗಳು, ಅಗ್ನಿಜ್ವಾಲೆಗಳು, ಸಾವಿರ ಹೆಡೆಗಳುಳ್ಳ ಸರ್ಪಗಳು ಇವು ನಿನ್ನ ಹೆದರಿಕೆಯಿಂದ ಚರಾಚರ ರೂಪವಾದ ಜಗತ್ತಿಗೂ ನನಗೂ ಭಯವನ್ನುಂಟುಮಾಡದೆ ಇವೆ.

ಭಗವತಿ ಸ್ಥಿರಭಕ್ತಜನಾಶ್ರಯೇ
ಪ್ರತಿಗತೋ ಭವತೀಚರಣಾಶ್ರಯಂ ।
ಕರಣಜಾತಮಿಹಾಸ್ತು ಮಮಾಚಲಂ
ನುತಿಲವಾಪ್ತಿಫಲಾಶಯಹೇತುತಃ ।
ಪ್ರಶಮಮೇಹಿ ಮಮಾತ್ಮಜವತ್ಸಲೇ
ತವ ನಮೋಽಸ್ತು ಜಗತ್ತ್ರಯಸಂಶ್ರಯೇ ।
ತ್ವಯಿ ಮಮಾಸ್ತು ಮತಿಃ ಸತತಂ ಶಿವೇ
ಶರಣಗೋಽಸ್ಮಿ ನತೋಽಸ್ಮಿ ನಮೋಽಸ್ತು ತೇ ॥೧೯॥

॥ ಸೂತ ಉವಾಚ ॥

ಪ್ರಸನ್ನಾ ತು ತತೋ ದೇವೀ ವೀರಕಸ್ಯೇತಿ ಸಂಸ್ತುತಾ ।
ಪ್ರವಿವೇಶ ಶುಭಂ ಭರ್ತುರ್ಭವನಂ ಭೂಧರಾತ್ಮಜಾ ॥೨೦॥

ಅಥ ರುದ್ರೋ ಮಹಾಗೌರೀಂ ಗೌರೀಂ ದೃಷ್ಟ್ವಾ ತು ಸುಂದರೀಂ ।
ಚಿತ್ತವ್ಯಾಮೋಹನಾಕಾರಾಂ ಕರೀಂದ್ರೋನ್ಮತ್ತಗಾಮಿನೀಂ ॥೨೧॥

---

೧೯. ದೃಢಭಕ್ತಿಯುಳ್ಳ ಜನರಿಗೆ ಆಶ್ರಯವನ್ನೀವ ಎಲೌ ಪೂಜ್ಯಳೇ, ನಿನ್ನ ಚರಣಸಾನ್ನಿಧ್ಯವನ್ನು ನಾನು ಆಶ್ರಯಿಸಿದ್ದೇನೆ. ನಿನ್ನ ಸ್ತೋತ್ರದಲ್ಲಿ ಏಕದೇಶವನ್ನಾದರೂ ಮಾಡಬೇಕೆಂಬುದೇ ನನ್ನ ಬಯಕೆ. ಅದರ ಸಲುವಾಗಿ ನನ್ನ ಇಂದ್ರಿಯಗಳು ನಿನ್ನಲ್ಲೇ ಸ್ಥಿರವಾಗಿ ನೆಲಸಲಿ. ಮಗನಾದ ನನ್ನ ಮೇಲೆ ವಾತ್ಸಲ್ಯವುಳ್ಳ ಓ ಜನನೀ, ಸಮಾಧಾನವನ್ನು ಹೊಂದು. ಮೂರು ಲೋಕಕ್ಕೂ ಆಶ್ರಯವನ್ನೀವ ನಿನಗೆ ನಮಸ್ಕಾರ. ಓ ಕಲ್ಯಾಣೀ, ನನ್ನ ಬುದ್ಧಿಯು ಯಾವಾಗಲೂ ನಿನ್ನ ಕಡೆಗೇ ಇರಲಿ. ನಿನ್ನನ್ನು ಮರೆಹೊಕ್ಕಿರುವೆನು. ನಿನಗೆ ನಮಸ್ಕಾರ ನಮಸ್ಕಾರ.

೨೦. ಸೂತಪೌರಾಣಿಕನು ಹೇಳಿದನು.—ಹೀಗೆ ವೀರಕನು ಸ್ತೋತ್ರ ಮಾಡಲು ಗಿರಿರಾಜನ ಪುತ್ರಿಯಾದ ಪಾರ್ವತೀದೇವಿಯು ಪ್ರಸನ್ನಳಾದಳು. ಬಳಿಕ ಮಂಗಳಮಯವಾದ ತನ್ನ ಪತಿಗೃಹವನ್ನು ಪ್ರವೇಶಿಸಿದಳು.

೨೧-೨೪. ಆಗ ಮಹಾದೇವನು ಪುಟವಿಕ್ಕಿದ ಚಿನ್ನದ ಬಣ್ಣವುಳ್ಳ ಸುಂದರಿಯಾದ ಪಾರ್ವತಿಯನ್ನು ನೋಡಿದನು. ಅವಳ ಆಕಾರವು ಮನಸ್ಸನ್ನು ಮೋಹಗೊಳಿಸುತ್ತಿತ್ತು. ಅವಳು ಮದದಾನೆಯಂತೆ ನಡೆಯುತ್ತಿದ್ದಳು. ಅವಳ ಮುಖವು

**ಪೂರ್ಣಚಂದ್ರಾನನಾಂ ತನ್ವೀಂ ನಿತಂಬೋರುಘನಸ್ತನೀಂ ।**
**ಮಧ್ಯೇ ಕ್ಷಾಮಾಂ ತಥಾಽಕ್ಷೇಣ ಲಾವಣ್ಯಾಮೃತವರ್ಷಿಣೀಂ ॥೨೨॥**

**ಸರ್ವಾಭರಣಪೂರ್ಣಾಂಗೀಂ ಮದೋ ಮಂದೇನ ಕಾರಿಣೀಂ ।**
**ಸಕಾಮಃ ಶಂಕಿತೋ ದೀನೋ ರೌದ್ರೋ ವೀರೋ ಭಯಾನಕಃ ॥೨೩॥**

**ಕರುಣಾಹಾಸ್ಯಬೀಭತ್ಸಕಿಂಚಿತ್ಕಿಂಚಿದ್ಧರೋಽಭವತ್ ।**
**ಜಿಘಾಂಸುರ್ದೇವವಾಕ್ಯೇನ ಭೈರವಂ ಕೃತವಾನ್ ವಪುಃ ॥೨೪॥**

**ಸಾ ಚಾಪಿ ಭೈರವೀ ಜಾತಾ ದೇವಸ್ಯ ಪ್ರತಿರೂಪಿಣೀ ।**
**ತಸ್ಯಾ ರೂಪಸಹಸ್ರಾಣಿ ದದರ್ಶ ಗಿರಿಗೋಚರಃ ॥೨೫॥**

**ಗ್ರಸ್ತೇ ಸಹಸ್ರರೂಪಾಣಾಂ ತಾರಾರೂಪೇ ಪ್ರದರ್ಶಿತೇ ।**
**ಪಾರ್ವತ್ಯಾ ಚಾಥ ನಿಶ್ಶಂಕಃ ಶಂಕರೋ ನಾಭವತ್ತತಃ ॥೨೬॥**

---

ಪೂರ್ಣಚಂದ್ರನಂತಿತ್ತು. ನಿತಂಬವೂ ಕುಚಗಳೂ ದಪ್ಪವಾಗಿದ್ದುವು. ದೇಹವು ತೆಳ್ಳಗೂ ನಡುವು ಕಿರಿದಾಗಿಯೂ ಇದ್ದಿತು. ಅವಳು ಲಾವಣ್ಯಾಮೃತವನ್ನು ಬೀರುತ್ತ ಸಕಲಾಭರಣಪೂರ್ಣಳಾಗಿ ಮದವನ್ನುಂಟುಮಾಡುತ್ತಿದ್ದಳು. ಅವಳನ್ನು ನೋಡಿ ಈಶ್ವರನಿಗೆ ಅನುರಾಗವೂ ಶಂಕೆಯೂ ಹುಟ್ಟಿದುವು. ಸ್ವಲ್ಪಮಟ್ಟಿಗೆ ದೈನ್ಯವೂ ತಲೆದೋರಿತು. ಹೀಗೆ ವಿವಿಧಭಾವಗಳೂ ರೌದ್ರ, ವೀರ, ಭಯಾನಕ, ಕರುಣಾ, ಹಾಸ್ಯ, ಬೀಭತ್ಸಗಳೆಂಬ ರಸಗಳೂ ವ್ಯಕ್ತವಾದುವು. ಹಿಂದಿನಂತೆಯೇ ಕೃತ್ರಿಮರೂಪವಿರಬಹುದೆಂದು ಭಾವಿಸಿ, ದೇವತೆಗಳ ಮಾತಿನಂತೆ ಅವಳನ್ನು ಕೊಲ್ಲಲಿಚ್ಛಿಸಿ ಭಯಂಕರವಾದ ಶರೀರವನ್ನು ತಾಳಿದನು.

೨೫. ಮಹಾದೇವನ ರೂಪಕ್ಕೆ ಪ್ರತಿಯಾಗಿ ಅವಳೂ ಸಹ ಭಯಂಕರವಾದ ಆಕಾರವನ್ನು ತಾಳಿದಳು. ಅವಳ ಸಾವಿರಾರು ರೂಪಗಳನ್ನು ಈಶ್ವರನು ನೋಡಿದನು.

೨೬. ಈಶ್ವರನು ಪ್ರದರ್ಶಿಸಿದ, ನಕ್ಷತ್ರಗಳಂತೆ ಜಾಜ್ವಲ್ಯಮಾನವಾದ ಸಾವಿರಾರು ರೂಪಗಳನ್ನೂ ಪಾರ್ವತಿಯು ನುಂಗಿದಳು. ಬಳಿಕ ಅವನಿಗೆ ಸಂದೇಹವು ದೂರವಾಯಿತು.

ದೃಷ್ಟ್ವಾ ಜಗನ್ಮಯೀಂ ತಾಂ ತು ರರಾಮ ಸುರತಪ್ರಿಯಃ ।
ವಿರಹೋತ್ಕಂಠಿತಾಂ ಭಾರ್ಯಾಂ ಪ್ರಾಪ್ಯ ಭೂಯೋ ಹಿಮಾತ್ಮಜಾಂ ॥೨೭॥

ಯಾವದ್ವರ್ಷಸಹಸ್ರಾಂತಮುಭಯೋ ರಹಸಿಸ್ಥಯೋಃ ।
ನಾನಾಕರಣಬದ್ಧೋತ್ಥಾ ಕ್ರೀಡಾಸೀತ್ಸಂತತಾ ತಯೋಃ ॥೨೮॥

ದ್ವಾರಸ್ಥೋ ವೀರಕೋ ದೇವಾನ್ ಹರದರ್ಶನಕಾಂಕ್ಷಿಣಃ ।
ವ್ಯಸರ್ಜಯತ್ಸ್ವಕಾನ್ಯೇವ ಗೃಹಾಣ್ಯಾದರಪೂರ್ವಕಂ ॥೨೯॥

ನಾಸ್ತ್ಯತ್ರಾವಸರೋ ದೇವಾ ದೇವ್ಯಾ ಸಹ ವೃಷಾಕಪಿಃ ।
ನಿಭೃತಃ ಕ್ರೀಡತೀತ್ಯುಕ್ತ್ವಾ ಯಯುಸ್ತೇ ಚ ಯಥಾಗತಂ ॥೩೦॥

ಗತೇ ವರ್ಷಸಹಸ್ರೇ ತು ದೇವಾಸ್ತ್ವರಿತಮಾನಸಾಃ ।
ಜ್ವಲನಂ ಚೋದಯಾಮಾಸುರ್ಜ್ಞಾತುಂ ಶಂಕರಚೇಷ್ಟಿತಂ ॥೩೧॥

---

೨೭. ಆಕೆ ಜಗನ್ಮಯಿಯೆಂದು ಈಶ್ವರನಿಗೆ ತಿಳಿಯಿತು. ವಿರಹದಿಂದ ಕೊರಗುತ್ತಿದ್ದ ತನ್ನ ಪ್ರಿಯಪತ್ನಿಯನ್ನು ಮರಳಿ ಪಡೆದು ಸುರತಾಭಿಲಾಷೆಯಿಂದ ಅವನು ಅವಳೊಡನೆ ಕ್ರೀಡಿಸಿದನು.

೨೮. ಅವರಿಬ್ಬರೂ ಸಾವಿರವರ್ಷಗಳು ಮುಗಿಯುವವರೆಗೆ ಏಕಾಂತ ದಲ್ಲಿದ್ದರು. ನಾನಾ ಬಗೆಯ ಬಂಧಗಳನ್ನು ವಿರಚಿಸಿ ಎಡೆಬಿಡದೆ ಕ್ರೀಡಿಸಿದರು.

೨೯. ಬಾಗಿಲ ಬಳಿಯಲ್ಲಿದ್ದ ವೀರಕನು ಈಶ್ವರನ ದರ್ಶನಕ್ಕೋಸ್ಕರವಾಗಿ ಬಂದು ನಿಂತಿದ್ದ ದೇವತೆಗಳನ್ನು ಆದರದಿಂದ ಸಂತೈಸಿ ಅವರವರ ಮನೆಗಳಿಗೇ ಕಳುಹಿಸಿದನು.

೩೦. "ಓ ದೇವತೆಗಳಿರಾ, ಈಗ ಸಮಯವಲ್ಲ. ಮಹಾದೇವನು ಪಾರ್ವತಿ ಯೊಡನೆ ಏಕಾಂತದಲ್ಲಿ ವಿಹರಿಸುತ್ತಿದ್ದಾನೆ'' ಎಂದು ಹೇಳಲು ಅವರು ಬಂದಿದ ಹಾಗೆ ಹಿಂದಿರುಗಿ ಹೋದರು.

೩೧. ಸಾವಿರ ವರ್ಷಗಳು ಕಳೆಯಲು, ದೇವತೆಗಳು ತ್ವರೆಯಿಂದ ಕೂಡಿ ಶಂಕರನ ಅಭಿಪ್ರಾಯವನ್ನು ತಿಳಿಯಲೋಸುಗ ಅಗ್ನಿಯನ್ನು ಕಳುಹಿಸಿದರು.

ಪ್ರವಿಶ್ಯ ಜಾಲರಂಧ್ರೇಣ ಶುಕರೂಪೀ ಹುತಾಶನಃ ।
ದದೃಶೇ ಶಯನೇ ಶರ್ವಂ ರತಂ ಗಿರಿಜಯಾ ಸಹ ॥೩೨॥

ದದೃಶೇ ತಂ ಚ ದೇವೇಶೋ ಹುತಾಶಂ ಶುಕರೂಪಿಣಂ ।
ತಮುವಾಚ ಮಹಾದೇವಃ ಕಿಂಚಿತ್ಕೋಪಸಮನ್ವಿತಃ ॥೩೩॥

॥ ಶರ್ವ ಉವಾಚ ॥

ನಿಷಿಕ್ತಮರ್ಧಂ ದೇವ್ಯಾಂ ಮೇ ಶುಕ್ರಸ್ಯ ಶುಕವಿಗ್ರಹ ।
ಲಜ್ಜಯಾ ವಿರತಿಸ್ಥಾಯಾಂ ತ್ವಮರ್ಧಂ ಪಿಬ ಪಾವಕ ॥೩೪॥

ಯಸ್ಮಾತ್ತು ತ್ವತ್ಕೃತೋ ವಿಘ್ನಸ್ತಸ್ಮಾತ್ತ್ವಯ್ಯುಪಪದ್ಯತೇ ।
ಇತ್ಯುಕ್ತಃ ಪ್ರಾಂಜಲಿರ್ವಹ್ನಿರಪಿಬದ್ವೀರ್ಯಮಾಹಿತಂ ॥೩೫॥

ತೇನಾಪೂರ್ಯತ ತಾನ್ ದೇವಾಂಸ್ತತ್ತತ್ಕಾಯವಿಭೇದತಃ ।
ವಿಪಾಟ್ಯ ಜಠರಂ ತೇಷಾಂ ವೀರ್ಯಂ ಮಾಹೇಶ್ವರಂ ತತಃ ॥೩೬॥

---

೩೨. ಅಗ್ನಿಯು ಗಿಳಿಯ ರೂಪವನ್ನು ತಾಳಿ, ಕಿಟಕಿಯ ಸಂದಿಯಿಂದ ಪ್ರವೇಶಿಸಿ ಈಶ್ವರನು ಗಿರಿಜೆಯೊಡನೆ ಶಯನದಲ್ಲಿ ಕ್ರೀಡಿಸುತ್ತಿರುವುದನ್ನು ಕಂಡನು.

೩೩-೩೪. ಈಶ್ವರನು ಹೇಳಿದನು.—ಶುಕರೂಪವನ್ನು ಧರಿಸಿ ಬಂದ ಎಲೈ ಅಗ್ನೀ, ನನ್ನ ರೇತಸ್ಸಿನಲ್ಲಿ ಅರ್ಧಭಾಗವನ್ನು ದೇವಿಯಲ್ಲಿ ಸೇಚನಮಾಡಿದೆನು. ನಿನ್ನನ್ನು ಕಂಡು ಲಜ್ಜೆಯಿಂದ ಅವಳು ಕ್ರೀಡೆಯಲ್ಲಿ ಅಭಿಲಾಷೆಯನ್ನು ತೊರೆದಳು. ಉಳಿದರ್ಧವನ್ನು ನೀನು ಪಾನಮಾಡು.

೩೫. ನೀನು ವಿಘ್ನವನ್ನುಂಟುಮಾಡಿದುದರಿಂದ ನಾನು ಹೇಳಿದಂತೆ ಮಾಡುವುದು ನಿನಗೆ ಯುಕ್ತವಾಗಿದೆ" ಎಂದು ಈಶ್ವರನು ಹೇಳಲು ಅಗ್ನಿಯು ಕೈಮುಗಿದು ಅವನ ರೇತಸ್ಸನ್ನು ಪಾನಮಾಡಿದನು.

೩೬-೩೭. ಅಗ್ನಿಯು ದೇವತೆಗಳಿಗೆ ಮುಖದಂತಿರುವುದರಿಂದ ಅವನು ಪಾನಮಾಡಿದ ರೇತಸ್ಸು ಅವರೆಲ್ಲರ ಶರೀರದಲ್ಲೂ ಬೇರೆಬೇರೆಯಾಗಿ ಸೇರಿತು. ಕುದಿಯುವ ಚಿನ್ನದಂತಿದ್ದ ಆ ಮಹೇಶ್ವರನ ವೀರ್ಯವು ಅವರ ಹೊಟ್ಟೆಯನ್ನು ಸೀಳಿ

ನಿಷ್ಕ್ರಾಂತಂ ತಪ್ತಹೇಮಾಭಂ ವಿತತೇ ಶಂಕರಾಶ್ರಮೇ ।
ತಸ್ಮಿನ್ ಸರೋ ಮಹಜ್ಜಾತಂ ವಿಮಲಂ ಬಹುಯೋಜನಂ ॥೩೭॥

ಪ್ರೋತ್ಫುಲ್ಲಹೇಮಕಮಲಂ ನಾನಾವಿಹಗನಾದಿತಂ ।
ತಚ್ಛ್ರುತ್ವಾ ತು ತತೋ ದೇವೀ ಹೇಮದ್ರುಮಮಹಾಜಲಂ ॥೩೮॥

ಜಗಾಮ ಕೌತುಕಾವಿಷ್ಟಾ ತತ್ಸರಃ ಕನಕಾಂಬುಜಂ ।
ತತ್ರ ಕೃತ್ವಾ ಜಲಕ್ರೀಡಾಂ ತದಬ್ಜಕೃತಶೇಖರಾ ॥೩೯॥

ಉಪವಿಷ್ಟಾ ತತಸ್ತಸ್ಯ ತೀರೇ ದೇವೀ ಸಖೀಯುತಾ ।
ಪಾತುಕಾಮಾ ಚ ತತ್ತೋಯಂ ಸ್ವಾದು ನಿರ್ಮಲಪಂಕಜಂ ॥೪೦॥

ಅಪಶ್ಯತ್ಕೃತ್ತಿಕಾಃ ಸ್ನಾತಾಃ ಷಡರ್ಕದ್ಯುತಿಸನ್ನಿಭಾಃ
ಪದ್ಮಪತ್ರೇ ತು ತದ್ವಾರಿ ಗೃಹೀತ್ವೋಪಸ್ಥಿತಾ ಗೃಹಂ ॥೪೧॥

---

ಕೊಂಡು ಹೊರಕ್ಕೆ ಬಂದಿತು. ಅದರಿಂದ ವಿಸ್ತಾರವಾದ ಆ ಶಂಕರನ ಆಶ್ರಮದಲ್ಲಿ ಬಹುಯೋಜನ ವಿಸ್ತೃತವೂ ನಿರ್ಮಲವೂ ಆದ ಸರೋವರವೊಂದು ಏರ್ಪಟ್ಟಿತು. ಅದರಲ್ಲಿ ಚಿನ್ನದ ತಾವರೆಗಳು ಅರಳಿದ್ದುವು. ಬಗೆಬಗೆಯ ಪಕ್ಷಿಗಳು ಧ್ವನಿ ಮಾಡುತ್ತಿದ್ದುವು.

೩೮. ಸುವರ್ಣದ ವೃಕ್ಷಗಳೂ, ಅತ್ಯುತ್ತಮವಾದ ಜಲವೂ, ಚಿನ್ನದ ತಾವರೆಗಳೂ ಪರಿಶೋಭಿಸುವ ಆ ಸರೋವರದ ವೃತ್ತಾಂತವನ್ನು ಕೇಳಿ ದೇವಿಯು ಕುತೂಹಲದಿಂದ ನೋಡುವುದಕ್ಕೆ ಹೋದಳು.

೩೯-೪೦. ಜಲಕ್ರೀಡೆಯನ್ನಾಡಿ, ತಾವರೆ ಹೂವನ್ನು ಮುಡಿದು ಪಾರ್ವತಿಯು ತನ್ನ ಗೆಳತಿಯರೊಡನೆ ಆ ಸರೋವರದ ತೀರದಲ್ಲಿ ಕುಳಿತಳು. ಶುಭ್ರವಾದ ಕಮಲಗಳಿಂದ ತುಂಬಿ ಮಧುರವಾಗಿರುವ ಅದರ ನೀರನ್ನು ಕುಡಿಯಬೇಕೆಂದು ಅವಳಿಗೆ ಅಭಿಲಾಷೆ ಹುಟ್ಟಿತು.

೪೧. ಸೂರ್ಯನಂತೆ ತೇಜೋಭರಿತರಾದ ಆರುಜನ ಕೃತ್ತಿಕಾದೇವಿಯರು ಆ ಕೊಳದಲ್ಲಿ ಸ್ನಾನಮಾಡಿ ತಾವರೆಯ ಎಲೆಯಲ್ಲಿ ನೀರನ್ನು ತೆಗೆದುಕೊಂಡು ಮನೆಗೆ ಹೊರಟರು. ಅದನ್ನು ಪಾರ್ವತಿ ನೋಡಿದಳು.

ಹರ್ಷಾದುವಾಚ ಪಶ್ಯಾಮಿ ಪದ್ಮಪತ್ರೇ ಸ್ಥಿತಂ ಪಯಃ ।
ತತಸ್ತಾ ಊಚುರಖಿಲಾಃ ಕೃತ್ತಿಕಾ ಹಿಮಶೈಲಜಾಂ ॥೪೨॥

॥ ಕೃತ್ತಿಕಾ ಊಚುಃ ॥

ದಾಸ್ಯಾಮೋ ಯದಿ ತೇ ಗರ್ಭಃ ಸಂಭೂತೋ ಯೋ ಭವಿಷ್ಯತಿ ।
ಸೋಽಸ್ಮಾಕಮಪಿ ಪುತ್ರಃ ಸ್ಯಾದಸ್ಮನ್ನಾಮ್ನಾ ಚ ವರ್ತತಾಂ ।
ಭವೇಲ್ಲೋಕೇಷು ವಿಖ್ಯಾತಃ ಸರ್ವೇಷ್ವಪಿ ಶುಭಾನನೇ ॥೪೩॥

ಇತ್ಯುಕ್ತೋವಾಚ ಗಿರಿಜಾ ಕಥಂ ಮದ್ಗಾತ್ರಸಂಭವಃ ।
ಸರ್ವೈರವಯವೈರ್ಯುಕ್ತೋ ಭವತೀಭ್ಯಃ ಸುತೋ ಭವೇತ್ ॥೪೪॥

ತತಸ್ತಾಂ ಕೃತ್ತಿಕಾ ಊಚುರ್ವಿಧಾಸ್ಯಾಮೋಽಸ್ಯ ವೈ ವಯಂ ।
ಉತ್ತಮಾನ್ಯುತ್ತಮಾಂಗಾನಿ ಯದ್ಯೇವಂ ತು ಭವಿಷ್ಯತಿ ॥೪೫॥

---

೪೨. "ತಾವರೆಯ ಎಲೆಯಲ್ಲಿ ನೀರಿರುವುದೆಂದು ಕಾಣುತ್ತದೆ" ಎಂದು ಪಾರ್ವತಿ ಹರ್ಷದಿಂದ ಹೇಳಲು, ಆ ಕೃತ್ತಿಕಾದೇವಿಯರೆಲ್ಲರೂ ಅವಳಿಗಿಂತೆಂದರು.

೪೩. ಕೃತ್ತಿಕಾದೇವಿಯರು ಹೇಳಿದರು.—ನಿನ್ನ ಗರ್ಭದಲ್ಲಿ ಉತ್ಪನ್ನನಾಗಲಿರುವ ಕುಮಾರನು ನಮಗೂ ಮಗನಾಗುವುದಾದರೆ ನಿನಗೆ ನೀರನ್ನು ಕೊಡುವೆವು. ಎಲೌ ಮಂಗಳಮುಖೀ, ಅವನಿಗೆ ನಮ್ಮ ಹೆಸರೇ ಇರಲಿ. ಎಲ್ಲ ಲೋಕಗಳಲ್ಲೂ ಆತನು ಪ್ರಖ್ಯಾತನಾಗುವನು.

೪೪. ಕೃತ್ತಿಕೆಯರು ಇಂತೆನಲು ಪಾರ್ವತಿಯು ಹೇಳಿದಳು. "ಸರ್ವಾವಯವಪೂರ್ಣನಾಗಿ ನನ್ನ ಶರೀರದಲ್ಲಿ ಜನಿಸಿದ ಮಗನು ನಿಮಗೆ ಪುತ್ರನೆಂತು ಆದಾನು."

೪೫. "ಇವನಿಗೆ ನಾವು ರಾರಾಜಿಸುವ ಶಿರಸ್ಸುಗಳನ್ನು ನಿರ್ಮಾಣಮಾಡಿ ಕೊಡುವೆವು. ಹೀಗಾದರೆ ನಮ್ಮ ಇಷ್ಟವು ನೆರವೇರೀತು" ಎಂದು ಕೃತ್ತಿಕೆಯರು ಹೇಳಿದರು. "ನಿರ್ದೋಷಿಯರಾದ ಎಲೌ ದೇವಿಯರೇ! ನಿಮ್ಮ ಅಪೇಕ್ಷೆಯಂತೆ ಆಗಬಹುದು" ಎಂದು ಪಾರ್ವತಿ ಉತ್ತರವಿತ್ತಳು.

ಉಕ್ತಾ ವೈ ಶೈಲಜಾ ಪ್ರಾಹ ಭವತ್ಯೇವಮನಿಂದಿತಾಃ ।
ತತಸ್ತಾ ಹರ್ಷಸಂಪೂರ್ಣಾಃ ಪದ್ಮಪತ್ರಸ್ಥಿತಂ ಪಯಃ ॥೪೬॥

ತಸ್ಯೈ ದದುಸ್ತಯಾ ಚಾಪಿ ತತ್ಪೀತಂ ಕ್ರಮಶೋ ಜಲಂ ।
ಪೀತೇ ತು ಸಲಿಲೇ ತಸ್ಮಿಂಸ್ತತಸ್ತಸ್ಮಿನ್ ಸರೋವರೇ ॥೪೭॥

ವಿಪಾಟ್ಯ ದೇವ್ಯಾಶ್ಚ ತತೋ ದಕ್ಷಿಣಾಂ ಕುಕ್ಷಿಮುದ್ಗತಃ ।
ನಿಶ್ಚಕ್ರಾಮಾದ್ಭುತೋ ಬಾಲಃ ಸರ್ವಲೋಕವಿಭಾಸಕಃ ॥೪೮॥

ಪ್ರಭಾಕರಪ್ರಭಾಕಾರಃ ಪ್ರಕಾಶಕನಕಪ್ರಭಃ ।
ಗೃಹೀತನಿರ್ಮಲೋದಗ್ರಶಕ್ತಿಶೂಲಃ ಷಡಾನನಃ ॥೪೯॥

ದೀಪ್ತೋ ಮಾರಯಿತುಂ ದೈತ್ಯಾನ್ ಕುತ್ಸಿತಾನ್ ಕನಕಚ್ಛವಿಃ ।
ಏತಸ್ಮಾತ್ಕಾರಣಾದ್ದೇವಃ ಕುಮಾರಶ್ಚಾಪಿ ಸೋಽಭವತ್ ॥೫೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕೋಪಾಖ್ಯಾನೇ
ಕುಮಾರಸಂಭವೋ ನಾಮಾಷ್ಟಪಂಚಾಶದಧಿಕಶತತಮೋಽಧ್ಯಾಯಃ

---

೪೬. ಅವರು ಪರಿಪೂರ್ಣವಾದ ಸಂತೋಷದಿಂದ ತಾವರೆಯೆಲೆಯಲ್ಲಿದ್ದ ನೀರನ್ನು ಆಕೆಗೆ ಕೊಟ್ಟರು. ಅವಳೂ ಅದನ್ನು ಒಬ್ಬೊಬ್ಬರಿಂದ ಕ್ರಮವಾಗಿ ಕುಡಿದಳು.

೪೭-೪೮. ಆ ಸರೋವರದ ನೀರನ್ನು ದೇವಿಯು ಪಾನಮಾಡಿದ ಕೂಡಲೇ ಅವಳ ಹೊಟ್ಟೆಯ ಬಲಭಾಗವನ್ನು ಸೀಳಿಕೊಂಡು ಎಲ್ಲ ಲೋಕಗಳನ್ನೂ ಬೆಳಗುವ ಅದ್ಭುತರೂಪನಾದ ಬಾಲಕನು ಹೊರಕ್ಕೆ ಬಂದನು.

೪೯. ಅವನು ಸೂರ್ಯನಂತೆ ತೇಜೋಯುಕ್ತನಾಗಿದ್ದನು. ಪುಟವಿಕ್ಕಿದ ಚಿನ್ನದ ಕಾಂತಿಯಿಂದ ಕೂಡಿದ್ದನು. ಶ್ರೇಷ್ಠವಾದ ಶಕ್ತ್ಯಾಯುಧವನ್ನೂ ಶೂಲವನ್ನೂ ಹಿಡಿದಿದ್ದನು. ಅವನಿಗೆ ಆರು ಮುಖಗಳಿದ್ದವು.

೫೦. ಲೋಕಕಂಟಕರಾದ ದೈತ್ಯರನ್ನು ಸಂಹಾರಮಾಡುವುದಕ್ಕಾಗಿ ಸುವರ್ಣಪ್ರಭನಾದ ಆ ತೇಜಸ್ವಿಯು ಜನಿಸಿದನು. ಈ ಕಾರಣದಿಂದ ಅವನು ದೇವನೂ ಕುಮಾರನೂ ಆದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಕುಮಾರಸ್ವಾಮಿಯ ಅವತಾರವನ್ನು ಹೇಳಿದೆ.

ವೀರಕನಿಗೆ ಶಾಪವನ್ನು ಕೊಟ್ಟುದು ಉಚಿತವಲ್ಲವೆಂದು ಪಾರ್ವತಿಗೆ ತೋರಿ ಬಂದಿತು. ಅವನನ್ನು ಸಂತೈಸಿ ಮರಳಿ ತನ್ನ ಬಳಿಗೆ ಬರುವಂತೆ ಅವಳು ಅನುಗ್ರಹಿಸಿದಳು. ಬಳಿಕ ವೀರಕನು ದೇವಿಯನ್ನು ವಿಧವಿಧವಾಗಿ ಸ್ತುತಿಸಿದನು. ಇತ್ತ ದೇವಿ ಪರಮೇಶ್ವರನ ಬಳಿಗೆ ಹೋದಳು. ಅವನಿಗೆ ಬಹು ಸಂತೋಷವಾಯಿತು. ದಂಪತಿಗಳು ಸಾವಿರ ವರ್ಷಕಾಲ ಕ್ರೀಡಾಸುಖದಲ್ಲಿದ್ದರು.

ದೇವತೆಗಳ ಪ್ರೇರಣೆಯಂತೆ ಅಗ್ನಿಯು ಗಿಳಿಯ ರೂಪದಿಂದ ಪಾರ್ವತೀ ಪರಮೇಶ್ವರರ ಶಯನಮಂದಿರಕ್ಕೆ ಬಂದನು. ಅವನನ್ನು ಕಂಡು ಪಾರ್ವತಿ ಲಜ್ಜಿತಳಾದಳು. ಶಿವನಿಗೆ ಕೋಪ ಬಂದಿತು. ಅಗ್ನಿ ಕ್ಷಮೆಬೇಡಿದನು ; ಮತ್ತು ಈಶ್ವರನ ಅರ್ಧಸಿಕ್ತವಾಗಿದ್ದ ರೇತಸ್ಸನ್ನು ಪಾನಮಾಡಿದನು. ದೇವತೆಗಳು ಅಗ್ನಿಮುಖರಾದುದರಿಂದ ಈ ವೀರ್ಯವು ಅವರಲ್ಲಿಯೂ ಸೇರಿತು. ಆದರೆ ಅಲ್ಲಿ ನಿಲ್ಲದೆ ಅದು ಅವರ ಜಠರವನ್ನು ಸೀಳಿಕೊಂಡು ಹೊರಗೆ ಬಂದಿತು. ಆ ಸ್ಥಳದಲ್ಲಿ ದೊಡ್ಡ ಸರೋವರವೊಂದು ನಿರ್ಮಿತವಾಯಿತು.

ಪಾರ್ವತಿಯು ಅದರಲ್ಲಿ ಜಲಕ್ರೀಡೆಯಾಡಿ ದಡದಲ್ಲಿ ಕುಳಿತಿದ್ದಳು. ಕೃತ್ತಿಕಾದೇವಿಯರು ಅಲ್ಲಿ ಸ್ನಾನಮಾಡಿ ತಾವರೆಯೆಲೆಯಲ್ಲಿ ನೀರು ತುಂಬಿಕೊಂಡು ಮನೆಗೆ ಹೊರಟರು. ಗರಿಜೆಯು ಆ ನೀರನ್ನು ಕೇಳಿ ಕುಡಿದಳು. ಅವಳ ಹೊಟ್ಟೆಯ ಬಲಭಾಗವನ್ನು ಭೇದಿಸಿಕೊಂಡು ಅತಿಶಯ ತೇಜಸ್ವಿಯಾದ ಕುಮಾರನೊಬ್ಬನು ಜನಿಸಿದನು. ಅವನೇ ದೈತ್ಯನಾಶಕನಾದ ಕುಮಾರಸ್ವಾಮಿ.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕೋಪಾಖ್ಯಾನದಲ್ಲಿ ಕುಮಾರಸಂಭವವೆಂಬ ನೂರೈವತ್ತೆಂಟನೆಯ ಅಧ್ಯಾಯವು ಮುಗಿದುದು.



## ಅಥ ನವಪಂಚಾಶದಧಿಕಶತತಮೋऽಧ್ಯಾಯಃ

|| ಸೂತ ಉವಾಚ ||

ವಾಮಂ ವಿದಾರ್ಯ ನಿಷ್ಕ್ರಾಂತಃ ಸುತೋ ದೇವ್ಯಾಃ ಪುನಃ ಶಿಶುಃ |
ಸ್ಕಂದಾಚ್ಚ ವದನೇ ವಹ್ನೇಃ ಶುಕ್ಲಾತ್ಸುವದನೋऽರಿಹಾ || ೧ ||

ಕೃತ್ತಿಕಾಮೇಲನಾದೇವ ಶಾಖಾಭಿಃ ಸವಿಶೇಷತಃ |
ಶಾಖಾಭಿಧಾಃ ಸಮಾಖ್ಯಾತಾಃ ಷಟ್ಸು ವಕ್ತ್ರೇಷು ವಿಸ್ತೃತಾಃ || ೨ ||

ಯತಸ್ತತೋ ವಿಶಾಖೋऽಸೌ ಖ್ಯಾತೋ ಲೋಕೇಷು ಷಣ್ಮುಖಃ |
ಸ್ಕಂದೋ ವಿಶಾಖಃ ಷಡ್ವಕ್ತ್ರಃ ಕಾರ್ತಿಕೇಯಶ್ಚ ವಿಶ್ರುತಃ || ೩ ||

ಚೈತ್ರಸ್ಯ ಬಹುಲೇ ಪಕ್ಷೇ ಪಂಚದಶ್ಯಾಂ ಮಹಾಬಲೌ |
ಸಂಭೂತಾವರ್ಕಸದೃಶೌ ವಿಶಾಲೇ ಶರಕಾನನೇ || ೪ ||

---

೧-೨. ಸೂತಪೌರಾಣಿಕನು ಹೇಳಿದನು.—ಪಾರ್ವತೀದೇವಿಯ ಎಡಭಾಗವನ್ನು ಭೇದಿಸಿಕೊಂಡು ಮತ್ತೊಂದು ಮಗುವು ಜನಿಸಿತು. ಶುಕರೂಪವನ್ನು ಧರಿಸಿದ ಅಗ್ನಿಯ ಮುಖದಲ್ಲಿ ಈಶ್ವರನ ರೇತಸ್ಸು ಬಿದ್ದ ಕಾರಣ, ಶತ್ರುಸಂಹಾರಕನಾದ ಕುಮಾರನ ಮುಖವು ಸುಂದರವಾಯಿತು. ಕೃತ್ತಿಕಾದೇವಿಯರು ಮುಖ್ಯವಾಗಿ ಶಾಖೆಗಳ ರೂಪದಲ್ಲಿ (ಕೊಂಬೆಗಳು ಕವಲೊಡೆದಿರುವ ರೀತಿಯಲ್ಲಿ) ತಲೆಗಳನ್ನು ಜೋಡಿಸಿದರು. ಇದರಿಂದ ಆರು ತಲೆಗಳಿಗೂ ಶಾಖೆಗಳೆಂದೇ ಪ್ರಸಿದ್ಧಿ ಬಂದಿತು.

೩. ಈ ಕಾರಣಗಳಿಂದ ಕುಮಾರಸ್ವಾಮಿಯು ಷಣ್ಮುಖ, ಸ್ಕಂದ, ವಿಶಾಖ, ಷಡ್ವಕ್ತ್ರ, ಕಾರ್ತಿಕೇಯ ಎಂಬ ಹೆಸರುಗಳಿಂದ ಪ್ರಖ್ಯಾತನಾಗಿರುವನು.

೪. ಅಧಿಕ ಚೈತ್ರಮಾಸದ ಕೃಷ್ಣಪಕ್ಷ ಅಮಾವಾಸ್ಯೆಯ ದಿನ ವಿಸ್ತಾರವಾದ ಆ ಜೊಂಡುಹುಲ್ಲಿನ ವನದಲ್ಲಿ ಮಹಾಬಲರೂ ಸೂರ್ಯಸದೃಶರೂ ಆದ ಇಬ್ಬರು ಕುಮಾರಕರು ಉದಿಸಿದರು.

ಚೈತ್ರಸ್ಯೈವ ಸಿತೇ ಪಕ್ಷೇ ಪಂಚಮ್ಯಾಂ ಪಾಕಶಾಸನಃ ।
ಬಾಲಕಾಭ್ಯಾಂ ಚಕಾರೈಕಂ ಮತ್ವಾ ಚಾಮರಭೂತಯೇ ॥ ೫ ॥

ತಸ್ಯಾಮೇವ ತತಃ ಷಷ್ಠ್ಯಾಮಭಿಷಿಕ್ತೋ ಗುಹಃ ಪ್ರಭುಃ ।
ಸರ್ವೈರಮರಸಂಘಾತೈರ್ಬ್ರಹ್ಮೇಂದ್ರೋಪೇಂದ್ರಭಾಸ್ಕರೈಃ ॥ ೬ ॥

ಗಂಧಮಾಲ್ಯೈಃ ಶುಭೈರ್ಧೂಪೈಸ್ತಥಾ ಕ್ರೀಡನಕೈರಪಿ ।
ಛತ್ರೈಶ್ಚಾಮರಜಾಲೈಶ್ಚ ಭೂಷಣೈಶ್ಚ ವಿಲೇಪನೈಃ ॥ ೭ ॥

ಅಭಿಷಿಕ್ತೋ ವಿಧಾನೇನ ಯಥಾವತ್ಷಣ್ಮುಖಃ ಪ್ರಭುಃ ।
ಸುತಾಮಸ್ಮೈ ದದೌ ಶಕ್ರೋ ದೇವಸೇನೇತಿ ವಿಶ್ರುತಾಂ ॥ ೮ ॥

ಪತ್ನ್ಯರ್ಥಂ ದೇವದೇವಸ್ಯ ದದೌ ವಿಷ್ಣುಸ್ತದಾಯುಧಾ ।
ಯಕ್ಷಾಣಾಂ ದಶ ಲಕ್ಷಾಣಿ ದದಾವಸ್ಮೈ ಧನಾಧಿಪಃ ॥ ೯ ॥

---

೫. ಅದೇ ನಿಜಚೈತ್ರದ ಶುಕ್ಲಪಕ್ಷ ಪಂಚಮಿಯ ದಿನ ದೇವತೆಗಳ ಶ್ರೇಯಸ್ಸನ್ನು ಮನದಲ್ಲಿ ನೆನೆದು ದೇವೇಂದ್ರನು ಆ ಇಬ್ಬರು ಬಾಲಕರನ್ನೂ ಸೇರಿಸಿ ಒಬ್ಬನೇ ಕುಮಾರನನ್ನು ಮಾಡಿದನು.

೬. ಅದರ ಮರುದಿನವೇ, ಎಂದರೆ ಶುಕ್ಲಪಕ್ಷದ ಷಷ್ಠಿಯ ದಿವಸ ಬ್ರಹ್ಮ, ಇಂದ್ರ, ಉಪೇಂದ್ರ, ಭಾಸ್ಕರ ಮುಂತಾದ ದೇವವರ್ಗದವರೆಲ್ಲರೂ ಸೇರಿ ಕುಮಾರ ಸ್ವಾಮಿಗೆ ದೇವಸೇನಾಧಿಪತ್ಯದ ಪಟ್ಟವನ್ನು ಕಟ್ಟಿದರು.

೭. ಮಂಗಳಕರವಾದ ಗಂಧಪುಷ್ಪಗಳು, ಧೂಪಗಳು, ಕ್ರೀಡಾಸಾಮಗ್ರಿಗಳು, ಛತ್ರಗಳು, ಚಾಮರಗಳು, ಭೂಷಣಗಳು, ಅನುಲೇಪನಗಳು ಇವುಗಳನ್ನು ಸಮರ್ಪಿಸಿ, ಅವರು ಪ್ರಭುವಾದ ಷಣ್ಮುಖನಿಗೆ ಶಾಸ್ತ್ರೋಕ್ತವಾಗಿ ಅಭಿಷೇಕವನ್ನು ನಡೆಸಿದರು.

೮-೯. ಆಗ ಇಂದ್ರನು ದೇವಸೇನೆಯೆಂಬ ತನ್ನ ಮಗಳನ್ನು ದೇವದೇವನಾದ ಕುಮಾರಸ್ವಾಮಿಗೆ ಒಪ್ಪಿಸಿ, ಅವಳನ್ನು ಪತ್ನಿಯನ್ನಾಗಿ ಸ್ವೀಕರಿಸುವಂತೆ ಬೇಡಿದನು. ವಿಷ್ಣುವು ಬಗೆಬಗೆಯ ಆಯುಧಗಳನ್ನು ಕೊಟ್ಟನು. ಕುಬೇರನು ಹತ್ತುಲಕ್ಷ ಯಕ್ಷರನ್ನು ಒಪ್ಪಿಸಿದನು.

ದದೌ ಹುತಾಶನಸ್ತೇಜೋ ದದೌ ವಾಯುಶ್ಚ ವಾಹನಂ ।
ದದೌ ಕ್ರೀಡನಕಂ ತ್ವಷ್ಟಾ ಕುಕ್ಕುಟಂ ಕಾಮರೂಪಿಣಂ ।
ಏವಂ ಸುರಾಸ್ತು ತೇ ಸರ್ವೇ ಪರಿವಾರಮನುತ್ತಮಂ ॥೧೦॥

ದದುರ್ಮುದಿತಚೇತಸ್ಕಾಃ ಸ್ಕಂದಾಯಾದಿತ್ಯವರ್ಚಸೇ ॥೧೧॥

ಜಾನುಭ್ಯಾಮವನೌ ಸ್ಥಿತ್ವಾ ಸುರಸಂಘಾಸ್ತಮಸ್ತುವನ್ ।
ಸ್ತೋತ್ರೇಣಾನೇನ ವರದಂ ಷಣ್ಮುಖಂ ಮುಖ್ಯಶಃ ಸುರಾಃ ॥೧೨॥

॥ ದೇವಾ ಊಚುಃ ॥

ನಮಃ ಕುಮಾರಾಯ ಮಹಾಪ್ರಭಾಯ
ಸ್ಕಂದಾಯ ಚ ಸ್ಕಂದಿತದಾನವಾಯ ।
ನವಾರ್ಕವಿದ್ಯುದ್ದ್ಯುತಯೇ ನಮೋಽಸ್ತು ತೇ
ನಮೋಽಸ್ತು ತೇ ಷಣ್ಮುಖ ಕಾಮರೂಪ ॥೧೩॥

---

೧೦-೧೧. ಅಗ್ನಿಯು ತೇಜಸ್ಸನ್ನೂ ವಾಯುವು ವಾಹನವನ್ನೂ ಕೊಟ್ಟರು. ವಿಶ್ವಕರ್ಮನು ಸ್ವೇಚ್ಛಾರೂಪವನ್ನು ತಾಳಬಲ್ಲ ಆಟದ ಕೋಳಿಯನ್ನು ಕೊಟ್ಟನು. ಹೀಗೆ ದೇವತೆಗಳೆಲ್ಲರೂ ಸೂರ್ಯನಂತೆ ತೇಜಸ್ವಿಯಾದ ಆ ಕುಮಾರಸ್ವಾಮಿಗೆ ಅತಿ ಶ್ರೇಷ್ಠವಾದ ಪರಿವಾರವರ್ಗವನ್ನು ಒದಗಿಸಿಕೊಟ್ಟರು.

೧೨. ಸುರಪ್ರಮುಖರು ನೆಲದಲ್ಲಿ ಮೊಣಕಾಲುಗಳನ್ನೂರಿ ನಮಸ್ಕರಿಸಿ, ವರವನ್ನು ಕರುಣಿಸುವ ಆ ಷಣ್ಮುಖನನ್ನು ಮುಂದಿನ ಸ್ತೋತ್ರಗಳಿಂದ ಸ್ತುತಿಸಿದರು.

೧೩. ದೇವತೆಗಳು ಹೇಳಿದರು.—ಅತಿಶಯತೇಜಸ್ವಿಯಾದ ಕುಮಾರ ಸ್ವಾಮಿಗೆ ನಮಸ್ಕಾರ. ದಾನವಧ್ವಂಸಿಯಾದ ಸ್ಕಂದನಿಗೆ ನಮಸ್ಕಾರ. ಉದಿಸುತ್ತಿರುವ ಸೂರ್ಯನಂತೆಯೂ ಮಿಂಚಿನಂತೆಯೂ ಬೆಳಗುವ ನಿನಗೆ ನಮಸ್ಕಾರ. ಸ್ವೇಚ್ಛಾರೂಪಿಯಾದ ಎಲೈ ಷಣ್ಮುಖನೇ, ನಿನಗೆ ನಮಸ್ಕಾರ.

ಪಿನದ್ಧನಾನಾಭರಣಾಯ ಭರ್ತ್ರೇ
ನಮೋ ರಣೇ ದಾನವದಾರಣಾಯ ।
ನಮೋಽಸ್ತು ತೇಽರ್ಕಪ್ರತಿಮಪ್ರಭಾಯ
ನಮೋಽಸ್ತು ಗುಹ್ಯಾಯ ಗುಹಾಯ ತುಭ್ಯಂ ॥೧೪॥

ನಮೋಽಸ್ತು ತ್ರೈಲೋಕ್ಯಭಯಾಪಹಾಯ
ನಮೋಽಸ್ತು ತೇ ಬಾಲ ಕೃಪಾಪರಾಯ ।
ನಮೋ ವಿಶಾಲಾಮಲಲೋಚನಾಯ
ನಮೋ ವಿಶಾಖಾಯ ಮಹಾವ್ರತಾಯ ॥೧೫॥

ನಮೋ ನಮಸ್ತೇಽಸ್ತು ಮನೋಹರಾಯ
ನಮೋ ನಮಸ್ತೇಽಸ್ತು ರಣೋತ್ಕಟಾಯ ।
ನಮೋ ಮಯೂರೋಜ್ಜ್ವಲವಾಹನಾಯ
ನಮೋಽಸ್ತು ಕೇಯೂರಧರಾಯ ತುಭ್ಯಂ ॥೧೬॥

---

೧೪. ನಾನಾ ವಿಧವಾದ ಆಭರಣಗಳನ್ನು ಧರಿಸಿ, ಸರ್ವರಕ್ಷಕನಾಗಿ, ಯುದ್ಧದಲ್ಲಿ ದಾನವರನ್ನು ಸೀಳಿಹಾಕುವ ಮಹಾವೀರನಿಗೆ ನಮಸ್ಕಾರ. ಸೂರ್ಯಸಮಾನನಾಗಿ ಬೆಳಗುವ ನಿನಗೆ ನಮಸ್ಕಾರ. ಯೋಗಿಗಳು ಹೃದಯಾಂತರಾಳದಲ್ಲಿ ಧ್ಯಾನಿಸುವ ಗುಹನೆಂದು ಪ್ರಸಿದ್ಧನಾದ ನಿನಗೆ ನಮಸ್ಕಾರ.

೧೫. ಮೂರು ಲೋಕಗಳ ಭಯವನ್ನೂ ಪರಿಹರಿಸುವ ನಿನಗೆ ನಮಸ್ಕಾರ. ಓ ಕುಮಾರಾ, ದಯಾಶಾಲಿಯಾದ ನಿನಗೆ ನಮಸ್ಕಾರ. ಕಣ್ಣುಗಳು ವಿಶಾಲವೂ, ನಿರ್ಮಲವೂ ಆದವನಿಗೆ ನಮಸ್ಕಾರ. ಭಕ್ತರಕ್ಷಣವೆಂಬ ಮಹಾವ್ರತದಲ್ಲಿ ತೊಡಗಿರುವ ವಿಶಾಖನಿಗೆ ನಮಸ್ಕಾರ.

೧೬. ಮನೋಹರನಾದ ನಿನಗೆ ನಮಸ್ಕಾರ ನಮಸ್ಕಾರ. ರಣಭಯಂಕರನಾದ ನಿನಗೆ ನಮಸ್ಕಾರ ನಮಸ್ಕಾರ. ಹೊಳೆಹೊಳೆವ ನವಿಲನ್ನೇರಿದ ನಿನಗೆ ನಮಸ್ಕಾರ. ಸೊಗಸಾದ ತೋಳುಬಳೆಗಳನ್ನು ತೊಟ್ಟ ನಿನಗೆ ನಮಸ್ಕಾರ.

ನಮೋ ಧೃತೋದಗ್ರಪತಾಕಿನೇ ನಮೋ
ನಮಃ ಪ್ರಭಾವಪ್ರಣತಾಯ ತೇಽಸ್ತು ।
ನಮೋ ನಮಸ್ತೇ ವರವೀರ್ಯಶಾಲಿನೇ
ಕ್ರಿಯಾಪರಾಣಾಂ ಭವಭವ್ಯಮೂರ್ತಯೇ ॥೧೭॥

ಕ್ರಿಯಾಪರಾ ಯಜ್ಞಪತಿಂ ಚ ಸ್ತುತ್ವಾ
ವಿನೇಮುರೇವಂ ತ್ವಮರಾಧಿಪಾದ್ಯಾಃ ।
ಏವಂ ತದಾ ಷಡ್ವದನಸ್ತು ಸೇಂದ್ರಾ
ನುವಾಚ ತುಷ್ಟಶ್ಚ ಗುಹಸ್ತತಸ್ತಾನ್ ।
ನಿರೀಕ್ಷ್ಯ ನೇತ್ರೈರಮಲೈಃ ಸುರೇಶಾನ್
ಶತ್ರೂನ್ ಹನಿಷ್ಯಾಮಿ ಗತಜ್ವರಾಃ ಸ್ಥ ॥೧೮॥

॥ ಕುಮಾರ ಉವಾಚ ॥

ಕಂ ವಃ ಕಾಮಂ ಪ್ರಯಚ್ಛಾಮಿ ದೇವತಾ ಬ್ರೂತ ನಿರ್ವೃತಾಃ ।
ಯದ್ಯಪ್ಯಸಾಧ್ಯಂ ಹೃದ್ಯಂ ವೋ ಹೃದಯೇ ಚಿಂತಿತಂ ಪರಂ ॥೧೯॥

---

೧೭. ಉನ್ನತವಾದ ಧ್ವಜವನ್ನು ಧರಿಸಿದಾತನಿಗೆ ನಮಸ್ಕಾರ. ತನ್ನ ಮಹಿಮಾತಿಶಯದಿಂದ ಎಲ್ಲರ ನಮಸ್ಕಾರವನ್ನೂ ಕೈಗೊಳ್ಳುವಾತನಿಗೆ ನಮಸ್ಕಾರ. ವೀರರಲ್ಲಿ ಅಗ್ರೇಸರನೂ ಸತ್ಕಾರ್ಯದಲ್ಲಿ ನಿರತರಾದವರಿಗೆ ಮಂಗಳಸ್ವರೂಪನೂ ಆದ ನಿನಗೆ ನಮಸ್ಕಾರ ನಮಸ್ಕಾರ.

೧೮. ಕಾರ್ಯನಿರತರಾದ ಇಂದ್ರಾದಿ ದೇವತೆಗಳು ಯಜ್ಞಪತಿಯೆನಿಸಿದ ಕುಮಾರಸ್ವಾಮಿಯನ್ನು ಹೀಗೆ ಸ್ತುತಿಸಿ ನಮಸ್ಕರಿಸಿದರು. ಷಣ್ಮುಖನು ಸಂತುಷ್ಟನಾದನು. ಅಸುರಪ್ರಮುಖರನ್ನು ತನ್ನ ನಿರ್ಮಲವಾದ ಕಣ್ಣುಗಳಿಂದ ನೋಡಿ, "ನಿಮ್ಮ ಶತ್ರುಗಳನ್ನು ಕೊಲ್ಲುವೆನು. ನೀವು ನಿಶ್ಚಿಂತರಾಗಿರಿ" ಎಂದು ಅಭಯವನ್ನಿತ್ತು ಸಂತೈಸಿದನು.

೧೯. ಷಣ್ಮುಖನು ಹೇಳಿದನು.—ಓ ದೇವತೆಗಳಿರಾ, ನಿಮ್ಮ ಇಷ್ಟಾರ್ಥವೇನನ್ನು ನೆರವೇರಿಸಲಿ ? ನಿಶ್ಚಿಂತರಾಗಿ ಹೇಳಿರಿ. ನಿಮ್ಮ ಮನಸ್ಸಿನಲ್ಲಿರುವ ಕೋರಿಕೆಯನ್ನು, ಅದು ಅಸಾಧ್ಯವೇ ಆಗಿರಲಿ, ತಿಳಿಸಿರಿ.

ಇತ್ಯುಕ್ತಾಸ್ತು ಸುರಾಸ್ತೇನ ಸ್ತುತ್ವಾ ಪ್ರಣತಮೌಲಯಃ ।
ಸರ್ವ ಏವ ಮಹಾತ್ಮಾನಂ ಗುಹಂ ತದ್ಗತಮಾನಸಾಃ ॥೨೦॥

ದೈತ್ಯೇಂದ್ರಸ್ತಾರಕೋ ನಾಮ ಸರ್ವಾಮರಕುಲಾಂತಕೃತ್ ।
ಬಲವಾನ್ ದುರ್ಜಯೋ ದುಷ್ಟೋ ದುರಾಚಾರೋಽತಿಕೋಪನಃ ।
ತಮೇವ ಜಹಿ ಹೃದ್ಯರ್ಥ ಏಷೋಽಸ್ಮಾಕಂ ಭಯಾಪಹ ॥೨೧॥

ಏವಮುಕ್ತಸ್ತಥೇತ್ಯುಕ್ತ್ವಾ ಸರ್ವಾಮರಪದಾನುಗಃ ।
ಜಗಾಮ ಜಗತಾಂ ನಾಥಃ ಸ್ತೂಯಮಾನೋಽಮರೇಶ್ವರೈಃ ॥೨೨॥

ತಾರಕಸ್ಯ ವಧಾರ್ಥಾಯ ಜಗತಃ ಕಂಟಕಸ್ಯ ವೈ ।
ತತಶ್ಚ ಪ್ರೇಷಯಾಮಾಸ ಶಕ್ರೋ ಲಬ್ಧ ಸಮಾಶ್ರಯಃ ॥೨೩॥

ದೂತಂ ದಾನವಸಿಂಹಸ್ಯ ಪರುಷಾಕ್ಷರವಾದಿನಂ ।
ಸ ತು ಗತ್ವಾಽಬ್ರವೀದ್ದೈತ್ಯಂ ನಿರ್ಭಯೋ ಭೀಮದರ್ಶನಃ ॥೨೪॥

---

೨೦-೨೧. ಷಣ್ಮುಖನು ಹೀಗೆ ಹೇಳಲು ದೇವತೆಗಳೆಲ್ಲರೂ ಅವನಿಗೆ ತಲೆಬಾಗಿ ನಮಸ್ಕರಿಸಿದರು. ಅವನಲ್ಲೇ ಮನಸ್ಸಿಟ್ಟು ಸ್ತುತಿಸಿ ಇಂತೆಂದರು. "ದೈತ್ಯೇಶ್ವರನಾದ ತಾರಕನು ದೇವತೆಗಳನ್ನೆಲ್ಲಾ ನಿರ್ಮೂಲಮಾಡುತ್ತಿದ್ದಾನೆ. ಅವನು ಬಲಿಷ್ಠನು. ಜಯಿಸುವುದಕ್ಕೆ ಸಾಧ್ಯವಿಲ್ಲದವನು. ದುಷ್ಟ, ದುರಾಚಾರಿ, ಅತಿಕೋಪಿಷ್ಠ. ನೀನು ಅವನನ್ನು ಸಂಹರಿಸಬೇಕು. ಅಭಯಪ್ರದನಾದ ಓ ದೇವಾ, ಇದೇ ನಮಗೆ ಇಷ್ಟವಾದ ವಿಷಯ.

೨೨. ಜಗನ್ನಾಥನಾದ ಕುಮಾರಸ್ವಾಮಿಯು ದೇವತೆಗಳ ಪ್ರಾರ್ಥನೆಯನ್ನು ಅಂಗೀಕರಿಸಿ ಲೋಕಕಂಟಕನಾದ ತಾರಕಾಸುರನ ಸಂಹಾರಾರ್ಥವಾಗಿ ಹೊರಟನು. ದೇವತೆಗಳೆಲ್ಲರೂ ಅವನ ಹಿಂದೆ ನಡೆದರು. ಇಂದ್ರಾದಿ ಸುರಮುಖ್ಯರು ಅವನನ್ನು ಸ್ತುತಿಸಿದರು.

೨೩-೨೪. ಬಳಿಕ ಇಂದ್ರನು ಪ್ರಬಲವಾದ ಆಶ್ರಯವು ಸಿಕ್ಕಲು, ನಿರ್ದಾಕ್ಷಿಣ್ಯವಾಗಿ ಮಾತನಾಡುವ ದೂತನೊಬ್ಬನನ್ನು ತಾರಕನ ಬಳಿಗೆ ಕಳುಹಿಸಿದನು. ಭಯಂಕರದರ್ಶನನಾದ ಅವನು ದೈತ್ಯನಲ್ಲಿಗೆ ಹೋಗಿ ನಿರ್ಭಯವಾಗಿ ಹೀಗೆ ಹೇಳಿದನು.

|| ದೂತ ಉವಾಚ ||

ಶಕ್ರಸ್ತ್ವಾಮಾಹ ದೇವೇಶೋ ದೈತ್ಯಕೇತೋ ದಿವಸ್ಪತಿಃ |
ತಾರಕಾಸುರ ತಚ್ಛೃತ್ವಾ ಘಟ ಶಕ್ತ್ಯಾ ಯಥೇಚ್ಛಯಾ ||೨೫||

ಯಜ್ಜಗದ್ದಲನಾದಾಪ್ತಂ ಕಿಲ್ಬಿಷಂ ದಾನವ ತ್ವಯಾ |
ತಸ್ಯಾಹಂ ಶಾಸಕಸ್ತೇಽದ್ಯ ರಾಜಾಸ್ಮಿ ಭುವನತ್ರಯೇ ||೨೬||

ಶ್ರುತ್ವೈತದ್ದೂತವಚನಂ ಕೋಪಸಂರಕ್ತಲೋಚನಃ |
ಉವಾಚ ದೂತಂ ದುಷ್ಟಾತ್ಮಾ ನಷ್ಟಪ್ರಾಯವಿಭೂತಿಕಃ ||೨೭||

|| ತಾರಕ ಉವಾಚ ||

ದೃಷ್ಟಂ ತೇ ಪೌರುಷಂ ಶಕ್ರ ರಣೇಷು ಶತಶೋ ಮಯಾ |
ನಿಸ್ತ್ರಪತ್ವಾನ್ನ ತೇ ಲಜ್ಜಾ ವಿದ್ಯತೇ ಶಕ್ರ ದುರ್ಮತೇ ||೨೮||

---

೨೫. ದೂತನು ಹೇಳಿದನು.—ದೈತ್ಯರ ವಿನಾಶಕ್ಕಾಗಿ ಎದ್ದ ಧೂಮಕೇತುವಿನಂತಿರುವ ಎಲೈ ತಾರಕಾಸುರನೇ, ಸ್ವರ್ಗದ ಅಧಿಪತಿಯೂ ದೇವತೆಗಳ ಒಡೆಯನೂ ಆದ ಇಂದ್ರನು ನಿನಗೆ ಹೀಗೆ ಹೇಳಿದ್ದಾನೆ. ಅದನ್ನು ಕೇಳಿ ನಿನ್ನ ಇಷ್ಟಾನುಸಾರವಾಗಿ ಶಕ್ತಿಯನ್ನು ಸಂಗ್ರಹಿಸಿಕೋ.

೨೬. "ಓ ದಾನವಾ, ಲೋಕವನ್ನು ಧ್ವಂಸಮಾಡಿ ನೀನು ಪಾಪವನ್ನು ಕಟ್ಟಿಕೊಂಡೆ. ಈಗ ಅದಕ್ಕೆ ಶಿಕ್ಷೆಕೊಡುವಾತನು ನಾನು. ಮೂರು ಲೋಕಗಳಿಗೂ ಅಧಿಪತಿಯಾಗಿದ್ದೇನೆ."

೨೭. ಈ ಮಾತನ್ನು ಕೇಳಿ ದೈತ್ಯನಿಗೆ ಕೋಪದಿಂದ ಕಣ್ಣುಗಳು ಕೆಂಪೇರಿದುವು. ಸಂಪತ್ತೆಲ್ಲವೂ ಕೊನೆಗಾಣುವ ಸ್ಥಿತಿಗೆ ಬಂದಿದ್ದ ಆ ದುಷ್ಟಾತ್ಮನು ದೂತನಿಗಿಂತೆಂದನು.

೨೮. ತಾರಕನು ಹೇಳಿದನು.—ಓ ಇಂದ್ರಾ, ಯುದ್ಧಗಳಲ್ಲಿ ನಿನ್ನ ಪರಾಕ್ರಮವನ್ನು ನೂರಾರು ಸಾರಿ ನಾನು ನೋಡಿದ್ದೇನೆ. ಎಲೈ ದುರ್ಬುದ್ಧಿಯೇ! ನೀನು ನಾಚಿಕೆಗೆಟ್ಟವನು. ಆದುದರಿಂದ ಇದು ಅವಮಾನಕರವೆಂಬ ತಿಳುವಳಿಕೆ ಕೂಡ ನಿನಗಿಲ್ಲ.

ಏವಮುಕ್ತೇ ಗತೇ ದೂತೇ ಚಿಂತಯಾಮಾಸ ದಾನವಃ ।
ನಾಲಬ್ಧಸಂಶ್ರಯಃ ಶಕ್ರೋ ವಕ್ತುಮೇವಂ ಹಿ ಚಾರ್ಹತಿ ॥೨೯॥
ಜಿತಃ ಸ ಶಕ್ರೋ ನೋಽಕಸ್ಮಾಜ್ಞಾಯತೇ ಸಂಶ್ರಯಾಶ್ರಯಃ ।
ನಿಮಿತ್ತಾನಿ ಚ ದುಷ್ಟಾನಿ ಸೋಽಪಶ್ಯದ್ದುಷ್ಟಚೇಷ್ಟಿತಃ ॥೩೦॥
ಪಾಂಸುವರ್ಷಮಸೃಕ್ಪಾತಂ ಗಗನಾದವನೀತಲೇ ।
ಭುಜನೇತ್ರಪ್ರಕಂಪಂ ಚ ವಕ್ತ್ರಶೋಷಮನೋಭ್ರಮಂ ॥೩೧॥
ಸ್ವಕಾಂತಾವಕ್ತ್ರಪದ್ಮಾನಾಂ ಮ್ಲಾನತಾಂ ಚ ವ್ಯಲೋಕಯತ್ ।
ದುಷ್ಟಾಂಶ್ಚ ಪ್ರಾಣಿನೋ ರೌದ್ರಾನ್ ಸೋಽಪಶ್ಯದ್ದುಷ್ಟವೇದಿನಃ ॥೩೨॥
ತದಚಿಂತ್ಯೈವ ದಿತಿಜೋ ನ್ಯಸ್ತಚಿಂತೋಽಭವತ್ಕ್ಷಣಾತ್ ।
ಯಾವದ್ಗಜಘಟಾಘಂಟಾರಣತ್ಕಾರರವೋತ್ಕಟಾಂ ॥೩೩॥

---

೨೯. ತಾರಕಾಸುರನು ಹೀಗೆ ಹೇಳಿದ ಮೇಲೆ ದೂತನು ಹೊರಟು ಹೋದನು. ಬಳಿಕ ದೈತ್ಯನು ಆಲೋಚಿಸಿದನು. "ಸರಿಯಾದ ಆಶ್ರಯ ದೊರೆಯದೆ ಇದ್ದರೆ ಇಂದ್ರನು ಹೀಗೆ ಹೇಳಲಾರನು.

೩೦. ನಾವು ಆ ಇಂದ್ರನನ್ನು ಆಗಲೇ ಗೆದ್ದಿದ್ದೇವೆ. ಈಗ ನೋಡಿದರೆ ಇದ್ದಕ್ಕಿದ್ದಹಾಗೆ ಅವನಿಗೆ ಆಶ್ರಯವು ಸಿಕ್ಕಿರುವ ಹಾಗಿದೆ" ಎಂದು ಆ ದುರಾಚಾರಿಯು ಆಲೋಚಿಸುತ್ತಿರಲು ದುಷ್ಫಲಗಳನ್ನು ಸೂಚಿಸುವ ಶಕುನಗಳು ಅವನಿಗೆ ಗೋಚರಿಸಿದುವು.

೩೧. ಆಕಾಶದಿಂದ ನೆಲದ ಮೇಲೆ ಧೂಳಿನ ಮಳೆ ಬಿದ್ದಿತು. ರಕ್ತವು ಸುರಿಯಿತು. ದೈತ್ಯರಾಜನ ಭುಜವೂ ಕಣ್ಣೂ ಅದುರಿದುವು. ಬಾಯಿ ಒಣಗಿತು. ಮನಸ್ಸು ಭ್ರಾಂತಿಗೊಂಡಿತು.

೩೨. ತನ್ನ ಕಾಂತೆಯರ ಮುಖಕಮಲಗಳು ಬಾಡಿದ್ದುದನ್ನು ಅವನು ನೋಡಿದನು. ಅಶುಭಸೂಚಕಗಳಾದ, ಭಯಂಕರಾಕಾರದ ದುಷ್ಟಪ್ರಾಣಿಗಳು ಅವನ ಕಣ್ಣಿಗೆ ಬಿದ್ದುವು.

೩೩-೩೭. ತಾರಕಾಸುರನು ಅದನ್ನು ಲೆಕ್ಕಿಸದೆ ನಿಶ್ಚಿಂತನಾಗಿದ್ದನು. ಆದರೆ ಸ್ವಲ್ಪ ಹೊತ್ತಿನಲ್ಲೇ ದೇವತೆಗಳ ಸೈನ್ಯವು ಬರುತ್ತಿದ್ದುದನ್ನು ಅರಮನೆಯ ಮೇಲಿಂದ

ತದ್ವತ್ತುರಗಸಂಘಾತಕ್ಷುಣ್ಣಭೂರೇಣುಪಿಂಜರಾಂ ।
ಚಂಚಲಸ್ಯಂದನೋದಗ್ರಧ್ವಜರಾಜಿವಿರಾಜಿತಾಂ ॥೩೪॥

ವಿಮಾನೈಶ್ಚಾದ್ಭುತಾಕಾರೈಶ್ಚಲಿತಾಮರಚಾಮರೈಃ ।
ತಾಂ ಭೂಷಣನಿಬದ್ಧಾಂ ಚ ಕಿನ್ನರೋದ್ಗೀತನಾದಿತಾಂ ॥೩೫॥

ನಾನಾನಾಕತರೂತ್ಫುಲ್ಲಕುಸುಮಾಪೀಡಧಾರಿಣೀಂ ।
ವಿಕೋಶಾಸ್ತ್ರಪರಿಷ್ಕಾರಾಂ ವರ್ಮನಿರ್ಮಲದರ್ಶನಾಂ ॥೩೬॥

ಬಂದ್ಯುದ್ಘುಷ್ಟಸ್ತುತಿರವಾಂ ನಾನಾವಾದ್ಯನಿನಾದಿತಾಂ ।
ಸೇನಾಂ ನಾಕಸದಾಂ ದೈತ್ಯಃ ಪ್ರಾಸಾದಸ್ಥೋ ವ್ಯಲೋಕಯತ್ ॥೩೭॥

ಚಿಂತಯಾಮಾಸ ಸ ತದಾ ಕಿಂಚಿದುದ್ಭ್ರಾಂತಮಾನಸಃ ।
ಅಪೂರ್ವಃ ಕೋ ಭವೇದ್ಯೋದ್ಧಾ ಯೋ ಮಯಾ ನ ವಿನಿರ್ಜಿತಃ ॥೩೮॥

---

ಅವನು ಕಂಡನು. ಅದರಲ್ಲಿದ್ದ ಆನೆಗಳಿಗೆ ಕಟ್ಟಿದ್ದ ಘಂಟೆಗಳು ಭಯಂಕರವಾಗಿ ಘಣಘಣಿಸುತ್ತಿದ್ದುವು. ಕುದುರೆಗಳ ಕಾಲಿನ ತುಳಿತದಿಂದೆದ್ದ ಧೂಳಿ ವ್ಯಾಪಿಸಿ ಜಗತ್ತೆಲ್ಲ ಹೊಂಬಣ್ಣವಾಗಿತ್ತು. ಬಾವುಟಗಳು ಸಾಲುಸಾಲಾಗಿ ಅಂದವಾಗಿ ಹಾರಾಡುತ್ತಿದ್ದುವು. ವಿಮಾನಗಳು ಅದ್ಭುತಾಕಾರವಾಗಿದ್ದುವು. ದೇವತೆಗಳು ಚಾಮರವನ್ನು ಬೀಸುತ್ತಿದ್ದರು. ಸೈನಿಕರು ಬಗೆಬಗೆಯ ಭೂಷಣಗಳಿಂದ ಅಲಂಕೃತರಾಗಿದ್ದರು. ಕಿನ್ನರರು ಉಚ್ಚಧ್ವನಿಯಿಂದ ಹಾಡುತ್ತಿದ್ದರು. ಸ್ವರ್ಗಲೋಕದ ವೃಕ್ಷಗಳಲ್ಲಿ ಅರಳಿದ್ದ ಬಗೆಬಗೆಯ ಹೂಗಳನ್ನು ಅವರು ಮುಡಿದಿದ್ದರು. ಅಸ್ತ್ರಗಳನ್ನು ಒರೆಗಳಿಂದ ಎಳೆದು ಝುಳಪಿಸುತ್ತಿದ್ದರು. ಅವರ ಕವಚಗಳು ನಿರ್ಮಲವಾಗಿ ಪ್ರಕಾಶಿಸುತ್ತಿದ್ದುವು. ಹೊಗಳುಭಟ್ಟರು ಘಟ್ಟಿಯಾಗಿ ಹೊಗಳುತ್ತಿದ್ದರು. ಬಗೆಬಗೆಯ ವಾದ್ಯಗಳು ಮೊಳಗುತ್ತಿದ್ದುವು.

೩೮. ಆಗ ಅವನು ಮನಸ್ಸಿನಲ್ಲಿ ಸ್ವಲ್ಪ ಗಾಬರಿಗೊಂಡು ಯೋಚಿಸಿದನು. "ಈ ಅಪೂರ್ವ ಯೋಧವೀರನಾರು? ಇದುವರೆಗೆ ಇವನನ್ನು ನಾನು ಗೆದ್ದಿರುವಂತೆ ತೋರುವುದಿಲ್ಲ."

ತತಶ್ಚಿಂತಾಕುಲೋ ದೈತ್ಯಃ ಶುಶ್ರಾವ ಕಟುಕಾಕ್ಷರಂ ।
ಸಿದ್ಧಬಂದಿಭಿರುದ್ಘುಷ್ಟಮಿದಂ ಹೃದಯದಾರಣಂ ॥೩೯॥

ಅಥ ಗಾಥಾ

ಜಯಾತುಲಶಕ್ತಿದಿಧೀತಿಪಿಂಜರ ಭುಜದಂಡಚಂಡರಣರಭಸ
ಸುರವದನಕುಮುದಕಾನನವಿಕಾಸನೇಂದೋ
ಕುಮಾರ ಜಯ ದಿತಿಜಕುಲಮಹೋದಧಿಬಡಬಾನಲ ॥೪೦॥

ಷಣ್ಮುಖ ಮಧುರರವಮಯೂರರಥ ಸುರ
ಮುಕುಟಕೋಟಿಘಟ್ಟಿತಚರಣನಖಾಂಕುರಮಹಾಸನ ।
ಜಯ ಲಲಿತಚೂಡಾಕಲಾಪನವವಿಮಲದಲ
ಕಮಲಕಾಂತ ದೈತ್ಯವಂಶದುಸ್ಸಹದಾವಾನಲ ॥೪೧॥

---

೩೯. ತಾರಕಾಸುರನು ಹೀಗೆ ಚಿಂತಾಕುಲನಾಗಿರಲು ಸಿದ್ಧರ ಹೊಗಳು ಭಟ್ಟರು ಘಟ್ಟಿಯಾಗಿ ಹೇಳಿದ ಬಿರುನುಡಿಗಳು ಅವನಿಗೆ ಕೇಳಬಂದುವು. ಅವು ಅವನ ಮನಸ್ಸನ್ನು ಇರಿಯುವಂತಿದ್ದುವು.

ಈ ಮುಂದಿನ ಗಾಥೆಗಳೇ ಅವರು ಹಾಡಿದಂತಹವು.

೪೦. ಅಸಮಾನವಾದ ಪರಾಕ್ರಮದ ಕಿರಣಗಳಿಂದ ಹೊಂಬಣ್ಣವಾಗಿರುವವನೇ, ಜಯಶೀಲನಾಗು. ದಂಡಗಳಂತೆ ದೀರ್ಘವಾದ ಭುಜಗಳಿಂದ ಯುದ್ಧದಲ್ಲಿ ಭಯಂಕರವಾಗಿ ವೇಗವನ್ನು ತೋರುವಾತನೇ! ದೇವತೆಗಳ ಮುಖಗಳೆಂಬ ನೈದಿಲೆಯ ವನವನ್ನು ಅರಳಿಸುವ ಚಂದ್ರನೇ, ಕುಮಾರಾ, ಜಯಶೀಲನಾಗು. ದೈತ್ಯವಂಶವೆಂಬ ಮಹಾಸಮುದ್ರದ ಬಡಬಾಗ್ನಿಯೇ, ಜಯಶೀಲನಾಗು.

೪೧. ಓ ಷಣ್ಮುಖಾ! ಇಂಪಾಗಿ ಕೂಗುವ ನವಿಲನ್ನೇರಿದವನೇ, ಚಿಗುರಿನಂತಿರುವ ಪಾದದ ನಖಗಳು ದೇವತೆಗಳ ಕಿರೀಟಗಳ ತುದಿಯನ್ನು ಸೋಕುತ್ತಿರಲು, ಅದರ ಕಾಂತಿಯಿಂದ ಬೆಳಗುವ ದಿವ್ಯಾಸನದಲ್ಲಿ ಕುಳಿತಿರುವಾತನೇ, ಅಂದವಾದ ಶಿಖಾಲಂಕಾರವುಳ್ಳವನೇ, ಜಯಶಾಲಿಯಾಗು. ಹೊಸದಾಗಿ ಅರಳಿರುವ ಸುಂದರವಾದ ಕಮಲದ ದಳವನ್ನು ಮುಡಿದವನೇ, ದೈತ್ಯಕುಲವೆಂಬ ಬಿದಿರಿಗೆ ದಳ್ಳುರಿಯ ಕಾಳ್ಗಿಚ್ಚಿನಂತಿರುವವನೇ, ಜಯಶೀಲನಾಗು.

ಜಯ ವಿಶಾಖ ವಿಭೋ ಜಯ ಸಕಲಲೋಕ
ತಾರಕ ಜಯ ದೇವಸೇನಾನಾಯಕ
ಸ್ಕಂದ ಜಯ ಗೌರೀನಂದನ ಘಂಟಾಪ್ರಿಯ
ಪ್ರಿಯವಿಶಾಖ ವಿಭೋ ಧೃತಪತಾಕಪ್ರಕೀರ್ಣ
ಪ್ರಚಲಕನಕಭೂಷಣ ಭಾಸುರದಿನಕರಸಚ್ಛಾಯ ||೪೨||

ಜಯ ಜನಿತಸಂಭ್ರಮ ಲೀಲಾಲೂನಾಖಿಲಾ
ರಾತೇ ಜಯ ಸಕಲಲೋಕತಾರಕ ದಿತಿಜಾ
ಸುರವರತಾರಕಾಂತಕ ಸ್ಕಂದ ಜಯ ಬಾಲ
ಸಪ್ತವಾಸರ ಜಯ ಭುವನಾವಲಿಶೋಕವಿನಾಶನ ||೪೩||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ದೇವಾಸುರಸಂಗ್ರಾಮೇ
ರಣೋದ್ಯೋಗೋ ನಾಮೈಕೋನಷಷ್ಟ್ಯಧಿಕಶತತಮೋಽಧ್ಯಾಯಃ

---

೪೨. ಓ ವಿಶಾಖಾ, ಪ್ರಭೂ, ಜಯಶಾಲಿಯಾಗು. ಸಕಲಲೋಕಗಳನ್ನು ರಕ್ಷಿಸುವಾತನೇ, ಜಯಶಾಲಿಯಾಗು. ಸ್ಕಂದಾ, ಜಯಶಾಲಿಯಾಗು. ಗೌರೀಪುತ್ರಾ, ದುರ್ಗಾದೇವಿಯ ಪ್ರೀತಿಪಾತ್ರಾ, ಸಕಲಪ್ರಿಯನಾದ ಎಲೈ ವಿಶಾಖಾ, ದೇವಾ, ಎಲ್ಲ ದಿಕ್ಕುಗಳಲ್ಲಿಯೂ ಏರಿಸಿದ ಬಾವುಟಗಳಿಂದ ಶೋಭಿಸುವಾತನೇ, ಸುವರ್ಣಾಲಂಕಾರಗಳಿಂದ ಪ್ರಕಾಶಿಸುವವನೇ, ಸೂರ್ಯನಂತೆ ತೇಜೋಯುಕ್ತನಾದವನೇ, ಜಯಶಾಲಿಯಾಗು.

೪೩. ಸಂಭ್ರಮಗೊಂಡು ಲೀಲೆಯಿಂದ ಶತ್ರುಗಳನ್ನು ನಿರ್ಮೂಲವಾಡಿದಾತನೇ, ಜಯಿಸು. ಸಕಲ ಲೋಕಗಳನ್ನೂ ರಕ್ಷಿಸುವಾತನೇ, ಜಯಿಸು. ದೈತ್ಯಶ್ರೇಷ್ಠನಾದ ತಾರಕನನ್ನು ಸಂಹರಿಸುವಾತನೇ, ಸ್ಕಂದಾ, ಜಯಿಸು. ಏಳುದಿನದ ಮಗೂ, ಎಲ್ಲಾ ಪ್ರಪಂಚಗಳ ಶೋಕವನ್ನೂ ಪರಿಹರಿಸುವಾತನೇ, ಜಯಿಸು.

## ಅಧ್ಯಾಯದ ಸಾರಾಂಶ

ಕುಮಾರಸ್ವಾಮಿಯ ರಣಪ್ರಯಾಣವನ್ನು ಈ ಅಧ್ಯಾಯದಲ್ಲಿ ವರ್ಣಿಸಿದೆ.

ಇಂದ್ರಾದಿ ದೇವತೆಗಳು ಷಣ್ಮುಖನಿಗೆ ಪಟ್ಟಾಭಿಷೇಕವನ್ನು ಮಾಡಿ ವಿಧವಿಧವಾಗಿ ಸ್ತುತಿಸಿದರು. ಅವನು ಪ್ರಸನ್ನನಾಗಿ ಅವರ ಮನೋರಥವೇನೆಂದು ಪ್ರಶ್ನಿಸಿದನು. ಲೋಕಕಂಟಕನಾದ ತಾರಕಾಸುರನನ್ನು ಸಂಹರಿಸಿ ತಮ್ಮನ್ನು ರಕ್ಷಿಸಬೇಕೆಂದು ಅವರು ಬೇಡಿಕೊಂಡರು. ಅವನು ಅದಕ್ಕೆ ಸಮ್ಮತಿಸಿ ಕೂಡಲೇ ಸಕಲ ದೇವಸೇನೆಯೊಡನೆ ಹೊರಟನು. ಇಂದ್ರನು ತಾರಕಾಸುರನ ಬಳಿಗೆ ದೂತನನ್ನು ಕಳುಹಿಸಿ ಎಚ್ಚರಿಕೆ ಕೊಟ್ಟನು. ಆದರೂ ಅವನು ಅದಕ್ಕೆ ಲಕ್ಷ್ಯಕೊಡದೆ ಇದ್ದನು. ಸ್ವಲ್ಪ ಹೊತ್ತಿನೊಳಗಾಗಿಯೇ ದೇವತೆಗಳ ಸೈನ್ಯವು ಅವನಿಗೆ ಕಾಣಬಂದಿತು. ಕುಮಾರಸ್ವಾಮಿಯನ್ನು ಹೊಗಳುಭಟ್ಟರು ಹೊಗಳುತ್ತಿದ್ದರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ದೇವಾಸುರ ಸಂಗ್ರಾಮದೊಳಗೆ
ರಣೋದ್ಯೋಗವೆಂಬ ನೂರ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

---

## ಅಥ ಷಷ್ಟ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಶ್ರುತ್ವೈತತ್ತಾರಕಃ ಸರ್ವಮುದ್ಘುಷ್ಟಂ ದೇವಬಂದಿಭಿಃ
ಸಸ್ಮಾರ ಬ್ರಹ್ಮಣೋ ವಾಕ್ಯಂ ವಧಂ ಬಾಲಾದುಪಸ್ಥಿತಂ || ೧ ||

ಸ್ಮೃತ್ವಾ ಧರ್ಮಂ ಹ್ಯವರ್ಮಾಂಗಃ ಪದಾತಿರಪದಾನುಗಃ |
ಮಂದಿರಾನ್ನಿರ್ಜಗಾಮಾಶು ಶೋಕಗ್ರಸ್ತೇನ ಚೇತಸಾ || ೨ ||

ಕಾಲನೇಮಿಮುಖಾ ದೈತ್ಯಾಃ ಸಂರಂಭಾದ್ಭ್ರಾಂತಚೇತಸಃ |
ಯೋಧಾ ಧಾವತ ಗೃಹ್ಣೀತ ಯೋಜಯಧ್ವಂ ವರೂಥಿನೀಂ || ೩ ||

ಕುಮಾರಂ ತಾರಕೋ ದೃಷ್ಟ್ವಾ ಬಭಾಷೇ ಭೀಷಣಾಕೃತಿಃ |
ಕಿಂ ಬಾಲ ಯೋದ್ಧುಕಾಮೋಽಸಿ ಕ್ರೀಡ ಕಂದುಕಲೀಲಯಾ || ೪ ||

---

೧. ಸೂತಪೌರಾಣಿಕನು ಹೇಳಿದನು.—ದೇವತೆಗಳ ಸ್ತುತಿಪಾಠಕರು ಗಟ್ಟಿಯಾಗಿ ಕೂಗಿ ಹೇಳಿದುದನ್ನೆಲ್ಲ ತಾರಕನು ಕೇಳಿದನು. ಬಾಲಕನಿಂದ ತನಗೆ ಮರಣವೊದಗುವುದೆಂದು ಬ್ರಹ್ಮನು ಹೇಳಿದ್ದ ಮಾತು ಅವನ ನೆನಪಿಗೆ ಬಂದಿತು.

೨. ಧರ್ಮವನ್ನು ಸ್ಮರಿಸಿ ಅವನು ಕವಚವನ್ನು ಹಾಕಿಕೊಳ್ಳದೆ, ಸಂಗಡ ಪದಾತಿಗಳನ್ನೂ ಕರೆದುಕೊಳ್ಳದೆ, ಕಾಲುನಡಗೆಯಿಂದಲೇ ಮನೆಯಿಂದ ಬೇಗನೆ ಹೊರಟನು. ಅವನ ಮನಸ್ಸಿನಲ್ಲಿ ಶೋಕವುಕ್ಕುತ್ತಿತ್ತು.

೩. ಕಾಲನೇಮಿ ಮೊದಲಾದ ದೈತ್ಯರು ಸಡಗರದಿಂದ ಭ್ರಾಂತಮನಸ್ಕರಾದರು. "ಎಲೈ ಯೋಧರೇ, ಓಡಿರಿ; ಹಿಡಿಯಿರಿ; ಸೈನ್ಯವನ್ನು ಜೊತೆಗೊಳಿಸಿರಿ" ಎಂದು ಕೂಗಿದರು.

೪. ಭಯಂಕರಾಕಾರನಾದ ತಾರಕಾಸುರನು ಕುಮಾರನನ್ನು ನೋಡಿ ಹೇಳಿದನು. "ಮಗೂ, ಇದೇನು? ಯುದ್ಧಮಾಡಬೇಕೆಂದು ಬಯಸುವೆಯೋ? ಬೇಡ; ಚೆಂಡಾಟವನ್ನು ಆಡು.

ತ್ವಯಾ ನ ದಾನವಾ ದೃಷ್ಟಾ ಯತ್ಸಂಗರವಿಭೀಷಕಾಃ ।
ಬಾಲತ್ವಾದಥ ತೇ ಬುದ್ಧಿರೇವಂ ಸ್ವಲ್ಪಾರ್ಥದರ್ಶಿನೀ ॥ ೫ ॥

ಕುಮಾರೋಽಪಿ ತಮುಗ್ರಸ್ಥಂ ಬಭಾಷೇ ಹರ್ಷಯನ್ ಸುರಾನ್ ।
ಶೃಣು ತಾರಕ ಶಾಸ್ತ್ರಾರ್ಥಸ್ತ್ವವ ಚೈವ ನಿರೂಪ್ಯತೇ ॥ ೬ ॥

ಶಾಸ್ತ್ರೈರರ್ಥಾ ನ ದೃಶ್ಯಂತೇ ಸಮರೇ ನಿರ್ಭಯೈರ್ಭಟೈಃ ।
ಶಿಶುತ್ವಂ ಮಾಽವಮಂಸ್ಥಾ ಮೇ ಶಿಶುಃ ಕಾಲಭುಜಂಗಮಃ ॥ ೭ ॥

ದುಷ್ಪ್ರೇಕ್ಷ್ಯೋ ಭಾಸ್ಕರೋ ಬಾಲಸ್ತಥಾಹಂ ದುರ್ಜಯಃ ಶಿಶುಃ ।
ಅಲ್ಪಾಕ್ಷರೋ ನ ಮಂತ್ರಃ ಕಿಂ ಸುಸ್ಫುರೋ ದೈತ್ಯ ದೃಶ್ಯತೇ ॥ ೮ ॥

ಕುಮಾರೇ ಪ್ರೋಕ್ತವತ್ಯೇವಂ ದೈತ್ಯಶ್ಚಿಕ್ಷೇಪ ಮುದ್ಗರಂ ।
ಕುಮಾರಸ್ತಂ ನಿರಸ್ಯಾಥ ವಜ್ರೇಣಾಮೋಘವರ್ಚಸಾ ॥ ೯ ॥

---

೫. ರಣಭಯಂಕರರಾದ ದಾನವರನ್ನು ಎಂದೂ ನೀನು ನೋಡಿಲ್ಲ. ಇನ್ನೂ ನೀನು ಮಗು; ಆದುದರಿಂದಲೇ ನಿನಗೆ ಈ ಬುದ್ಧಿ ಬಂದಿರಬಹುದು. ನೀನು ವಿಷಯವನ್ನು ಪೂರ್ಣವಾಗಿ ವಿಚಾರಮಾಡಲಿಲ್ಲ.

೬. ಷಣ್ಮುಖನನ್ನು ನೋಡಿ ದೇವತೆಗಳಿಗೆ ಸಂತೋಷವುಕ್ಕುತ್ತಿತ್ತು. ಅವನು ತನ್ನ ಮುಂದೆ ನಿಂತಿರುವ ದೈತ್ಯನಿಗೆ ಉತ್ತರವಿತ್ತನು. "ಓ ತಾರಕಾ, ಶಾಸ್ತ್ರಾರ್ಥವನ್ನು ವಿವರಿಸುವೆನು ಕೇಳು.

೭-೮. ಧೀರರಾದ ಭಟರು ಯುದ್ಧದಲ್ಲಿ ಶಾಸ್ತ್ರಾರ್ಥಗಳನ್ನು ನೋಡುವುದಿಲ್ಲ. ನನ್ನನ್ನು ಎಳೆಯ ಮಗುವೆಂದು ತಿಳಿಯಬೇಡ. ಕಾಳಿಂಗಸರ್ಪವು ಶಿಶುವೋ? ಬಾಲಸೂರ್ಯನನ್ನು ನೋಡುವುದು ಸುಲಭವೋ? ಹಾಗೆಯೇ ನಾನೂ ಸಹ ಜಯಿಸುವುದಕ್ಕಾಗದ ಶಿಶು. ಓ ದೈತ್ಯಾ, ಅಕ್ಷರಗಳ ಸಂಖ್ಯೆ ಕಡಿಮೆಯಾದ ಮಾತ್ರಕ್ಕೆ ಮಂತ್ರವು ಅರ್ಥದಿಂದ ಉಜ್ವಲವಾಗಿಲ್ಲವೇನು?"

೯. ಷಣ್ಮುಖನು ಹೀಗೆ ಹೇಳುತ್ತಿರಲು ತಾರಕಾಸುರನು ಮುದ್ಗರಾಯುಧವನ್ನು ಎಸೆದನು. ಕುಮಾರನು ಅತಿತೇಜಸ್ವಿಯಾದ ವಜ್ರಾಸ್ತ್ರದಿಂದ ಅದನ್ನು ಭಂಗಗೊಳಿಸಿದನು.

ತತಶ್ಚಿಕ್ಷೇಪ ದೈತ್ಯೇಂದ್ರೋ ಭಿಂದಿಪಾಲಮಯೋಮಯಂ ।
ಕರೇಣ ತಚ್ಚ ಜಗ್ರಾಹ ಕಾರ್ತಿಕೇಯೋಽಮರಾರಿಹಾ ॥೧೦॥

ಗದಾಂ ಮುಮೋಚ ದೈತ್ಯಾಯ ಷಣ್ಮುಖೋಽಪಿ ಖರಸ್ವನಾಂ ।
ತಯಾ ಹತಸ್ತತೋ ದೈತ್ಯಶ್ಚಕಂಪೇಽಚಲರಾಡಿವ ॥೧೧॥

ನೇನೇ ಚ ದುರ್ಜಯಂ ದೈತ್ಯಸ್ತದಾ ಷಡ್ವದನಂ ರಣೇ ।
ಚಿಂತಯಾಮಾಸ ಬುದ್ಧ್ಯಾ ವೈ ಪ್ರಾಪ್ತಃ ಕಾಲೋ ನ ಸಂಶಯಃ ॥೧೨॥

ಕುಪಿತಂ ತು ತಮಾಲೋಕ್ಯ ಕಾಲನೇಮಿಪುರೋಗಮಾಃ ।
ಸರ್ವೇ ದೈತ್ಯೇಶ್ವರಾ ಜಘ್ನುಃ ಕುಮಾರಂ ರಣದಾರುಣಂ ॥೧೩॥

ಸ ತೈಃ ಪ್ರಹಾರೈರಸ್ಪೃಷ್ಟೋ ವೃಥಾಕ್ಲೇಶೈರ್ಮಹಾದ್ಯುತಿಃ ।
ರಣಶೌಂಡಾಸ್ತು ದೈತ್ಯೇಂದ್ರಾಃ ಪುನಃ ಪ್ರಾಸ್ಯೈಃ ಶಿಲೀಮುಖೈಃ ॥೧೪॥

---

೧೦. ತರುವಾಯ ದೈತ್ಯೇಂದ್ರನು ಕಬ್ಬಿಣದ ಭಿಂದಿಪಾಲವನ್ನು ಪ್ರಯೋಗಿಸಿದನು. ಅಸುರಾಂತಕನಾದ ಕುಮಾರನು ಅದನ್ನು ತಡೆದು ಕೈಯಿಂದ ಹಿಡಿದುಕೊಂಡನು.

೧೧. ಷಣ್ಮುಖನು ದೈತ್ಯನ ಮೇಲೆ ಗದೆಯನ್ನು ಬಿಸುಟನು. ಅದು ಭಯಂಕರವಾಗಿ ಧ್ವನಿಮಾಡುತ್ತ ಹೋಗಿ ಪ್ರಹರಿಸಲು ಗಿರಿರಾಜನಂತಿದ್ದ ತಾರಕಾಸುರನು ನಡುಗಿದನು.

೧೨. "ಷಣ್ಮುಖನನ್ನು ಯುದ್ಧದಲ್ಲಿ ಜಯಿಸುವುದು ಅಸಾಧ್ಯ; ನನಗೆ ಕಾಲವೊದಗಿದೆ. ಸಂಶಯವಿಲ್ಲ" ಎಂದು ತಾರಕಾಸುರನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡನು.

೧೩. ತಾರಕಾಸುರನಿಗೆ ಕೋಪಬಂದುದನ್ನು ನೋಡಿ ಕಾಲನೇಮಿ ಮೊದಲಾದ ದೈತ್ಯಮುಖ್ಯರೆಲ್ಲರೂ ಯುದ್ಧಭಯಂಕರನಾದ ಷಣ್ಮುಖನನ್ನು ಪ್ರಹರಿಸಿದರು.

೧೪-೧೫. ಮಹಾತೇಜಸ್ವಿಯಾದ ಆ ಕುಮಾರನನ್ನು ಅವರ ಪ್ರಹಾರಗಳು ಏನೂ ಮಾಡಲಾರದೆ ಹೋದುವು. ಅವರಿಗೆ ವ್ಯರ್ಥವಾಗಿ ಕ್ಲೇಶವಾಯಿತು. ದೇವಾ

ಕುಮಾರಂ ಸಾಮರಂ ಜಘ್ನುರ್ಬಲಿನೋ ದೇವಕಂಟಕಾಃ ।
ಕುಮಾರಸ್ಯ ವ್ಯಥಾ ನಾಭೂದ್ದೈತ್ಯಾಸ್ತ್ರನಿಹತಸ್ಯ ತು ॥೧೫॥

ಪ್ರಾಣಾಂತಕರಣೋ ಜಾತೋ ದೇವಾನಾಂ ದಾನವಾಹವಃ ।
ದೇವಾನ್ನಿಪೀಡಿತಾನ್ ದೃಷ್ಟ್ವಾ ಕುಮಾರಃ ಕೋಪಮಾವಿಶತ್ ॥೧೬॥

ತತೋಽಸ್ತ್ರೈರ್ವಾರಯಾಮಾಸ ದಾನವಾನಾಮನೀಕಿನೀಂ ।
ತತಸ್ತೈರ್ನಿಷ್ಪ್ರತೀಕಾರೈಸ್ತಾಡಿತಾಃ ಸುರಕಂಟಕಾಃ ॥೧೭॥

ಕಾಲನೇಮಿಮುಖಾಃ ಸರ್ವೇ ರಣಾದಾಸನ್ ಪರಾಙ್ಮುಖಾಃ ।
ವಿದ್ರುತೇಷ್ವಥ ದೈತ್ಯೇಷು ಹತೇಷು ಚ ಸಮಂತತಃ ॥೧೮॥

ತತಃ ಕ್ರುದ್ಧೋ ಮಹಾದೈತ್ಯಸ್ತಾರಕೋಽಸುರನಾಯಕಃ ।
ಜಗ್ರಾಹ ಚ ಗದಾಂ ದಿವ್ಯಾಂ ಹೇಮಜಾಲಪರಿಷ್ಕೃತಾಂ ॥೧೯॥

---

ಕಂಟಕರೂ, ಬಲಶಾಲಿಗಳೂ, ರಣವೀರರೂ ಆದ ದೈತ್ಯೇಂದ್ರರು ಪ್ರಾಸ, ಶಿಲೀಮುಖ ಮುಂತಾದ ಶಸ್ತ್ರಗಳಿಂದ ಮರಳಿ ದೇವತೆಗಳನ್ನೂ ಷಣ್ಮುಖನನ್ನೂ ಹೊಡೆದರು. ಅವರ ಹೊಡೆತಗಳಿಂದ ಅವನಿಗೆ ನೋವೇ ಆಗಲಿಲ್ಲ.

೧೬. ಆದರೆ ದಾನವರೊಡನೆ ಯುದ್ಧವೆಂದರೆ ದೇವತೆಗಳ ಪ್ರಾಣವು ಕೊನೆಗಾಣುತ್ತಿತ್ತು. ಅವರು ಬಹು ಹಿಂಸೆಪಡುತ್ತಿದ್ದರು. ಅದನ್ನು ನೋಡಿ ಕುಮಾರನಿಗೆ ಕೋಪ ಬಂದಿತು.

೧೭. ಬಳಿಕ ಅವನು ದಾನವರ ಸೈನ್ಯವನ್ನು ಅಸ್ತ್ರಗಳಿಂದ ತಡೆದನು. ಎದುರಿಲ್ಲದ ಆ ಅಸ್ತ್ರಗಳು ದೇವಶತ್ರುಗಳಾದ ದೈತ್ಯರನ್ನು ಸದೆಬಡಿದುವು.

೧೮-೧೯. ಕಾಲನೇಮಿ ಮೊದಲಾದವರೆಲ್ಲರೂ ಯುದ್ಧವನ್ನು ಬಿಟ್ಟು ಓಡಿದರು. ಹೀಗೆ ಎಲ್ಲ ಕಡೆಯೂ ದೈತ್ಯರು ಹತರಾಗಿ ಪಲಾಯನ ಮಾಡಿದರು. ಬಳಿಕ ಅವರ ನಾಯಕನಾದ ತಾರಕಾಸುರನು ಕೋಪಗೊಂಡು ಸುವರ್ಣದಿಂದ ಅತಿಶಯವಾಗಿ ಅಲಂಕೃತವಾದ ಮಹಾಶಕ್ತಿಯುತವಾದ ಗದೆಯನ್ನೆತ್ತಿಕೊಂಡನು.

ಜಘ್ನೇ ಕುಮಾರಂ ಗದಯಾ ನಿಷ್ಟಪ್ತಕನಕಾಂಗದಃ ।
ಶರೈರ್ಮಯೂರಂ ಚಿತ್ರೈಶ್ಚ ಚಕಾರ ವಿಮುಖಾನ್ ಸುರಾನ್ ॥೨೦॥

ತಥಾ ಪರೈರ್ಮಹಾಭಲ್ಲೈರ್ಮಯೂರಂ ಗುಹವಾಹನಂ ।
ಬಿಭೇದ ತಾರಕಃ ಕ್ರುದ್ಧಃ ಸ ಸೈನ್ಯೇಽಸುರನಾಯಕಃ ॥೨೧॥

ದೃಷ್ಟ್ವಾ ಪರಾಙ್ಮುಖಾನ್ದೇವಾನ್ಮುಕ್ತರಕ್ತಂ ಸ್ವವಾಹನಂ ।
ಜಗ್ರಾಹ ಶಕ್ತಿಂ ವಿಮಲಾಂ ರಣೇ ಕನಕಭೂಷಣಾಂ ॥೨೨॥

ಬಾಹುನಾ ಹೇಮಕೇಯೂರರುಚಿರೇಣ ಷಡಾನನಃ ।
ತತೋ ಜವಾನ್ಮಹಾಸೇನಸ್ತಾರಕಂ ದಾನವಾಧಿಪಂ ॥೨೩॥

ತಿಷ್ಠ ತಿಷ್ಠ ಸುದುರ್ಬುದ್ಧೇ ಜೀವಲೋಕಂ ವಿಲೋಕಯ ।
ಹತೋಽಸ್ಯದ್ಯ ಮಯಾ ಶಕ್ತ್ಯಾ ಸ್ಮರ ಶಸ್ತ್ರಂ ಸುಶಿಕ್ಷಿತಂ ॥೨೪॥

---

೨೦. ಪುಟವಿಟ್ಟ ಚಿನ್ನದ ತೋಳುಬಳೆಗಳನ್ನು ಧರಿಸಿದ ಆ ಅಸುರನು ಗದೆಯಿಂದ ಷಣ್ಮುಖನನ್ನು ಹೊಡೆದನು. ವಿಚಿತ್ರವಾದ ಬಾಣಗಳನ್ನು ಅವನ ವಾಹನವಾದ ನವಿಲಿನ ಮೇಲೆ ಬಿಟ್ಟನು. ದೇವತೆಗಳನ್ನು ರಣದಿಂದ ಹಿಮ್ಮೆಟ್ಟಿಸಿದನು.

೨೧. ಅಸುರನಾಯಕನಾದ ತಾರಕಾಸುರನಿಗೆ ಕೋಪವು ಹೆಚ್ಚಿತು. ಅವನು ಬಹಳ ತೀಕ್ಷ್ಣವಾದ ಭರ್ಜಿಗಳಿಂದ ಷಣ್ಮುಖನ ವಾಹನವಾದ ನವಿಲನ್ನು ಇರಿದನು.

೨೨. ರಕ್ತವನ್ನು ಕಾರುತ್ತ ಯುದ್ಧವನ್ನು ಬಿಟ್ಟೋಡಿದ ತನ್ನ ವಾಹನವಾದ ನವಿಲನ್ನು ಕಂಡು ಕುಮಾರಸ್ವಾಮಿಯು ಸುವರ್ಣಾಲಂಕೃತವೂ ಅಮೋಘವೂ ಆದ ಶಕ್ತ್ಯಾಯುಧವನ್ನು ಎತ್ತಿಕೊಂಡನು.

೨೩-೨೪. ಬಳಿಕ ತೋಳಿನಲ್ಲಿ ಚಿನ್ನದ ತೋಳುಬಳೆ ಪ್ರಕಾಶಿಸುತ್ತಿರಲು, ಕುಮಾರಸ್ವಾಮಿಯು "ದುರ್ಬುದ್ಧಿಯುಳ್ಳ ಎಲೈ ತಾರಕನೇ! ನಿಲ್ಲು ನಿಲ್ಲು; ಈ ಜೀವಲೋಕವನ್ನು ಕೊನೆಯ ಸಾರಿ ನೋಡಿಬಿಡು. ನನ್ನ ಶಕ್ತ್ಯಾಯುಧದಿಂದ ಇನ್ನೇನು ಹತನಾದೆ. ನೀನು ಚೆನ್ನಾಗಿ ಕಲಿತಿರುವ ಶಸ್ತ್ರವನ್ನು ಜ್ಞಾಪಿಸಿಕೋ" ಎಂದು ಹೇಳಿ ಅವನ ಮೇಲೆ ಶಕ್ತಿಯನ್ನು ಪ್ರಯೋಗಿಸಿದನು.

ಇತ್ಯುಕ್ತ್ವಾ ಚ ತತಃ ಶಕ್ತಿಂ ಮುಮೋಚ ದಿತಿಜಂ ಪ್ರತಿ ।
ಸಾ ಕುಮಾರಭುಜೋತ್ಸೃಷ್ಟಾ ತತ್ಕೇಯೂರರವಾನುಗಾ ।
ಬಿಭೇದ ದೈತ್ಯಹೃದಯಂ ವಜ್ರಶೈಲೇಂದ್ರಕರ್ಕಶಂ ॥ ೨೫॥

ಗತಾಸುಃ ಸ ಪಪಾತೋರ್ವ್ಯಾಂ ಪ್ರಲಯೇ ಭೂಧರೋ ಯಥಾ ।
ವಿಕೀರ್ಣಮುಕುಟೋಕ್ಷ್ಣೀಷೋ ವಿಸ್ರಸ್ತಾಖಿಲಭೂಷಣಃ ॥೨೬॥

ತಸ್ಮಿನ್ ವಿನಿಹತೇ ದೈತ್ಯೇ ತ್ರಿದಶಾನಾಂ ಮಹೋತ್ಸವೇ ।
ನಾಭೂತ್ಕಶ್ಚಿತ್ತದಾ ದುಃಖೀ ನರಕೇಷ್ವಪಿ ಪಾಪಕೃತ್ ॥೨೭॥

ಸ್ತುವಂತಃ ಷಣ್ಮುಖಂ ದೇವಾಃ ಕ್ರೀಡಂತಶ್ಚಾಂಗನಾಯುತಾಃ ।
ಜಗ್ಮುಃ ಸ್ವಾನೇವ ಭವನಾನ್ಭೂರಿಧಾಮಾನ ಉತ್ಸುಕಾಃ ॥೨೮॥

ದದುಶ್ಚಾಪಿ ವರಂ ಸರ್ವೇ ದೇವಾಃ ಸ್ಕಂದಮುಖಂ ಪ್ರತಿ ।
ತುಷ್ಟಾಃ ಸಂಪ್ರಾಪ್ತಸರ್ವೇಚ್ಛಾಃ ಸಹ ಸಿದ್ಧೈಸ್ತಪೋಧನೈಃ ॥೨೯॥

---

೨೫. ಷಣ್ಮುಖನು ಕೈಯಿಂದೆತ್ತಿ ಬಿಸುಡಲು, ಆ ಗದೆಯು ಅವನ ತೋಳು ಬಳೆಯಂತೆ ಧ್ವನಿಮಾಡುತ್ತ ಹೋಗಿ, ವಜ್ರಮಯವಾದ ಮಹಾಪರ್ವತದ ಹಾಗೆ ಕಠಿಣವಾಗಿದ್ದ ತಾರಕಾಸುರನ ಹೃದಯವನ್ನು ಸೀಳಿತು.

೨೬. ಅವನು ಮೃತನಾಗಿ ಪ್ರಲಯಕಾಲದಲ್ಲಿ ಪರ್ವತವು ನೆಲದ ಮೇಲೆ ಬೀಳುವಂತೆ ಬಿದ್ದನು. ಅವನ ಕಿರೀಟವೂ ರುಮಾಲೂ ಚದುರಿ ಬಿದ್ದುವು. ಒಡವೆಗಳೆಲ್ಲವೂ ದಿಕ್ಕುಪಾಲಾಗಿ ಎರಚಾಡಿ ಹೋದುವು.

೨೭. ಆ ತಾರಕಾಸುರನು ಸಂಹೃತನಾಗಲು ದೇವತೆಗಳಿಗೆ ಸಂತೋಷವಾಯಿತು. ಆ ಸಮಯದಲ್ಲಿ ದುಃಖಪಡುತ್ತಿದ್ದವನು ಒಬ್ಬನೂ ಇರಲಿಲ್ಲ. ನರಕದಲ್ಲಿರುವ ಪಾಪಿಯೂ ಸಹ ತನ್ನ ಯಾತನೆಯನ್ನು ಮರೆತನು.

೨೮. ದೇವತೆಗಳು ಷಣ್ಮುಖನನ್ನು ಸ್ತೋತ್ರಮಾಡುತ್ತ, ಉಲ್ಲಾಸಪಡುತ್ತ ತಮ್ಮತಮ್ಮ ಪತ್ನಿಯರೊಡನೆ ಮನೆಗಳಿಗೆ ತೆರಳಿದರು. ಅವರಿಗೆ ಅತಿಶಯವಾದ ತೇಜಸ್ಸೂ ಉತ್ಸಾಹವೂ ಉಂಟಾದುವು.

೨೯. ಎಲ್ಲ ದೇವತೆಗಳೂ ತುಷ್ಟರಾದರು. ಅವರ ಮನೋರಥಗಳೆಲ್ಲವೂ ಈಡೇರಿದುವು. ಸಿದ್ಧರು, ಮಹರ್ಷಿಗಳು ಇವರೊಡಗೂಡಿ ಅವರು ಕುಮಾರಸ್ವಾಮಿಯ ಉಪಾಖ್ಯಾನದ ಮಹಿಮೆಯ ವಿಷಯವಾಗಿ ವರವನ್ನು ಕರುಣಿಸಿದರು.

|| ದೇವಾ ಊಚುಃ ||

ಯಃ ಪಠೇತ್ಸ್ಕಂದಸಂಬದ್ಧಾಂ ಕಥಾಂ ಮರ್ತ್ಯೋ ಮಹಾಮತಿಃ |
ಶೃಣುಯಾಚ್ಛ್ರಾವಯೇದ್ವಾಪಿ ಸ ಭವೇತ್ಕೀರ್ತಿಮಾನ್ನರಃ ||೩೦||

ಬಹ್ವಾಯುಃ ಸುಭಗಃ ಶ್ರೀಮಾನ್ ಕಾಂತಿಮಾನ್ಶುಭದರ್ಶನಃ |
ಭೂತೇಭ್ಯೋ ನಿರ್ಭಯಶ್ಚಾಪಿ ಸರ್ವದುಃಖವಿವರ್ಜಿತಃ ||೩೧||

ಸಂಧ್ಯಾಮುಪಾಸ್ಯ ಯಃ ಪೂರ್ವಾಂ ಸ್ಕಂದಸ್ಯ ಚರಿತಂ ಪಠೇತ್ |
ಸ ಮುಕ್ತಃ ಕಿಲ್ಬಿಷೈಃ ಸರ್ವೈರ್ಮಹಾಧನಪತಿರ್ಭವೇತ್ ||೩೨||

ಬಾಲಾನಾಂ ವ್ಯಾಧಿಜುಷ್ಟಾನಾಂ ರಾಜದ್ವಾರಂ ಚ ಸೇವತಾಂ |
ಇದಂ ತತ್ಪರಮಂ ದಿವ್ಯಂ ಸರ್ವದಾ ಸರ್ವಕಾಮದಂ |
ತನುಕ್ಷಯೇ ಚ ಸಾಯುಜ್ಯಂ ಷಣ್ಮುಖಸ್ಯ ವ್ರಜೇನ್ನರಃ ||೩೩||

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ತಾರಕವಧೋ ನಾಮ
ಷಷ್ಟ್ಯಧಿಕಶತತಮೋಽಧ್ಯಾಯಃ

---

೩೦-೩೧. ದೇವತೆಗಳು ಹೇಳಿದರು.—ಕುಮಾರಸ್ವಾಮಿಯನ್ನು ಕುರಿತ ಈ ಕಥೆಯನ್ನು ವಿವೇಕಶಾಲಿಯಾದ ಮನುಷ್ಯನು ಓದಲಿ, ಇತರರಿಗೆ ಹೇಳಲಿ. ಅವನು ಕೀರ್ತಿವಂತನಾಗುವನು. ಅವನ ದರ್ಶನವೇ ಮಂಗಳಕರವೆನಿಸುವುದು. ಅವನಿಗೆ ಭೂತಗಳ ಭಯವಿಲ್ಲ; ಯಾವ ಬಗೆಯ ದುಃಖವೂ ಇಲ್ಲ.

೩೨. ಪ್ರಾತಃಕಾಲದ ಸಂಧ್ಯಾವಂದನವನ್ನು ಮಾಡಿ ಷಣ್ಮುಖನ ಚರಿತ್ರವನ್ನು ಓದುವಾತನು ಸಕಲ ಪಾಪಗಳಿಂದಲೂ ಮುಕ್ತನಾಗುವನು. ಅಪಾರವಾದ ಸಂಪತ್ತಿಗೆ ಅಧಿಪತಿಯೆನಿಸುವನು.

೩೩. ಮಕ್ಕಳು, ರೋಗಿಗಳು, ರಾಜಸೇವಕರು ಇವರಿಗೆ ಈ ಶ್ರೇಷ್ಠವಾದ ಉಪಾಖ್ಯಾನವು ಯಾವಾಗಲೂ ಎಲ್ಲಾ ಬಗೆಯ ಮನೋರಥವನ್ನೂ ಕರುಣಿಸುವುದು. ಇದನ್ನು ಪಾರಾಯಣ ಮಾಡುವ ಮನುಷ್ಯನು ದೇಹಾವಸಾನದಲ್ಲಿ ಷಣ್ಮುಖನ ಸಾಯುಜ್ಯವನ್ನು ಪಡೆಯುವನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ತಾರಕಾಸುರನ ವಧೆಯನ್ನು ವರ್ಣಿಸಿದೆ.

ಏಳುದಿನದ ಕುಮಾರನು ತನ್ನ ಮೇಲೆ ಯುದ್ಧಕ್ಕೆ ಬಂದಿರುವನೆಂದು ಕೇಳಿ ತಾರಕಾಸುರನಿಗೆ ಬ್ರಹ್ಮನ ಮಾತು ನೆನಪಿಗೆ ಬಂದಿತು. ಆ ಬಾಲನಿಂದ ತನಗೆ ಮರಣವಾದೀತೆಂದು ತಿಳಿದು ಅವನ ಯುದ್ಧಭೂಮಿಗೆ ಹೋದನು. ಸಂಪ್ರದಾಯದಂತೆ ಇಬ್ಬರೂ ವೀರವಚನಗಳನ್ನಾಡಿ ಒಬ್ಬರನ್ನೊಬ್ಬರು ಮೂದಲಿಸಿದರು. ನಾನಾ ವಿಧವಾದ ಅಸ್ತ್ರಶಸ್ತ್ರಗಳು ಎರಡು ಕಡೆಯಿಂದಲೂ ಪ್ರಯೋಗಿಸಲ್ಪಟ್ಟುವು. ಕೊನೆಗೆ ಕುಮಾರಸ್ವಾಮಿಯ ಶಕ್ತ್ಯಾಯುಧದಿಂದ ತಾರಕಾಸುರನು ಮಹಾಪರ್ವತವು ನೆಲಕ್ಕುರುಳುವಂತೆ ಹತನಾಗಿ ಬಿದ್ದನು. ದೇವತೆಗಳೆಲ್ಲರೂ ಸಂತುಷ್ಟರಾದರು. ಈ ಷಣ್ಮುಖೋಪಾಖ್ಯಾನವನ್ನು ಪಾರಾಯಣಮಾಡುವ ಮನುಷ್ಯರು ಸಕಲವಿಧವಾದ ಶ್ರೇಯಸ್ಸನ್ನೂ ಪಡೆಯುವರು.

ಶ್ರೀಮತ್ಸ್ಯಮಹಾಪುರಾಣದಲ್ಲಿ ತಾರಕಾಸುರವಧವೆಂಬ ನೂರ ಅರವತ್ತನೆಯ ಅಧ್ಯಾಯವು ಮುಗಿದುದು.



## ಅಥೈಕಷಷ್ಟ್ಯಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಇದಾನೀಂ ಶ್ರೋತುಮಿಚ್ಛಾಮೋ ಹಿರಣ್ಯಕಶಿಪೋರ್ವಧಂ ।
ನರಸಿಂಹಸ್ಯ ಮಾಹಾತ್ಮ್ಯಂ ತಥಾ ಪಾಪವಿನಾಶನಂ || ೧ ||

|| ಸೂತ ಉವಾಚ ||

ಪುರಾ ಕೃತಯುಗೇ ವಿಪ್ರಾ ಹಿರಣ್ಯಕಶಿಪುಃ ಪ್ರಭುಃ ।
ದೈತ್ಯಾನಾಮಾದಿಪುರುಷಶ್ಚಕಾರ ಸ ಮಹತ್ತಪಃ || ೨ ||

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಜಲವಾಸೀ ಸಮಭವತ್ಸ್ನಾನಮೌನದೃಢವ್ರತಃ || ೩ ||

ತತಃ ಶಮದಮಾಭ್ಯಾಂ ಚ ಬ್ರಹ್ಮಚರ್ಯೇಣ ಚೈವ ಹಿ ।
ಬ್ರಹ್ಮಾ ಪ್ರೀತೋಽಭವತ್ತಸ್ಯ ತಪಸಾ ನಿಯಮೇನ ಚ || ೪ ||

---

೧. ಋಷಿಗಳು ಹೇಳಿದರು.—ಹಿರಣ್ಯಕಶಿಪುವಿನ ಸಂಹಾರದ ವೃತ್ತಾಂತವನ್ನೂ ಪಾಪನಾಶಕವಾದ ನರಸಿಂಹನ ಮಾಹಾತ್ಮ್ಯವನ್ನೂ ಈಗ ಕೇಳ ಬಯಸುತ್ತೇವೆ.

೨. ಸೂತಪೌರಾಣಿಕನು ಹೇಳಿದನು.—ಎಲೈ ಬ್ರಾಹ್ಮಣೋತ್ತಮರೇ, ಹಿಂದೆ ಕೃತಯುಗದಲ್ಲಿ ದೈತ್ಯರ ಮೂಲಪುರುಷನೂ ಪ್ರಭುವೂ ಆದ ಹಿರಣ್ಯಕಶಿಪು ಉಗ್ರವಾದ ತಪಸ್ಸನ್ನು ಮಾಡಿದನು.

೩. ಅವನು ಹನ್ನೊಂದು ಸಾವಿರ ವರ್ಷಗಳ ಕಾಲ ನೀರಿನಲ್ಲೇ ವಾಸ ಮಾಡುತ್ತ ಮೌನದಿಂದಿದ್ದನು.

೪. ಬಳಿಕ ಅವನ ಅಂತರಿಂದ್ರಿಯನಿಗ್ರಹ, ಬಾಹ್ಯೇಂದ್ರಿಯನಿಗ್ರಹ, ಬ್ರಹ್ಮಚರ್ಯ ಮುಂತಾದುವುಗಳಿಂದಲೂ, ತಪಸ್ಸಿನಿಂದಲೂ, ನಿಯಮದಿಂದಲೂ ಬ್ರಹ್ಮನು ಪ್ರೀತನಾದನು.

ತತಃ ಸ್ವಯಂಭೂರ್ಭಗವಾನ್ ಸ್ವಯಮಾಗಮ್ಯ ತತ್ರ ಹ ।
ವಿಮಾನೇನಾರ್ಕವರ್ಣೇನ ಹಂಸಯುಕ್ತೇನ ಭಾಸ್ವತಾ ॥ ೫ ॥

ಆದಿತ್ಯೈರ್ವಸುಭಿಃ ಸಾಧ್ಯೈರ್ಮರುದ್ಭಿರ್ದೈವತೈಃ ಸಹ ।
ರುದ್ರೈರ್ವಿಶ್ವಸಹಾಯೈಶ್ಚ ಯಕ್ಷರಾಕ್ಷಸಪನ್ನಗೈಃ ॥ ೬ ॥

ದಿಗ್ಭಿಶ್ಚೈವ ವಿದಿಗ್ಭಿಶ್ಚ ನದೀಭಿಃ ಸಾಗರೈಸ್ತಥಾ ।
ನಕ್ಷತ್ರೈಶ್ಚ ಮುಹೂರ್ತೈಶ್ಚ ಖೇಚರೈಶ್ಚ ಮಹಾಗ್ರಹೈಃ ॥ ೭ ॥

ದೇವೈರ್ಬ್ರಹ್ಮರ್ಷಿಭಿಃ ಸಾರ್ಧಂ ಸಿದ್ಧೈಃ ಸಪ್ತರ್ಷಿಭಿಸ್ತಥಾ ।
ರಾಜರ್ಷಿಭಿಃ ಪುಣ್ಯಕೃದ್ಭಿರ್ಗಂಧರ್ವಾಪ್ಸರಸಾಂ ಗಣೈಃ ॥ ೮ ॥

ಚರಾಚರಗುರುಃ ಶ್ರೀಮಾನ್ ವೃತಃ ಸರ್ವೈರ್ದಿವೌಕಸೈಃ ।
ಬ್ರಹ್ಮಾ ಬಹ್ಮವಿದಾಂ ಶ್ರೇಷ್ಠೋ ದೈತ್ಯಂ ವಚನಮಬ್ರವೀತ್ ॥ ೯ ॥

ಪ್ರೀತೋಽಸ್ಮಿ ತವ ಭಕ್ತಸ್ಯ ತಪಸಾನೇನ ಸುವ್ರತ ।
ವರಂ ವರಯ ಭದ್ರಂ ತೇ ಯಥೇಷ್ಟಂ ಕಾಮಮಾಪ್ನುಹಿ ॥೧೦॥

---

೫-೯. ಬಳಿಕ ಸ್ಥಾವರಜಂಗಮಾತ್ಮಕವಾದ ಸಕಲಲೋಕಗಳ ಗುರುವೂ, ಶ್ರೀಮಂತನೂ, ಬ್ರಹ್ಮಜ್ಞಾನಿಗಳಲ್ಲಿ ಅಗ್ರಗಣ್ಯನೂ, ಲೋಕಪೂಜ್ಯನೂ ಆದ ಬ್ರಹ್ಮನು ಸೂರ್ಯನಂತೆ ಶುಭ್ರವಾದ ಹಂಸಯುಕ್ತವಾದ ವಾಹನದಲ್ಲಿ ತಾನೇ ಬಂದು ಹಿರಣ್ಯಕಶಿಪುವಿಗೆ ಹೇಳಿದನು. ಆದಿತ್ಯರು, ವಸುಗಳು, ಸಾಧ್ಯರು, ಮರುತರು, ದೈವತರು, ರುದ್ರರು, ವಿಶ್ವೇದೇವರು, ಯಕ್ಷರು, ರಾಕ್ಷಸರು, ಪನ್ನಗರು, ದಿಕ್ಕುಗಳು, ವಿದಿಕ್ಕುಗಳು, ನದಿಗಳು, ಸಾಗರಗಳು, ನಕ್ಷತ್ರಗಳು, ಮುಹೂರ್ತಗಳು, ಬಹ್ಮರ್ಷಿಗಳು, ಸಿದ್ಧರು, ಸಪ್ತರ್ಷಿಗಳು, ಪುಣ್ಯಶಾಲಿಗಳಾದ ರಾಜರ್ಷಿಗಳು, ಗಂಧರ್ವರು, ಅಪ್ಸರಸ್ತ್ರೀಯರು ಇವರೆಲ್ಲರೂ ಆ ಬ್ರಹ್ಮದೇವನನ್ನು ಅನುಸರಿಸಿ ಬಂದರು.

೧೦. ಒಳ್ಳೆಯ ವ್ರತದಲ್ಲಿ ತೊಡಗಿರುವ ಎಲೈ ಹಿರಣ್ಯಕಶಿಪೂ, ಭಕ್ತನಾದ ನಿನ್ನ ಈ ತಪಸ್ಸಿನಿಂದ ನಾನು ಪ್ರೀತನಾಗಿದ್ದೇನೆ. ನಿನಗೆ ಶ್ರೇಯಸ್ಕರವೆಂದು ತೋರುವ ವರವನ್ನು ಕೇಳಿಕೋ. ನೀನು ಕೋರಿದ ಇಷ್ಟಾರ್ಥವನ್ನು ಪಡೆ.

|| ಹಿರಣ್ಯಕಶಿಪುರುವಾಚ ||

ನ ದೇವಾಸುರಗಂಧರ್ವಾ ನ ಯಕ್ಷೋರಗರಾಕ್ಷಸಾಃ ।
ನ ಮಾನುಷಾಃ ಪಿಶಾಚಾ ವಾ ಹನ್ಯುರ್ಮಾಂ ದೇವಸತ್ತಮ ||೧೧||

ಋಷಯೋ ವಾ ನ ಮಾಂ ಶಾಪೈಃ ಶಪೇಯುಃ ಪ್ರಪಿತಾಮಹ ।
ಯದಿ ಮೇ ಭಗವಾನ್ ಪ್ರೀತೋ ವರ ಏಷ ವೃತೋ ಮಯಾ ||೧೨||

ನ ಚಾಸ್ತ್ರೇಣ ನ ಶಸ್ತ್ರೇಣ ಗಿರಿಣಾ ಪಾದಪೇನ ಚ ।
ನ ಶುಷ್ಕೇಣ ನ ಚಾರ್ದ್ರೇಣ ನ ದಿವಾ ನ ನಿಶಾಥ ವಾ ||೧೩||

ಭವೇಯಮಹಮೇವಾರ್ಕಃ ಸೋಮೋ ವಾಯುರ್ಹುತಾಶನಃ ।
ಸಲಿಲಂ ಚಾಂತರಿಕ್ಷಂ ಚ ನಕ್ಷತ್ರಾಣಿ ದಿಶೋ ದಶ ||೧೪||

ಅಹಂ ಕ್ರೋಧಶ್ಚ ಕಾಮಶ್ಚ ವರುಣೋ ವಾಸವೋ ಯಮಃ ।
ಧನದಶ್ಚ ಧನಾಧ್ಯಕ್ಷೋ ಯಕ್ಷಃ ಕಿಂಪುರುಷಾಧಿಪಃ ||೧೫||

---

೧೧. ಹಿರಣ್ಯಕಶಿಪು ಹೇಳಿದನು.—ಎಲೈ ದೇವಶ್ರೇಷ್ಠನೇ! ದೇವತೆಗಳು, ಅಸುರರು, ಗಂಧರ್ವರು, ಯಕ್ಷರು, ಉರಗರು, ರಾಕ್ಷಸರು, ಮನುಷ್ಯರು, ಪಿಶಾಚರು, ಇವರಾರೂ ನನ್ನನ್ನು ಕೊಲ್ಲಬಾರದು.

೧೨. ಓ ಬ್ರಹ್ಮಾ, ಋಷಿಗಳ ಶಾಪವು ನನಗೆ ತಟ್ಟದಿರಲಿ. ಪೂಜ್ಯನಾದ ನೀನು ನನ್ನಲ್ಲಿ ಪ್ರಸನ್ನನಾಗಿರುವೆಯಾದರೆ ನಾನು ಕೇಳುವ ವರವೇ ಇದು.

೧೩. ಅಸ್ತ್ರದಿಂದಾಗಲಿ ಶಸ್ತ್ರದಿಂದಾಗಲಿ, ಬೆಟ್ಟದಿಂದಾಗಲಿ ಮರದಿಂದಾಗಲಿ, ಒಣಗಿದುದರಿಂದಾಗಲಿ ಹಸಿಯದರಿಂದಾಗಲಿ, ಹಗಲಲ್ಲಾಗಲಿ ರಾತ್ರಿಯಲ್ಲಾಗಲಿ ನನಗೆ ಮರಣವು ಬರಬಾರದು.

೧೪. ಸೂರ್ಯ, ಚಂದ್ರ, ವಾಯು, ಅಗ್ನಿ, ಜಲ, ಅಂತರಿಕ್ಷ, ನಕ್ಷತ್ರಗಳು, ದಶದಿಕ್ಕುಗಳು ಇವೆಲ್ಲ ನಾನೇ ಆಗಬೇಕು.

೧೫. ಕ್ರೋಧ, ಕಾಮ, ವರುಣ, ಇಂದ್ರ, ಯಮ, ಧನಪತಿಯಾದ ಕುಬೇರ, ಯಕ್ಷ, ಕಿಂಪುರುಷರ ಅಧಿಪತಿ ಇವರೆಲ್ಲರೂ ನಾನೇ ಆಗುವೆನು.

॥ ಬ್ರಹ್ಮೋವಾಚ ॥

ಏತೇ ದಿವ್ಯಾ ವರಾಸ್ತಾತ ಮಯಾ ದತ್ತಾಸ್ತವಾದ್ಭುತಾಃ ।
ಸರ್ವಾನ್ ಕಾಮಾನ್ ಸದಾ ವತ್ಸ ಪ್ರಾಪ್ಸ್ಯಸೇ ತ್ವಂ ನ ಸಂಶಯಃ ॥೧೬॥

ಏವಮುಕ್ತ್ವಾ ಸ ಭಗವಾಞ್ಜಗಾಮಾಕಾಶ ಏವ ಹಿ ।
ವೈರಾಜಂ ಬ್ರಹ್ಮಸದನಂ ಬ್ರಹ್ಮರ್ಷಿಗಣಸೇವಿತಂ ॥೧೭॥

ತತೋ ದೇವಾಶ್ಚ ನಾಗಾಶ್ಚ ಗಂಧರ್ವಾ ಋಷಿಭಿಃ ಸಹ ।
ವರಪ್ರದಾನಂ ಶ್ರುತ್ವೈವ ಪಿತಾಮಹಮುಪಸ್ಥಿತಾಃ ॥೧೮॥

॥ ದೇವಾ ಊಚುಃ ॥

ವರಪ್ರದಾನಾದ್ಭಗವನ್ ವಧಿಷ್ಯತಿ ಸ ನೋಽಸುರಃ ।
ತತ್ಪ್ರಸೀದಾಶು ಭಗವನ್ ವಧೋಽಪ್ಯಸ್ಯ ವಿಚಿಂತ್ಯತಾಂ ॥೧೯॥

ಭಗವನ್ ಸರ್ವಭೂತಾನಾಮಾದಿಕರ್ತಾ ಸ್ವಯಂಪ್ರಭುಃ ।
ಸ್ರಷ್ಟಾ ತ್ವಂ ಹವ್ಯಕವ್ಯಾನಾಮವ್ಯಕ್ತಪ್ರಕೃತಿರ್ಬುಧಃ ॥೨೦॥

---

೧೬. ಬ್ರಹ್ಮನು ಹೇಳಿದನು.—ಅಪ್ಪಾ, ಅತ್ಯಾಶ್ಚರ್ಯಕರಗಳಾದ ಈ ದಿವ್ಯ ವರಗಳನ್ನು ನಿನಗೆ ನಾನು ಕೊಟ್ಟಿರುವೆನು. ವತ್ಸಾ, ನಿನ್ನ ಕೋರಿಕೆಗಳೆಲ್ಲವನೂ ಪಡೆಯುವೆ. ಸಂಶಯವಿಲ್ಲ.

೧೭. ಹೀಗೆ ಹೇಳಿ ಪೂಜ್ಯನಾದ ಬ್ರಹ್ಮನು ಬ್ರಹ್ಮರ್ಷಿಗಳು ಸೇವಿಸುತ್ತಿರುವ ವೈರಾಜವೆಂಬ ಬ್ರಹ್ಮಲೋಕಕ್ಕೆ ಆಕಾಶಮಾರ್ಗದಲ್ಲೇ ತೆರಳಿದನು.

೧೮. ಬಳಿಕ ದೇವತೆಗಳು, ನಾಗರು, ಗಂಧರ್ವರು, ಋಷಿಗಳು ಇವರೆಲ್ಲರೂ ಬ್ರಹ್ಮನು ಹಿರಣ್ಯಕಶಿಪುವಿಗೆ ವರವಿತ್ತುದನ್ನು ಕೇಳಿ ಕೂಡಲೇ ಅವನ ಬಳಿಗೆ ಬಂದರು.

೧೯. ದೇವತೆಗಳು ಹೇಳಿದರು.—ಪೂಜ್ಯನೇ, ಹಿರಣ್ಯಕಶಿಪು ಕೇಳಿದ ವರವನ್ನು ನೀನು ಅನುಗ್ರಹಿಸಿರುವ ಕಾರಣ ಅವನು ನಮ್ಮನ್ನು ಕೊಲ್ಲುವನು. ಆದುದರಿಂದ ನಮ್ಮಲ್ಲಿ ಪ್ರಸನ್ನನಾಗು. ಅವನ ವಧೋಪಾಯವನ್ನೂ ಆಲೋಚಿಸು.

೨೦. ಭಗವಂತಾ, ನೀನು ಸಕಲ ಪ್ರಾಣಿಗಳಿಗೂ ಮೊತ್ತಮೊದಲನೆಯ ಸೃಷ್ಟಿಕರ್ತ; ಪರಾಪೇಕ್ಷೆಯಿಲ್ಲದ ಪ್ರಭು; ಹವ್ಯಕವ್ಯ ರೂಪವಾದ ಕರ್ಮಗಳನ್ನು ನಿರ್ಮಿಸಿದವನು, ನಿನ್ನ ಪ್ರಕೃತಿಯು ಅವ್ಯಕ್ತವಾದುದು. ನೀನು ಸರ್ವಜ್ಞ.

ಸರ್ವಲೋಕಹಿತಂ ವಾಕ್ಯಂ ಶ್ರುತ್ವಾ ದೇವಃ ಪ್ರಜಾಪತಿಃ ।
ಆಶ್ವಾಸಯಾಮಾಸ ಸುರಾನ್ ಸುಶೀತೈರ್ವಚನಾಂಬುಭಿಃ ॥೨೧॥

ಅವಶ್ಯಂ ತ್ರಿದಶಾಸ್ತೇನ ಪ್ರಾಪ್ತವ್ಯಂ ತಪಸಃ ಫಲಂ ।
ತಪಸೋಂತೇಽಸ್ಯ ಭಗವಾನ್ ವಧಂ ವಿಷ್ಣುಃ ಕರಿಷ್ಯತಿ ॥೨೨॥

ತಚ್ಛ್ರುತ್ವಾ ವಿಬುಧಾ ವಾಕ್ಯಂ ಸರ್ವೇ ಪಂಕಜಜನ್ಮನಃ ।
ಸ್ವಾನಿ ಸ್ಥಾನಾನಿ ದಿವ್ಯಾನಿ ವಿಪ್ರಾ ಜಗ್ಮುರ್ಮುದಾನ್ವಿತಾಃ ॥೨೩॥

ಲಬ್ಧಮಾತ್ರೇ ವರೇ ಚಾಥ ಸರ್ವಾಃ ಸೋಽಬಾಧತ ಪ್ರಜಾಃ ।
ಹಿರಣ್ಯಕಶಿಪುರ್ದೈತ್ಯೋ ವರದಾನೇನ ದರ್ಪಿತಃ ॥೨೪॥

ಆಶ್ರಮೇಷು ಮಹಾಭಾಗಾನ್ ಸ ಮುನೀನ್ ಶಂಸಿತವ್ರತಾನ್ ।
ಸತ್ಯಧರ್ಮಪರಾನ್ ದಾಂತಾನ್ ಧರ್ಷಯಾಮಾಸ ದಾನವಃ ॥೨೫॥

---

೨೧. ಸಕಲ ಲೋಕಗಳಿಗೂ ಹಿತಕರವಾದ ಈ ಮಾತನ್ನು ಕೇಳಿ, ಪೂಜ್ಯನಾದ ಪ್ರಜಾಪತಿಯು ತಾಪಪರಿಹಾರಕವಾದ ಮಾತುಗಳೆಂಬ ನೀರಿನಿಂದ ದೇವತೆಗಳನ್ನು ಸಂತೈಸಿದನು.

೨೨. ಎಲೈ ದೇವತೆಗಳಿರಾ, ಅವನ ತಪಸ್ಸಿಗೆ ಫಲವು ಅವಶ್ಯವಾಗಿ ದೊರಕಲೇ ಬೇಕು. ಅದು ತೀರಿದ ಮೇಲೆ ಭಗವಂತನಾದ ವಿಷ್ಣುವು ಅವನನ್ನು ವಧಿಸುವನು.

೨೩. ದೇವತೆಗಳೆಲ್ಲರೂ ಬ್ರಹ್ಮನ ವಾಕ್ಯವನ್ನು ಕೇಳಿ ಸಂತೋಷಗೊಂಡು ತಮ್ಮತಮ್ಮ ದಿವ್ಯಸ್ಥಾನಗಳಿಗೆ ತೆರಳಿದರು.

೨೪. ವರವು ಸಿಕ್ಕಿದ ಮಾತ್ರದಿಂದಲೇ ದೈತ್ಯರಾಜನಾದ ಹಿರಣ್ಯಕಶಿಪು ದರ್ಪದಿಂದ ಪ್ರಜೆಗಳೆಲ್ಲರನ್ನೂ ಹಿಂಸಿಸತೊಡಗಿದನು.

೨೫. ಆ ದಾನವನು ಆಶ್ರಮಗಳಲ್ಲಿರುವ ಮಹಾಮಹಿಮರೂ, ಶ್ಲಾಘ್ಯವಾದ ವ್ರತಗಳನ್ನು ಆಚರಿಸುವವರೂ, ಸತ್ಯಧರ್ಮಪರರೂ, ಇಂದ್ರಿಯಗಳನ್ನು ಜಯಿಸಿದವರೂ ಆದ ಮುನಿಗಳನ್ನು ಬಾಧಿಸಿದನು.

ದೇವಾಂಸ್ತ್ರಿಭುವನಸ್ಥಾಂಶ್ಚ ಪರಾಜಿತ್ಯ ಮಹಾಸುರಃ ।
ತ್ರೈಲೋಕ್ಯಂ ವಶಮಾನೀಯ ಸ್ವರ್ಗೇ ವಸತಿ ದಾನವಃ ॥೨೬॥

ಯದಾ ವರಮದೋತ್ಸಿಕ್ತಶ್ಚೋದಿತಃ ಕಾಲಧರ್ಮತಃ ।
ಯಜ್ಞೀಯಾನಕರೋದ್ದೈತ್ಯಾನಯಜ್ಞೀಯಾಶ್ಚ ದೇವತಾಃ ॥೨೭॥

ತದಾದಿತ್ಯಾಶ್ಚ ಸಾಧ್ಯಾಶ್ಚ ವಿಶ್ವೇ ಚ ವಸವಸ್ತಥಾ ।
ಸೇಂದ್ರಾ ದೇವಗಣಾ ಯಕ್ಷಾಃ ಸಿದ್ಧದ್ವಿಜಮಹರ್ಷಯಃ ॥೨೮॥

ಶರಣ್ಯಂ ಶರಣಂ ವಿಷ್ಣುಮುಪತಸ್ಥುರ್ಮಹಾಬಲಂ ।
ದೇವದೇವಂ ಯಜ್ಞಮಯಂ ವಾಸುದೇವಂ ಸನಾತನಂ ॥೨೯॥

ನಾರಾಯಣ ಮಹಾಭಾಗ ದೇವಾಸ್ತ್ವಾಂ ಶರಣಂ ಗತಾಃ ।
ತ್ರಾಯಸ್ವ ಜಹಿ ದೈತ್ಯೇಂದ್ರಂ ಹಿರಣ್ಯಕಶಿಪುಂ ಪ್ರಭೋ ॥೩೦॥

---

೨೬. ಆ ಮಹಾಸುರನು ದೇವತೆಗಳನ್ನೂ ಮೂರು ಲೋಕದಲ್ಲಿರತಕ್ಕ ಇನ್ನೂ ಉಳಿದವರನ್ನೂ ಸೋಲಿಸಿ, ಲೋಕಗಳು ಮೂರನ್ನೂ ವಶಪಡಿಸಿಕೊಂಡು ಸ್ವರ್ಗದಲ್ಲಿ ವಾಸಿಸುತ್ತಿದ್ದನು.

೨೭. ವಿಧಿಯ ಪ್ರೇರಣೆಯಾಗಲು ಅವನು ವರದ ಮದದಿಂದ ಕೊಬ್ಬಿ ದೈತ್ಯರಿಗೆ ಯಜ್ಞದಲ್ಲಿ ಭಾಗವನ್ನು ಏರ್ಪಡಿಸಿದನು. ದೇವತೆಗಳನ್ನು ಅದಕ್ಕೆ ಅನರ್ಹರನ್ನಾಗಿ ಮಾಡಿದನು.

೨೮-೨೯. ಆಗ ಆದಿತ್ಯರು, ಸಾಧ್ಯರು, ವಿಶ್ವೇದೇವತೆಗಳು, ವಸುಗಳು, ಇಂದ್ರಾದಿ ದೇವಗಣಗಳು, ಯಕ್ಷರು, ಸಿದ್ಧರು, ದ್ವಿಜರು, ಮಹರ್ಷಿಗಳು ಇವರೆಲ್ಲರೂ ಕೂಡಿ ರಕ್ಷಕನೂ, ಮಹಾಬಲನೂ, ದೇವದೇವನೂ, ಯಜ್ಞರೂಪನೂ, ವಾಸುದೇವನೂ, ಸನಾತನನೂ ಆದ ವಿಷ್ಣುವನ್ನು ಮರೆಹೊಕ್ಕರು.

೩೦. ದೇವತೆಗಳು ಹೇಳಿದರು.—ಮಹಾಮಹಿಮನಾದ ಓ ನಾರಾಯಣಾ, ನಾವು ದೇವತೆಗಳು ನಿನ್ನನ್ನು ಮರೆಹೊಕ್ಕಿರುವೆವು. ನಮ್ಮನ್ನು ಸಲಹು. ಪ್ರಭೂ, ದೈತ್ಯರಾಜನಾದ ಹಿರಣ್ಯಕಶಿಪುವನ್ನು ಸಂಹರಿಸು.

ತ್ವಂ ಹಿ ನಃ ಪರಮೋ ಧಾತಾ ತ್ವಂ ಹಿ ನಃ ಪರಮೋ ಗುರುಃ ।
ತ್ವಂ ಹಿ ನಃ ಪರಮೋ ದೇವೋ ಬ್ರಹ್ಮಾದೀನಾಂ ಸುರೋತ್ತಮ ॥೩೧॥

॥ ವಿಷ್ಣುರುವಾಚ ॥

ಭಯಂ ತ್ಯಜಧ್ವಮಮರಾ ಅಭಯಂ ವೋ ದದಾಮ್ಯಹಂ ।
ತಥೈವ ತ್ರಿದಿವಂ ದೇವಾಃ ಪ್ರತಿಪದ್ಯತ ಮಾ ಚಿರಂ ॥೩೨॥

ಏಷೋಽಹಂ ಸಗಣಂ ದೈತ್ಯಂ ವರದಾನೇನ ದರ್ಪಿತಂ ।
ಅವಧ್ಯಮಮರೇಂದ್ರಾಣಾಂ ದಾನವೇಂದ್ರಂ ನಿಹನ್ಮ್ಯಹಂ ॥೩೩॥

ಏವಮುಕ್ತ್ವಾ ತು ಭಗವಾನ್ ವಿಸೃಜ್ಯ ತ್ರಿದಶೇಶ್ವರಾನ್ ।
ವಧಂ ಸಂಕಲ್ಪಯಾಮಾಸ ಹಿರಣ್ಯಕಶಿಪೋಃ ಪ್ರಭುಃ ॥೩೪॥

ಸಾಹಾಯ್ಯಂ ಚ ಮಹಾಬಾಹುರೋಂಕಾರಂ ಗೃಹ್ಯ ಸತ್ವರಂ ।
ಅಥೋಂಕಾರಸಹಾಯಸ್ತು ಭಗವಾನ್ ವಿಷ್ಣುರವ್ಯಯಃ ॥೩೫॥

---

೩೧. ದೇವಾಧೀಶ್ವರಾ, ಬ್ರಹ್ಮ ಮೊದಲಾದ ನಮಗೆಲ್ಲ ನೀನು ಪರಮಗುರು. ನಮಗೆ ನೀನು ಸರ್ವೋತ್ತಮನಾದ ದೇವ.

೩೨. ವಿಷ್ಣು ಹೇಳಿದನು.—ದೇವತೆಗಳಿರಾ, ಭಯವನ್ನು ಬಿಡಿ. ನಿಮಗೆ ಅಭಯವನ್ನು ಕೊಡುವೆನು. ಓ ದೇವತೆಗಳೇ, ಎಂದಿನಂತೆಯೇ ಸ್ವರ್ಗಕ್ಕೆ ನಡೆಯಿರಿ ; ತಡಮಾಡಬೇಡಿ.

೩೩. ವರದಾನದಿಂದ ಕೊಬ್ಬಿ ದೇವಮುಖ್ಯರಿಗೂ ಸಹ ಅವಧ್ಯನೆನಿಸಿರುವ ದಾನವೇಂದ್ರನಾದ ಹಿರಣ್ಯಕಶಿಪುವನ್ನು ನಾನು ಅವನ ಸಕಲ ಪರಿವಾರದೊಡನೆ ಸಂಹರಿಸುವೆನು.

೩೪. ಸರ್ವೇಶ್ವರನಾದ ಭಗವಂತನು ಹೀಗೆ ಹೇಳಿ, ದೇವತೆಗಳ ಮುಖಂಡರನ್ನು ಕಳುಹಿಸಿಕೊಟ್ಟು, ಹಿರಣ್ಯಕಶಿಪುವನ್ನು ವಧಿಸಬೇಕೆಂದು ನಿಶ್ಚಯಿಸಿದನು.

೩೫. ಮಹಾಬಲಶಾಲಿಯೂ, ಅವ್ಯಯನೂ, ಷಡ್ಗುಣಪರಿಪೂರ್ಣನೂ ಆದ ವಿಷ್ಣುವು ಓಂಕಾರವನ್ನು ಸಹಾಯಮಾಡಿಕೊಂಡು ಹಿರಣ್ಯಕಶಿಪುವಿನ ವಾಸಸ್ಥಾನಕ್ಕೆ ಬೇಗನೆ ಹೋದನು.

ಹಿರಣ್ಯಕಶಿಪುಸ್ಥಾನಂ ಜಗಾಮ ಹರಿರೀಶ್ವರಃ ।
ತೇಜಸಾ ಭಾಸ್ಕರಾಕಾರಃ ಶಶೀ ಕಾಂತ್ಯೇವ ಚಾಪರಃ ॥೩೬॥

ನರಸ್ಯ ಕೃತ್ವಾರ್ಧತನುಂ ಸಿಂಹಸ್ಯಾರ್ಧತನುಂ ತಥಾ ।
ನಾರಸಿಂಹೇನ ವಪುಷಾ ಪಾಣಿಂ ಸಂಸ್ಪೃಶ್ಯ ಪಾಣಿನಾ ॥೩೭॥

ತತೋಽಪಶ್ಯತ ವಿಸ್ತೀರ್ಣಾಂ ದಿವ್ಯಾಂ ರಮ್ಯಾಂ ಮನೋರಮಾಂ ।
ಸರ್ವಕಾಮಯುತಾಂ ಶುಭ್ರಾಂ ಹಿರಣ್ಯಕಶಿಪೋಃ ಸಭಾಂ ॥೩೮॥

ವಿಸ್ತೀರ್ಣಾಂ ಯೋಜನಶತಂ ಶತಮಧ್ಯರ್ಧಮಾಯತಾಂ ।
ವೈಹಾಯಸೀಂ ಕಾಮಗಮಾಂ ಪಂಚಯೋಜನಮುಚ್ಛ್ರಿತಾಂ ॥೩೯॥

ಜರಾಶೋಕಕ್ಲಮಾಪೇತಾಂ ನಿಷ್ಪ್ರಕಂಪಾಂ ಶಿವಾಂ ಸುಖಾಂ ।
ವೇಶ್ಮಹರ್ಮ್ಯವತೀಂ ರಮ್ಯಾಂ ಜ್ವಲಂತೀಮಿವ ತೇಜಸಾ ॥೪೦॥

---

೩೬-೩೭. ಅವನು ತೇಜಸ್ಸಿನಲ್ಲಿ ಸೂರ್ಯನನ್ನು ಹೋಲುತ್ತಿದ್ದನು. ಕಾಂತಿಯಲ್ಲಿ ಬೇರೆ ಚಂದ್ರನೋ ಅನ್ನುವ ಹಾಗಿದ್ದನು. ಶರೀರದಲ್ಲಿ ಅರ್ಧಭಾಗವು ಮನುಷ್ಯ ರೂಪವೂ, ಮಿಕ್ಕರ್ಧಭಾಗವು ಸಿಂಹರೂಪವೂ ಆಗಿರುವಂತೆ ನಾರಸಿಂಹಾಕೃತಿಯನ್ನು ಧರಿಸಿ ಕೈ ಕೈ ಹೊಸೆಯುತ್ತಿದ್ದನು.

೩೮. ಬಳಿಕ ಅವನು ಹಿರಣ್ಯಕಶಿಪುವಿನ ಸಭೆಯನ್ನು ನೋಡಿದನು. ಅದು ವಿಸ್ತೃತವೂ, ದಿವ್ಯವೂ, ರಮ್ಯವೂ, ಮನೋಹರವೂ, ಸಕಲ ಕಾಮಸಂಪೂರ್ಣವೂ, ಶುಭ್ರವೂ ಆಗಿದ್ದಿತು.

೩೯. ಅದು ನೂರು ಯೋಜನ ವಿಸ್ತೀರ್ಣವೂ ಐವತ್ತು ಯೋಜನಗಳಿಗಿಂತ ಸ್ವಲ್ಪ ಹೆಚ್ಚು ಅಗಲವೂ ಆಗಿತ್ತು. ಇಷ್ಟಬಂದಂತೆ ಅಂತರಿಕ್ಷಮಾರ್ಗದಲ್ಲಿ ಸಂಚರಿಸ ಬಲ್ಲುದಾಗಿತ್ತು. ಆ ಸಭಾಮಂಟಪದ ಎತ್ತರವು ಐದು ಯೋಜನವಿದ್ದಿತು.

೪೦. ಮುಪ್ಪು, ಶೋಕ, ಆಯಾಸ, ಇವಾವುವೂ ಅದರಲ್ಲಿ ಸುಳಿಯುತ್ತಿರಲಿಲ್ಲ. ಅದು ಅಲುಗಾಟವಿಲ್ಲದೆ ಮಂಗಳಕರವಾಗಿ ಸುಖಮಯವಾಗಿತ್ತು. ಮನೆಗಳಿಂದಲೂ ಉಪ್ಪರಿಗೆಗಳಿಂದಲೂ ರಮ್ಯವಾಗಿ ತೇಜಸ್ಸಿನಿಂದ ಜಾಜ್ವಲ್ಯಮಾನವಾಗಿತ್ತು.

ಅಂತಃಸಲಿಲಸಂಯುಕ್ತಾಂ ವಿಹಿತಾಂ ವಿಶ್ವಕರ್ಮಣಾ ।
ದಿವ್ಯರತ್ನಮಯೈರ್ವೃಕ್ಷೈಃ ಫಲಪುಷ್ಪದ್ರುಮೈರ್ಯುತಾಂ ॥೪೧॥

ನೀಲಪೀತಸಿತಶ್ಯಾಮೈಃ ಕೃಷ್ಣೈರ್ಲೋಹಿತಕೈರಪಿ ।
ಅವತಾನೈಸ್ತಥಾ ಗುಲ್ಮೈರ್ಮಂಜರೀಶತಧಾರಿಭಿಃ ॥೪೨॥

ಸಿತಾಭ್ರಘನಸಂಕಾಶಾ ಪ್ಲವಂತೀವ ವ್ಯದೃಶ್ಯತ ।
ರಶ್ಮಿವತೀ ಭಾಸ್ವರಾ ಚ ದಿವ್ಯಗಂಧಮನೋರಮಾ ॥೪೩॥

ಸುಸುಖಾ ನ ಚ ದುಃಖಾ ಸಾ ನ ಶೀತಾ ನ ಚ ಘರ್ಮದಾ ।
ನ ಕ್ಷುತ್ಪಿಪಾಸೇ ಗ್ಲಾನಿಂ ವಾ ಪ್ರಾಪ್ಯ ತಾಂ ಪ್ರಾಪ್ನುವಂತಿ ತೇ ॥೪೪॥

ನಾನಾರೂಪೈರುಪಕೃತಾಂ ವಿಚಿತ್ರೈರತಿಭಾಸ್ವರೈಃ ।
ಸ್ತಂಭೈರ್ನ ಬಿಭೃತಾ ಸಾ ವೈ ಶಾಶ್ವತೀ ಚಾಕ್ಷಯಾ ಸದಾ ॥೪೫॥

ಅತಿಚಂದ್ರಂ ಚ ಸೂರ್ಯಂ ಚ ಶಿಖಿನಂ ಚ ಸ್ವಯಂಪ್ರಭಾ ।
ದೀಪ್ಯತೇ ನಾಕಪೃಷ್ಠಸ್ಥಾ ಭಾಸಯಂತೀವ ಭಾಸ್ಕರಾನ್ ॥೪೬॥

---

೪೧. ಅದು ಒಳಭಾಗದಲ್ಲಿ ಜಲಾಶಯಗಳಿಂದ ಕೂಡಿತ್ತು. ವಿಶ್ವಕರ್ಮನು ಅದನ್ನು ನಿರ್ಮಿಸಿದನು. ರತ್ನಮಯವಾದ ದಿವ್ಯವೃಕ್ಷಗಳೂ ಹೂ ಹಣ್ಣುಗಳಿಂದ ತುಂಬಿದ ಮರಗಳೂ ಅದರಲ್ಲಿದ್ದುವು.

೪೨-೪೩. ಅದಕ್ಕೆ ಕಟ್ಟಿದ ಮೇಲ್ಕಟ್ಟುಗಳು, ನೀಲಿ, ಹಳದಿ, ಬಿಳುಪು, ಮಾಸಲುಕಪ್ಪು, ಕಪ್ಪು, ಕೆಂಪು ಮುಂತಾದ ಬಣ್ಣಗಳಿಂದ ಕೂಡಿದ್ದುವು. ಒತ್ತೊತ್ತಾಗಿದ್ದ ಬಳ್ಳಿಗಳಲ್ಲಿ ನೂರಾರು ಬಗೆಯ ಹೂಗೊಂಚಲುಗಳಿದ್ದುವು. ಆ ಮಂಟಪವು ಶುಭ್ರವಾದ ಮೋಡವನ್ನು ಹೋಲುತ್ತ ಆಕಾಶದಲ್ಲಿ ತೇಲಾಡುವಂತೆ ಕಾಣುತ್ತಿತ್ತು. ರತ್ನಗಳ ಕಿರಣಗಳಿಂದ ಕೂಡಿ ಪ್ರಕಾಶಿಸುತ್ತ ಉತ್ತಮವಾದ ಗಂಧದಿಂದ ಮನೋಹರವಾಗಿತ್ತು.

೪೪. ಆ ಸಭೆಯು ಸುಖಮಯವಾಗಿತ್ತು. ಅಲ್ಲಿ ದುಃಖವೆಂಬುದೇ ಇಲ್ಲ. ಅತಿಯಾಗಿ ಚಳಿಯಾಗಲಿ ಸೆಕೆಯಾಗಲಿ ಆಗುತ್ತಿರಲಿಲ್ಲ. ಅಲ್ಲಿದ್ದವರಿಗೆ ಹಸಿವು, ಬಾಯಾರಿಕೆ, ದುಃಖ ಇವಾವುವೂ ಉಂಟಾಗವು.

೪೫-೪೬. ಸ್ವರ್ಗದಲ್ಲಿದ್ದ ಆ ಸಭೆಯು ಸ್ವಯಂಪ್ರಕಾಶವುಳ್ಳದಾಗಿತ್ತು. ಅದು ಚಂದ್ರ, ಸೂರ್ಯ, ಅಗ್ನಿ ಇವರನ್ನು ಮೀರಿಸಿ ಬೆಳಗುತ್ತಿತ್ತು. ದ್ವಾದಶಾದಿತ್ಯರನ್ನು ತನ್ನ ತೇಜಸ್ಸಿನಿಂದ ಪ್ರಕಾಶಗೊಳಿಸುವುದೋ ಎನ್ನುವಂತಿತ್ತು.

ಸರ್ವೇ ಚ ಕಾಮಾಃ ಪ್ರಚುರಾ ಯೇ ದಿವ್ಯಾ ಯೇ ಚ ಮಾನುಷಾಃ ।
ರಸಯುಕ್ತಂ ಪ್ರಭೂತಂ ಚ ಭಕ್ಷ್ಯಭೋಜ್ಯಮನಂತಕಂ ॥೪೭॥

ಪುಣ್ಯಗಂಧಸ್ರಜಶ್ಚಾತ್ರ ನಿತ್ಯಪುಷ್ಪಫಲದ್ರುಮಾಃ ।
ಉಷ್ಣೇ ಶೀತಾನಿ ತೋಯಾನಿ ಶೀತೇ ಚೋಷ್ಣಾನಿ ಸಂತಿ ಚ ॥೪೮॥

ಪುಷ್ಪಿತಾಗ್ರಾ ಮಹಾಶಾಖಾಃ ಪ್ರವಾಲಾಂಕುರಧಾರಿಣಃ ।
ಲತಾವಿತಾನಸಂಛನ್ನಾ ನದೀಷು ಚ ಸರಸ್ಸು ಚ ॥೪೯॥

ವೃಕ್ಷಾನ್ ಬಹುವಿಧಾಂಸ್ತತ್ರ ಮೃಗೇಂದ್ರೋ ದದೃಶೇ ಪ್ರಭುಃ ।
ಗಂಧವಂತಿ ಚ ಪುಷ್ಪಾಣಿ ರಸವಂತಿ ಫಲಾನಿ ಚ ॥೫೦॥

ನಾತಿಶೀತಾನಿ ನೋಷ್ಣಾನಿ ತತ್ರ ತತ್ರ ಸರಾಂಸಿ ಚ ।
ಅಪಶ್ಯತ್ಸರ್ವತೀರ್ಥಾನಿ ಸಭಾಯಾಂ ತಸ್ಯ ಚ ಪ್ರಭುಃ ॥೫೧॥

---

೪೭. ದೇವತೆಗಳಿಗೂ ಮನುಷ್ಯರಿಗೂ ಅರ್ಹವಾದ ಸಕಲ ಭೋಗಗಳೂ ಅಲ್ಲಿ ವಿಶೇಷವಾಗಿದ್ದುವು. ರಸಭರಿತವಾದ ಭಕ್ಷ್ಯಭೋಜ್ಯಗಳು ರಾಶಿರಾಶಿಯಾಗಿದ್ದುವು. ಅವುಗಳಿಗೆ ಕೊನೆಯೇ ಇರಲಿಲ್ಲ.

೪೮. ಹೂಮಾಲೆಗಳು ಮನೋಹರವಾದ ಪರಿಮಳವನ್ನು ಬೀರುತ್ತಿದ್ದುವು. ಮರಗಳಲ್ಲಿ ಯಾವಾಗಲೂ ಹೂ ಹಣ್ಣುಗಳು ತುಂಬಿದ್ದುವು. ಅಲ್ಲಿನ ನೀರು ಬೇಸಗೆಯಲ್ಲಿ ತಣ್ಣಗೂ ಚಳಿಗಾಲದಲ್ಲಿ ಬೆಚ್ಚಗೂ ಇದ್ದಿತು.

೪೯. ನದಿಗಳ ಮತ್ತು ಸರೋವರಗಳ ತೀರದಲ್ಲಿದ್ದ ದೊಡ್ಡದೊಡ್ಡ ಮರಗಳು ಚಿಗುರಿ, ಕುಡಿಗಳಿಂದ ತುಂಬಿ ತುದಿಗೊಂಬೆಗಳಲ್ಲಿ ಹೂ ಬಿಟ್ಟಿದ್ದುವು. ಬಳ್ಳಿಗಳು ಅವುಗಳಿಗೆ ಒತ್ತೊತ್ತಾಗಿ ಹಬ್ಬಿಕೊಂಡಿದ್ದುವು.

೫೦. ನರಸಿಂಹಸ್ವಾಮಿಯು ಬಗೆ ಬಗೆಯ ಮರಗಳನ್ನೂ, ಪರಿಮಳಭರಿತವಾದ ಪುಷ್ಪಗಳನ್ನೂ, ರಸಯುಕ್ತವಾದ ಹಣ್ಣುಗಳನ್ನೂ ಅಲ್ಲಿ ಕಂಡನು.

೫೧. ಹಿರಣ್ಯಕಶಿಪುವಿನ ಸಭೆಯಲ್ಲಿ ಸರೋವರಗಳ ನೀರು ಅತಿ ಶೀತವಾಗಿಯಾಗಲಿ ಅತ್ಯುಷ್ಣವಾಗಿಯಾಗಲಿ ಇರಲಿಲ್ಲ. ಎಲ್ಲ ಪುಣ್ಯತೀರ್ಥಗಳೂ ಅಲ್ಲಿ ದೇವದೇವನ ಕಣ್ಣಿಗೆ ಬಿದ್ದುವು.

ನಲಿನೈಃ ಪುಂಡರೀಕೈಶ್ಚ ಶತಪತ್ರೈಃ ಸುಗಂಧಿಭಿಃ ।
ರಕ್ತೈಃ ಕುವಲಯೈರ್ನೀಲೈಃ ಕುಮುದೈಃ ಸಂವೃತಾನಿ ಚ ॥೫೨॥

ಸುಕಾಂತೈರ್ಧಾರ್ತರಾಷ್ಟ್ರೈಶ್ಚ ರಾಜಹಂಸೈಶ್ಚ ಸುಪ್ರಿಯೈಃ ।
ಕಾರಂಡವೈಶ್ಚ ಕ್ರವಾಕೈಃ ಸಾರಸೈಃ ಕುರರೈರಪಿ ॥೫೩॥

ವಿಮಲೈಃ ಸ್ಫಾಟಿಕಾಭೈಶ್ಚ ಪಾಂಡುರಚ್ಛದನೈರ್ದ್ವಿಜೈಃ ।
ಬಹುಹಂಸೋಪಗೀತಾನಿ ಸಾರಸಾಭಿರುತಾನಿ ಚ ॥೫೪॥

ಗಂಧವತ್ಯಃ ಶುಭಾಸ್ತತ್ರ ಪುಷ್ಪಮಂಜರಿಧಾರಿಣೀಃ ।
ದೃಷ್ಟವಾನ್ ಪರ್ವತಾಗ್ರೇಷು ನಾನಾಪುಷ್ಪಧರಾ ಲತಾಃ ॥೫೫॥

ಕೇತಕ್ಯಶೋಕಸರಲಾಃ ಪುನ್ನಾಗತಿಲಕಾರ್ಜುನಾಃ ।
ಚೂತಾ ನೀಪಾ ನಾಗವೃಕ್ಷಾಃ ಕದಂಬಾ ಬಕುಲಾ ಧವಾಃ ॥೫೬॥

---

೫೨-೫೪. ಪರಿಮಳವನ್ನು ಬೀರುವ ತಾವರೆಗಳೂ, ಬೆಳ್ದಾವರೆಗಳೂ, ನೂರೆಸಳಿನ ತಾವರೆಗಳೂ ಆ ಸರೋವರಗಳಲ್ಲಿ ಕಂಗೊಳಿಸಿದುವು. ಚೆನ್ನೈದಿಲೆ, ಕರಿನ್ನೈದಿಲೆ ಮತ್ತು ನೈದಿಲೆಗಳು ತುಂಬಿದ್ದುವು. ಬಹು ಮನೋಹರವಾದ ಧಾರ್ತ ರಾಷ್ಟ್ರಗಳೆಂಬ ಹಂಸಗಳೂ, ರಾಜ ಹಂಸಗಳೂ, ಕಾರಂಡವ, ಚಕ್ರವಾಕ, ಸಾರಸ, ಕುರರಗಳೆಂಬ ನೀರು ಹಕ್ಕಿಗಳೂ ಶೋಭಿಸುತ್ತಿದ್ದುವು. ಸ್ಫಟಿಕದಂತೆ ನಿರ್ಮಲವಾದ ಬಿಳಿಯ ರೆಕ್ಕೆಗಳಿಂದ ಕೂಡಿದ ಹಲವು ಹಕ್ಕಿಗಳೂ ಪ್ರಕಾಶಿಸುತ್ತಿದ್ದುವು. ಹಂಸಗಳು ಗುಂಪಾಗಿ ಗಾನಮಾಡುತ್ತಿದ್ದುವು. ಸಾರಸಗಳು ಎಲ್ಲ ಕಡೆಯೂ ಕೂಗುತ್ತಿದ್ದುವು.

೫೫. ನರಸಿಂಹಸ್ವಾಮಿಯು ಪರ್ವತಗಳ ತುದಿಯಲ್ಲಿ ಬಗೆಬಗೆಯ ಹೂ ಬಿಟ್ಟಿರುವ ಮಂಗಲಮಯವಾದ ಬಳ್ಳಿಗಳನ್ನು ನೋಡಿದನು. ಅವು ಸುವಾಸನೆ ಯನ್ನು ಹರಡುತ್ತ ಹೂ ಗೊಂಚಲುಗಳಿಂದ ತುಂಬಿದ್ದುವು.

೫೬-೫೮. ತಾಳೆ, ಅಶೋಕ, ಸರಳ, ಸುರಹೊನ್ನೆ, ತಿಲಕ, ಅರ್ಜುನ, ಮಾವು, ನೀಪ, ನಾಗ, ಕದಂಬ, ಬಕುಲ, ಪ್ರಿಯಂಗು, ಪಾದರಿ, ಬೂರಗ, ಹರಿದ್ರಕ,

ಪ್ರಿಯಂಗುಪಾಟಲಾ ವೃಕ್ಷಾಃ ಶಾಲ್ಮಲ್ಯಃ ಸಹರಿದ್ರಕಾಃ ।
ಸಾಲಾಸ್ತಾಲಾಸ್ತಮಾಲಾಶ್ಚ ಚಂಪಕಾಶ್ಚ ಮನೋರಮಾಃ ॥೫೭॥

ತಥೈವಾನ್ಯೇ ವ್ಯರಾಜಂತ ಸಭಾಯಾಂ ಪುಷ್ಪಿತಾ ದ್ರುಮಾಃ ।
ವಿದ್ರುಮಾಶ್ಚ ದ್ರುಮಾಶ್ಚೈವ ಜ್ವಲಿತಾಗ್ನಿಸಮಪ್ರಭಾಃ । ॥೫೮॥

ಸ್ಕಂಧವಂತಃ ಸುಶಾಖಾಶ್ಚ ಬಹುತಾಲಸಮುಚ್ಛ್ರಯಾಃ ।
ಅರ್ಜುನಾಶೋಕವರ್ಣಾಶ್ಚ ಬಹವಶ್ಚಿತ್ರಕಾ ದ್ರುಮಾಃ ॥೫೯॥

ವರುಣೋ ವತ್ಸನಾಭಶ್ಚ ಪನಸಾಃ ಸಹ ಚಂದನೈಃ ।
ನೀಪಾಃ ಸುಮನಸಶ್ಚೈವ ನಿಂಬಾ ಅಶ್ವತ್ಥತಿಂದುಕಾಃ ॥೬೦॥

ಪಾರಿಜಾತಾಶ್ಚ ಲೋಧ್ರಾಶ್ಚ ಮಲ್ಲಿಕಾ ಭದ್ರದಾರವಃ ।
ಆಮಲಕ್ಯಸ್ತಥಾ ಜಂಬೂಲಕುಚಾಃ ಶೈಲವಾಲುಕಾಃ ॥೬೧॥

ಖರ್ಜೂರ್ಯೋ ನಾರಿಕೇಲಾಶ್ಚ ಹರೀತಕವಿಭೀತಕಾಃ ।
ಕಾಲೀಯಕಾ ದ್ರುಕಾಲಾಶ್ಚ ಹಿಂಗವಃ ಪಾರಿಯಾತ್ರಕಾಃ ॥೬೨॥

---

ಸಾಲ, ತಾಳ, ಹೊಂಗೆ, ಸಂಪಗೆ ಮುಂತಾದ ಇನ್ನೂ ಎಷ್ಟೋ ಮರಗಳು ಹೂಬಿಟ್ಟು ಆ ಸಭೆಯಲ್ಲಿ ಕಂಗೊಳಿಸಿದುವು. ಹವಳದಂತಹ ಚಿಗುರುಗಳುಳ್ಳ ಮರಗಳು ಜ್ವಲಿಸುವ ಅಗ್ನಿಯಂತೆ ಬೆಳಗುತ್ತಿದ್ದುವು.

೫೯. ಅರ್ಜುನ, ಅಶೋಕ ಮತ್ತು ಚಿತ್ರಮೂಲ ವೃಕ್ಷಗಳು, ದಪ್ಪವಾದ ಕಾಂಡಗಳಿಂದಲೂ ದೊಡ್ಡ ಕೊಂಬೆಗಳಿಂದಲೂ ಕೂಡಿ ಅನೇಕ ತಾಳವೃಕ್ಷಗಳಷ್ಟು ಎತ್ತರವಾಗಿದ್ದುವು.

೬೦-೬೬. ಪಾರಿಜಾತ, ಲೋಧ್ರ, ಮಲ್ಲಿಗೆ, ಭದ್ರದಾರು, ನೆಲ್ಲಿ, ನೇರಿಳೆ ಗಜನಿಂಬೆ, ಶೈಲವಾಲುಕ, ಖರ್ಜೂರ,ತೆಂಗು ಅಳಲೆ, ತಾರೆ, ಮರದರಸಿನ, ದ್ರುಕಾಲ, ಇಂಗು, ಪಾರಿಯಾತ್ರಕ, ಮಂದಾರ, ಮೊಲ್ಲೆ, ಲಕ್ತಕ, ಪತಂಗವೆಂಬ ಶ್ರೀಗಂಧ ವಿಶೇಷ, ಬೆಟ್ಟದಮಲ್ಲಿಗೆ, ಕೆಂಪುಗೋರಂಟಿ, ಕಪ್ಪುಗೋರಂಟಿ, ಅಗಿಲು, ಕಡಹ,

ಮಂದಾರಕುಂದಲಕ್ತಾಶ್ಚ ಪತಂಗಾಃ ಕುಟಜಾಸ್ತಥಾ ।
ರಕ್ತಾಃ ಕುರಂಟಕಾಶ್ಚೈವ ನೀಲಾಶ್ಚಾಗುರುಭಿಃ ಸಹ ॥೬೩॥

ಕದಂಬಾಶ್ಚೈವ ಭವ್ಯಾಶ್ಚ ದಾಡಿಮಾ ಬೀಜಪೂರಕಾಃ ।
ಸಪ್ತಪರ್ಣಾಶ್ಚ ಬಿಲ್ವಾಶ್ಚ ಮಧುಪೈರಾವೃತಾಸ್ತಥಾ ॥೬೪॥

ಅಶೋಕಾಶ್ಚ ತಮಾಲಾಶ್ಚ ನಾನಾಗುಲ್ಮಲತಾವೃತಾಃ ।
ಮಧೂಕಾಃ ಸಪ್ತಪರ್ಣಾಶ್ಚ ಬಹವಃ ಕ್ಷೀರಕಾ ದ್ರುಮಾಃ ॥೬೫॥

ಲತಾಶ್ಚ ವಿವಿಧಾಕಾರಾಃ ಪತ್ರಪುಷ್ಪಫಲೋಪಗಾಃ ।
ಏತೇ ಚಾನ್ಯೇ ಚ ಬಹವಸ್ತತ್ರ ಕಾನನಜಾ ದ್ರುಮಾಃ ॥೬೬॥

ನಾನಾಪುಷ್ಪಫಲೋಪೇತಾ ವ್ಯರಾಜಂತ ಸಮಂತತಃ ।
ಚಕೋರಾಃ ಶತಪತ್ರಾಶ್ಚ ಮತ್ತಕೋಕಿಲಸಾರಿಕಾಃ ॥೬೭॥

ಪುಷ್ಪಿತಾನ್ ಪುಷ್ಪಿತಾಗ್ರಾಂಸ್ತಾನ್ ಸಂಚರಂತಿ ಮಹಾದ್ರುಮಾನ್ ।
ರಕ್ತಪೀತಾರುಣಾಸ್ತತ್ರ ಪಾದಪಾಗ್ರಗತಾಃ ಖಗಾಃ ॥೬೮॥

---

ಸೊಗಸಾದ ದಾಳಿಂಬೆ, ಮಾದಳ, ಏಳೆಲೆಬಾಳೆ, ಬಿಲ್ವ, ದುಂಬಿಗಳಿಂದ ತುಂಬಿದ ಅಶೋಕ, ಬಗೆಬಗೆಯ ಪೊದೆಗಳಿಂದಲೂ ಬಳ್ಳಿಗಳಿಂದಲೂ ಕೂಡಿದ ಹೊಂಗೆ, ಹಿಪ್ಪೆ, ಮತ್ತೊಂದು ಜಾತಿಯ ಏಳೆಲೆಬಾಳೆ, ಅರಳಿ, ಆಲ ಮೊದಲಾದ ಎಷ್ಟೋ ಹಾಲಿನ ಮರಗಳು, ಎಲೆ ಹೂ ಹಣ್ಣುಗಳಿಂದ ತುಂಬಿದ ಬಗೆಬಗೆಯ ಬಳ್ಳಿಗಳು ಮತ್ತು ಇನ್ನೂ ಅನೇಕ ಕಾಡುಜಾತಿಯ ಮರಗಳು ಅಲ್ಲಿ ಕಾಣಬಂದುವು. ಅವು ಬಗೆಬಗೆಯ ಹೂ ಹಣ್ಣುಗಳಿಂದ ತುಂಬಿ ಎಲ್ಲ ಕಡೆಗಳಲ್ಲೂ ಶೋಭಿಸುತ್ತಿದ್ದುವು.

೬೭. ಚಕೋರಗಳು, ನವಿಲುಗಳು, ಮದಿಸಿದ ಕೋಗಿಲೆಗಳು, ಮತ್ತು ಶಾರಿಕೆಗಳು ತುದಿಯಲ್ಲಿಯೂ ಮಧ್ಯದಲ್ಲಿಯೂ ಹೂ ಬಿಟ್ಟಿರುವ ಆ ಮರಗಳನ್ನು ಆಶ್ರಯಿಸಿದ್ದುವು.

೬೮. ಕೆಂಪು, ಹಳದಿ, ಮತ್ತು ಮಾಸಲು ಕೆಂಪು ಬಣ್ಣದ ಪಕ್ಷಿಗಳು ಮರದ ತುದಿಯಲ್ಲಿ ಕುಳಿತಿದ್ದುವು. ಚಕೋರಗಳು ಸಂತೋಷದಿಂದ ಒಂದನ್ನೊಂದು ನೋಡುತ್ತಿದ್ದುವು.

ಪರಸ್ಪರಮವೇಕ್ಷಂತೇ ಪ್ರಹೃಷ್ಟಾ ಜೀವಜೀವಕಾಃ ।
ತಸ್ಯಾಂ ಸಭಾಯಾಂ ದೈತ್ಯೇಂದ್ರೋ ಹಿರಣ್ಯಕಶಿಪುಸ್ತದಾ ॥೬೯॥

ಸ್ತ್ರೀಸಹಸ್ರೈಃ ಪರಿವೃತೋ ವಿಚಿತ್ರಾಭರಣಾಂಬರಃ ।
ಅನರ್ಘ್ಯಮಣಿವಜ್ರಾರ್ಚಿಃ ಶಿಖಾಜ್ವಲಿತಕುಂಡಲಃ ॥೭೦॥

ಆಸೀನಶ್ಚಾಸನೇ ಚಿತ್ರೇ ದಶನಲ್ವಪ್ರಮಾಣತಃ ।
ದಿವಾಕರನಿಭೇ ದಿವ್ಯೇ ದಿವ್ಯಾಸ್ತರಣಸಂಸ್ತೃತೇ ॥೭೧॥

ದಿವ್ಯಗಂಧವಹಸ್ತತ್ರ ಮಾರುತಃ ಸುಸುಖೋ ವವೌ ।
ಹಿರಣ್ಯಕಶಿಪುರ್ದೈತ್ಯ ಆಸ್ತೇ ಜ್ವಲಿತಕುಂಡಲಃ ॥೭೨॥

ಉಪಚೇರುರ್ಮಹಾದೈತ್ಯಂ ಹಿರಣ್ಯಕಶಿಪುಂ ತದಾ ।
ದಿವ್ಯತಾನೇನ ಗೀತಾನಿ ಜಗುರ್ಗಂಧರ್ವಸತ್ತಮಾಃ ॥೭೩॥

---

೬೯-೭೧. ಆ ಸಭೆಯಲ್ಲಿ ದೈತ್ಯರಾಜನಾದ ಹಿರಣ್ಯಕಶಿಪು ಸ್ತ್ರೀಸಹಸ್ರ ಪರಿವೃತನಾಗಿ ದಿವ್ಯವಾದ ಆಸನದಲ್ಲಿ ಕುಳಿತಿದ್ದನು. ಅದು ಸೂರ್ಯನಂತೆ ಪ್ರಕಾಶಿಸುತ್ತಿತ್ತು. ಅತ್ಯುತ್ತಮವಾದ ಪೀತಾಂಬರವನ್ನು ಹಾಸಿರಲು ಚಿತ್ರಾಕಾರದಿಂದ ಶೋಭಿಸುತ್ತಿತ್ತು. ಹಿರಣ್ಯಕಶಿಪು ಅನರ್ಘ್ಯವಾದ ವಸ್ತ್ರಾಭರಣಗಳನ್ನು ಧರಿಸಿದ್ದನು. ಅವನು ತೊಟ್ಟಿದ್ದ ಆಭರಣಗಳ ಅಮೂಲ್ಯವಾದ ರತ್ನಗಳು ಕಾಂತಿಯನ್ನು ಬೀರುತ್ತಿದ್ದುವು. ಕುಂಡಲಗಳು ಪ್ರಕಾಶದಿಂದ ಬೆಳಗುತ್ತಿದ್ದುವು. ಅವನು ಹತ್ತು ನಲ್ವಗಳಷ್ಟು ಎಂದರೆ ನಾಲ್ಕುಸಾವಿರ ಮೊಳಗಳಷ್ಟು ಎತ್ತರವಾಗಿದ್ದನು.

೭೨. ಅಲ್ಲಿ ವಾಯುವು ದಿವ್ಯವಾದ ಪರಿಮಳದಿಂದ ಕೂಡಿ ಬಹು ಹಿತಕರವಾಗಿ ಬೀಸುತ್ತಿತ್ತು. ದೈತ್ಯರಾಜನಾದ ಹಿರಣ್ಯಕಶಿಪುವಿನ ಕುಂಡಲಗಳು ಜ್ವಲಿಸುತ್ತಿದ್ದುವು.

೭೩. ಗಂಧರ್ವಪ್ರಮುಖರು ದೈತ್ಯಶ್ರೇಷ್ಠನಾದ ಆ ಹಿರಣ್ಯಕಶಿಪುವನ್ನು ಉಪಚರಿಸಿ ಅತ್ಯುತ್ತಮವಾದ ತಾನದಿಂದ ಹಾಡಿದರು.

ವಿಶ್ವಾಚೀ ಸಹಜನ್ಯಾ ಚ ಪ್ರಮ್ಲೋಚೇತ್ಯಭಿವಿಶ್ರುತಾ ।
ದಿವ್ಯಾಥ ಸೌರಭೇಯೀ ಚ ಸಮೀಚೀ ಪುಂಜಿಕಸ್ಥಲೀ ॥೨೪॥

ಮಿಶ್ರಕೇಶೀ ಚ ರಂಭಾ ಚ ಚಿತ್ರಲೇಖಾ ಶುಚಿಸ್ಮಿತಾ ।
ಚಾರುಕೇಶೀ ಘೃತಾಚೀ ಚ ಮೇನಕಾ ಚೋರ್ವಶೀ ತಥಾ ॥೨೫॥

ಏತಾಃ ಸಹಸ್ರಶಶ್ಚಾನ್ಯಾ ನೃತ್ಯಗೀತವಿಶಾರದಾಃ
ಉಪತಿಷ್ಠಂತಿ ರಾಜಾನಂ ಹಿರಣ್ಯಕಶಿಪುಂ ಪ್ರಭುಂ ॥೨೬॥

ತತ್ರಾಸೀನಂ ಮಹಾಬಾಹುಂ ಹಿರಣ್ಯಕಶಿಪುಂ ಪ್ರಭುಂ ।
ಉಪಾಸತೇ ದಿತೇಃ ಪುತ್ರಾಃ ಸರ್ವೇ ಲಬ್ಧವರಾಸ್ತಥಾ ॥೨೭॥

ತಮಪ್ರತಿಮಕರ್ಮಾಣಂ ಶತಶೋಽಥ ಸಹಸ್ರಶಃ ।
ಬಲಿರ್ವಿರೋಚನಸ್ತತ್ರ ನರಕಃ ಪೃಥಿವೀಸುತಃ ॥೨೮॥

ಪ್ರಹ್ಲಾದೋ ವಿಪ್ರಚಿತ್ತಿಶ್ಚ ಗವಿಷ್ಠಶ್ಚ ಮಹಾಸುರಃ ।
ಸುರಹಂತಾ ದುಃಖಹಂತಾ ಸುನಾಮಾ ಸುಮತಿರ್ವರಃ ॥೨೯॥

ಘಟೋದರೋ ಮಹಾಪಾರ್ಶ್ವಃ ಕ್ರಥನಃ ಪಿಠರಸ್ತಥಾ ।
ವಿಶ್ವರೂಪಃ ಸುರೂಪಶ್ಚ ಸ್ವಬಲಶ್ಚ ಮಹಾಬಲಃ ॥೩೦॥

---

೨೪-೨೬. ವಿಶ್ವಾಚಿ, ಸಹಜನ್ಯೆ, ಪ್ರಮ್ಲೋಚೆ, ಸೌರಭೇಯಿ, ಸಮೀಚಿ, ಪುಂಜಿಕಸ್ಥಲಿ, ಮಿಶ್ರಕೇಶಿ, ರಂಭೆ, ಮಂದಹಾಸಯುಕ್ತಳಾದ ಚಿತ್ರಲೇಖೆ, ಚಾರುಕೇಶಿ, ಘೃತಾಚಿ, ಮೇನಕೆ, ಉರ್ವಶಿ ಮುಂತಾದ ನೃತ್ಯಗೀತ ವಿಶಾರದೆಯರಾದ ಇನ್ನೂ ಸಾವಿರಾರು ಜನ ಅಪ್ಸರಸ್ತ್ರೀಯರು ದೈತ್ಯೇಶ್ವರನಾದ ಹಿರಣ್ಯಕಶಿಪುವನ್ನು ಸೇವಿಸುತ್ತಿದ್ದರು.

೨೭. ಆ ಆಸನದಲ್ಲಿ ಕುಳಿತಿರುವ ತಮ್ಮ ಪ್ರಭುವಾದ ಹಿರಣ್ಯಕಶಿಪುವನ್ನು ದೈತ್ಯರು ಸೇವಿಸುತ್ತಿದ್ದರು. ಅವರೆಲ್ಲರೂ ಅವನಂತೆಯೇ ವರವನ್ನು ಪಡೆದವರು.

೨೮-೩೪. ಅಸಮಾನಸಾಹಸಿಯಾದ ಆ ಹಿರಣ್ಯಕಶಿಪುವಿಗೆ ನೂರು ಗಟ್ಟಲೆಯಾಗಿ, ಸಾವಿರ ಗಟ್ಟಲೆಯಾಗಿ ಅಸುರರು ಸೇವೆಯನ್ನು ಮಾಡುತ್ತಿದ್ದರು.

ದಶಗ್ರೀವಶ್ಚ ವಾಲೀ ಚ ಮೇಘವಾಸಾ ಮಹಾಸುರಿಃ ।
ಘಟಾಸ್ಯೋಽಕಂಪನಶ್ಚೈವ ಪ್ರಜನಶ್ಚೇಂದ್ರತಾಪನಃ ॥೬೧॥

ದೈತ್ಯದಾನವಸಂಘಾಸ್ತೇ ಸರ್ವೇ ಜ್ವಲಿತಕುಂಡಲಾಃ ।
ಸ್ರಗ್ವಿಣೋ ವಾಗ್ಮಿನಃ ಸರ್ವೇ ಸದೈವ ಚರಿತವ್ರತಾಃ ॥೬೨॥

ಸರ್ವೇ ಲಬ್ಧವರಾಃ ಶೂರಾಃ ಸರ್ವೇ ವಿಗತಮೃತ್ಯವಃ ।
ಏತೇ ಚಾನ್ಯೇ ಚ ಬಹವೋ ಹಿರಣ್ಯಕಶಿಪುಂ ಪ್ರಭುಂ ॥೬೩॥

ಉಪಾಸಂತಿ ಮಹಾತ್ಮಾನಂ ಸರ್ವೇ ದಿವ್ಯಪರಿಚ್ಛದಾಃ ।
ವಿಮಾನೈರ್ವಿವಿಧಾಕಾರೈರ್ಭ್ರಾಜಮಾನೈರಿವಾಗ್ನಿಭಿಃ ॥೬೪॥

ಮಹೇಂದ್ರವಪುಷಃ ಸರ್ವೇ ವಿಚಿತ್ರಾಂಗದಬಾಹವಃ ।
ಭೂಷಿತಾಂಗಾ ದಿತೇಃ ಪುತ್ರಾಸ್ತಮುಪಾಸಂತ ಸರ್ವಶಃ ॥೬೫॥

---

ಬಲಿ, ವಿರೋಚನ, ಭೂಮಿಯ ಪುತ್ರನಾದ ನರಕಾಸುರ, ಪ್ರಹ್ಲಾದ, ವಿಪ್ರಚಿತ್ತಿ, ಗವಿಷ್ಠ, ಸುರಹಂತ, ದುಃಖಹಂತ. ಸುನಾಮ, ಶ್ರೇಷ್ಠನಾದ ಸುಮತಿ, ಘಟೋದರ, ಮಹಾಪಾರ್ಶ್ವ, ಕಥನ, ಪಿಠರ, ವಿಶ್ವರೂಪ, ಸುರೂಪ, ಸ್ವಬಲ, ಮಹಾಬಲ, ದಶಗ್ರೀವ, ವಾಲಿ, ಅಸುರಶ್ರೇಷ್ಠನಾದ ಮೇಘವಾಸ, ಘಟಾಸ್ಯ, ಅಕಂಪನ, ಪ್ರಜನ, ಇಂದ್ರತಾಪನ, ಇವರೇ ಮುಖ್ಯರಾದವರು. ಈ ದೈತ್ಯದಾನವರೆಲ್ಲ ಹೊಳೆ ಹೊಳೆವ ಕುಂಡಲಗಳನ್ನು ಧರಿಸಿದ್ದರು. ಹೂಮಾಲೆಗಳನ್ನು ಹಾಕಿಕೊಂಡಿದ್ದರು. ಮಾತಿನಲ್ಲಿ ಬುದ್ಧಿವಂತರು, ಯಾವಾಗಲೂ ವ್ರತಶೀಲರು, ಎಲ್ಲರೂ ವರವನ್ನು ಪಡೆದವರು, ಶೂರರು, ಮರಣವಿಲ್ಲದವರು, ದಿವ್ಯಾಂಬರ ಧಾರಿಗಳು. ಇವರೂ ಇನ್ನೂ ಹಲವರೂ, ವಿವಿಧಾಕಾರವಾಗಿ ಅಗ್ನಿಯಂತೆ ಜಾಜ್ವಲ್ಯಮಾನವಾಗಿರುವ ವಿಮಾನಗಳಿಂದ ಬಂದು ಮಹಾತ್ಮನಾದ ತಮ್ಮ ಪ್ರಭುವಿಗೆ ಸೇವೆಯನ್ನು ಸಲ್ಲಿಸುತ್ತಿದ್ದರು.

೬೫. ಅವರೆಲ್ಲರ ಶರೀರವೂ ದೇವೇಂದ್ರನ ಶರೀರವನ್ನು ಹೋಲುತ್ತಿತ್ತು. ಅವರು ತೋಳುಗಳಿಗೆ ವಿಚಿತ್ರವಾದ ತೋಳುಬಳೆಗಳನ್ನು ತೊಟ್ಟು, ಅವಯವಗಳಿಗೆಲ್ಲ ಒಡವೆಗಳನ್ನು ಹಾಕಿಕೊಂಡು ಅವನನ್ನು ಉಪಚರಿಸುತ್ತಿದ್ದರು.

ತಸ್ಯಾಂ ಸಭಾಯಾಂ ದಿವ್ಯಾಯಾಮಸುರಾಃ ಪರ್ವತೋಪಮಾಃ ।
ಹಿರಣ್ಯವಪುಷಃ ಸರ್ವೇ ದಿವಾಕರಸಮಪ್ರಭಾಃ ॥೮೬॥

ನ ಶ್ರುತಂ ನೈವ ದೃಷ್ಟಂ ಹಿ ಹಿರಣ್ಯಕಶಿಪೋರ್ಯಥಾ ।
ಐಶ್ವರ್ಯಂ ದೈತ್ಯಸಿಂಹಸ್ಯ ಯಥಾ ತಸ್ಯ ಮಹಾತ್ಮನಃ ॥೮೭॥

ಕನಕರಜತಚಿತ್ರವೇದಿಕಾಯಾಂ
ಪರಿವೃತರತ್ನವಿಚಿತ್ರವೀಥಿಕಾಯಾಂ ।
ಸ ದದರ್ಶ ಮೃಗಾಧಿಪಃ ಸಭಾಯಾಂ
ಸುರಚಿತರತ್ನಗವಾಕ್ಷಶೋಭಿತಾಯಾಂ ॥೮೮॥

ಕನಕವಿಮಲಹಾರಭೂಷಿತಾಂಗಂ
ದಿತಿತನಯಂ ಸ ಮೃಗಾಧಿಪೋ ದದರ್ಶ ।
ದಿವಸಕರಮಹಾಪ್ರಭಂ ಜ್ವಲಂತಂ
ದಿತಿಜಸಹಸ್ರಶತೈರ್ನಿಷೇವ್ಯಮಾಣಂ ॥೮೯॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನಾರಸಿಂಹ ಪ್ರಾದುರ್ಭಾವೇ
ಏಕಷಷ್ಟ್ಯಧಿಕಶತತಮೋಽಧ್ಯಾಯಃ

---

೮೬. ಆ ದಿವ್ಯಸಭೆಯಲ್ಲಿದ್ದ ಅಸುರರು ಪರ್ವತಸದೃಶರಾಗಿದ್ದರು. ಅವರ ಶರೀರವು ಸುವರ್ಣಕಾಂತಿಯಿಂದ ಕೂಡಿದ್ದಿತು. ಅವರೆಲ್ಲ ಸೂರ್ಯನಂತೆ ತೇಜಸ್ವಿಗಳಾಗಿದ್ದರು.

೮೭. ದೈತ್ಯಶ್ರೇಷ್ಠನೂ, ಮಹಾತ್ಮನೂ ಆದ ಆ ಹಿರಣ್ಯಕಶಿಪುವಿನಲ್ಲಿ ಇದ್ದಷ್ಟು ಐಶ್ವರ್ಯವನ್ನು ಬೇರೆ ಕಡೆಗಳಲ್ಲಿ ಕೇಳಿಯೂ ಇಲ್ಲ ನೋಡಿಯೂ ಇಲ್ಲ.

೮೮-೮೯. ನರಸಿಂಹಾಕೃತಿಯನ್ನು ತಾಳಿದ್ದ ಭಗವಂತನು ಚಿನ್ನಬೆಳ್ಳಿಗಳಿಂದಾದ ವೇದಿಕೆಗಳಿಂದಲೂ, ರತ್ನಗಳಿಂದ ವಿಚಿತ್ರವಾದ ಬೀದಿಗಳಿಂದಲೂ, ಅಂದವಾಗಿ ನಿರ್ಮಿತವಾದ ರತ್ನದ ಗವಾಕ್ಷದಿಂದಲೂ ಕೂಡಿದ ಆ ಸಭೆಯಲ್ಲಿ ಹಿರಣ್ಯಕಶಿಪುವನ್ನು ಕಂಡನು. ಆ ದೈತ್ಯರಾಜನು ನಿರ್ಮಲವಾದ ಸುವರ್ಣಹಾರವನ್ನು ಹಾಕಿಕೊಂಡಿದ್ದನು. ಸೂರ್ಯನಂತೆ ಮಹಾತೇಜಸ್ವಿಯಾಗಿದ್ದನು. ಲಕ್ಷಗಟ್ಟಲೆಯ ದೈತ್ಯರಿಂದ ಸೇವೆಯನ್ನು ಕೈಗೊಳ್ಳುತ್ತಿದ್ದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ನರಸಿಂಹಾವತಾರದ ವೃತ್ತಾಂತವು ಪ್ರಾರಂಭವಾಗಿದೆ.

ಕೃತಯುಗದಲ್ಲಿ ದೈತ್ಯರಾಜನಾದ ಹಿರಣ್ಯಕಶಿಪು ಬಹು ಘೋರವಾಗಿ ತಪಸ್ಸನ್ನು ಮಾಡಿದನು. ಬ್ರಹ್ಮನು ಪ್ರಸನ್ನನಾಗಲು ದೇವ ಮನುಷ್ಯಾದಿ ಪ್ರಾಣಿಗಳಿಂದಲೂ, ಅಸ್ತ್ರಶಸ್ತ್ರಾದ್ಯಾಯುಧಗಳಿಂದಲೂ ತನಗೆ ಮರಣವಾಗಕೂಡದೆಂದು ಆತನು ಬೇಡಿದನು. ಪಿತಾಮಹನು ಹಾಗೆಯೇ ಆಗಲೆಂದು ಅನುಗ್ರಹಿಸಿದನು.

ಇತ್ತ ದೈತ್ಯರಾಜನು ವರದ ಬಲದಿಂದ ಮೂರು ಲೋಕವನ್ನೂ ಬಾಧಿಸತೊಡಗಿದನು. ದೇವತೆಗಳಿಗೆ ಯಜ್ಞಭಾಗವು ತಪ್ಪಿತು; ಅದು ದೈತ್ಯರ ಪಾಲಾಯಿತು. ಅವರು ವಿಷ್ಣುವಿನ ಬಳಿಗೆ ಹೋಗಿ ಮೊರೆಯಿಟ್ಟರು. ಶೀಘ್ರದಲ್ಲಿಯೇ ಅವರ ಕಷ್ಟವನ್ನು ಪರಿಹರಿಸುವುದಾಗಿ ಅವನು ಅಭಯವಿತ್ತನು. ದೇವತೆಗಳು ನಿಶ್ಚಿಂತರಾಗಿ ತಮ್ಮ ತಮ್ಮೆಡೆಗಳಿಗೆ ತೆರಳಿದರು.

ಮಹಾವಿಷ್ಣುವು ನರಸಿಂಹರೂಪವನ್ನು ಧರಿಸಿ ಹಿರಣ್ಯಕಶಿಪುವಿನ ರಾಜಧಾನಿಗೆ ಹೋದನು. ದಾನವೇಶ್ವರನು ಆಸ್ಥಾನದಲ್ಲಿ ದಿವ್ಯಪೀಠದಲ್ಲಿ ಕುಳಿತಿದ್ದನು. ಆ ಸಭಾಂಗಣವು ಅತಿ ವಿಸ್ತಾರವಾಗಿ ಸಕಲ ಸಂಪತ್ಸಮೃದ್ಧವಾಗಿದ್ದಿತು. ಆ ಬಗೆಯ ಐಶ್ವರ್ಯವನ್ನು ಎಲ್ಲಿಯೂ ನೋಡಿರಲಿಲ್ಲ; ಅಥವಾ ಕೇಳಿರಲಿಲ್ಲ.

ಶ್ರೀಮತ್ಸ್ಯಮಹಾಪುರಾಣದಲ್ಲಿ ನರಸಿಂಹ ಪ್ರಾದುರ್ಭಾವವೆಂಬ
ನೂರರವತ್ತೊಂದನೆಯ ಅಧ್ಯಾಯವು ಮುಗಿದುದು.



## ಅಥ ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ತತೋ ದೃಷ್ಟ್ವಾ ಮಹಾತ್ಮಾನಂ ಕಾಲಚಕ್ರಮಿವಾಗತಂ ।
ನರಸಿಂಹವಪುಶ್ಛನ್ನಂ ಭಸ್ಮಚ್ಛನ್ನಮಿವಾನಲಂ || ೧ ||

ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ನಾಮ ವೀರ್ಯವಾನ್ ।
ದಿವ್ಯೇನ ಚಕ್ಷುಷಾ ಸಿಂಹಮಪಶ್ಯದ್ದೇವಮಾಗತಂ || ೨ ||

ತಂ ದೃಷ್ಟ್ವಾ ರುಕ್ಮಶೈಲಾಭಮಪೂರ್ವಾಂ ತನುಮಾಶ್ರಿತಂ ।
ವಿಸ್ಮಿತಾ ದಾನವಾಃ ಸರ್ವೇ ಹಿರಣ್ಯಕಶಿಪುಶ್ಚ ಸಃ || ೩ ||

|| ಪ್ರಹ್ಲಾದ ಉವಾಚ ||

ಮಹಾಬಾಹೋ ಮಹಾರಾಜ ದೈತ್ಯಾನಾಮಾದಿಸಂಭವ ।
ನ ಶ್ರುತಂ ನ ಚ ನೋ ದೃಷ್ಟಂ ನಾರಸಿಂಹಮಿದಂ ವಪುಃ || ೪ ||

---

೧-೨. ಸೂತಪೌರಾಣಿಕನು ಹೇಳಿದನು.—ಬಳಿಕ ಹಿರಣ್ಯಕಶಿಪುವಿನ ಪುತ್ರನೂ ಮಹಾವೀರನೂ ಆದ ಪ್ರಹ್ಲಾದನು ಕಾಲಚಕ್ರವೇ ಬಂದಿತೋ ಎನ್ನುವಂತೆ, ಬೂದಿಮುಚ್ಚಿದ ಕೆಂಡದಂತೆ ನಿಜಸ್ವರೂಪವನ್ನು ಮರೆಸಿಕೊಂಡು ನರಸಿಂಹರೂಪದಿಂದ ಬಂದ ಆ ಮಹಾತ್ಮನನ್ನು ಕಂಡನು. ದಿವ್ಯದೃಷ್ಟಿಯಿಂದ ನೋಡಿ ಭಗವಂತನೇ ಆ ರೂಪದಿಂದ ಬಂದಿರುವನೆಂದು ಅವನು ತಿಳಿದನು.

೩. ಚಿನ್ನದ ಬೆಟ್ಟದಂತೆ ಅಪೂರ್ವವಾದ ದೇಹವನ್ನು ಧರಿಸಿದ ಆತನನ್ನು ಕಂಡು ಎಲ್ಲ ದಾನವರೂ ಆ ಹಿರಣ್ಯಕಶಿಪುವೂ ಆಶ್ಚರ್ಯಗೊಂಡರು.

೪. ಪ್ರಹ್ಲಾದನು ಹೇಳಿದನು.—ದೈತ್ಯರ ಮೂಲಪುರುಷನೂ ಮಹಾಶೂರನೂ ಆದ ಓ ಮಹಾರಾಜಾ, ಈ ನರಸಿಂಹಾಕೃತಿಯನ್ನು ನಾವು ಹಿಂದೆ ಕೇಳಿಯೂ ಇರಲಿಲ್ಲ; ನೋಡಿಯೂ ಇರಲಿಲ್ಲ.

ಅವ್ಯಕ್ತಪ್ರಭವಂ ದಿವ್ಯಂ ಕಿಮಿದಂ ರೂಪಮಾಗತಂ ।
ದೈತ್ಯಾಂತಕರಣಂ ಘೋರಂ ಸಂಶತೀವ ಮನೋ ಮಮ ॥ ೫ ॥

ಅಸ್ಯ ದೇವಾಃ ಶರೀರಸ್ಥಾಃ ಸಾಗರಾಃ ಸರಿತಶ್ಚ ಯಾಃ ।
ಹಿಮವಾನ್ ಪಾರಿಯಾತ್ರಶ್ಚ ಯೇ ಚಾನ್ಯೇ ಕುಲಪರ್ವತಾಃ ॥ ೬ ॥

ಚಂದ್ರಮಾಶ್ಚ ಸನಕ್ಷತ್ರೈರಾದಿತ್ಯೈರ್ವಸುಭಿಃ ಸಹ ।
ಧನದೋ ವರುಣಶ್ಚೈವ ಯಮಃ ಶಕ್ರಃ ಶಚೀಪತಿಃ ॥ ೭ ॥

ಮರುತೋ ದೇವಗಂಧರ್ವಾ ಋಷಯಶ್ಚ ತಪೋಧನಾಃ ।
ನಾಗಾ ಯಕ್ಷಾಃ ಪಿಶಾಚಾಶ್ಚ ರಾಕ್ಷಸಾ ಭೀಮವಿಕ್ರಮಾಃ ॥ ೮ ॥

ಬ್ರಹ್ಮಾ ದೇವಃ ಪಶುಪತಿರ್ಲಲಾಟಸ್ಥಾ ಭ್ರಮಂತಿ ವೈ ।
ಸ್ಥಾವರಾಣಿ ಚ ಸರ್ವಾಣಿ ಜಂಗಮಾನಿ ತಥೈವ ಚ ॥ ೯ ॥

---

೫. ದೈತ್ಯರ ವಿನಾಶಕ್ಕಾಗಿ ಅವಾಙ್ಮನಸಗೋಚರನಾದ ಭಗವಂತನು ಎತ್ತಿದ ದಿವ್ಯವೂ, ಭಯಂಕರವೂ ಆದ ರೂಪವೋ ಇದು ಎಂದು ನನ್ನ ಮನಸ್ಸಿನಲ್ಲಿ ಸಂದೇಹ ಹುಟ್ಟುತ್ತದೆ.

೬. ದೇವತೆಗಳು, ಸಾಗರಗಳು, ನದಿಗಳು, ಹಿಮವಂತ, ಪಾರಿಯಾತ್ರ ಮೊದಲಾದ ಕುಲಪರ್ವತಗಳು ಇವೆಲ್ಲವೂ ಈತನ ದೇಹದಲ್ಲಿವೆ.

೭-೮. ಚಂದ್ರ, ನಕ್ಷತ್ರಗಳು, ದ್ವಾದಶಾದಿತ್ಯರು, ಅಷ್ಟವಸುಗಳು, ಕುಬೇರ, ವರುಣ, ಯಮ, ಶಚೀಪತಿಯಾದ ಇಂದ್ರ, ಮರುತ್ತುಗಳು, ದೇವಗಂಧರ್ವರು, ತಪಸ್ವಿಗಳಾದ ಋಷಿಗಳು, ನಾಗರು, ಯಕ್ಷರು, ಪಿಶಾಚರು, ಭಯಂಕರ ಸಾಹಸಿಗಳಾದ ರಾಕ್ಷಸರು ಪೂಜ್ಯನಾದ ಬ್ರಹ್ಮ, ಪರಮೇಶ್ವರ ಇವರೆಲ್ಲ ಈತನ ಹಣೆಯಲ್ಲಿ ತೊಳಲುತ್ತಿರುವರು.

೯-೧೧. ಸಕಲ ಚರಾಚರ ವಸ್ತುಗಳು, ನಾವು, ಸಕಲ ದೈತ್ಯಪರಿವಾರದೊಡಗೂಡಿದ ನೀನು, ನೂರಾರು ವಿಮಾನಗಳಿಂದ ತುಂಬಿದ ನಿನ್ನ ಸಭೆ, ಮೂರು ಲೋಕ

ಭವಾಂಶ್ಚ ಸಹಿತೋಽಸ್ಮಾಭಿಃ ಸರ್ವೈರ್ದೈತ್ಯಗಣೈರ್ವೃತಃ ।
ವಿಮಾನಶತಸಂಕೀರ್ಣಾ ತಥೈವ ಭವತಃ ಸಭಾ ॥೧೦॥

ಸರ್ವಂ ತ್ರಿಭುವನಂ ರಾಜಂಲ್ಲೋಕಧರ್ಮಾಶ್ಚ ಶಾಶ್ವತಾಃ ।
ದೃಶ್ಯಂತೇ ನಾರಸಿಂಹೇಽಸ್ಮಿಂಸ್ತಥೇದಮಖಿಲಂ ಜಗತ್ ॥೧೧॥

ಪ್ರಜಾಪತಿಶ್ಚಾತ್ರ ಮನುರ್ಮಹಾತ್ಮಾ
ಗ್ರಹಾಶ್ಚ ಯೋಗಾಶ್ಚ ಮಹೀ ನಭಶ್ಚ ।
ಉತ್ಪಾತಕಾಲಶ್ಚ ಧೃತಿರ್ಮತಿಶ್ಚ
ರತಿಶ್ಚ ಸತ್ಯಂ ಚ ತಪೋ ದಮಶ್ಚ ॥೧೨॥

ಸನತ್ಕುಮಾರಶ್ಚ ಮಹಾನುಭಾವೋ
ವಿಶ್ವೇ ಚ ದೇವಾ ಋಷಯಶ್ಚ ಸರ್ವೇ ।
ಕ್ರೋಧಶ್ಚ ಕಾಮಶ್ಚ ತಥೈವ ಹರ್ಷೋ
ಧರ್ಮಶ್ಚ ಮೋಹಃ ಪಿತರಶ್ಚ ಸರ್ವೇ ॥೧೩॥

ಪ್ರಹ್ಲಾದಸ್ಯ ವಚಃ ಶ್ರುತ್ವಾ ಹಿರಣ್ಯಕಶಿಪುಃ ಪ್ರಭುಃ ।
ಉವಾಚ ದಾನವಾನ್ ಸರ್ವಾನ್ ಗಣಾಂಶ್ಚ ಸ ಗಣಾಧಿಪಃ ॥೧೪॥

---

ಗಳು, ಶಾಶ್ವತವಾದ ಲೋಕಧರ್ಮಗಳು, ಹೆಚ್ಚೇನು ಓ ರಾಜಾ, ಪ್ರಪಂಚಗಳೆಲ್ಲವೂ ನರಸಿಂಹರೂಪನಾದ ಈತನಲ್ಲಿ ಕಾಣಬರುತ್ತಿವೆ.

೧೨-೧೩. ಈ ನರಸಿಂಹನಲ್ಲಿ ಪ್ರಜಾಪತಿ, ಮಹಾತ್ಮನಾದ ಮನು, ಗ್ರಹಗಳು, ಯೋಗಗಳು, ಭೂಮ್ಯಾಕಾಶಗಳು, ಉತ್ಪಾತಕಾಲ, ಧೃತಿ, ಮತಿ, ರತಿ, ಸತ್ಯ, ತಪಸ್ಸು, ದಮ, ಮಹಾನುಭಾವನಾದ ಸನತ್ಕುಮಾರ, ವಿಶ್ವೇದೇವತೆಗಳು ಸಕಲ ಋಷಿಗಳು, ಕ್ರೋಧ, ಕಾಮ, ಹರ್ಷ, ಧರ್ಮ, ಮೋಹ ಮತ್ತು ಸಕಲ ಪಿತೃದೇವತೆಗಳು ಇವರೆಲ್ಲರೂ ಕಾಣುತ್ತಿರುವರು.

೧೪. ಪ್ರಹ್ಲಾದನ ಮಾತನ್ನು ಕೇಳಿ ದೈತ್ಯಗಣಗಳ ಅಧೀಶ್ವರನಾದ ಹಿರಣ್ಯಕಶಿಪು ದಾನವರೆಲ್ಲರಿಗೂ ಹೇಳಿದನು.

ಮೃಗೇಂದ್ರೋ ಗೃಹ್ಯತಾಮೇಷ ಅಪೂರ್ವಾಂ ತನುಮಾಸ್ಥಿತಃ ।
ಯದಿ ವಾ ಸಂಶಯಃ ಕಶ್ಚಿದ್ವಧ್ಯತಾಂ ವನಗೋಚರಃ ॥೧೫॥

ತೇ ದಾನವಗಣಾಃ ಸರ್ವೇ ಮೃಗೇಂದ್ರಂ ಭೀಮವಿಕ್ರಮಂ ।
ಪರಿಕ್ಷಿಪಂತೋ ಮುದಿತಾಸ್ತ್ರಾಸಯಾಮಾಸುರೋಜಸಾ ॥೧೬॥

ಸಿಂಹನಾದಂ ವಿಮುಚ್ಯಾಥ ನರಸಿಂಹೋ ಮಹಾಬಲಃ ।
ಬಭಂಜ ತಾಂ ಸಭಾಂ ಸರ್ವಾಂ ವ್ಯಾದಿತಾಸ್ಯ ಇವಾಂತಕಃ ॥೧೭॥

ಸಭಾಯಾಂ ಭಜ್ಯಮಾನಾಯಾಂ ಹಿರಣ್ಯಕಶಿಪುಃ ಸ್ವಯಂ ।
ಚಿಕ್ಷೇಪಾಸ್ತ್ರಾಣಿ ಸಿಂಹಸ್ಯ ರೋಷಾದ್ವ್ಯಾಕುಲಲೋಚನಃ ॥೧೮॥

ಸರ್ವಾಸ್ತ್ರಾಣಾಮಥ ಜ್ಯೇಷ್ಠಂ ದಂಡಮಸ್ತ್ರಂ ಸುದಾರುಣಂ ।
ಕಾಲಚಕ್ರಂ ತಥಾ ಘೋರಂ ವಿಷ್ಣುಚಕ್ರಂ ತಥಾ ಪರಂ ॥೧೯॥

---

೧೫. "ಅಪೂರ್ವವಾದ ದೇಹವುಳ್ಳ ಈ ಸಿಂಹವನ್ನು ಹಿಡಿಯಿರಿ. ಅಥವಾ ನಿಮಗೇನಾದರೂ ಸಂದೇಹ ತೋರಿದರೆ ಈ ಕಾಡುಮೃಗವನ್ನು ಕೊಂದುಬಿಡಿ."

೧೬. ಆ ದಾನವವರ್ಗದವರೆಲ್ಲರೂ ಭಯಂಕರ ಪರಾಕ್ರಮವುಳ್ಳ ಆ ಸಿಂಹವನ್ನು ಎಲ್ಲ ಕಡೆಗಳಿಂದಲೂ ಪ್ರಹರಿಸುತ್ತ ತಮ್ಮ ಪೌರುಷದಿಂದ ಹೆದರಿಸಿದರು.

೧೭. ಬಳಿಕ ಮಹಾಬಲಶಾಲಿಯಾದ ನರಸಿಂಹಸ್ವಾಮಿಯು ಸಿಂಹನಾದ ವನ್ನು ಮಾಡಿ ಬಾಯ್ತೆರೆದ ಯಮನಂತೆ ಆ ಸಭೆಯೆಲ್ಲವನ್ನೂ ಭಗ್ನಮಾಡಿದನು.

೧೮. ಸಭೆಯು ನಾಶವಾಗುತ್ತಿರುವುದನ್ನು ನೋಡಿ ಹಿರಣ್ಯಕಶಿಪು ತಾನೇ ಸನ್ನದ್ಧನಾಗಿ, ರೋಷದಿಂದ ಕಣ್ಣುಗಳು ತೊಳಲುತ್ತಿರಲು, ಸಿಂಹದ ಮೇಲೆ ಅಸ್ತ್ರ ಗಳನ್ನು ಪ್ರಯೋಗಿಸಿದನು.

೧೯-೨೮. ಆ ದಾನವೇಶ್ವರನು ವಿಷ್ಣುವಿನ ಮೇಲೆ ಬಗೆಬಗೆಯ ಬಾಣಗಳನ್ನು ಪ್ರಯೋಗಿಸಿದನು. ಅಸ್ತ್ರಗಳಲೆಲ್ಲ ಹಿರಿಯದೂ ಅತಿ ಭಯಂಕರವೂ ಆದ ದಂಡಾಸ್ತ್ರ, ಘೋರವಾದ ಕಾಲಚಕ್ರ, ವಿಷ್ಣುಚಕ್ರ, ಮೂರು ಲೋಕವನ್ನೂ ದಹಿಸುವ ಉಗ್ರ

ಪೈತಾಮಹಂ ತಥಾತ್ಯುಗ್ರಂ ತ್ರೈಲೋಕ್ಯದಹನಂ ಮಹತ್ ।
ವಿಚಿತ್ರಾಮಶನೀಂ ಚೈವ ಶುಷ್ಕಾರ್ದ್ರಂ ಚಾಶನಿದ್ವಯಂ ॥೨೦॥

ರೌದ್ರಂ ತಥೋಗ್ರಂ ಶೂಲಂ ಚ ಕಂಕಾಲಂ ಮುಸಲಂ ತಥಾ ।
ಮೋಹನಂ ಶೋಷಣಂ ಚೈವ ಸಂತಾಪನವಿಲಾಪನಂ ॥೨೧॥

ವಾಯುವ್ಯಂ ಮಥನಂ ಚೈವ ಕಾಪಾಲಮಥ ಕೈಂಕರಂ ।
ತಥಾಽಪ್ರತಿಹತಾಂ ಶಕ್ತಿಂ ಕ್ರೌಂಚಮಸ್ತ್ರಂ ತಥೈವ ಚ ॥೨೨॥

ಅಸ್ತ್ರಂ ಬ್ರಹ್ಮಶಿರಂ ಚೈವ ಸೋಮಾಸ್ತ್ರಂ ಶಿಶಿರಂ ತಥಾ ।
ಕಂಪನಂ ಶಾಂತನಂ ಚೈವ ತ್ವಾಷ್ಟ್ರಂ ಚೈವ ಸುಭೈರವಂ ॥೨೩॥

ಕಾಲಮುದ್ಗರಮಕ್ಷೋಭ್ಯಂ ತಪನಂ ಚ ಮಹಾಬಲಂ ।
ಸಂವರ್ತನಂ ಮೋಹನಂ ಚ ತಥಾ ಮಾಯಾಧರಂ ಪರಂ ॥೨೪॥

ಗಾಂಧರ್ವಮಸ್ತ್ರಂ ದಯಿತಮಸಿರತ್ನಂ ಚ ನಂದಕಂ ।
ಪ್ರಸ್ವಾಪನಂ ಪ್ರಮಥನಂ ವಾರುಣಂ ಚಾಸ್ತ್ರಮುತ್ತಮಂ ।
ಅಸ್ತ್ರಂ ಪಾಶುಪತಂ ಚೈವ ಯಸ್ಯಾಪ್ರತಿಹತಾ ಗತಿಃ ॥೨೫॥

ಅಸ್ತ್ರಂ ಹಯಶಿರಶ್ಚೈವ ಬ್ರಾಹ್ಮಮಸ್ತ್ರಂ ತಥೈವ ಚ ।
ನಾರಾಯಣಾಸ್ತ್ರಮೈಂದ್ರಂ ಚ ಸಾರ್ಪಮಸ್ತ್ರಂ ತಥಾದ್ಭುತಂ ॥೨೬॥

---

ವಾದ ಪೈತಾಮಹಾಸ್ತ್ರ, ವಿಚಿತ್ರವಾದ ವಜ್ರಾಯುಧ, ಶುಷ್ಕಾಶನಿ, ಆರ್ದ್ರಾಶನಿ, ಭಯಂಕರವೂ ಕ್ರೂರವೂ ಆದ ಶೂಲ, ಕಂಕಾಲ, ಮುಸಲ, ಮೋಹನ, ಶೋಷಣ, ಸಂತಾಪನ, ವಿಲಾಪನ, ವಾಯುವ್ಯ, ಮಥನ, ಕಾಪಾಲ, ಕೈಂಕರ, ಅಪ್ರತಿಹತ ವೆನಿಸಿದ ಶಕ್ತಿ, ಕ್ರೌಂಚ, ಬ್ರಹ್ಮಶಿರ, ಬಹು ಭಯಂಕರವಾದ ತ್ವಾಷ್ಟ್ರ, ಎದುರಿಸ ಲಾಗದ ಕಾಲಮುದ್ಗರ, ಮಹಾಬಲಯುತವಾದ ತಪನ, ಸಂವರ್ತನ, ಮೋಹನ, ಮಾಯಾಧರ, ಪ್ರೀತಿಪಾತ್ರವೆನಿಸಿದ ಗಾಂಧರ್ವ, ಖಡ್ಗಶ್ರೇಷ್ಠವಾದ ನಂದಕ, ಪ್ರಸ್ವಾಪನ, ಪ್ರಮಥನ, ಉತ್ತಮವಾದ ವಾರುಣ, ಅಸದೃಶ ವೇಗಶಾಲಿಯಾದ ಪಾಶುಪತ, ಹಯಶಿರ, ಬ್ರಾಹ್ಮ, ನಾರಾಯಣ, ಐಂದ್ರ, ಅದ್ಭುತವೆನಿಸಿದ ಸಾರ್ಪ,

ಪೈಶಾಚಮಸ್ತ್ರಮಜಿತಂ ಶೋಷದಂ ಶಾಮನಂ ತಥಾ ।
ಮಹಾಬಲಂ ಭಾವನಂ ಚ ಪ್ರಸ್ಥಾಪನವಿಕಂಪನೇ ||೨೭||

ಏತಾನ್ಯಸ್ತ್ರಾಣಿ ದಿವ್ಯಾನಿ ಹಿರಣ್ಯಕಶಿಪುಸ್ತದಾ ।
ಅಸೃಜನ್ನರಸಿಂಹಸ್ಯ ದೀಪ್ತಸ್ಯಾಗ್ನೇರಿವಾಹುತಿಂ ||೨೮||

ಅಸ್ತ್ರೈಃ ಪ್ರಜ್ವಲಿತೈಃ ಸಿಂಹಮಾವೃಣೋದಸುರೋತ್ತಮಃ ।
ವಿವಸ್ವಾನ್ ಘರ್ಮಸಮಯೇ ಹಿಮವಂತಮಿವಾಂಶುಭಿಃ ||೨೯||

ಸ ಹ್ಯಮರ್ಷಾನಿಲೋದ್ಧೂತೋ ದೈತ್ಯಾನಾಂ ಸೈನ್ಯಸಾಗರಃ ।
ಕ್ಷಣೇನ ಪ್ಲಾವಯಾಮಾಸ ಮೈನಾಕಮಿವ ಸಾಗರಃ ||೩೦||

ಪ್ರಾಸೈಃ ಪಾಶೈಶ್ಚ ಖಡ್ಗೈಶ್ಚ ಗದಾಭಿರ್ಮುಸಲೈಸ್ತಥಾ ।
ವಜ್ರೈರಶನಿಭಿಶ್ಚೈವ ಸಾಗ್ನಿಭಿಶ್ಚ ಮಹಾದ್ರುಮೈಃ ||೩೧||

ಮುದ್ಗರೈರ್ಭಿಂದಿಪಾಲೈಶ್ಚ ಶಿಲೋಲೂಖಲಪರ್ವತೈಃ ।
ಶತಘ್ನೀಭಿಶ್ಚ ದೀಪ್ತಾಭಿರ್ದಂಡೈರಪಿ ಸುದಾರುಣೈಃ ||೩೨||

---

ದುರ್ಜಯವಾದ ಪೈಶಾಚ, ಶೋಷದ, ಶಾಮನ, ಬಹುಬಲಿಷ್ಠವಾದ ಭಾವನ, ಪ್ರಸ್ಥಾಪನ, ವಿಕಂಪನ ಮೊದಲಾದ ಈ ದಿವ್ಯಾಸ್ತ್ರಗಳು ಜ್ವಲಿಸುತ್ತಿರುವ ಅಗ್ನಿಯಲ್ಲಿ ಹಾಕಿದ ಆಹುತಿಗಳಂತೆ ನರಸಿಂಹನ ಮೇಲೆ ಬಿದ್ದುವು.

೨೯. ಬೇಸಗೆಯಲ್ಲಿ ಸೂರ್ಯನು ತನ್ನ ಕಿರಣಗಳಿಂದ ಹಿಮಾಚಲವನ್ನು ಮುಚ್ಚುವಂತೆ, ಹಿರಣ್ಯಕಶಿಪು ಪ್ರಜ್ವಲಿಸುವ ಅಸ್ತ್ರಗಳಿಂದ ನರಸಿಂಹನನ್ನು ಮುತ್ತಿದನು.

೩೦-೩೨. ದೈತ್ಯಸೈನ್ಯವೆಂಬ ಸಾಗರವು ಅವನ ಕೋಪವೆಂಬ ಗಾಳಿಯಿಂದ ಉಕ್ಕೇರಿತು. ಪ್ರಾಸ, ಪಾಶ, ಖಡ್ಗ, ಗದೆ, ಮುಸಲ, ವಜ್ರ, ಅಶನಿ, ಉರಿಯುವ ಮರ, ಮುದ್ಗರ, ಭಿಂದಿಪಾಲ, ಕಲ್ಲು, ಒರಳು, ಪರ್ವತ, ಬೆಳಬೆಳಗುವ ಫಿರಂಗಿ, ಭಯಂಕರವಾದ ದಂಡ ಈ ಆಯುಧಗಳಿಂದ ದೈತ್ಯರು ಸಾಗರವು ಮೈನಾಕನನ್ನು ಆಕ್ರಮಿಸಿಕೊಂಡಂತೆ ಆ ನರಸಿಂಹನನ್ನು ಆಕ್ರಮಿಸಿದರು.

ತೇ ದಾನವಾಃ ಪಾಶಗೃಹೀತಹಸ್ತಾ
ಮಹೇಂದ್ರವಜ್ರಾಶನಿತುಲ್ಯವೇಗಾಃ ।
ಸಮಂತತೋಽಭ್ಯುದ್ಯತಬಾಹುಕಾಯಾಃ
ಸ್ಥಿತಾಸ್ತ್ರಿಶೀರ್ಷಾ ಇವ ನಾಗಪಾಶಾಃ ||೩೩||

ಸುವರ್ಣಮಾಲಾಕುಲಭೂಷಿತಾಂಗಾಃ
ಪೀತಾಂಶುಕಾ ಭೋಗವಿಭಾವಿತಾಂಗಾಃ ।
ಮುಕ್ತಾವಲೀದಾಮಸನಾಥಕಕ್ಷಾ
ಹಂಸಾ ಇವಾಭಾಂತಿ ವಿಶಾಲಪಕ್ಷಾಃ ||೩೪||

ತೇಷಾಂ ತು ವಾಯುಪ್ರತಿಮೌಜಸಾಂ ವೈ
ಕೇಯೂರಮೌಲೀವಲಯೋತ್ಕಟಾನಾಂ ।
ತಾನ್ಯುತ್ತಮಾಂಗಾನ್ಯಭಿತೋ ವಿಭಾಂತಿ
ಪ್ರಭಾತಸೂರ್ಯಾಂಶುಸಮಪ್ರಭಾಣಿ ||೩೫||

---

೩೩. ಆ ದಾನವರು ಕೈಗಳಲ್ಲಿ ಹಗ್ಗಗಳನ್ನು ಹಿಡಿದುಕೊಂಡು, ದೇವೇಂದ್ರನ ವಜ್ರಾಯುಧದಂತೆಯೂ ಸಿಡಿಲಿನಂತೆಯೂ ವೇಗಶಾಲಿಗಳಾಗಿ, ಮೂರು ತಲೆಗಳುಳ್ಳ ನಾಗಪಾಶಗಳಂತೆ ತೋಳುಗಳನ್ನು ಮೇಲಕ್ಕೆತ್ತಿಕೊಂಡು ಎಲ್ಲಾ ಕಡೆಗಳಲ್ಲೂ ನಿಂತರು.

೩೪. ಚಿನ್ನದ ಹಾರಗಳಿಂದ ಶರೀರವನ್ನು ಶೃಂಗರಿಸಿಕೊಂಡು, ಬಿಳಿಯ ಬಟ್ಟೆಯಿಂದ ಮೈ ಅಂದವಾಗಿ ಕಾಣುತ್ತಿರಲು, ಮುತ್ತಿನ ಹಾರವು ಕಂಕುಳ ಬಳಿ ವಿರಾಜಿಸುತ್ತಿರಲು, ಆ ದೈತ್ಯರು ಅಗಲವಾದ ರೆಕ್ಕೆಗಳುಳ್ಳ ಹಂಸಗಳಂತೆ ಪ್ರಕಾಶಿಸಿದರು.

೩೫. ಪರಾಕ್ರಮದಲ್ಲಿಯೂ, ವೇಗದಲ್ಲಿಯೂ ವಾಯುವಿಗೆ ಸದೃಶರಾಗಿ ತೋಳುಬಳೆ, ಕಿರೀಟ, ಕೈಬಳೆ ಮೊದಲಾದ ಭೂಷಣಗಳಿಂದ ಅಲಂಕೃತರಾದ ಆ ದೈತ್ಯರ ಶಿರಸ್ಸುಗಳು ಪ್ರಾತಃಕಾಲದ ಸೂರ್ಯನ ಕಿರಣಗಳಂತೆ ಪ್ರಕಾಶವಾದ ಕಾಂತಿಯನ್ನು ಬೀರುತ್ತಿದ್ದುವು.

ಕ್ಷಿಪದ್ಭಿರುಗ್ರೈರ್ಜ್ವಲಿತೈರ್ಮಹಾಬಲೈ
ರ್ಮಹಾಸ್ತ್ರಪೂಗೈಃ ಸುಸಮಾವೃತೋ ಬಭೌ ।
ಗಿರಿರ್ಯಥಾ ಸಂತತವರ್ಷಿಭಿರ್ಘನೈಃ
ಕೃತಾಂಧಕಾರಾಂತರಕಂದರೋ ದ್ರುಮೈಃ ॥೩೬॥

ತೈರ್ಹನ್ಯಮಾನೋಽಪಿ ಮಹಾಸ್ತ್ರಜಾಲೈ
ರ್ಮಹಾಬಲೈರ್ದೈತ್ಯಗಣೈಃ ಸಮೇತೈಃ ।
ನಾಕಂಪತಾಜೌ ಭಗವಾನ್ ಪ್ರತಾಪ
ಸ್ಥಿತಃ ಪ್ರಕೃತ್ಯಾ ಹಿಮವಾನಿವಾಚಲಃ ॥೩೭॥

ಸಂತ್ರಾಸಿತಾಸ್ತೇನ ನೃಸಿಂಹರೂಪಿಣಾ
ದಿತೇಃ ಸುತಾಃ ಪಾವಕತುಲ್ಯತೇಜಸಾ ।
ಭಯಾದ್ವಿಚೇಲುಃ ಪವನೋದ್ಧತಾಂಗಾ
ಯಥೋರ್ಮಯಃ ಸಾಗರವಾರಿಸಂಭವಾಃ ॥೩೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ನಾರಸಿಂಹಪ್ರಾದುರ್ಭಾವೋ ನಾಮ
ದ್ವಿಷಷ್ಟ್ಯಧಿಕಶತತಮೋಽಧ್ಯಾಯಃ

---

೩೬. ಮಹಾಸ್ತ್ರಗಳ ಪರಂಪರೆಗಳನ್ನು ಪ್ರಯೋಗಿಸುತ್ತ, ಪರಾಕ್ರಮದಿಂದ ಬೆಳಗುತ್ತ, ಮಹಾಬಲಶಾಲಿಗಳಾದ ದಾನವರು ಆ ನರಸಿಂಹಸ್ವಾಮಿಯನ್ನು ಆವರಿಸಿದರು. ಆಗ ಆತನು ಮರಗಳಿಂದ ಗುಹೆಗಳೊಳಗೆ ಕತ್ತಲು ಕವಿದಿರಲು, ಎಡೆಬಿಡದೆ ಮಳೆಯನ್ನು ಸುರಿಸುತ್ತಿರುವ ಮೋಡಗಳು ಮುಸುಕಿದ ಗಿರಿಯಂತೆ ಕಂಗೊಳಿಸಿದನು.

೩೭. ಮಹಾಬಲಶಾಲಿಗಳಾದ ದೈತ್ಯರು ಗುಂಪಾಗಿ ಕೂಡಿ ಮಹಾಸ್ತ್ರಗಳಿಂದ ಎಡೆಬಿಡದೆ ಹೊಡೆದರೂ ಕೂಡ, ನೃಸಿಂಹರೂಪಿಯಾದ ಭಗವಂತನು ಹಿಮಾಲಯ ಪರ್ವತದಂತೆ ಸಹಜವಾದ ಧೈರ್ಯದಿಂದ ನಡುಗದೆ ಇದ್ದನು.

೩೮. ಅಗ್ನಿಯಂತೆ ತೇಜೋಯುಕ್ತನಾದ ಆ ನೃಸಿಂಹಸ್ವಾಮಿಯಿಂದ ಭೀತಿಗೊಂಡು, ಆ ದೈತ್ಯರು ಗಾಳಿಯ ಹೊಡೆತದಿಂದ ಸಮುದ್ರದ ಅಲೆಗಳು ಕಂಪಿಸುವಂತೆ ನಡುಗಿದರು.

ಅಧ್ಯಾಯ ೧೬೨

## ಅಧ್ಯಾಯದ ಸಾರಾಂಶ

ನರಸಿಂಹಸ್ವಾಮಿಯು ಸಭಾಸ್ಥಾನಕ್ಕೆ ಪ್ರವೇಶಿಸಿದುದನ್ನು ಕಂಡು ಪ್ರಹ್ಲಾದನು ಜ್ಞಾನದೃಷ್ಟಿಯಿಂದ ಅವನೇ ಭಗವಂತನೆಂದು ಅರಿತನು. ಅವನ ದಿವ್ಯದೇಹದಲ್ಲಿ ಸಕಲ ಲೋಕಗಳೂ ಗೋಚರವಾಗುತ್ತಿವೆಯೆಂದೂ, ದೈತ್ಯನಾಶಕ್ಕಾಗಿ ಭಗವಂತನೇ ಆ ರೂಪದಿಂದ ಬಂದಿರಬಹುದೆಂದೂ ತನ್ನ ತಂದೆಗೆ ಹೇಳಿದನು. ಕೂಡಲೆ ಹಿರಣ್ಯಕಶಿಪು ಆ ಮಾಯಾಸಿಂಹವನ್ನು ಬಂಧಿಸುವಂತೆ ತನ್ನ ಪರಿವಾರದವರಿಗೆ ಅಪ್ಪಣೆಕೊಟ್ಟನು. ಅವರ ಪ್ರಯತ್ನವೇನೂ ಸಾಗಲಿಲ್ಲ. ಕೊನೆಗೆ ತಾನೇ ಎದ್ದು ಬಂದು ಸಮಸ್ತ ಶಸ್ತ್ರಾಸ್ತ್ರಗಳನ್ನೂ ಪ್ರಯೋಗಿಸಿದನು. ಅವೆಲ್ಲವೂ ಅಗ್ನಿಯಲ್ಲಿ ಹಾಕಿದ ಆಹುತಿಗಳಂತೆ ಭಗವಂತನ ಮೇಲೆ ಬಿದ್ದುವು. ಆದರೆ ಅವನಿಗೇನೂ ತೊಂದರೆಕೊಡಲಾರದೆ ಹೋದುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ನಾರಸಿಂಹ ಪ್ರಾದುರ್ಭಾವವೆಂಬ
ನೂರ ಅರವತ್ತೆರಡನೆಯ ಅಧ್ಯಾಯವು ಮುಗಿದುದು.

## ಅಥ ತ್ರಿಷಷ್ಟ್ಯಧಿಕಶತತಮೋಽಧ್ಯಾಯಃ

|| ಸೂತ ಉವಾಚ ||

ಖರಾಃ ಖರಮುಖಾಶ್ಚೈವ ಮಕರಾಶೀ ವಿಷಾನನಾಃ |
ಈಹಾಮೃಗಮುಖಾಶ್ಚಾನ್ಯೇ ವರಾಹಮುಖಸಂಸ್ಥಿತಾಃ || ೧ ||

ಬಾಲಸೂರ್ಯಮುಖಾಶ್ಚಾನ್ಯೇ ಧೂಮಕೇತುಮುಖಾಸ್ತಥಾ |
ಅರ್ಧಚಂದ್ರಾರ್ಧವಕ್ತ್ರಾಶ್ಚ ಅಗ್ನಿದೀಪ್ತಮುಖಾಸ್ತಥಾ || ೨ ||

ಹಂಸಕುಕ್ಕುಟವಕ್ತ್ರಾಶ್ಚ ವ್ಯಾದಿತಾಸ್ಯಾ ಭಯಾವಹಾಃ |
ಸಿಂಹಾಸ್ಯಾ ಲೇಲಿಹಾನಾಶ್ಚ ಕಾಕಗೃಧ್ರಮುಖಾಸ್ತಥಾ || ೩ ||

ದ್ವಿಜಿಹ್ವಕಾ ವಕ್ತ್ರಶೀರ್ಷಾಸ್ತಥೋಲ್ಕಾಮುಖಸಂಸ್ಥಿತಾಃ |
ಮಹಾಗ್ರಾಹಮುಖಾಶ್ಚಾನ್ಯೇ ದಾನವಾ ಬಲದರ್ಪಿತಾಃ || ೪ ||

---

೧-೨. ಸೂತಪೌರಾಣಿಕನು ಹೇಳಿದನು.—ಆ ದೈತ್ಯರು ಭಯಂಕರಾಕಾರರಾಗಿದ್ದರು. ಕತ್ತೆಯಂತೆ, ಮಕರದಂತೆ, ಸರ್ಪದಂತೆ, ತೋಳನಂತೆ, ಹಂದಿಯಂತೆ ಅವರ ಮುಖಗಳಿದ್ದುವು. ಕೆಲವರ ಮುಖವು ಬಾಲಸೂರ್ಯನಂತೆಯೂ, ಮತ್ತೆ ಕೆಲವರದು ಧೂಮಕೇತುವಿನ ಹಾಗೆಯೂ ಇದ್ದುವು.

೩. ಹಂಸಗಳ, ಕೋಳಿಗಳ ಮತ್ತು ಸಿಂಹಗಳ ಮುಖದಂತೆ ಕೆಲವರ ಮುಖಗಳಿದ್ದುವು. ಅವರು ಬಾಯ್ತೆರೆದುಕೊಂಡು ನಾಲಗೆಯಿಂದ ತುಟಿಗಳನ್ನು ಒರಸಿಕೊಳ್ಳುತ್ತ ಭಯಂಕರವಾಗಿ ಕಾಣಿಸುತ್ತಿದ್ದರು. ಹಾವುಗಳ, ಕಾಗೆಗಳ ಮತ್ತು ಹದ್ದುಗಳ ಮುಖಗಳು ಕೆಲವರಿಗಿದ್ದುವು.

೪. ಆ ದಾನವರಲ್ಲಿ ಕೆಲವರಿಗೆ ಎರಡು ನಾಲಗೆಗಳು. ಕೆಲವರಿಗೆ ತಲೆಯಲ್ಲಿ ಬಾಯಿ; ಮತ್ತೆ ಕೆಲವರಿಗೆ ಬಾಯಿಯಲ್ಲಿ ಉರಿಯುತ್ತಿರುವ ಕೊಳ್ಳಿ. ಇನ್ನೂ ಕೆಲವರಿಗೆ ದೊಡ್ಡ ಮೊಸಳೆಯ ಮುಖ. ಅವರೆಲ್ಲರೂ ಬಲದಿಂದ ಕೊಬ್ಬಿಹೋಗಿದ್ದರು.

ಶೈಲಸಂವರ್ಷ್ಮರ್ಣಸ್ತಸ್ಯ ಶರೀರೇ ಶರವೃಷ್ಟಿಭಿಃ ।
ಅವಧ್ಯಸ್ಯ ನೃಗೇಂದ್ರಸ್ಯ ನ ವ್ಯಥಾಂ ಚಕ್ರುರಾಹವೇ ॥ ೫ ॥

ಏವಂ ಭೂಯೋಽಪರಾನ್ ಘೋರಾನಸೃಜನ್ ದಾನವೇಶ್ವರಾಃ ।
ನೃಗೇಂದ್ರಸ್ಯೋಪರಿ ಕ್ರುದ್ಧಾ ನಿಃಶ್ವಸಂತ ಇವೋರಗಾಃ ॥ ೬ ॥

ತೇ ದಾನವಶರಾ ಘೋರಾ ದಾನವೇಂದ್ರಸಮೀರಿತಾಃ ।
ವಿಲಯಂ ಜಗ್ಮುರಾಕಾಶೇ ಖದ್ಯೋತಾ ಇವ ಪರ್ವತೇ ॥ ೭ ॥

ತತಶ್ಚಕ್ರಾಣಿ ದಿವ್ಯಾನಿ ದೈತ್ಯಾಃ ಕ್ರೋಧಸಮನ್ವಿತಾಃ ।
ನೃಗೇಂದ್ರಾಯಾಸೃಜನ್ನಾಶು ಜ್ವಲಿತಾನಿ ಸಮಂತತಃ ॥ ೮ ॥

ತೈರಾಸೀದ್ಗಗನಂ ಚಕ್ರೈಃ ಸಂಪತದ್ಭಿರಿತಸ್ತತಃ ।
ಯುಗಾಂತೇ ಸಂಪ್ರಕಾಶದ್ಭಿಶ್ಚಂದ್ರಾದಿತ್ಯಗ್ರಹೈರಿವ ॥ ೯ ॥

---

೫. ಬೆಟ್ಟದಂತಹ ಶರೀರದಿಂದ ಕೂಡಿ ಅವಧ್ಯನಾಗಿದ್ದ ಆ ನರಸಿಂಹ ಮೂರ್ತಿಯ ಮೈಮೇಲೆ ಆ ದಾನವರು ತಮ್ಮ ಬಾಣಗಳ ಮಳೆಗರೆದರು. ಆದರೂ ಆತನಿಗೆ ನೋವನ್ನು ಮಾತ್ರ ಮಾಡಲಾರದೆ ಹೋದರು.

೬. ದೈತ್ಯಪ್ರಮುಖರು ಕೋಪಗೊಂಡು ಹಾವುಗಳಂತೆ ಉಸಿರುಬಿಡುತ್ತ ಭಯಂಕರವಾದ ಬೇರೆ ಬಾಣಗಳನ್ನು ನರಸಿಂಹನ ಮೇಲೆ ಮತ್ತೆ ಬಿಟ್ಟರು.

೭. ದಾನವವೀರರು ಪ್ರಯೋಗಿಸಿದ ಆ ಉಗ್ರಬಾಣಗಳು ಪರ್ವತದ ಮೇಲೆ ಬಿದ್ದ ಮಿಂಚು ಹುಳುಗಳಂತೆ ಆಕಾಶದಲ್ಲಿ ನಷ್ಟವಾದುವು.

೮. ಬಳಿಕ ದೈತ್ಯರು ಕುಪಿತರಾಗಿ, ಉರಿಯುತ್ತಿರುವ ದಿವ್ಯವಾದ ಚಕ್ರಗಳನ್ನು ಎಲ್ಲ ಕಡೆಗಳಿಂದಲೂ ಆ ಮಾಯಾಸಿಂಹದ ಮೇಲೆ ತಡೆಮಾಡದೆ ಬಿಸುಟರು.

೯. ನಾಲ್ಕುಕಡೆಗಳಿಂದಲೂ ಚಕ್ರಗಳು ಒಟ್ಟೊಟ್ಟಾಗಿ ಬಂದು ಬೀಳುತ್ತಿದ್ದುವು. ಆಗ ಆಕಾಶವು ಪ್ರಳಯಕಾಲದಲ್ಲಿ ಜಗಜಗಿಸುವ ಚಂದ್ರಸೂರ್ಯಾದಿ ಗ್ರಹಗಳಿಂದ ಬೆಳಗುವಂತೆ ತೇಜೋಮಯವಾಯಿತು.

ತಾನಿ ಸರ್ವಾಣಿ ಚಕ್ರಾಣಿ ಮೃಗೇಂದ್ರೇಣ ಮಹಾತ್ಮನಾ ।
ಗ್ರಸ್ತಾನ್ಯುದೀರ್ಣಾನಿ ತದಾ ಪಾವಕಾರ್ಚಿಃಸಮಾನಿ ವೈ ॥೧೦॥

ತಾನಿ ಚಕ್ರಾಣಿ ವದನೇ ವಿಶಮಾನಾನಿ ಭಾಂತಿ ವೈ ।
ಮೇಘೋದರದರೀಷ್ವೇವ ಚಂದ್ರಸೂರ್ಯಗ್ರಹಾ ಇವ ॥೧೧॥

ಹಿರಣ್ಯಕಶಿಪುರ್ದೈತ್ಯೋ ಭೂಯಃ ಪ್ರಾಸೃಜದೂರ್ಜಿತಾಂ ।
ಶಕ್ತಿಂ ಪ್ರಜ್ವಲಿತಾಂ ಘೋರಾಂ ಧೌತಾಂ ಚಕ್ರತಡಿತ್ಪ್ರಭಾಂ ॥೧೨॥

ತಾಮಾಪತಂತೀಂ ಸಂಪ್ರೇಕ್ಷ್ಯ ಮೃಗೇಂದ್ರಃ ಶಕ್ತಿಮುಜ್ವಲಾಂ ।
ಹುಂಕಾರೇಣೈವ ರೌದ್ರೇಣ ಬಭಂಜ ಭಗವಾಂಸ್ತದಾ ॥೧೩॥

ರರಾಜ ಭಗ್ನಾ ಸಾ ಶಕ್ತಿರ್ಮೃಗೇಂದ್ರೇಣ ಮಹೀತಲೇ ।
ಸವಿಸ್ಫುಲಿಂಗಾ ಜ್ವಲಿತಾ ಮಹೋಲ್ಕೇವ ದಿವಶ್ಚ್ಯುತಾ ॥೧೪॥

---

೧೦. ಮಹಾಮಹಿಮೆಯುಳ್ಳ ಆ ಅದ್ಭುತಸಿಂಹವು ದಾನವರು ಪ್ರಯೋಗಿಸಿದ ಅಗ್ನಿಜ್ವಾಲೆಗಳಂತಿರುವ ಆ ಚಕ್ರಗಳೆಲ್ಲವನ್ನೂ ನುಂಗಿಬಿಟ್ಟಿತು.

೧೧. ಆ ಭಗವಂತನ ಬಾಯೊಳಗೆ ಹೋಗುತ್ತಿರುವ ಆ ಚಕ್ರಗಳು ಮೇಘಗಳ ಮರೆಯಲ್ಲಿ ಅಡಗುವ ಚಂದ್ರಸೂರ್ಯಾದಿ ಗ್ರಹಗಳಂತೆ ಪ್ರಕಾಶಿಸಿದುವು.

೧೨. ದಾನವೇಂದ್ರನಾದ ಹಿರಣ್ಯಕಶಿಪು ಬಲಿಷ್ಠವಾದ, ಭಯಂಕರವಾಗಿ ಉರಿಯುತ್ತಿರುವ, ಸಾಣೆಗೆ ಕೊಟ್ಟ, ಚಕ್ರಾಕಾರವಾದ, ಮಿಂಚಿನಂತೆ ಹೊಳೆ ಹೊಳೆವ ಶಕ್ತ್ಯಾಯುಧವನ್ನು ಮತ್ತೆ ಬಿಟ್ಟನು.

೧೩. ತೇಜಃಪುಂಜವಾದ ಆ ಶಕ್ತಿಯು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿ ಪೂಜ್ಯನಾದ ನರಸಿಂಹಸ್ವಾಮಿಯು ಭೀಕರವಾದ ತನ್ನ ಹುಂಕಾರಮಾತ್ರದಿಂದಲೇ ಅದನ್ನು ತುಂಡುಮಾಡಿದನು.

೧೪. ಮೃಗರಾಜನಿಂದ ಭಗ್ನವಾಗಿ ನೆಲದಲ್ಲಿ ಕೆಡೆದಿದ್ದ ಆ ಶಕ್ತಿಯು ಆಕಾಶದಿಂದ ಬಿದ್ದು ಕಿಡಿಗೆದರುತ್ತ ಉರಿಯುವ ದೊಡ್ಡ ಉಲ್ಕಾಪಾತದಂತೆ ಕಂಡಿತು.

ನಾರಾಚಪಙ್ಕ್ತಿಃ ಸಿಂಹಸ್ಯ ಪ್ರಾಪ್ತಾ ರೇಜೇ ವಿದೂರತಃ ।
ನೀಲೋತ್ಪಲಪಲಾಶಾನಾಂ ಮಾಲೇವೋಜ್ಜ್ವಲದರ್ಶನಾ ॥೧೫॥

ಸ ಗರ್ಜಿತ್ವಾ ಯಥಾನ್ಯಾಯಂ ವಿಕ್ರಮ್ಯ ಚ ಯಥಾಸುಖಂ ।
ತತ್ಸೈನ್ಯಮುತ್ಸಾರಿತವಾಂಸ್ತೃಣಾಗ್ರಾಣೀವ ಮಾರುತಃ ॥೧೬॥

ತತೋಽಶ್ಮವರ್ಷಂ ದೈತ್ಯೇಂದ್ರಾ ವ್ಯಸೃಜಂತ ನಭೋಗತಾಃ ।
ನಗಮಾತ್ರೈಃ ಶಿಲಾಖಂಡೈರ್ಗಿರಿಶೃಂಗೈರ್ಮಹಾಪ್ರಭೈಃ ॥೧೭॥

ತದಶ್ಮವರ್ಷಂ ಸಿಂಹಸ್ಯ ಮಹನ್ಮೂರ್ಧನಿ ಪಾತಿತಂ ।
ದಿಶೋ ದಶ ವಿಕೀರ್ಣಂ ವೈ ಖದ್ಯೋತಪ್ರಕರಾ ಇವ ॥೧೮॥

ತದಾಶ್ಮೌಘೈರ್ದೈತ್ಯಗಣಾಃ ಪುನಃ ಸಿಂಹಮರಿಂದಮಂ ।
ಛಾದಯಾಂಚಕ್ರಿರೇ ಮೇಘಾ ಧಾರಾಭಿರಿವ ಪರ್ವತಂ ॥೧೯॥

---

೧೫. ನರಹರಿಯ ಸಮೀಪವನ್ನು ಸೇರಿದ ಬಾಣಗಳ ಸಾಲು ಕನ್ನೈದಿಲೆಯ ಎಸಳುಗಳ ಮಾಲೆಯಂತೆ ದೂರಕ್ಕೆ ಪ್ರಕಾಶಿಸಿತು.

೧೬. ನರಸಿಂಹನು ಯುದ್ಧದ ನ್ಯಾಯವನ್ನು ಅತಿಕ್ರಮಿಸದೆ, ಗರ್ಜನೆಯಿಂದಲೂ ಪರಾಕ್ರಮದಿಂದಲೂ ಆ ದಾನವ ಸೈನ್ಯವನ್ನು ಗಾಳಿಯು ಹುಲ್ಲುಗಳನ್ನು ತೂರಿಸುವಂತೆ ಅನಾಯಾಸವಾಗಿ ಚದುರಿಸಿದನು.

೧೭. ತರುವಾಯ ದೈತ್ಯಪ್ರಮುಖರು ಆಕಾಶವನ್ನೇರಿ ಕಲ್ಲುಗಳ ಮಳೆಯನ್ನು ಸುರಿಸಿದರು. ಆ ಬಂಡೆಗಳು ಬೆಟ್ಟದ ಗಾತ್ರವಾಗಿದ್ದುವು. ಗಿರಿಶಿಖರಗಳು ಹೊಳೆಹೊಳೆಯುತ್ತಿದ್ದುವು.

೧೮. ಕಲ್ಲುಗಳು ಜಡಿಮಳೆಯಂತೆ ಸಿಂಹದ ತಲೆಯ ಮೇಲೆ ಬಿದ್ದುವು. ಹತ್ತು ದಿಕ್ಕುಗಳಿಗೂ ಚದುರಿಹೋಗಿ ಅವು ಮಿಂಚಿನ ಹುಳುಗಳಂತೆ ಕಂಡುವು.

೧೯. ಆಗ ದೈತ್ಯರು ಶತ್ರುನಾಶಕವಾದ ಆ ಮಹಾಸಿಂಹವನ್ನು ಮೇಘಗಳು ಜಲಧಾರೆಗಳಿಂದ ಪರ್ವತವನ್ನು ಮುಚ್ಚುವಂತೆ, ಕಲ್ಲುಗಳ ರಾಶಿಯಿಂದ ಮುತ್ತಿದರು.

ನ ಚ ತಂ ಚಾಲಯಾಮಾಸುರ್ದೈತ್ಯೌಘಾ ದೇವಸತ್ತಮಂ ।
ಭೀಮವೇಗೋಽಚಲಶ್ರೇಷ್ಠಂ ಸಮುದ್ರ ಇವ ಮಂದರಂ ॥೨೦॥

ತತೋಽಶ್ಮವರ್ಷೇ ವಿಹತೇ ಜಲವರ್ಷಮನಂತರಂ ।
ಧಾರಾಭಿರಕ್ಷಮಾತ್ರಾಭಿಃ ಪ್ರಾದುರಾಸೀತ್ಸಮಂತತಃ ॥೨೧॥

ನಭಸಃ ಪ್ರಚ್ಯುತಾ ಧಾರಾಸ್ತಿಗ್ಮವೇಗಾಃ ಸಮಂತತಃ ।
ಆವೃತ್ಯ ಸರ್ವತೋ ವ್ಯೋಮ ದಿಶಶ್ಚೋಪದಿಶಸ್ತಥಾ ॥೨೨॥

ಧಾರಾ ದಿವಿ ಚ ಸರ್ವತ್ರ ವಸುಧಾಯಾಂ ಚ ಸರ್ವಶಃ ।
ನ ಸ್ಪೃಶಂತಿ ಚ ತಾ ದೇವಂ ನಿಪತಂತೋಽನಿಶಂ ಭುವಿ ॥೨೩॥

ಬಾಹ್ಯತೋ ವವೃಷುರ್ವರ್ಷಂ ನೋಪರಿಷ್ಟಾಚ್ಚ ವವೃಷುಃ ।
ಮೃಗೇಂದ್ರಪ್ರತಿರೂಪಸ್ಯ ಸ್ಥಿತಸ್ಯ ಯುಧಿ ಮಾಯಯಾ ॥೨೪॥

---

೨೦. ಅತ್ಯದ್ಭುತವಾದ ವೇಗವುಳ್ಳ ಸಮುದ್ರವು ಪರ್ವತೋತ್ತಮವೆನಿಸಿದ ಮಂದರವನ್ನು ಅಲುಗಾಡಿಸಲಾರದೆ ಹೋದಂತೆ, ಆ ದೈತ್ಯರ ಪಡೆಗಳು ದೇವಶ್ರೇಷ್ಠನಾದ ಆ ನರಸಿಂಹಸ್ವಾಮಿಯನ್ನು ಅಲ್ಲಾಡಿಸಲಾಗಲಿಲ್ಲ.

೨೧. ಕಲ್ಲಿನ ಮಳೆಯು ವ್ಯರ್ಥವಾದ ತರುವಾಯ ಎಲ್ಲ ಕಡೆಗಳಲ್ಲೂ ನೀರಿನ ಮಳೆಗೆ ಪ್ರಾರಂಭವಾಯಿತು. ಜಲಧಾರೆಗಳು ಪಗಡೆ ದಾಳದ ಗಾತ್ರವಾಗಿದ್ದುವು.

೨೨. ಆಕಾಶದಿಂದ ಎಲ್ಲೆಡೆಗಳಲ್ಲಿಯೂ ಅತ್ಯಂತ ವೇಗವಾಗಿ ಜಲಧಾರೆಗಳು ಬೀಳುತ್ತಿದ್ದುವು. ಅವು ಆಕಾಶ, ದಿಕ್ಕು, ವಿದಿಕ್ಕು ಇವೆಲ್ಲವನ್ನೂ ತುಂಬಿದುವು.

೨೩. ಆಕಾಶದಲ್ಲಿ, ಭೂಮಿಯಲ್ಲಿ, ಎಲ್ಲೆಲ್ಲಿಯೂ ಜಲಧಾರೆಗಳು ಎಡೆಬಿಡದೆ ನೆಲದ ಮೇಲೆ ಸುರಿಯುತ್ತಿದ್ದರೂ ಅವು ಆ ಮಾಯಾಸಿಂಹವನ್ನು ಮಾತ್ರ ಮುಟ್ಟಲಿಲ್ಲ.

೨೪. ನೃಸಿಂಹರೂಪದಿಂದ ಯುದ್ಧದಲ್ಲಿ ಸ್ಥಿರನಾಗಿ ನಿಂತಿದ್ದ ಆ ಭಗವಂತನ ಮಾಯೆಯಿಂದ ಮಳೆಯು ಅವನ ಮೇಲೆ ಬೀಳದೆ ಹೊರಗಡೆಯೇ ಸುರಿಯುತ್ತಿತ್ತು.

ಹತೇಽಶ್ಮವರ್ಷೇ ತುಮುಲೇ ಜಲವರ್ಷೇ ಚ ಶೋಷಿತೇ ।
ಸೋಽಸೃಜದ್ದಾನವೋ ಮಾಯಾಮಗ್ನಿವಾಯುಸಮೀರಿತಾಂ ॥೨೫॥

ಮಹೇಂದ್ರಸ್ತೋಯದೈಃ ಸಾರ್ಧಂ ಸಹಸ್ರಾಕ್ಷೋ ಮಹಾದ್ಯುತಿಃ ।
ಮಹತಾ ತೋಯವರ್ಷೇಣ ಶಮಯಾಮಾಸ ಪಾವಕಂ ॥೨೬॥

ತಸ್ಯಾಂ ಪ್ರತಿಹತಾಯಾಂ ತು ಮಾಯಾಯಾಂ ಯುಧಿ ದಾನವಃ ।
ಅಸೃಜದ್ಘೋರಸಂಕಾಶಂ ತಮಸ್ತೀವ್ರಂ ಸಮಂತತಃ ॥೨೭॥

ತಮಸಾ ಸಂವೃತೇ ಲೋಕೇ ದೈತ್ಯೇಷ್ವಾತ್ತಾಯುಧೇಷು ಚ ।
ಸ್ವತೇಜಸಾ ಪರಿವೃತೋ ದಿವಾಕರ ಇವಾಬಭೌ ॥೨೮॥

ತ್ರಿಶಾಖಾಂ ಭ್ರುಕುಟೀಂ ಚಾಸ್ಯ ದದೃಶುರ್ದಾನವಾ ರಣೇ ।
ಲಲಾಟಸ್ಥಾಂ ತ್ರಿಶೂಲಾಂಕಾಂ ಗಂಗಾಂ ತ್ರಿಪಥಗಾಮಿವ ॥೨೯॥

---

೨೫. ದಟ್ಟವಾಗಿ ಸುರಿಸಿದ ಕಲ್ಲಿನಮಳೆ ವ್ಯರ್ಥವಾಯಿತು. ನೀರಿನಮಳೆ ಬತ್ತಿಹೋಯಿತು. ಬಳಿಕ ಆ ದಾನವೇಶ್ವರನು ಅಗ್ನಿವಾಯುಗಳ ಶಕ್ತಿಯಿಂದ ಮಾಯೆಯನ್ನು ನಿರ್ಮಿಸಿದನು.

೨೬. ಮಹಾತೇಜಸ್ವಿಯೂ ಸಹಸ್ರಾಕ್ಷನೂ ಆದ ದೇವೇಂದ್ರನು ಮೋಡಗಳೊಡಗೂಡಿ ದೊಡ್ಡ ಮಳೆಯನ್ನು ಸುರಿಸಿ ಹಿರಣ್ಯಕಶಿಪು ನಿರ್ಮಿಸಿದ ಬೆಂಕಿಯನ್ನು ಆರಿಸಿದನು.

೨೭. ಆ ಮಾಯೆಯು ನಿರರ್ಥಕವಾಗಲು ದಾನವಾಧಿಪತಿಯು ಎಲ್ಲೆಡೆಗಳಲ್ಲೂ ದಟ್ಟವಾದ ಕಗ್ಗತ್ತಲೆಯನ್ನು ಸೃಷ್ಟಿಸಿದನು.

೨೮. ಲೋಕವೆಲ್ಲ ಕತ್ತಲೆಯಲ್ಲಿ ಮುಳುಗಿತು. ದೈತ್ಯರು ಆಯುಧಗಳನ್ನು ಹಿಡಿದರು. ಆಗ ಹಿರಣ್ಯಕಶಿಪು ತನ್ನ ತೇಜಸ್ಸಿನಿಂದ ಪರಿವೃತನಾಗಿ ಸೂರ್ಯನಂತೆ ಶೋಭಿಸಿದನು.

೨೯. ಯುದ್ಧಮಾಡುವಾಗ ಅವನ ಹುಬ್ಬಿನಲ್ಲಿ ಮೂರು ಕವಲಿರುವುದನ್ನು ದಾನವರು ಕಂಡರು. ಅದು ಹಣೆಯಲ್ಲಿನ ತ್ರಿಶೂಲದ ಮಚ್ಚೆಯಂತೆಯೂ ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ದಾರಿಗಳಲ್ಲಿ ಹರಿಯುವ ಗಂಗಾನದಿಯಂತೆಯೂ ಇದ್ದಿತು.

ತತಃ ಸರ್ವಾಸು ಮಾಯಾಸು ಹತಾಸು ದಿತಿನಂದನಾಃ ।
ಹಿರಣ್ಯಕಶಿಪುಂ ದೈತ್ಯಂ ವಿವರ್ಣಾಃ ಶರಣಂ ಯಯುಃ ॥೩೦॥

ತತಃ ಪ್ರಜ್ವಲಿತಃ ಕ್ರೋಧಾತ್ಪ್ರದಹನ್ನಿವ ತೇಜಸಾ ।
ತಸ್ಮಿನ್ ಕ್ರುದ್ಧೇ ತು ದೈತ್ಯೇಂದ್ರೇ ತಮೋಭೂತಮಭೂಜ್ಜಗತ್ ॥೩೧॥

ಆವಹಃ ಪ್ರವಹಶ್ಚೈವ ವಿವಹೋಽಥ ಹ್ಯುದಾವಹಃ ।
ಪರಾವಹಃ ಸಂವಹಶ್ಚ ಮಹಾಬಲಪರಾಕ್ರಮಾಃ ॥೩೨॥

ತಥಾ ಪರಿವಹಃ ಶ್ರೀಮಾನುತ್ಪಾತಭಯಶಂಸನಾಃ ।
ಇತ್ಯೇವಂ ಕ್ಷುಭಿತಾಃ ಸಪ್ತ ಮರುತೋ ಗಗನೇಚರಾಃ ॥೩೩॥

ಯೇ ಗ್ರಹಾಃ ಸರ್ವಲೋಕಸ್ಯ ಕ್ಷಯೇ ಪ್ರಾದುರ್ಭವಂತಿ ವೈ ।
ತೇ ಸರ್ವೇ ಗಗನೇ ದೃಷ್ಟಾ ವ್ಯಚರಂತ ಯಥಾಸುಖಂ ॥೩೪॥

---

೩೦. ಎಲ್ಲ ಮಾಯೆಗಳೂ ಕೊನೆಗೆ ನಷ್ಟವಾದುವು. ಬಳಿಕ ದೈತ್ಯರು ಕಾಂತಿಹೀನರಾಗಿ ತಮ್ಮ ಪ್ರಭುವಾದ ಹಿರಣ್ಯಕಶಿಪುವನ್ನು ಮರೆಹೊಕ್ಕರು.

೩೧. ತರುವಾಯ ಆ ದೈತ್ಯರಾಜನು ಕ್ರುದ್ಧನಾಗಿ ತೇಜಸ್ಸಿನಿಂದ ಎಲ್ಲವನ್ನೂ ಸುಡುವಂತೆ ಪ್ರಜ್ವಲಿಸಿದನು. ಆವನ ಸಿಟ್ಟಿಗೆ ಜಗತ್ತು ಕಗ್ಗತ್ತಲೆಯಿಂದ ತುಂಬಿತು.

೩೨-೩೩. ಆವಹ, ಪ್ರವಹ, ವಿವಹ, ಉದಾವಹ, ಪರಾವಹ, ಸಂವಹ ಮತ್ತು ಪರಿವಹಗಳೆಂಬ ಮಹಾಬಲಪರಾಕ್ರಮಿಗಳೂ, ಸಂಪದ್ಯುಕ್ತಗಳೂ ಆದ ಸಪ್ತಮಾರುತಗಳು ಉತ್ಪಾತಭಯವನ್ನು ಸೂಚಿಸುತ್ತ ಬಲು ರಭಸದಿಂದ ಅಂತರಿಕ್ಷದಲ್ಲಿ ಬೀಸಿದುವು.

೩೪. ಸಕಲ ಲೋಕಗಳೂ ನಾಶವಾಗುವಾಗ ಆಕಾಶದಲ್ಲಿ ಯಾವಯಾವ ಗ್ರಹಗಳು ಉದಿಸುವುವೋ ಅವೆಲ್ಲವೂ ಕಾಣಬಂದುವು. ಮತ್ತು ತಮಗೆ ಸುಖವೆಂದು ತೋರಿಬಂದಹಾಗೆ ಸಂಚರಿಸಿದುವು.

ಅನ್ಯಂ ಗತೇ ಚಾಪ್ಯಚರನ್ಮಾರ್ಗಂ ನಿಶಿ ನಿಶಾಚರಃ ।
ಸಗ್ರಹಃ ಸಹ ನಕ್ಷತ್ರೈರಾಕಾಪತಿರರಿಂದಮಃ ॥೩೫॥

ವಿವರ್ಣತಾಂ ಚ ಭಗವಾನ್ ಗತೋ ದಿವಿ ದಿವಾಕರಃ ।
ಕೃಷ್ಣಂ ಕಬಂಧಂ ಚ ತಥಾ ಲಕ್ಷ್ಯತೇ ಸುಮಹದ್ದಿವಿ ॥೩೬॥

ಅಮುಂಚಚ್ಚಾರ್ಚಿಷಾಂ ವೃಂದಂ ಭೂಮಿವೃತ್ತಿರ್ವಿಭಾವಸುಃ ।
ಗಗನಸ್ಥಶ್ಚ ಭಗವಾನಭೀಕ್ಷ್ಣಂ ಪರಿದೃಶ್ಯತೇ ॥೩೭॥

ಸಪ್ತ ಧೂಮ್ರನಿಭಾ ಘೋರಾಃ ಸೂರ್ಯಾಃ ದಿವಿ ಸಮುತ್ಥಿತಾಃ ।
ಸೋಮಸ್ಯ ಗಗನಸ್ಥಸ್ಯ ಗ್ರಹಾಸ್ತಿಷ್ಠಂತಿ ಶೃಂಗಗಾಃ ॥೩೮॥

ವಾಮೇ ತು ದಕ್ಷಿಣೇ ಚೈವ ಸ್ಥಿತೌ ಶುಕ್ರಬೃಹಸ್ಪತೀ ।
ಶನೈಶ್ಚರೋ ಲೋಹಿತಾಂಗೋ ಜ್ವಲನಾಂಗಸಮದ್ಯುತೀ ॥೩೯॥

---

೩೫. ಶತ್ರುನಾಶಕನಾದ ಪೂರ್ಣಚಂದ್ರನು ಗ್ರಹಗಳೊಡನೆಯೂ, ನಕ್ಷತ್ರಗಳೊಡನೆಯೂ ಕೂಡಿ ರಾತ್ರಿಯಲ್ಲಿ ತನ್ನ ಸಹಜಮಾರ್ಗವನ್ನು ಬಿಟ್ಟು ಬೇರೆ ದಾರಿಯಲ್ಲಿ ಸಂಚರಿಸಿದನು.

೩೬. ಅಂತರಿಕ್ಷದಲ್ಲಿ ಬೆಳಗುತ್ತಿದ್ದ ಪೂಜ್ಯನಾದ ಸೂರ್ಯದೇವನು ಕಾಂತಿ ಗುಂದಿದನು. ತಲೆಯಿಲ್ಲದ ದೊಡ್ಡದೊಂದು ಕರಿಯ ದೇಹವು ಆಕಾಶದಲ್ಲಿ ಕಾಣಬಂದಿತು.

೩೭. ಪೂಜ್ಯನಾದ ದಿನಕರನು ಅಡಿಗಡಿಗೆ ಭೂಮಿಗೆ ಬಂದು ತನ್ನ ಕಿರಣಗಳ ಮಾಲೆಯನ್ನು ಪ್ರಸರಿಸುವಂತೆಯೂ ಮರಳಿ ಗಗನದಲ್ಲಿ ನೆಲಸುವಂತೆಯೂ ತೋರಿದನು.

೩೮. ಧೂಮ್ರವರ್ಣದಿಂದ ಕೂಡಿ ಭಯಂಕರರಾದ ಏಳು ಜನ ಸೂರ್ಯರು ಆಗಸದಲ್ಲುದಿಸಿದರು. ಚಂದ್ರನು ಗಗನದಲ್ಲಿ ಸಂಚರಿಸುತ್ತಿದ್ದಾಗ ಮಿಕ್ಕ ಗ್ರಹಗಳು ಅವನ ಶೃಂಗಾಗ್ರದಲ್ಲಿ ಗೋಚರಿಸಿದುವು.

೩೯-೪೦. ಶುಕ್ರನು ಎಡಗಡೆಯಲ್ಲಿಯೂ ಬೃಹಸ್ಪತಿಯು ಬಲಗಡೆಯಲ್ಲಿಯೂ ಇದ್ದರು. ಶನಿ, ಅಂಗಾರಕ ಇವರಿಬ್ಬರ ಅಂಗಗಳೂ ಕಾಂತಿಯಲ್ಲಿ ಅಗ್ನಿಯನ್ನು

ಸಮಂ ಸಮಧಿರೋಹಂತಃ ಸರ್ವೇ ತೇ ಗಗನೇಚರಾಃ
ಶೃಂಗಾಣಿ ಶನಕೈರ್ಘೋರಾ ಯುಗಾಂತಾವರ್ತಿನೋ ಗ್ರಹಾಃ ||೪೦||

ಚಂದ್ರಮಾಶ್ಚ ಸನಕ್ಷತ್ರೈರ್ಗ್ರಹೈಃ ಸಹ ತಮೋನುದಃ ।
ಚರಾಚರವಿನಾಶಾಯ ರೋಹಿಣೀಂ ನಾಭ್ಯನಂದತ ||೪೧||

ಗೃಹ್ಯತೇ ರಾಹುಣಾ ಚಂದ್ರ ಉಲ್ಕಾಭಿರಭಿಹನ್ಯತೇ ।
ಉಲ್ಕಾಃ ಪ್ರಜ್ವಲಿತಾಶ್ಚಂದ್ರೇ ವಿಚರಂತಿ ಯಥಾಸುಖಂ ||೪೨||

ದೇವಾನಾಮಪಿ ಯೋ ದೇವಃ ಸೋಽಪ್ಯವರ್ಷತ ಶೋಣಿತಂ ।
ಅಪತನ್ಗಗನಾದುಲ್ಕಾ ವಿದ್ಯುದ್ರೂಪಾ ಮಹಾಸ್ವನಾಃ ||೪೩||

ಅಕಾಲೇ ಚ ದ್ರುಮಾಃ ಸರ್ವೇ ಪುಷ್ಪಂತಿ ಚ ಫಲಂತಿ ಚ ।
ಲತಾಶ್ಚ ಸಫಲಾಃ ಸರ್ವಾ ಯೇ ಚಾಹುರ್ದೈತ್ಯನಾಶನಂ ||೪೪||

---

ಹೋಲುತ್ತಿದ್ದುವು. ಮೇಲೆ ಹೇಳಿದ ಗ್ರಹಗಳೆಲ್ಲ ಶೃಂಗಗಳ ಕಡೆಗೆ ನಿಧಾನವಾಗಿ ಸಮಾನವಾದ ವೇಗದಿಂದ ಏರಿಹೋಗುತ್ತಿದ್ದುವು. ಪ್ರಳಯಕಾಲದಲ್ಲಿ ಇರುವಂತೆ ಅವುಗಳ ಸ್ಥಿತಿ ಬಹು ಭಯಂಕರವಾಗಿತ್ತು.

೪೧. ಅಂಧಕಾರಪರಿಹಾರಕನಾದ ಚಂದ್ರನು ಗ್ರಹ ನಕ್ಷತ್ರಗಳೊಡಗೂಡಿ ರೋಹಿಣೀ ಪ್ರವೇಶದಲ್ಲಿ ಅಭಿಲಾಷೆಯನ್ನು ತೊರೆದನು. ಇದು ಚರಾಚರಾತ್ಮಕವಾದ ಜಗತ್ತಿನ ವಿನಾಶದ ಸೂಚನೆಯಾಗಿತ್ತು.

೪೨. ಚಂದ್ರನನ್ನು ರಾಹು ಹಿಡಿದನು; ಉರಿಗೊಳ್ಳಿಗಳು ಹೊಡೆದುವು. ಅವು ಉರಿಯುತ್ತ ಚಂದ್ರಮಂಡಲದಲ್ಲಿ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದುವು.

೪೩. ದೇವತೆಗಳ ಅಧಿಪತಿಯಾದ ಇಂದ್ರನೂ ಕೂಡ ರಕ್ತದ ಮಳೆಯನ್ನು ಕರೆದನು. ಮಿಂಚಿನಂತೆ ಹೊಳೆಯುತ್ತ, ಗಟ್ಟಿಯಾಗಿ ಶಬ್ದಮಾಡುತ್ತ ಉರಿಗೊಳ್ಳಿಗಳು ಗಗನದಿಂದ ಬಿದ್ದುವು.

೪೪. ಮರಗಳೆಲ್ಲ ಅಕಾಲದಲ್ಲಿ ಹೂಹಣ್ಣುಗಳನ್ನು ಬಿಟ್ಟುವು. ಎಲ್ಲ ಬಳ್ಳಿಗಳೂ ಫಲಗಳಿಂದ ತುಂಬಿದುವು. ಇವೆಲ್ಲ ದೈತ್ಯರ ವಿನಾಶವನ್ನು ತಿಳಿಸತಕ್ಕವು.

ಫಲೈಃ ಫಲಾನ್ಯಜಾಯಂತ ಪುಷ್ಪೈಃ ಪುಷ್ಪಂ ತಥೈವ ಚ ।
ಉನ್ಮೀಲಂತಿ ನಿಮೀಲಂತಿ ಹಸಂತಿ ಚ ರುದಂತಿ ಚ ॥೪೫॥

ವಿಕ್ರೋಶಂತಿ ಚ ಗಂಭೀರಾ ಧೂಮಯಂತಿ ಜ್ವಲಂತಿ ಚ ।
ಪ್ರತಿಮಾಃ ಸರ್ವದೇವಾನಾಂ ವೇದಯಂತಿ ಮಹದ್ಭಯಂ ॥೪೬॥

ಆರಣ್ಯೈಃ ಸಹ ಸಂಸೃಷ್ಟಾ ಗ್ರಾಮ್ಯಾಶ್ಚ ಮೃಗಪಕ್ಷಿಣಃ ।
ಚುಕ್ರುಶುರ್ಭೈರವಂ ತತ್ರ ಮಹಾಯುದ್ಧ ಉಪಸ್ಥಿತೇ ॥೪೭॥

ನದ್ಯಶ್ಚ ಪ್ರತಿಕೂಲಾನಿ ವಹಂತಿ ಕಲುಷೋದಕಾಃ ।
ನ ಪ್ರಕಾಶಂತಿ ಚ ದಿಶೋ ರಕ್ತರೇಣುಸಮಾಕುಲಾಃ ॥೪೮॥

ವಾನಸ್ಪತ್ಯೋ ನ ಪೂಜ್ಯಂತೇ ಪೂಜನಾರ್ಹಾಃ ಕಥಂಚನ ।
ವಾಯುವೇಗೇನ ಹನ್ಯಂತೇ ಭಜ್ಯಂತೇ ಪ್ರಣಮಂತಿ ಚ ॥೪೯॥

ಯದಾ ಚ ಸರ್ವಭೂತಾನಾಂ ಛಾಯಾ ನ ಪರಿವರ್ತತೇ ।
ಅಪರಾಹ್ಣಗತೇ ಸೂರ್ಯೇ ಲೋಕಾನಾಂ ಯುಗಸಂಕ್ಷಯೇ ॥೫೦॥

---

೪೫. ಹಣ್ಣುಗಳಿಂದ ಹಣ್ಣುಗಳೂ, ಹೂಗಳಿಂದ ಹೂಗಳೂ ಹುಟ್ಟಿದುವು. ಅವು ಅರಳಿದುವು; ಮುಚ್ಚಿಕೊಂಡುವು, ನಕ್ಕುವು, ಅತ್ತುವು.

೪೬. ಗಂಭೀರವಾದ ದೇವತಾಮೂರ್ತಿಗಳೆಲ್ಲ ಅರಿಚಿದುವು. ಹೊಗೆಯಾಡಿದುವು. ಉರಿದುವು. ಹೀಗೆ ಅಧಿಕವಾದ ಭಯವನ್ನು ಸೂಚಿಸಿದುವು.

೪೭. ಆ ದೊಡ್ಡಯುದ್ಧವು ಪ್ರಾಪ್ತವಾದಾಗ ಗ್ರಾಮದ ಮೃಗಪಕ್ಷಿಗಳು ಅರಣ್ಯದ ಮೃಗಪಕ್ಷಿಗಳೊಡನೆ ಕೂಡಿ ಬಹು ಭಯಂಕರವಾಗಿ ಗೋಳಿಟ್ಟುವು.

೪೮. ನದಿಗಳಲ್ಲಿ ನೀರು ಬಗ್ಗಡವಾಯಿತು. ಅವು ಎದುರುಗಡೆಗೆ ಹರಿದುವು. ದಿಕ್ಕುಗಳು ಕೆಂದೂಳಿನಿಂದ ತುಂಬಿ ಪ್ರಕಾಶಹೀನವಾದುವು.

೪೯. ಪೂಜಾರ್ಹವಾದ ಗಿಡಮರಗಳಿಗೆ ಪೂಜೆ ಸಲ್ಲಲಿಲ್ಲ. ಅವು ಗಾಳಿಯ ಹೊಡೆತಕ್ಕೆ ಸಿಕ್ಕಿ ಮುರಿದುಹೋದುವು. ನೆಲಕ್ಕೆ ಬಾಗಿದುವು.

೫೦-೫೧. ಸೂರ್ಯನು ಪಶ್ಚಿಮಕ್ಕೆ ತಿರುಗಿ ಅಪರಾಹ್ಣಸಮಯವಾದಾಗ್ಗೂ ಪ್ರಾಣಿಗಳ ನೆರಳು ಅದಕ್ಕೆ ಅನುಗುಣವಾಗಿ ತಿರುಗಲಿಲ್ಲ. ಅದು ಲೋಕಗಳು

ತದಾ ಹಿರಣ್ಯಕಶಿಪೋರ್ದೈತ್ಯಸ್ಯೋಪರಿ ವೇಶ್ಮನಃ ।
ಭಾಂಡಾಗಾರಾಯುಧಾಗಾರೇ ನಿವಿಷ್ಟಮಭವನ್ಮಧು ॥೫೧॥

ಅಸುರಾಣಾಂ ವಿನಾಶಾಯ ಸುರಾಣಾಂ ವಿಜಯಾಯ ಚ ।
ದೃಶ್ಯಂತೇ ವಿವಿಧೋತ್ಪಾತಾ ಘೋರಾ ಘೋರನಿದರ್ಶನಾಃ ॥೫೨॥

ಏತೇ ಚಾನ್ಯೇ ಚ ಬಹವೋ ಘೋರೋತ್ಪಾತಾಃ ಸಮುತ್ಥಿತಾಃ ।
ದೈತ್ಯೇಂದ್ರಸ್ಯ ವಿನಾಶಾಯ ದೃಶ್ಯಂತೇ ಕಾಲನಿರ್ಮಿತಾಃ ॥೫೩॥

ಮೇದಿನ್ಯಾಂ ಕಂಪಮಾನಾಯಾಂ ದೈತ್ಯೇಂದ್ರೇಣ ಮಹಾತ್ಮನಾ ।
ಮಹೀಧರಾ ನಾಗಗಣಾ ನಿಪೇತುರಮಿತೌಜಸಃ ॥೫೪॥

ವಿಷಜ್ವಾಲಾಕುಲೈರ್ವಕ್ತ್ರೈರ್ವಿಮುಂಚತೋ ಹುತಾಶನಂ ।
ಚತುಃಶೀರ್ಷಾಃ ಪಂಚಶೀರ್ಷಾಃ ಸಪ್ತಶೀರ್ಷಾಶ್ಚ ಪನ್ನಗಾಃ ॥೫೫॥

---

ಹಾಳಾಗುವ ಪ್ರಳಯದ ಸೂಚನೆ. ಆ ಕಾಲದಲ್ಲಿ ದೈತ್ಯರಾಜನಾದ ಹಿರಣ್ಯಕಶಿಪುವಿನ ಮನೆಯ ಮೇಲ್ಗಡೆಯಲ್ಲೂ, ಬೊಕ್ಕಸದಲ್ಲೂ, ಶಸ್ತ್ರಶಾಲೆಯಲ್ಲೂ ಮದ್ಯಪಾತ್ರೆಯು ತಾನಾಗಿಯೇ ಬಂದು ಕುಳಿತಿತು.

೫೨. ಅಸುರರ ವಿನಾಶವನ್ನೂ ಸುರರ ವಿಜಯವನ್ನೂ ಸೂಚಿಸುವ ನಾನಾ ವಿಧವಾದ ಉತ್ಪಾತಗಳು ಕಾಣಬಂದುವು. ಅವು ಭಯಂಕರವಾಗಿದ್ದುವು. ಅವು ಅಪಾಯವು ತಪ್ಪದೆ ಒದಗುವುದೆಂಬುದಕ್ಕೆ ನಿದರ್ಶನವಾಗಿದ್ದುವು.

೫೩. ಇವೇ ಅಲ್ಲದೆ ಇನ್ನೂ ಎಷ್ಟೋ ಭಯಂಕರವಾದ ಉತ್ಪಾತಗಳು ತಲೆದೋರಿದುವು. ದೈತ್ಯರಾಜನ ವಿನಾಶಕ್ಕೋಸ್ಕರವಾಗಿ ಇವುಗಳನ್ನು ಕಾಲವೇ ನಿರ್ಮಿಸಿದ್ದಂತೆ ತೋರಿತು.

೫೪. ಮಹಾಧೈರ್ಯಶಾಲಿಯಾದ ಹಿರಣ್ಯಕಶಿಪು ಭೂಮಿಯನ್ನು ನಡುಗಿಸಿದನು. ಆಗ ಪರ್ವತಗಳೂ ಬಹು ಪರಾಕ್ರಮವುಳ್ಳ ಸರ್ಪಗಳೂ ಉರುಳಿಬಿದ್ದುವು.

೫೫. ನಾಲ್ಕು, ಐದು, ಮತ್ತು ಏಳು ತಲೆಗಳುಳ್ಳ ಸರ್ಪಗಳು ವಿಷದುರಿಯೇಳುತ್ತಿರುವ ಬಾಯಿಗಳಿಂದ ಬೆಂಕಿಯನ್ನು ಕಾರುತ್ತಿದ್ದುವು.

ವಾಸುಕಿಸ್ತಕ್ಷಕಶ್ಚೈವ ಕರ್ಕೋಟಕಧನಂಜಯೌ ।
ಏಲಾಮುಖಃ ಕಾಲಿಯಶ್ಚ ಮಹಾಪದ್ಮಶ್ಚ ವೀರ್ಯವಾನ್ ॥೫೬॥

ಸಹಸ್ರಶೀರ್ಷೋ ನಾಗೋ ವೈ ಹೇಮತಾಲಧ್ವಜಃ ಪ್ರಭುಃ ।
ಶೇಷೋಽನಂತೋ ಮಹಾಭಾಗೋ ದುಷ್ಪ್ರಕಂಪ್ಯಃ ಪ್ರಕಂಪಿತಃ ॥೫೭॥

ದೀಪ್ತಾನ್ಯಂತರ್ಜಲಸ್ಥಾನಿ ಪೃಥಿವೀಚಾರಣಾನಿ ಚ ।
ತದಾ ಕ್ರುದ್ಧೇನ ಮಹತಾ ಕಂಪಿತಾನಿ ಸಮಂತತಃ ॥೫೮॥

ನಾಗಾಸ್ತೇಜೋಧರಾಶ್ಚಾಪಿ ಪಾತಾಲತಲಚಾರಿಣಃ ।
ಹಿರಣ್ಯಕಶಿಪುರ್ದೈತ್ಯಸ್ತದಾ ಸಂಸ್ಪೃಷ್ಟವಾನ್ ಮಹೀಂ ॥೫೯॥

ಸಂದಷ್ಟೌಷ್ಠಪುಟಃ ಕ್ರೋಧಾದ್ವಾರಾಹ ಇವ ಪೂರ್ವಜಃ ।
ನದೀ ಭಾಗೀರಥೀ ಚೈವ ಶರಯೂಃ ಕೌಶಿಕೀ ತಥಾ ॥೬೦॥

ಯಮುನಾ ತ್ವಥ ಕಾವೇರೀ ಕೃಷ್ಣವೇಣಾ ಚ ನಿಮ್ನಗಾ ।
ಸುವೇಣಾ ಚ ಮಹಾಭಾಗಾ ನದೀ ಗೋದಾವರೀ ತಥಾ ॥೬೧॥

---

೫೬-೫೭. ವಾಸುಕಿ, ತಕ್ಷಕ, ಕರ್ಕೋಟಕ, ಧನಂಜಯ, ಏಲಾಮುಖ, ಕಾಲಿಯ, ವೀರನಾದ ಮಹಾಪದ್ಮ, ಸಹಸ್ರಶೀರ್ಷ, ಚಿನ್ನದ ತಾಳೆಯ ಮರವೇ ಧ್ವಜವಾಗಿರುವ ಸರ್ಪರಾಜನಾದ ಶೇಷ, ಮಹಾಮಹಿಮನೂ ನಡುಗಿಸಲಸಾಧ್ಯನೂ ಆದ ಅನಂತ ಇವರೆಲ್ಲರೂ ನಡುಗಿಹೋದರು.

೫೮. ತೇಜೋಯುಕ್ತಗಳಾದ, ನೀರಿನಲ್ಲಿರುವ ಮತ್ತು ನೆಲದ ಮೇಲೆ ಸಂಚರಿಸುವ ಪ್ರಾಣಿಗಳೆಲ್ಲವೂ ಆಗ ಅತಿ ಕೋಪಿಷ್ಠನಾದ ಹಿರಣ್ಯಕಶಿಪುವಿನಿಂದ ಕಂಪಿಸಿದುವು. ಪಾತಾಳಲೋಕದೊಳಗೆ ಸಂಚಾರಮಾಡುವ ಪ್ರತಾಪಶಾಲಿಗಳೆನಿಸಿದ ಸರ್ಪಗಳಿಗೂ ಕೂಡ ನಡುಕ ಹುಟ್ಟಿತು.

೫೯. ಆಗ ದೈತ್ಯಪ್ರಭುವಾದ ಹಿರಣ್ಯಕಶಿಪು ಕೋಪದಿಂದ ತುಟಿಯನ್ನು ಕಚ್ಚಿಕೊಂಡು, ಹಿಂದೆ ಅವತಾರಮಾಡಿದ ಆದಿವರಾಹನಂತೆ ಭೂಮಿಯನ್ನು ತುಳಿದನು.

೬೦-೬೩. ಯಮುನೆ, ಕಾವೇರಿ, ಕೃಷ್ಣವೇಣಿ, ಸುವೇಣಿ, ಮಹಾಮಹಿಮಶಾಲಿನಿಯಾದ ಗೋದಾವರಿ, ಚರ್ಮಣ್ವತಿ, ನದಗಳಿಗೂ ನದಿಗಳಿಗೂ ಅಧಿಪತಿ

ಚರ್ಮಣ್ವತೀ ಚ ಸಿಂಧುಶ್ಚ ತಥಾ ನದನದೀಪತಿಃ ।
ಕಮಲಪ್ರಭವಶ್ಚೈವ ಶೋಣೋ ಮಣಿನಿಭೋದಕಃ ॥೬೨॥

ನರ್ಮದಾ ಶುಭತೋಯಾ ಚ ತಥಾ ವೇತ್ರವತೀ ನದೀ ।
ಗೋಮತೀ ಗೋಕುಲಾಕೀರ್ಣಾ ತಥಾ ಪೂರ್ಣಾ ಸರಸ್ವತೀ ॥೬೩॥

ಮಹೀ ಕಾಲಮಹೀ ಚೈವ ತಮಸಾ ಪುಷ್ಪವಾಹಿನೀ ।
ಜಂಬೂದ್ವೀಪಂ ರತ್ನವಟಂ ಸರ್ವರತ್ನೋಪಶೋಭಿತಂ ॥೬೪॥

ಸುವರ್ಣಪ್ರಕಟಂ ಚೈವ ಸುವರ್ಣಾಕರಮಂಡಿತಂ ।
ಮಹಾನದಂ ಚ ಲೌಹಿತ್ಯಂ ಶೈಲಕಾನನಶೋಭಿತಂ ॥೬೫॥

ಪತ್ತನಂ ಕೋಶಕರಣಂ ಋಷಿವೀರಜನಾಕರಂ ।
ಮಾಗಧಾಶ್ಚ ಮಹಾಗ್ರಾಮಾ ಮುಂಡಾಃ ಶುಂಗಾಸ್ತಥೈವ ಚ ॥೬೬॥

ಸುಹ್ಮಾ ಮಲ್ಲಾ ವಿದೇಹಾಶ್ಚ ಮಾಲವಾಃ ಕಾಶಿಕೋಸಲಾಃ ।
ಭವನಂ ವೈನತೇಯಸ್ಯ ದೈತ್ಯೇಂದ್ರೇಣಾಭಿಕಂಪಿತಂ ॥೬೭॥

---

ಯೆನಿಸಿದ ಸಿಂಧು, ಕಮಲದಲ್ಲಿ ಉತ್ಪನ್ನವಾಗಿ ಮಣಿಯಂತೆ ಸ್ವಚ್ಛವಾದ ನೀರಿನಿಂದ ಕೂಡಿದ ಶೋಣ, ಮಂಗಲಕರವಾದ ಜಲವುಳ್ಳ ನರ್ಮದೆ, ವೇತ್ರವತಿ, ಹಸುಗಳ ಹಿಂಡಿನಿಂದ ತುಂಬಿದ ಗೋಮತಿ, ಪೂರ್ಣೆ, ಸರಸ್ವತಿ, ಮಹಿ, ಕಾಲಮಹಿ, ತಮಸೆ, ಪುಷ್ಪವಾಹಿನಿ ಈ ನದಿಗಳೆಲ್ಲವೂ ನಡುಕಗೊಂಡುವು.

೬೪-೬೭. ಜಂಬೂದ್ವೀಪ, ಸರ್ವರತ್ನ ಶೋಭಿತವಾದ ರತ್ನವಟ, ಚಿನ್ನದ ಗಣಿಗಳಿಂದ ತುಂಬಿದ ಸುವರ್ಣಪ್ರಕಟ, ಮಹಾನದ, ಬೆಟ್ಟ ಮತ್ತು ಕಾಡುಗಳಿಂದ ಸುಂದರವಾದ ಲೌಹಿತ್ಯ, ಋಷಿಗಳಿಗೂ ವೀರಜನರಿಗೂ ಆಶ್ರಯವೆನಿಸಿದ ಕೋಶ ಕರಣವೆಂಬ ಪತ್ತನ, ಮಾಗಧ, ಮಹಾಗ್ರಾಮ, ಮುಂಡ, ಶುಂಗ, ಸುಹ್ಮ, ಮಲ್ಲ, ವಿದೇಹ, ಮಾಲವ, ಕಾಶಿ, ಕೋಸಲ ಎಂಬ ಪ್ರದೇಶಗಳೂ ಗರುಡನ ನಿವಾಸ ಸ್ಥಾನವೂ ದೈತ್ಯೇಂದ್ರನಿಂದ ಕಂಪಿಸಿದುವು.

ಕೈಲಾಸಶಿಖರಾಕಾರಂ ಯತ್ಕೃತಂ ವಿಶ್ವಕರ್ಮಣಾ ।
ರಕ್ತತೋಯೋ ಮಹಾಭೀಮೋ ಲೌಹಿತ್ಯೋ ನಾಮ ಸಾಗರಃ ॥೬೮॥

ಉದಯಶ್ಚ ಮಹಾಶೈಲ ಉಚ್ಛ್ರಿತಃ ಶತಯೋಜನಂ ।
ಸುವರ್ಣವೇದಿಕಃ ಶ್ರೀಮಾನ್ ಮೇಘಪಂಕ್ತಿನಿಷೇವಿತಃ ॥೬೯॥

ಭ್ರಾಜಮಾನೋಽರ್ಕಸದೃಶೈರ್ಜಾತರೂಪಮಯೈರ್ದ್ರುಮೈಃ ।
ಶಾಲೈಸ್ತಾಲೈಸ್ತಮಾಲೈಶ್ಚ ಕರ್ಣಿಕಾರೈಶ್ಚ ಪುಷ್ಪಿತೈಃ ॥೭೦॥

ಅಯೋಮುಖಶ್ಚ ವಿಖ್ಯಾತಃ ಪರ್ವತೋ ಧಾತುಮಂಡಿತಃ ।
ತಮಾಲವನಗಂಧಶ್ಚ ಪರ್ವತೋ ಮಲಯಃ ಶುಭಃ ॥೭೧॥

ಸುರಾಷ್ಟ್ರಾಶ್ಚ ಸುಬಾಹ್ಲೀಕಾಃ ಶೂರಾ ಭೀರಾಸ್ತಥೈವ ಚ ।
ಭೋಜಾಃ ಪಾಂಡ್ಯಾಶ್ಚ ವಂಗಾಶ್ಚ ಕಲಿಂಗಾಸ್ತಾಮ್ರಲಿಪ್ತಕಾಃ ॥೭೨॥

---

೬೮. ಕೈಲಾಸ ಶಿಖರದ ಆಕಾರವಾಗಿ ವಿಶ್ವಕರ್ಮನು ಲೌಹಿತ್ಯವೆಂಬ ಸಾಗರವನ್ನು ನಿರ್ಮಿಸಿದ್ದನು. ಅದು ಬಹು ಭಯಂಕರವಾಗಿತ್ತು. ಅದರ ನೀರು ಕೆಂಪಗಿತ್ತು.

೬೯-೭೦. ಉದಯುವೆಂಬುದು ನೂರು ಯೋಜನದೆತ್ತರವಿರುವ ದೊಡ್ಡ ಪರ್ವತ. ಅದು ಚಿನ್ನದ ಜಗಲಿಗಳಿಂದ ಕೂಡಿ, ಸಂಪದ್ಯುಕ್ತವಾಗಿ, ಮೇಘಪಂಕ್ತಿಗಳಿಂದ ಸೇವಿತವಾಗಿದೆ. ಕಾಂತಿಯಲ್ಲಿ ಸೂರ್ಯನನ್ನು ಹೋಲುವ ಸುವರ್ಣವೃಕ್ಷಗಳಿಂದಲೂ, ಹೂಬಿಟ್ಟಿರುವ ಸಾಲ, ತಾಲ, ಹೊಂಗೆ ಮತ್ತು ಬೆಟ್ಟದಾವರೆಗಳಿಂದಲೂ ವಿರಾಜಿಸುತ್ತಿರುವುದು.

೭೧. ಅಯೋಮುಖವೆಂಬ ಪ್ರಸಿದ್ಧವಾದ ಪರ್ವತವು ಕಾವಿ ಮೊದಲಾದ ಬಗೆಬಗೆಯ ಧಾತುಗಳಿಂದ ಅಲಂಕೃತವಾಗಿರುವುದು. ಶುಭಕರವಾದ ಮಲಯ ಪರ್ವತವು ಹೊಂಗೆಯ ತೋಪುಗಳ ವಾಸನೆಯಿಂದ ಕೂಡಿರುವುದು. ಮೇಲೆ ಹೇಳಿದ ಸಾಗರ, ಪರ್ವತಗಳು ಇವೆಲ್ಲವನ್ನೂ ದೈತ್ಯರಾಜನು ನಡುಗಿಸಿಬಿಟ್ಟನು.

೭೨-೭೩. ಸುರಾಷ್ಟ್ರ, ಬಾಹ್ಲೀಕ ಶೂರ, ಭೀರ, ಭೋಜ, ಪಾಂಡ್ಯ, ವಂಗ, ಕಲಿಂಗ, ತಾಮ್ರಲಿಪ್ತ, ಊಂಡ್ರ, ಪೌಂಡ್ರ, ವಾಮಚೂಡ, ಕೇರಲ ಎಂಬ

ತಥೈವೋಂಡ್ರಾಶ್ಚ ಪೌಂಡ್ರಾಶ್ಚ ವಾಮಚೂಡಾಃ ಸುಕೇರಲಾಃ ।
ಕ್ಷೋಭಿತಾಸ್ತೇನ ದೈತ್ಯೇನ ಸದೇವಾಶ್ಚಾಪ್ಸರೋಗಣಾಃ ॥೭೩॥

ಅಗಸ್ತ್ಯಭವನಂ ಚೈವ ಯದಗಮ್ಯಂ ಕೃತಂ ಪುರಾ ।
ಸಿದ್ಧಚಾರಣಸಂಘೈಶ್ಚ ವಿಪ್ರಕೀರ್ಣಂ ಮನೋಹರಂ ॥೭೪॥

ವಿಚಿತ್ರನಾನಾವಿಹಗಂ ಸುಪುಷ್ಪಿತಮಹಾದ್ರುಮಂ ।
ಜಾತರೂಪಮಯೈಃ ಶೃಂಗೈರಪ್ಸರೋಗಣನಾದಿತಂ ॥೭೫॥

ಗಿರಿಪುಷ್ಪಿತಕಶ್ಚೈವ ಲಕ್ಷ್ಮೀವಾರ್ನ್ ಪ್ರಿಯದರ್ಶನಃ ।
ಉತ್ಥಿತಃ ಸಾಗರಂ ಭಿತ್ವಾ ವಿಶ್ರಾಮಶ್ಚಂದ್ರಸೂರ್ಯಯೋಃ ।
ರರಾಜ ಸುಮಹಾಶೃಂಗೈರ್ಗಗನಂ ವಿಲಿಖನ್ನಿವ ॥೭೬॥

ಚಂದ್ರಸೂರ್ಯಾಂಶುಸಂಕಾಶೈಃ ಸಾಗರಾಂಬುಸಮಾವೃತೈಃ ।
ವಿದ್ಯುತ್ವಾನ್ ಪರ್ವತಃ ಶ್ರೀಮಾನಾಯುತಃ ಶತಯೋಜನಂ ॥೭೭॥

---

ದೇಶನಿವಾಸಿಗಳೂ, ದೇವತೆಗಳೂ, ಅಪ್ಸರಸ್ತ್ರೀಯರೂ ಹಿರಣ್ಯಕಶಿಪುವಿನಿಂದ ಕ್ಷೋಭೆಗೊಳಗಾದರು.

೭೪-೭೬. ಅಗಸ್ತ್ಯರ ವಾಸಸ್ಥಾನವಾದ ವಿಂಧ್ಯಪರ್ವತವು ಇತರರ ಸಂಚಾರಕ್ಕೆ ಆಸ್ಪದವಿಲ್ಲದಂತಹುದು. ಸಿದ್ಧರೂ ಚಾರಣರೂ ಅಲ್ಲಿ ಗುಂಪುಗುಂಪಾಗಿ ನೆಲಸಿರುವರು. ಬಗೆಬಗೆಯ ಪಕ್ಷಿಗಳೂ ಹೂಗಳಿಂದ ತುಂಬಿದ ಮರಗಳೂ ಅದನ್ನು ಬಹು ಮನೋಹರವಾಗಿ ಮಾಡಿವೆ. ಅದರ ಶಿಖರಗಳು ಸುವರ್ಣಮಯವಾಗಿವೆ. ಅಪ್ಸರಸ್ತ್ರೀಯರ ಇಂಪಾದ ಗಾನವು ಎಲ್ಲೆಲ್ಲಿಯೂ ತುಂಬಿದೆ. ಪುಷ್ಪಿತಕವೆಂಬ ಪರ್ವತವು ಸಂಪದ್ಯುಕ್ತವಾಗಿದೆ. ನೋಟಕ್ಕೆ ಬಹು ರಮ್ಯವಾಗಿದೆ. ಅದು ಸಾಗರವನ್ನು ಸೀಳಿಕೊಂಡು ಮೇಲಕ್ಕೆ ಎದ್ದಿದೆ. ಚಂದ್ರಸೂರ್ಯರ ವಿಶ್ರಾಂತಿಸ್ಥಳವೆನಿಸಿಕೊಂಡಿದೆ. ಉನ್ನತವಾದ ತನ್ನ ಶಿಖರಗಳಿಂದ ಅದು ಆಕಾಶವನ್ನು ಕೊರೆದಿದೆಯೋ ಎಂಬಂತೆ ತೋರುತ್ತದೆ.

೭೭. ಆ ಶಿಖರಗಳು ಕಾಂತಿಯಲ್ಲಿ ಚಂದ್ರಸೂರ್ಯರನ್ನು ಹೋಲುತ್ತವೆ. ಸಾಗರದ ಜಲದಿಂದ ಅವು ಆವರಿಸಲ್ಪಟ್ಟಿವೆ. ಆ ಮಹಾಪರ್ವತವು ಎಲ್ಲ ಕಡೆಗಳಲ್ಲಿಯೂ ಮಿಂಚಿನಿಂದ ಹೊಳೆಯುತ್ತ ನೂರುಯೋಜನ ವಿಸ್ತಾರವಾಗಿದೆ.

ವಿದ್ಯುತಾಂ ಯತ್ರ ಸಂಘಾತಾ ನಿಪಾತ್ಯಂತೇ ನಗೋತ್ತಮೇ ।
ಋಷಭಃ ಪರ್ವತಶ್ಚೈವ ಶ್ರೀಮಾನ್ ವೃಷಭಸಂಜ್ಞಿತಃ ॥೭೮॥

ಕುಂಜರಃ ಪರ್ವತಃ ಶ್ರೀಮಾನ್ಯತ್ರಾಗಸ್ತ್ಯಗೃಹಂ ಶುಭಂ ।
ವಿಶಾಲಾಕ್ಷಶ್ಚ ದುರ್ಧರ್ಷಃ ಸರ್ಪಾಣಾಮಾಲಯಃ ಪುರೀ ॥೭೯॥

ತಥಾ ಭೋಗವತೀ ಚಾಪಿ ದೈತ್ಯೇಂದ್ರೇಣಾಭಿಕಂಪಿತಾಃ ।
ಮಹಾಸೇನೋ ಗಿರಿಶ್ಚೈವ ಪಾರಿಯಾತ್ರಶ್ಚ ಪರ್ವತಃ ॥೮೦॥

ಚಕ್ರವಾಂಶ್ಚ ಗಿರಿಶ್ರೇಷ್ಠೋ ವಾರಾಹಶ್ಚೈವ ಪರ್ವತಃ ।
ಪ್ರಾಗ್ಜ್ಯೋತಿಷಪುರಂ ಚಾಪಿ ಜಾತರೂಪಮಯಂ ಶುಭಂ ॥೮೧॥

ಯಸ್ಮಿನ್ ವಸತಿ ದುಷ್ಟಾತ್ಮಾ ನರಕೋ ನಾಮ ದಾನವಃ ।
ಮೇಘಶ್ಚ ಪರ್ವತಶ್ರೇಷ್ಠೋ ಮೇಘಗಂಭೀರನಿಸ್ವನಃ ॥೮೨॥

---

೭೮. ಋಷಭವೆಂಬ ಸಂಪದ್ಯುಕ್ತವಾದ ಪರ್ವತಶ್ರೇಷ್ಠವೊಂದುಂಟು. ಅಲ್ಲಿ ಮಿಂಚುಗಳು ಗುಂಪುಗುಂಪಾಗಿ ಎರಗುವುವು. ಅದಕ್ಕೆ ವೃಷಭವೆಂದೂ ಹೆಸರುಂಟು.

೭೯. ಕುಂಜರಪರ್ವತವು ಸಂಪದ್ಭರಿತವಾಗಿದೆ. ಅದರಲ್ಲಿ ಮಂಗಲಕರವಾದ ಅಗಸ್ತ್ಯರ ಗೃಹವಿದೆ. ಶತ್ರುಪ್ರವೇಶಕ್ಕೆ ಅಸಾಧ್ಯವಾದ ವಿಶಾಲಾಕ್ಷವೆಂಬ ಪಟ್ಟಣವು ಸರ್ಪಗಳ ವಾಸಸ್ಥಾನವಾಗಿರುವುದು.

೮೦. ಹಿಂದೆ ತಿಳಿಸಿದ ಪರ್ವತಗಳು ಮಾತ್ರವಲ್ಲದೆ ಭೋಗವತೀ ನಗರವೂ ಮಹಾಸೇನ ಮತ್ತು ಪಾರಿಯಾತ್ರಗಳೆಂಬ ಪರ್ವತಗಳೂ ದೈತ್ಯೇಂದ್ರನಾದ ಹಿರಣ್ಯಕಶಿಪುವಿನ ಆಡಂಬರದಿಂದ ನಡುಗಿದುವು.

೮೧. ಚಕ್ರವಂತ, ವಾರಾಹ ಇವೆರಡೂ ಶ್ರೇಷ್ಠವಾದ ಪರ್ವತಗಳು. ಶುಭಕರವಾದ ಪ್ರಾಗ್ಜ್ಯೋತಿಷಪುರವು ಸುವರ್ಣಮಯವಾದುದು. ಅಲ್ಲಿ ದುಷ್ಟಾತ್ಮನಾದ ನರಕಾಸುರನು ವಾಸಿಸುತ್ತಾನೆ.

೮೨. ಶ್ರೇಷ್ಠವಾದ ಮೇಘಪರ್ವತದಲ್ಲಿ ಮೇಘಗಳ ಗಂಭೀರ ಧ್ವನಿಯು ಕೇಳಿಬರುತ್ತಿರುವುದು. ಓ ಬ್ರಾಹ್ಮಣೋತ್ತಮರೇ, ಅದರ ಬಳಿಯಲ್ಲಿ ಅರವತ್ತು ಸಾವಿರ ಪರ್ವತಗಳಿವೆ.

ಷಷ್ಟಿಸ್ತತ್ರ ಸಹಸ್ರಾಣಿ ಪರ್ವತಾನಾಂ ದ್ವಿಜೋತ್ತಮಾಃ ।
ತರುಣಾದಿತ್ಯಸಂಕಾಶೋ ಮೇರುಸ್ತತ್ರ ಮಹಾಗಿರಿಃ ॥೮೩॥

ಯಕ್ಷರಾಕ್ಷಸಗಂಧರ್ವೈರ್ನಿತ್ಯಂ ಸೇವಿತಕಂದರಃ ।
ಹೇಮಗರ್ಭೋ ಮಹಾಶೈಲಸ್ತಥಾ ಹೇಮಸಖೋ ಗಿರಿಃ ॥೮೪॥

ಕೈಲಾಸಶ್ಚೈವ ಶೈಲೇಂದ್ರೋ ದಾನವೇಂದ್ರೇಣ ಕಂಪಿತಾಃ ।
ಹೇಮಪುಷ್ಕರಸಂಛನ್ನಂ ತೇನ ವೈಖಾನಸಂ ಸರಃ ॥೮೫॥

ಕಂಪಿತಂ ಮಾನಸಂ ಚೈವ ಹಂಸಕಾರಂಡವಾಕುಲಂ ।
ತ್ರಿಶೃಂಗಪರ್ವತಶ್ಚೈವ ಕುಮಾರೀ ಚ ಸರಿದ್ವರಾ ॥೮೬॥

ತುಷಾರಚಯಸಂಛನ್ನೋ ಮಂದರಶ್ಚಾಪಿ ಪರ್ವತಃ ।
ಉಶೀರಬಿಂದುಶ್ಚ ಗಿರಿಶ್ಚಂದ್ರಪ್ರಸ್ಥಸ್ತಥಾದ್ರಿರಾಟ್ ॥೮೭॥

ಪ್ರಜಾಪತಿಗಿರಿಶ್ಚೈವ ತಥಾ ಪುಷ್ಕರಪರ್ವತಃ ।
ದೇವಾಭ್ರಪರ್ವತಶ್ಚೈವ ತಥಾ ವೈ ರೇಣುಕೋ ಗಿರಿಃ ॥೮೮॥

---

೮೩. ಮೇರುಮಹಾಗಿರಿಯು ಬಾಲಸೂರ್ಯನಂತೆ ಪ್ರಕಾಶಿಸುತ್ತಿರುವುದು. ಅದರ ಗುಹೆಗಳಲ್ಲಿ ಯಕ್ಷರು, ರಾಕ್ಷಸರು ಮತ್ತು ಗಂಧರ್ವರು ಸದಾ ವಿಹರಿಸುತ್ತಿರುವರು.

೮೪. ಹೇಮಗರ್ಭ, ಹೇಮಸುಖ, ಕೈಲಾಸ, ಮೊದಲಾದ ದೊಡ್ಡದೊಡ್ಡ ಪರ್ವತಗಳನ್ನೂ ದೈತ್ಯರಾಜನೆನಿಸಿದ ಹಿರಣ್ಯಕಶಿಪು ನಡುಗಿಸಿದನು.

೮೫. ಹೊಂದಾವರೆಗಳಿಂದ ತುಂಬಿದ ವೈಖಾನಸವೆಂಬ ಸರೋವರವೂ ಹಂಸ ಮತ್ತು ಕಾರಂಡವಗಳ ಆಶ್ರಯಸ್ಥಾನವಾದ ಮಾನಸ ಸರೋವರವೂ ಅವನಿಂದ ಕಂಪಿತವಾದುವು.

೮೬-೯೯. ತ್ರಿಶೃಂಗಪರ್ವತ, ಕುಮಾರೀನದಿ, ಹಿಮರಾಶಿಸಂವೃತವಾದ ಮಂದರಗಿರಿ, ಉಶೀರಬಿಂದುಪರ್ವತ, ಚಂದ್ರಪ್ರಸ್ಥಪರ್ವತ, ಪ್ರಜಾಪತಿಗಿರಿ, ಪುಷ್ಕರಪರ್ವತ, ದೇವಾಭ್ರಪರ್ವತ, ರೇಣುಕಗಿರಿ, ಕ್ರೌಂಚಪರ್ವತ, ಸಪ್ತರ್ಷಿ

ಕ್ರೌಂಚಃ ಸಪ್ತರ್ಷಿಶ್ಶೈಲಶ್ಚ ಧೂಮ್ರವರ್ಣಶ್ಚ ಪರ್ವತಃ ।
ಏತೇ ಚಾನ್ಯೇ ಚ ಗಿರಯೋ ದೇಶಾ ಜನಪದಾಸ್ತ್ರಥಾ ॥೮೯॥

ನದ್ಯಃ ಸಸಾಗರಾಃ ಸರ್ವಾಃ ಸೋಽಕಂಪಯುತ ದಾನವಃ ।
ಕಪಿಲಶ್ಚ ಮಹೀಪುತ್ರೋ ವ್ಯಾಘ್ರವಾಂಶ್ಚೈವ ಕಂಪಿತಃ । ॥೯೦॥

ಖೇಚರಾಶ್ಚ ಸತೀಪುತ್ರಾಃ ಪಾತಾಲತಲವಾಸಿನಃ ।
ಗಣಸ್ತಥಾ ಪರೋ ರೌದ್ರೋ ಮೇಘನಾಮಾಂಕುಶಾಯುಧಃ ॥೯೧॥

ಊರ್ಧ್ವಗೋ ಭೀಮವೇಗಶ್ಚ ಸರ್ವಏವಾಭಿಕಂಪಿತಾಃ ।
ಗದೀ ಶೂಲೀ ಕರಾಲಶ್ಚ ಹಿರಣ್ಯಕಶಿಪುಸ್ತದಾ ॥೯೨॥

ಜೀಮೂತಘನಸಂಕಾಶೋ ಜೀಮೂತಘನನಿಸ್ವನಃ ।
ಜೀಮೂತಘನನಿರ್ಘೋಷೋ ಜೀಮೂತ ಇವ ವೇಗವಾನ್ ॥೯೩॥

---

ಪರ್ವತ, ಧೂಮ್ರವರ್ಣಶೈಲ, ಇವೇ ಅಲ್ಲದೆ ಇನ್ನೂ ಎಷ್ಟೋ ಬೆಟ್ಟಗಳೂ, ದೇಶಗಳೂ, ಜನಪದಗಳೂ, ನದಿಗಳೂ, ಸಾಗರಗಳೂ ಆ ದಾನವನಿಂದ ನಡುಗಿಸಲ್ಪಟ್ಟುವು.

೯೦-೯೧. ಮಹೀಸುತನಾದ ಕಪಿಲನೂ, ವ್ಯಾಘ್ರವಂತನೂ ಕಂಪಿತರಾದರು. ಖೇಚರರೂ, ಸತೀಪುತ್ರರೂ, ಪಾತಾಲತಲನಿವಾಸಿಗಳೂ ನಡುಗಿದರು. ಅಂಕುಶಾಯುಧಧಾರಿಯಾಗಿ ಪ್ರಚಂಡವೇಗದಿಂದ ಅಂತರಿಕ್ಷದಲ್ಲಿ ಸಂಚರಿಸಬಲ್ಲ ಮೇಘನೆಂಬ ರುದ್ರಗಣಾಧಿಪನೂ ಅವರಂತೆಯೇ ಆದನು.

೯೨-೯೩. ಆಗ ದೇವತೆಗಳ ಶತ್ರುವಾದ ಹಿರಣ್ಯಕಶಿಪು ಗದೆಯನ್ನೂ ಶೂಲವನ್ನೂ ಧರಿಸಿ ಮೇಘ ಸದೃಶನಾಗಿ, ಮೇಘದಂತೆ ಗುಡುಗುತ್ತ, ಮೇಘದಂತೆ ಅಬ್ಬರಿಸುತ್ತ, ಮೇಘದಂತೆ ವೇಗಶಾಲಿಯಾಗಿ ನೃಸಿಂಹನ ಕಡೆಗೆ ಪರಾಕ್ರಮದಿಂದ ಓಡಿದನು.

ದೇವಾರಿರ್ದಿತಿಜೋ ವೀರೋ ನೃಸಿಂಹಂ ಸಮುಪಾದ್ರುತಃ ।
ಸಮುತ್ಪತ್ಯ ತತಸ್ತೀಕ್ಷ್ಣೈರ್ಮೃಗೇಂದ್ರೇಣ ಮಹಾನಖೈಃ ।
ತದೋಂಕಾರಸಹಾಯೇನ ವಿದಾರ್ಯ ನಿಹತೋ ಯುಧಿ ॥೯೪॥

ಮಹೀ ಚ ಕಾಲಶ್ಚ ಶಶೀ ನಭಶ್ಚ
ಗ್ರಹಾಶ್ಚ ಸೂರ್ಯಶ್ಚ ದಿಶಶ್ಚ ಸರ್ವಾಃ ।
ನದ್ಯಶ್ಚ ಶೈಲಾಶ್ಚ ಮಹಾರ್ಣವಾಶ್ಚ
ಗತಾಃ ಪ್ರಸಾದಂ ದಿತಿಪುತ್ರನಾಶಾತ್ ॥೯೫॥

ತತಃ ಪ್ರಮುದಿತಾ ದೇವಾ ಋಷಯಶ್ಚ ತಪೋಧನಾಃ ।
ತುಷ್ಟುವುರ್ನಾಮಭಿರ್ದಿವ್ಯೈರಾದಿದೇವಂ ಸನಾತನಂ ॥೯೬॥

ಯತ್ತ್ವಯಾ ವಿಹಿತಂ ದೇವ ನಾರಸಿಂಹಮಿದಂ ವಪುಃ ।
ಏತದೇವಾರ್ಚಯಿಷ್ಯಂತಿ ಪರಾಪರವಿದೋ ಜನಾಃ ॥೯೭॥

---

೯೪. ಬಳಿಕ ನರಸಿಂಹಸ್ವಾಮಿಯು ಓಂಕಾರ ಸಹಾಯನಾಗಿ ಅವನ ಮೇಲೆ ಬಿದ್ದು ಯುದ್ಧಮಾಡಿ, ಹರಿತವಾದ ತನ್ನ ದೊಡ್ಡ ಉಗುರುಗಳಿಂದ ಅವನನ್ನು ಸೀಳಿ ಸಂಹರಿಸಿದನು.

೯೫. ದೈತ್ಯೇಂದ್ರನಾದ ಹಿರಣ್ಯಕಶಿಪುವಿನ ನಾಶದಿಂದ ಭೂಮಿ, ಕಾಲ, ಚಂದ್ರ, ಆಕಾಶ, ಗ್ರಹಗಳು ಸೂರ್ಯ, ಎಲ್ಲ ದಿಕ್ಕುಗಳು, ನದಿಗಳು, ಬೆಟ್ಟಗಳು, ಮಹಾಸಾಗರಗಳು ಇವೆಲ್ಲವೂ ಪ್ರಸನ್ನವಾದುವು.

೯೬. ತರುವಾಯ ದೇವತೆಗಳೂ ತಪೋಧನರಾದ ಋಷಿಗಳೂ ಸಂತುಷ್ಟರಾಗಿ ಸನಾತನನೆನಿಸಿದ ಆ ದೇವಾದಿದೇವನನ್ನು ದಿವ್ಯನಾಮಗಳಿಂದ ಸ್ತುತಿಸಿದರು.

೯೭. ಓ ದೇವಾ, ಪರತತ್ವವನ್ನೂ, ಅಪರತತ್ವವನ್ನೂ ಅರಿತವರು ನೀನು ಧರಿಸಿದ ಈ ನಾರಸಿಂಹ ರೂಪವನ್ನೇ ಅರ್ಚಿಸುವರು.

ಅಧ್ಯಾಯ ೧೬೩

॥ ಬ್ರಹ್ಮೋವಾಚ ॥

ಭರ್ವಾ ಬ್ರಹ್ಮಾ ಚ ರುದ್ರಶ್ಚ ಮಹೇಂದ್ರೋ ದೇವಸತ್ತಮಃ ।
ಭರ್ವಾ ಕರ್ತಾ ವಿಕರ್ತಾ ಚ ಲೋಕಾನಾಂ ಪ್ರಭವೋವ್ಯಯಃ ॥೯೮॥

ಪರಾಂ ಚ ಸಿದ್ಧಿಂ ಚ ಪರಂ ಚ ದೇವಂ
ಪರಂ ಚ ಮಂತ್ರಂ ಪರಮಂ ಹವಿಶ್ಚ ।
ಪರಂ ಚ ಧರ್ಮಂ ಪರಮಂ ಚ ವಿಶ್ವಂ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೯೯॥

ಪರಂ ಶರೀರಂ ಪರಮಂ ಚ ಬ್ರಹ್ಮ
ಪರಂ ಚ ಯೋಗಂ ಪರಮಾಂ ಚ ವಾಣೀಂ ।
ಪರಂ ರಹಸ್ಯಂ ಪರಮಾಂ ಗತಿಂ ಚ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೦॥

---

೯೮. ಬ್ರಹ್ಮನು ಹೇಳಿದನು.—ಬ್ರಹ್ಮ, ರುದ್ರ ಇಂದ್ರ, ಇವರೆಲ್ಲರೂ ನೀನೆ. ದೇವತೆಗಳಲ್ಲೆಲ್ಲ ಶ್ರೇಷ್ಠನೂ ನೀನೆ. ಭೂತಸೃಷ್ಟಿಯನ್ನು ಮಾಡುವವನೂ, ವಿಧ ವಿಧವಾಗಿ ಜಗತ್ತನ್ನು ಸೃಷ್ಟಿಸುವವನೂ ನೀನೆ. ಲೋಕಗಳ ಉತ್ಪತ್ತಿಕಾರಣನೂ ನೀನೆ. ಇಷ್ಟಾದರೂ ನಿನಗೆ ಮಾತ್ರ ವಿಕಾರವಾವುದೂ ಇಲ್ಲ.

೯೯. ಆದಿದೇವ, ಪುರಾಣಪುರುಷ, ಶ್ರೇಷ್ಠವಾದ ಸಿದ್ಧಿ, ಶ್ರೇಷ್ಠನಾದ ದೇವ, ಶ್ರೇಷ್ಠವಾದ ಮಂತ್ರ, ಶ್ರೇಷ್ಠವಾದ ಹವಿಸ್ಸು, ಶ್ರೇಷ್ಠವಾದ ಧರ್ಮ, ಶ್ರೇಷ್ಠವಾದ ಜಗತ್ತು, ಇವೆಲ್ಲ ನೀನೆ ಎಂದು ಹೇಳುತ್ತಾರೆ.

೧೦೦. ಆದಿದೇವನೂ ಪುರಾಣಪುರುಷನೂ ಆದ ನಿನ್ನನ್ನು ಪರಬ್ರಹ್ಮ, ಶ್ರೇಷ್ಠವಾದ ಶರೀರ, ಶ್ರೇಷ್ಠವಾದ ಯೋಗ, ಶ್ರೇಷ್ಠವಾದ ವಾಣಿ, ಶ್ರೇಷ್ಠವಾದ ರಹಸ್ಯ ಮತ್ತು ಶ್ರೇಷ್ಠವಾದ ಗತಿಯೆಂದು ಹೇಳುವರು.

ಪರಂ ಪರಸ್ಯಾಪಿ ಪರಂ ಪದಂ ಯತ್
ಪರಂ ಪರಸ್ಯಾಪಿ ಪರಂ ಚ ದೇವಂ ।
ಪರಂ ಪರಸ್ಯಾಪಿ ಪರಂ ಚ ಭೂತಂ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೧॥

ಪರಂ ಪರಸ್ಯಾಪಿ ಪರಂ ರಹಸ್ಯಂ
ಪರಂ ಪರಸ್ಯಾಪಿ ಪರಂ ಮಹತ್ತ್ವಂ ।
ಪರಂ ಪರಸ್ಯಾಪಿ ಪರಂ ಮಹದ್ಯ
ತ್ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೨॥

ಪರಂ ಪರಸ್ಯಾಪಿ ಪರಂ ನಿಧಾನಂ
ಪರಂ ಪರಸ್ಯಾಪಿ ಪರಂ ಪವಿತ್ರಂ ।
ಪರಂ ಪರಸ್ಯಾಪಿ ಪರಂ ಚ ದಾಂತಂ
ತ್ವಾಮಾಹುರಗ್ರ್ಯಂ ಪುರುಷಂ ಪುರಾಣಂ ॥೧೦೩॥

---

೧೦೧. ಉತ್ಕೃಷ್ಟವಾದ ಸ್ಥಾನಕ್ಕಿಂತ ಉತ್ಕೃಷ್ಟ ಸ್ಥಾನವೆಂದೂ, ಉತ್ಕೃಷ್ಟನಾದ ದೇವನಿಗಿಂತ ಉತ್ಕೃಷ್ಟ ದೇವನೆಂದೂ, ಉತ್ಕೃಷ್ಟವಾದ ಭೂತಕ್ಕಿಂತ ಉತ್ಕೃಷ್ಟ ಭೂತವೆಂದೂ ಆದಿದೇವನೂ ಪುರಾಣಪುರುಷನೂ ಆದ ನಿನ್ನನ್ನು ಹೇಳುತ್ತಾರೆ.

೧೦೨. ಉತ್ಕೃಷ್ಟವಾದ ರಹಸ್ಯಕ್ಕಿಂತಲೂ ಉತ್ಕೃಷ್ಟವಾದ ರಹಸ್ಯವೆಂದೂ, ಉತ್ಕೃಷ್ಟವಾದ ಮಹತ್ವಕ್ಕಿಂತಲೂ ಉತ್ಕೃಷ್ಟವಾದ ಮಹತ್ತ್ವವೆಂದೂ, ಉತ್ಕೃಷ್ಟವಾದ ಮಹದ್ವಸ್ತುವಿಗಿಂತಲೂ ಉತ್ಕೃಷ್ಟವಾದ ಮಹದ್ವಸ್ತುವೆಂದೂ ಆದಿದೇವನೂ ಪುರಾಣಪುರುಷನೂ ಆದ ನಿನ್ನನ್ನು ಹೇಳುತ್ತಾರೆ.

೧೦೩. ಆದಿದೇವನೂ ಪುರಾಣಪುರುಷನೂ ಆದ ನಿನ್ನನ್ನು ಉತ್ಕೃಷ್ಟವಾದ ನಿಧಿಗಿಂತಲೂ ಉತ್ಕೃಷ್ಟವಾದ ನಿಧಿಯೆಂದೂ, ಉತ್ಕೃಷ್ಟವಾದ ಪವಿತ್ರ ವಸ್ತುವಿಗಿಂತಲೂ ಉತ್ಕೃಷ್ಟವಾದ ಪವಿತ್ರ ವಸ್ತುವೆಂದೂ, ಉತ್ಕೃಷ್ಟನಾದ ಜಿತೇಂದ್ರಿಯನಿಗಿಂತಲೂ ಉತ್ಕೃಷ್ಟನಾದ ಜಿತೇಂದ್ರಿಯನೆಂದೂ ಹೇಳುತ್ತಾರೆ.

ಏವಮುಕ್ತ್ವಾ ತು ಭಗವಾನ್ ಸರ್ವಲೋಕಪಿತಾಮಹಃ ।
ಸ್ತುತ್ವಾ ನಾರಾಯಣಂ ದೇವಂ ಬ್ರಹ್ಮಲೋಕಂ ಗತಃ ಪ್ರಭುಃ ॥೧೦೪॥

ತತೋ ನದತ್ಸು ತೂರ್ಯೇಷು ನೃತ್ಯಂತೀಷ್ವಪ್ಸರಸ್ಸು ಚ ।
ಕ್ಷೀರೋದಸ್ಯೋತ್ತರಂ ಕೂಲಂ ಜಗಾಮ ಹರಿರೀಶ್ವರಃ ॥೧೦೫॥

ನಾರಸಿಂಹಂ ವಪುರ್ದೇವಃ ಸ್ಥಾಪಯಿತ್ವಾ ಸುದೀಪ್ತಿಮತ್ ।
ಪೌರಾಣಂ ರೂಪಮಾಸ್ಥಾಯ ಪ್ರಯಯೌ ಗರುಡಧ್ವಜಃ ॥೧೦೬॥

ಅಷ್ಟಚಕ್ರೇಣ ಯಾನೇನ ಭೂತಯುಕ್ತೇನ ಭಾಸ್ವತಾ ।
ಅವ್ಯಕ್ತಪ್ರಕೃತಿರ್ದೇವಃ ಸ್ವಸ್ಥಾನಂ ಗತವಾನ್ ಪ್ರಭುಃ ॥೧೦೭॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಹಿರಣ್ಯಕಶಿಪುವಧೋ ನಾಮ
ತ್ರಿಷಷ್ಟ್ಯಧಿಕಶತತಮೋಽಧ್ಯಾಯಃ

---

೧೦೪. ಸರ್ವಲೋಕಗಳ ಪಿತಾಮಹನೆನಿಸಿದ ಬ್ರಹ್ಮದೇವನು ಹಿಂದೆ ಹೇಳಿದಂತೆ ಪೂಜ್ಯನಾದ ನಾರಾಯಣನನ್ನು ಸ್ತುತಿಸಿ ತನ್ನ ಲೋಕಕ್ಕೆ ತೆರಳಿದನು.

೧೦೫. ಬಳಿಕ ಮಂಗಳವಾದ್ಯಗಳು ಮೊಳಗುತ್ತಿರಲು, ಅಪ್ಸರಸ್ತ್ರೀಯರು ನರ್ತಿಸುತ್ತಿರಲು ಸರ್ವೇಶ್ವರನಾದ ನಾರಾಯಣನು ಕ್ಷೀರಸಾಗರದ ಉತ್ತರದ ತೀರಕ್ಕೆ ದಯಮಾಡಿಸಿದನು.

೧೦೬. ಷಡ್ಗುಣಪರಿಪೂರ್ಣನಾದ ಮಹಾವಿಷ್ಣುವು ಅತಿ ತೇಜಸ್ವಿಯಾದ ನಾರಸಿಂಹಶರೀರವನ್ನು ಆ ಬಳಿಯಲ್ಲೇ ಸ್ಥಾಪಿಸಿ ಸಹಜವಾದ ತನ್ನ ಪ್ರಾಚೀನ ರೂಪವನ್ನು ಧರಿಸಿ ತೆರಳಿದನು.

೧೦೭. ಮಹಾಭೂತಗಳನ್ನು ಹೂಡಿದ, ಎಂಟು ಚಕ್ರಗಳ, ದೇದೀಪ್ಯಮಾನವಾದ ವಾಹನದಲ್ಲಿ ಕುಳಿತು ಅವ್ಯಕ್ತಸ್ವಭಾವದವನಾದ ಜಗದೀಶ್ವರನು ತನ್ನ ಸ್ಥಾನವನ್ನೈದಿದನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಹಿರಣ್ಯಕಶಿಪುವಿನ ಸಂಹಾರವನ್ನು ವರ್ಣಿಸಿದೆ.

ದೈತ್ಯವೀರರು ನೃಸಿಂಹಸ್ವಾಮಿಯ ಮೇಲೆ ಪ್ರಯೋಗಿಸಿದ ಶಸ್ತ್ರಾಸ್ತ್ರಗಳೆಲ್ಲವೂ ವಿಫಲವಾದುವು. ಆಗ ಅವರು ದಿಕ್ಕುತೋರದೆ ಹಿರಣ್ಯಕಶಿಪುವಿನ ಮರೆಹೊಕ್ಕರು. ಅವನು ಅತಿ ಕೋಪದಿಂದೆದ್ದು ಭೂಮಿಯನ್ನು ತುಳಿದನು. ಆ ಪ್ರಹಾರಕ್ಕೆ ಸಕಲ ಲೋಕಗಳೂ ನಡುಗಿಹೋದುವು. ದೈತ್ಯರಾಜನು ಸಕಲಾಯುಧಸಮೇತನಾಗಿ ನರಸಿಂಹಸ್ವಾಮಿಯ ಮೇಲೆ ಬಿದ್ದನು. ಭಗವಂತನು ತನ್ನ ತೀಕ್ಷ್ಣವಾದ ಉಗುರುಗಳಿಂದ ಅವನನ್ನು ಸೀಳಿಹಾಕಿದನು. ಜಗತ್ತೆಲ್ಲವೂ ಸಂತೋಷಗೊಂಡಿತು. ಬ್ರಹ್ಮಾದಿದೇವತೆಗಳು ನರಸಿಂಹಾವತಾರಮಾಡಿದ ನಾರಾಯಣನನ್ನು ವಿಧವಿಧವಾಗಿ ಸ್ತೋತ್ರಮಾಡಿದರು. ಭಕ್ತರಕ್ಷಕನಾದ ಆದಿದೇವನು ಅತಿ ತೇಜೋಮಯವಾದ ಆ ಅದ್ಭುತರೂಪವನ್ನು ತೊರೆದು ತನ್ನ ಸಹಜರೂಪವನ್ನು ಧರಿಸಿ ಸ್ವಸ್ಥಾನಕ್ಕೆ ತೆರಳಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಹಿರಣ್ಯಕಶಿಪುವಧವೆಂಬ ನೂರ ಅರವತ್ತಮೂರನೆಯ ಅಧ್ಯಾಯವು ಮುಗಿದುದು.



## ಅಥ ಚತುಸ್ಷಷ್ಟ್ಯಧಿಕಶತತಮೋಽಧ್ಯಾಯಃ

|| ಋಷಯ ಊಚುಃ ||

ಕಥಿತಂ ನರಸಿಂಹಸ್ಯ ಮಾಹಾತ್ಮ್ಯಂ ವಿಸ್ತರೇಣ ಚ ।
ಪುನಸ್ತಸ್ಯೈವ ಮಾಹಾತ್ಮ್ಯಮನ್ಯದ್ವಿಸ್ತರತೋ ವದ || ೧ ||

ಪದ್ಮರೂಪಮಭೂದೇತತ್ಕಥಂ ಹೇಮಮಯಂ ಜಗತ್ ।
ಕಥಂ ಚ ವೈಷ್ಣವೀ ಸೃಷ್ಟಿಃ ಪದ್ಮಮಧ್ಯೇಽಭವತ್ಪುರಾ || ೨ ||

|| ಸೂತ ಉವಾಚ ||

ಶ್ರುತ್ವಾ ಚ ನರಸಿಂಹಸ್ಯ ಮಾಹಾತ್ಮ್ಯಂ ರವಿನಂದನಃ ।
ವಿಸ್ಮಯೋತ್ಫುಲ್ಲನಯನಃ ಪುನಃ ಪಪ್ರಚ್ಛ ಕೇಶವಂ || ೩ ||

|| ಮನುರುವಾಚ ||

ಕಥಂ ಪಾದ್ಮೇ ಮಹಾಕಲ್ಪೇ ತವ ಪದ್ಮಮಯಂ ಜಗತ್ ।
ಜಲಾರ್ಣವಗತಸ್ಯೇಹ ನಾಭೌ ಜಾತಂ ಜನಾರ್ದನ || ೪ ||

---

೧. ಋಷಿಗಳು ಹೇಳಿದರು.—ಎಲೈ ಸೂತಪೌರಾಣಿಕನೇ, ನರಸಿಂಹ ಸ್ವಾಮಿಯ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳಿದೆ. ಇನ್ನು ಅದೇ ಭಗವಂತನ ಮತ್ತಾವುದಾದರೊಂದು ಮಹಿಮೆಯನ್ನು ವಿವರವಾಗಿ ಹೇಳು.

೨. ಈ ಜಗತ್ತು ಸುವರ್ಣಮಯವಾದ ಪದ್ಮರೂಪವನ್ನು ತಾಳಿದುದು ಹೇಗೆ? ಆ ಪದ್ಮದ ಮಧ್ಯದಲ್ಲಿ ವಿಷ್ಣುವು ಆದಿ ಸೃಷ್ಟಿಯನ್ನೆಂತು ಮಾಡಿದನು?

೩. ಸೂತಪೌರಾಣಿಕನು ಹೇಳಿದನು.—ಸೂರ್ಯಪುತ್ರನಾದ ವೈವಸ್ವತ ಮನುವು ನರಸಿಂಹಮೂರ್ತಿಯ ಮಹಿಮೆಯನ್ನು ಕೇಳಿ, ಆಶ್ಚರ್ಯದಿಂದ ಕಣ್ಣುಗಳು ಅರಳಿರಲು, ಕೇಶವನನ್ನು ಪುನಃ ಪ್ರಶ್ನಿಸಿದನು.

೪. ಮನುಚಕ್ರವರ್ತಿ ಹೇಳಿದನು.—ಓ ಜನಾರ್ದನಾ, ಪಾದ್ಮಮಹಾ ಕಲ್ಪದಲ್ಲಿ ನೀನು ಸಾಗರದ ಮಧ್ಯದಲ್ಲಿದ್ದಾಗ ನಿನ್ನ ನಾಭಿಯಿಂದ ಪ್ರಪಂಚವು ಪದ್ಮಮಯವಾಗಿ ಹುಟ್ಟಿದುದು ಹೇಗೆ?

ಪ್ರಭಾವಾತ್ಪದ್ಮನಾಭಸ್ಯ ಸ್ವಪತಃ ಸಾಗರಾಂಭಸಿ ।
ಪುಷ್ಕರೇ ಚ ಕಥಂ ಭೂತಾ ದೇವಾಃ ಸರ್ಷಿಗಣಾಃ ಪುರಾ ॥ ೫ ॥

ಏತದಾಖ್ಯಾಹಿ ನಿಖಿಲಂ ಯೋಗಂ ಯೋಗವಿದಾಂ ಪತೇ ।
ಶೃಣ್ವತಸ್ತಸ್ಯ ಮೇ ಕೀರ್ತಿಂ ನ ತೃಪ್ತಿರುಪಜಾಯತೇ ॥ ೬ ॥

ಕಿಯತಾ ಚೈವ ಕಾಲೇನ ಶೇತೇ ವೈ ಪುರುಷೋತ್ತಮಃ ।
ಕಿಯಂತಂ ವಾ ಸ್ವಪಿತಿ ಚ ಕೋಽಸ್ಯ ಕಾಲಸ್ಯ ಸಂಭವಃ ॥ ೭ ॥

ಕಿಯತಾ ವಾಽಥ ಕಾಲೇನ ಹ್ಯುತ್ತಿಷ್ಠತಿ ಮಹಾಯಶಾಃ ।
ಕಥಂ ಚೋತ್ಥಾಯ ಭಗವಾನ್ ಸೃಜತೇ ನಿಖಿಲಂ ಜಗತ್ ॥ ೮ ॥

ಕೇ ಪ್ರಜಾಪತಯಸ್ತಾವದಾಸನ್ ಪೂರ್ವಂ ಮಹಾಮುನೇ ।
ಕಥಂ ನಿರ್ಮಿತವಾಂಶ್ಚೈವ ಚಿತ್ರಂ ಲೋಕಂ ಸನಾತನಂ ॥ ೯ ॥

ಕಥಮೇಕಾರ್ಣವೇ ಶೂನ್ಯೇ ನಷ್ಟಸ್ಥಾವರಜಂಗಮೇ ।
ದಗ್ಧದೇವಾಸುರನರೇ ಪ್ರನಷ್ಟೋರಗರಾಕ್ಷಸೇ ॥೧೦॥

---

೫. ಸಾಗರದ ಜಲದಲ್ಲಿ ಶಯನಿಸಿದ್ದ ಪದ್ಮನಾಭನ ಮಹಿಮೆಯಿಂದ ದೇವತೆಗಳೂ ಋಷಿವರ್ಗಗಳೂ ಕಮಲದಲ್ಲಿ ಹುಟ್ಟಿದ ಬಗೆ ಹೇಗೆ?

೬. ಎಲೈ ಯೋಗೀಶ್ವರನೇ, ಈ ಎಲ್ಲ ಸಂಗತಿಯನ್ನೂ ತಿಳಿಸು. ಅವನ ಕೀರ್ತಿಯನ್ನು ಎಷ್ಟು ಕೇಳಿದರೂ ನನಗೆ ತೃಪ್ತಿ ಹುಟ್ಟದು.

೭. ಆ ಪುರುಷೋತ್ತಮನು ಶಯನಿಸುವುದಕ್ಕೆ ಎಷ್ಟು ಕಾಲ ಹಿಡಿಯುವುದು. ಅವನ ಯೋಗನಿದ್ರೆಯಲ್ಲಿ ಆಸಕ್ತನಾಗಿರುವ ಕಾಲದ ಪರಿಮಾಣವೆಷ್ಟು? ಆ ಕಾಲವು ಒದಗುವ ರೀತಿ ಹೇಗೆ?

೮. ಮಹಾಕೀರ್ತಿವಂತನಾದ ಆ ಪರಮಾತ್ಮನು ಎಷ್ಟುಕಾಲಕ್ಕೆ ಯೋಗನಿದ್ರೆಯಿಂದೇಳುವನು? ಆ ದೇವನು ಎದ್ದು ಜಗತ್ತನ್ನೆಲ್ಲ ಸೃಷ್ಟಿಸುವುದು ಹೇಗೆ?

೯. ಓ ಮುನೀಶ್ವರಾ, ಆದಿಯಲ್ಲಿದ್ದ ಪ್ರಜಾಪತಿಗಳು ಯಾರು? ಸನಾತನವಾದ ಈ ವಿಚಿತ್ರ ಪ್ರಪಂಚವನ್ನು ಅವನು ಹೇಗೆ ನಿರ್ಮಿಸಿದನು?

೧೦-೧೨. ಲೋಕವೆಲ್ಲವೂ ಸಮುದ್ರ ಜಲಮಯವಾಗಿ ಶೂನ್ಯವಾಗಿರಲು, ಚರಾಚರವಸ್ತುಗಳು ನಷ್ಟವಾಗಿರಲು, ದೇವತೆಗಳು, ಅಸುರರು, ಮನುಷ್ಯರು,

ನಷ್ಟಾನಿಲಾನಲೇ ಲೋಕೇ ನಷ್ಟಾಕಾಶಮಹೀತಲೇ ।
ಕೇವಲಂ ಗಹ್ವರೀಭೂತೇ ಮಹಾಭೂತವಿಪರ್ಯಯೇ ॥೧೧॥

ವಿಭುರ್ಮಹಾಭೂತಪತಿರ್ಮಹಾತೇಜಾ ಮಹಾಕೃತಿಃ ।
ಆಸ್ತೇ ಸುರವರಶ್ರೇಷ್ಠೋ ವಿಧಿಮಾಸ್ಥಾಯ ಯೋಗವಿತ್ ॥೧೨॥

ಶೃಣುಯಾಂ ಪರಯಾ ಭಕ್ತ್ಯಾ ಬ್ರಹ್ಮನ್ನೇತದಶೇಷತಃ ।
ವಕ್ತುಮರ್ಹಸಿ ಧರ್ಮಿಷ್ಠ ಯಶೋ ನಾರಾಯಣಾತ್ಮಕಂ ॥೧೩॥
ಶ್ರದ್ಧಯಾ ಚೋಪವಿಷ್ಟಾನಾಂ ಭಗವನ್ ವಕ್ತುಮರ್ಹಸಿ ॥೧೪॥

॥ ಮತ್ಸ್ಯ ಉವಾಚ ॥

ನಾರಾಯಣಸ್ಯ ಯಶಸಃ ಶ್ರವಣೇ ಯಾ ತವ ಸ್ಪೃಹಾ ।
ತದ್ವಂಶ್ಯಾನ್ವಯಭೂತಸ್ಯ ನ್ಯಾಯ್ಯಂ ರವಿಕುಲರ್ಷಭ ॥೧೫॥

---

ಉರಗರು ಮತ್ತು ರಾಕ್ಷಸರು ದಗ್ಧರಾಗಿರಲು, ಅಗ್ನಿವಾಯುಗಳೂ ಭೂಮ್ಯಾಕಾಶಗಳೂ ಅಗೋಚರವಾಗಿರಲು, ಎಲ್ಲೆಲ್ಲಿಯೂ ಗುಹೆಯಂತೆ ಕಗ್ಗತ್ತಲು ತುಂಬಿರಲು, ಮಹಾಭೂತಗಳು ತಮ್ಮ ಸಮಸ್ಥಿತಿಯನ್ನು ತೊರೆದಿರಲು, ಸರ್ವವ್ಯಾಪಕನೂ, ಭೂತಾಧಿಪತಿಯೂ, ಮಹಾತೇಜಸ್ವಿಯೂ, ಮಹಾಕಾರನೂ, ದೇವಾಧಿದೇವನೂ ಯೋಗೀಶ್ವರನೂ ಆದ ಭಗವಂತನು ಹೇಗೆ ಲೋಕರಕ್ಷಣೆಯ ಸಂಕಲ್ಪವಿಧಿಯಲ್ಲಿ ತೊಡಗಿರುವನು ?

೧೩-೧೪. ಪರಮಾತ್ಮಾ, ಇದೆಲ್ಲವನ್ನೂ ಬಹುಭಕ್ತಿಯಿಂದ ಕೇಳುವೆನು. ಎಲೈ ಧರ್ಮಿಷ್ಠನೇ, ಶ್ರೀಮನ್ನಾರಾಯಣನ ಯಶೋರೂಪವಾದ ಈ ವೃತ್ತಾಂತವನ್ನು ಹೇಳು. ಭಗವಂತಾ, ಶ್ರದ್ಧೆಯಿಂದ ಕೇಳಬೇಕೆಂದಿರುವವರಿಗೆ ಇದನ್ನೆಲ್ಲ ದಯವಿಟ್ಟು ತಿಳಿಸು.

೧೫. ಮತ್ಸ್ಯರೂಪಿಯಾದ ಭಗವಂತನು ಹೇಳಿದನು.—ಸೂರ್ಯವಂಶದಲ್ಲಿ ಶ್ರೇಷ್ಠನಾದ ಎಲೈ ಮನುಚಕ್ರವರ್ತಿಯೇ, ನಾರಾಯಣನ ಕೀರ್ತಿಯನ್ನು ಕೇಳಬೇಕೆಂದು ನಿನಗೆ ಅಭಿಲಾಷೆಯಿದೆ. ಅವನ ಅವತಾರರೂಪರಾದ ರಾಮಾದಿಗಳ ಮೂಲಪುರುಷನೆನಿಸಿದ ನಿನಗೆ ಇದು ನ್ಯಾಯವೇ ಸರಿ.

ಶೃಣುಷ್ವಾದಿಪುರಾಣೇಷು ವೇದೇಭ್ಯಶ್ಚ ಯಥಾ ಶ್ರುತಂ ।
ಬ್ರಾಹ್ಮಣಾನಾಂ ಚ ವದತಾಂ ಶ್ರುತ್ವಾ ವೈ ಸುಮಹಾತ್ಮನಾಂ ॥೧೬॥

ಯಥಾ ಚ ತಪಸಾ ದೃಷ್ಟ್ವಾ ಬೃಹಸ್ಪತಿಸಮದ್ಯುತಿಃ ।
ಪರಾಶರಸುತಃ ಶ್ರೀವರ್ಮಾ ಗುರುರ್ದ್ವೈಪಾಯನೋಽಬ್ರವೀತ್ ॥೧೭॥

ತತ್ತೇಽಹಂ ಕಥಯಿಷ್ಯಾಮಿ ಯಥಾಶಕ್ತಿ ಯಥಾಶ್ರುತಿ ।
ಯದ್ವಿಜ್ಞಾತುಂ ಮಯಾ ಶಕ್ಯಮೃಷಿಮಾತ್ರೇಣ ಸತ್ತಮಾಃ ॥೧೮॥

ಕಃ ಸಮುತ್ಸಹತೇ ಜ್ಞಾತುಂ ಪರಂ ನಾರಾಯಣಾತ್ಮಕಂ ।
ವಿಶ್ವಾಯನಶ್ಚ ಯದ್ಬ್ರಹ್ಮಾ ನ ವೇದಯತಿ ತತ್ವತಃ ॥೧೯॥

ತತ್ಕರ್ಮ ವಿಶ್ವವೇದಾನಾಂ ತದ್ರಹಸ್ಯಂ ಮಹರ್ಷೀಣಾಂ ।
ತಮಿಜ್ಯಂ ಸರ್ವಯಜ್ಞಾನಾಂ ತತ್ತತ್ವಂ ಸರ್ವದರ್ಶಿನಾಂ ॥೨೦॥

---

೧೬-೧೮. ಕಾಂತಿಯಲ್ಲಿ ಬೃಹಸ್ಪತಿಗೆ ಸಮಾನನೂ, ಪರಾಶರಮುನಿಯ ಪುತ್ರನೂ, ಪೂಜ್ಯನೂ, ಅತಿ ತೇಜಸ್ವಿಯೂ ಆದ ದ್ವೈಪಾಯನ ಮಹರ್ಷಿಯು ವೇದಗಳಲ್ಲಿ ಹೇಳಿರುವಂತೆ ಮಹಾಮಹಿಮರಾದ ಬ್ರಾಹ್ಮಣರಿಂದ ಕೇಳಿ ತಿಳಿದು, ತನ್ನ ತಪಸ್ಸಿನಿಂದ ತಾನೂ ಅರಿತು ಈ ವಿಷಯಗಳೆಲ್ಲವನ್ನೂ ತಾನು ರಚಿಸಿದ ಪುರಾಣಗಳಲ್ಲಿ ಹೇಳಿರುವನು. ಓ ಬ್ರಾಹ್ಮಣೋತ್ತಮರೇ, ಋಷಿಮಾತ್ರದವನಾದ ನನ್ನಿಂದ ಎಷ್ಟುಮಟ್ಟಿಗೆ ತಿಳಿದುಕೊಳ್ಳಲು ಸಾಧ್ಯವೋ ಅಷ್ಟುಮಟ್ಟಿಗೆ ನಾನು ಕೇಳಿ ತಿಳಿದುಕೊಂಡಿರುವೆನು. ಅದನ್ನು ಈಗ ನನ್ನ ಶಕ್ತ್ಯನುಸಾರವಾಗಿ ಹೇಳುವೆನು.

೧೯. ನಾರಾಯಣರೂಪವಾದ ಆ ಪರತತ್ವವನ್ನು ಸಂಪೂರ್ಣವಾಗಿ ಅರಿಯಲು ಯಾರಿಗೆ ಸಾಮರ್ಥ್ಯವಿದೆ? ವಿಶ್ವವ್ಯಾಪಕನೆನಿಸಿದ ಬ್ರಹ್ಮನೂ ಸಹ ಅದನ್ನು ಇಷ್ಟೇ ಸರಿಯೆಂದು ತಿಳಿಯಲಾರನು.

೨೦. ಆ ನಾರಾಯಣನೇ ಎಲ್ಲ ವೇದಗಳಿಂದಲೂ ಪ್ರತಿಪಾದ್ಯವಾದ ಕರ್ಮಸ್ವರೂಪ, ಮಹರ್ಷಿಗಳಿಗೆ ಗೋಚರವಾದ ರಹಸ್ಯ, ಸಕಲ ಯಜ್ಞಗಳ ಆರಾಧ್ಯದೈವ, ಎಲ್ಲ ಜ್ಞಾನಿಗಳೂ ಅರಿಯಬೇಕಾದ ದಿವ್ಯತತ್ವ, ಅಧ್ಯಾತ್ಮವಿದ್ಯೆಯನ್ನು ಬಲ್ಲವರು ಧ್ಯಾನಮಾಡಬೇಕಾದ ಪರವಸ್ತು, ಅಕಾರ್ಯನಿರತರಿಗೆ ನರಕವನ್ನೀವ ಧರ್ಮಮೂರ್ತಿ.

ಅಧಿದೈವಂ ಚ ಯದ್ದೈವಮಧಿಯಜ್ಞಂ ಸುಸಂಜ್ಞಿತಂ।
ತದ್ಭೂತಮಧಿಭೂತಂ ಚ ತತ್ಪರಂ ಪರಮರ್ಷಿಣಾಂ ॥೨೧॥

ಸ ಯಜ್ಞೋ ವೇದನಿರ್ದಿಷ್ಟಸ್ತತ್ತಪಃ ಕವಯೋ ವಿದುಃ।
ಯಃ ಕರ್ತಾ ಕಾರಕೋ ಬುದ್ಧಿರ್ಮನಃಕ್ಷೇತ್ರಜ್ಞ ಏವ ಚ ॥೨೨॥

ಪ್ರಣವಃ ಪುರುಷಃ ಶಾಸ್ತಾ ಏಕಶ್ಚೇತಿ ವಿಭಾವ್ಯತೇ।
ಪ್ರಾಣಃ ಪಂಚವಿಧಶ್ಚೈವ ಧ್ರುವ ಅಕ್ಷರ ಏವ ಚ ॥೨೩॥

ಕಾಲಃ ಪಾಕಶ್ಚ ಪಕ್ತಾ ಚ ದ್ರಷ್ಟಾ ಸ್ವಾಧ್ಯಾಯ ಏವ ಚ।
ಉಚ್ಯತೇ ವಿವಿಧೈರ್ದೇವಃ ಸ ಏವಾಯಂ ನ ತತ್ಪರಂ ॥೨೪॥

ಸ ಏವ ಭಗವಾನ್ ಸರ್ವಂ ಕರೋತಿ ವಿಕರೋತಿ ಚ।
ಸೋಽಸ್ಮಾನ್ ಕಾರಯತೇ ಸರ್ವಾನ್ ಸೋಽತ್ಯೇತಿ ವ್ಯಾಕುಲೀಕೃತಾನ್ ॥೨೫॥

---

೨೧. ಭೋಕ್ತೃವೆನಿಸಿದ ಪುರುಷನೂ ಅವನೇ. ಯಜ್ಞಗಳಿಂದ ಆರಾಧಿಸಲ್ಪಡುವ ಕಾರಣ ಅವನನ್ನೇ ಅಧಿಯಜ್ಞನೆನ್ನುವರು. ಪಂಚಭೂತಗಳೂ ಅವುಗಳ ಪರಿಣಾಮ ವಿಶೇಷಗಳೆನಿಸಿದ ಶಬ್ದಾದಿ ವಿಷಯಗಳೂ ಅವನೇ. ಪರಮಯೋಗಿಗಳ ಧ್ಯಾನಗೋಚರವಾದ ಪರತತ್ವವೂ ಅವನೇ.

೨೨-೨೪. ಆ ನಾರಾಯಣನನ್ನೇ ವೇದಗಳಲ್ಲಿ ಹೇಳಿರುವ ಯಜ್ಞವೆಂದೂ, ತಪಸ್ಸೆಂದೂ ಜ್ಞಾನಿಗಳು ಹೇಳುವರು. ಕರ್ತ, ಪ್ರೇರಕ, ಬುದ್ಧಿ, ಮನಸ್ಸು, ಆತ್ಮ ಇವೆಲ್ಲವೂ ಅವನೇ. ಪ್ರಣವವೆಂದೂ, ಪುರುಷನೆಂದೂ, ಶಾಸಕನೆಂದೂ, ಅವನೊಬ್ಬನನ್ನೇ ತಿಳಿಯುವರು. ಪಂಚಪ್ರಾಣಗಳೂ ಅವನೇ. ಶಾಶ್ವತ, ಅಕ್ಷಯ, ಕಾಲ, ಪಾಕ, ಪಾಕಮಾಡುವವ, ನೋಡುವವ, ವೇದ ಇತ್ಯಾದಿ ವಿವಿಧ ಭಾವಗಳಿಂದ ಆ ದೇವನೊಬ್ಬನನ್ನೇ ಹೇಳುವರು. ಅವನಲ್ಲದೆ ಬೇರೆ ವಸ್ತುವಿಲ್ಲ.

೨೫. ಆ ಭಗವಂತನೇ ಎಲ್ಲವನ್ನೂ ನಿರ್ಮಿಸುತ್ತಾನೆ. ಮತ್ತು ಅದನ್ನು ವ್ಯತ್ಯಾಸಗೊಳಿಸುತ್ತಾನೆ. ನಮ್ಮೆಲ್ಲರಿಂದಲೂ ಕೆಲಸಮಾಡಿಸುವವನೂ ಅವನೇ. ಎಲ್ಲರೂ ವ್ಯಾಕುಲತೆಗೆ ಒಳಗಾದರೂ ಅವನು ಮಾತ್ರ ಅದರ ಸಂಬಂಧವಿಲ್ಲದೆ ಪ್ರತ್ಯೇಕವಾಗಿರುತ್ತಾನೆ.

ಯಜಾಮಹೇ ತಮೇವಾದ್ಯಂ ತಮೇವೇಚ್ಛಾಮ ನಿರ್ವೃತಾಃ ।
ಯೋ ವಕ್ತಾ ಯಚ್ಚ ವಕ್ತವ್ಯಂ ಯಚ್ಚಾಹಂ ತದ್ಬ್ರವೀಮಿ ವಃ ॥೨೬॥

ಶ್ರೂಯತೇ ಯಚ್ಚ ವೈ ಶ್ರಾವ್ಯಂ ಯಚ್ಚಾನ್ಯತ್ಪರಿಜಲ್ಪ್ಯತೇ ।
ಯಾಃ ಕಥಾಶ್ಚೈವ ವರ್ತಂತೇ ಶ್ರುತಯೋ ವಾಥ ತತ್ಪರಾಃ ।
ವಿಶ್ವಂ ವಿಶ್ವಪತಿರ್ಯಶ್ಚ ಸ ತು ನಾರಾಯಣಃ ಸ್ಮೃತಃ ॥೨೭॥

ಯತ್ಸತ್ಯಂ ಯದಮೃತಮಕ್ಷರಂ ಪರಂ ಯತ್
ಯದ್ಭೂತಂ ಪರಮಮಿದಂ ಚ ಯದ್ಭವಿಷ್ಯಂ ।
ಯತ್ಕಿಂಚಿಚ್ಚರಮಚರಂ ಯದಸ್ತಿ ಚಾನ್ಯತ್
ತತ್ಸರ್ವಂ ಪುರುಷವರಃ ಪ್ರಭುಃ ಪುರಾಣಃ ॥೨೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವಪ್ರಾದುರ್ಭಾವೇ
ಚತುಃಷಷ್ಟ್ಯಧಿಕಶತತಮೋಽಧ್ಯಾಯಃ

---

೨೬. ಆದಿಪುರುಷನಾದ ಆ ಭಗವಂತನನ್ನೇ ನಾವು ಪೂಜಿಸುತ್ತೇವೆ. ಅವನಿಂದಲೇ ನಾವು ಸುಖಿಗಳಾಗಬೇಕೆಂದು ಬಯಸುತ್ತೇವೆ. ಹೇಳತಕ್ಕವನು, ಹೇಳಬೇಕಾದ ವಿಷಯ, ನಾನು, ಎಲ್ಲವೂ ಅವನೇ; ಋಷಿಗಳಿರಾ, ನಿಮಗೆ ಅದನ್ನು ಹೇಳುತ್ತೇನೆ.

೨೭. ಕಿವಿಯಲ್ಲಿ ಕೇಳುವ ಇಂಪಾದ ಗಾನವೋ, ಯಾವುದಾದರೂ ಹರಟೆಯೋ, ಕಥೆಗಳೋ ಅಥವಾ ಅವನ ವಿಷಯವನ್ನೇ ಹೇಳುವ ವೇದಗಳೋ, ಯಾವುದೇ ಇರಲಿ ಅದು ವಿಶ್ವವೂ, ವಿಶ್ವದ ಅಧಿಪತಿಯೂ ಆದ ಆ ನಾರಾಯಣನ ಸ್ವರೂಪವೇ ಎಂದರಿಯಬೇಕು.

೨೮. ಯಾವುದು ಸತ್ಯವೋ, ಯಾವುದು ಅಮೃತವೋ, ಯಾವುದು ಶ್ರೇಷ್ಠವೋ, ಯಾವುದು ಹಿಂದೆ ಇದ್ದಿತೋ, ಯಾವುದು ಈಗ ಕಾಣುತ್ತಿದೆಯೋ, ಮುಂದೆ ಯಾವುದು ಹುಟ್ಟುತ್ತದೆಯೋ, ಯಾವುದು ಚಲಿಸುತ್ತದೆಯೋ, ಯಾವುದು ಸಂಚರಿಸುವುದಿಲ್ಲವೋ, ಇಷ್ಟೇ ಅಲ್ಲದೆ ಮತ್ತಾವುದಿದೆಯೋ ಅದೆಲ್ಲವೂ ಸರ್ವೇಶ್ವರನೂ ಪುರಾಣಪುರುಷನೂ ಆದ ನಾರಾಯಣನಿಂದ ವ್ಯಾಪ್ತವಾದುದು.

ಅಧ್ಯಾಯ ೧೬೪

## ಅಧ್ಯಾಯದ ಸಾರಾಂಶ

ಪಾದ್ಮಕಲ್ಪವೃತ್ತಾಂತವು ಈ ಅಧ್ಯಾಯದಲ್ಲಿ ಪ್ರಾರಂಭವಾಗುತ್ತದೆ.

ಪಾದ್ಮಕಲ್ಪದಲ್ಲಿ ನಾರಾಯಣನ ನಾಭಿಯಲ್ಲಿ ಪದ್ಮವು ಹುಟ್ಟಿದ ಬಗೆಯನ್ನೂ ಅದರಿಂದ ಜಗತ್ತು ಜನಿಸಿದ ರೀತಿಯನ್ನೂ ಮನುಚಕ್ರವರ್ತಿಯು ಪ್ರಶ್ನಿಸಿದನು. ಮತ್ಸ್ಯರೂಪಿಯಾದ ಭಗವಂತನು ಅದಕ್ಕೆ ಉತ್ತರಕೊಡಲು ಪ್ರಾರಂಭಿಸಿ, ನಾರಾಯಣನ ಮಹಿಮೆಯನ್ನು ತಿಳಿಸಿ, ಅವನು ಚರಾಚರಾತ್ಮಕವಾದ ಸಕಲ ಜಗನ್ಮಯನೆಂದು ವಿವರಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವಪ್ರಕರಣದಲ್ಲಿ
ನೂರ ಅರವತ್ತನಾಲ್ಕನೆಯ ಅಧ್ಯಾಯವು ಮುಗಿದುದು.



## ಅಥ ಪಂಚಷಷ್ಟ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಚತ್ವಾರ್ಯಾಹುಃ ಸಹಸ್ರಾಣಿ ವರ್ಷಾಣಾಂ ತು ಕೃತಂ ಯುಗಂ ।
ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ರವಿನಂದನ || ೧ ||

ಯತ್ರ ಧರ್ಮಶ್ಚತುಷ್ಪಾದಸ್ತ್ವಧರ್ಮಃ ಪಾದವಿಗ್ರಹಃ ।
ಸ್ವಧರ್ಮನಿರತಾಃ ಸಂತೋ ಜಾಯಂತೇ ಯತ್ರ ಮಾನವಾಃ || ೨ ||

ವಿಪ್ರಾಃ ಸ್ಥಿತಾ ಧರ್ಮಪರಾ ರಾಜವೃತ್ತೌ ಸ್ಥಿತಾ ನೃಪಾಃ ।
ಕೃಷ್ಯಾಮಭಿರತಾ ವೈಶ್ಯಾಃ ಶೂದ್ರಾಃ ಶುಶ್ರೂಷವಃ ಸ್ಥಿತಾಃ || ೩ ||

ತದಾ ಸತ್ಯಂ ಚ ಶೌಚಂ ಚ ಧರ್ಮಶ್ಚೈವ ವಿವರ್ಧತೇ ।
ಸದ್ಭಿರಾಚರಿತಂ ಕರ್ಮ ಕ್ರಿಯತೇ ಖ್ಯಾಯತೇ ಚ ವೈ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸೂರ್ಯ ಪುತ್ರನಾದ ಎಲೈ ಮನುಚಕ್ರವರ್ತಿಯೇ, ಕೃತಯುಗದ ಪ್ರಮಾಣವು ನಾಲ್ಕು ಸಾವಿರ ವರ್ಷಗಳು. ಅದರ ಸಂಧ್ಯಾ ಮತ್ತು ಸಂಧ್ಯಾಂಶ ಕಾಲಗಳು ಒಟ್ಟು ಸೇರಿ ಎಂಟುನೂರು ವರ್ಷಗಳಾಗುವುವು.

೨. ಆ ಯುಗದಲ್ಲಿ ನಾಲ್ಕು ಪಾಲು ಧರ್ಮವೂ, ಒಂದು ಪಾಲು ಅಧರ್ಮವೂ ಇರುವುವು. ಆಗ ಹುಟ್ಟುವ ಮನುಷ್ಯರು ಸ್ವಧರ್ಮನಿರತರೂ, ಸತ್ಪುರುಷರೂ ಆಗುವರು.

೩. ಬ್ರಾಹ್ಮಣರು ಧರ್ಮದಲ್ಲಿ ನಿರತರಾಗಿರುವರು. ಕ್ಷತ್ರಿಯರು ರಾಜ್ಯ ರಕ್ಷಣೆಯಲ್ಲಿ ಶ್ರದ್ಧೆಯನ್ನಿಟ್ಟಿರುವರು. ವೈಶ್ಯರು ಕೃಷಿಯಲ್ಲಿ ಆಸಕ್ತರಾಗಿರುವರು. ಶೂದ್ರರು ಸೇವಾತತ್ಪರರಾಗಿರುವರು.

೪. ಆಗ ಸತ್ಯ, ಪಾರಿಶುಧ್ಯ, ಧರ್ಮ ಇವೆಲ್ಲವೂ ಅಭಿವೃದ್ಧಿಯಾಗುತ್ತವೆ. ಸತ್ಪುರುಷರು ಆಚರಿಸುವ ಕರ್ಮವನ್ನು ಉಳಿದವರೂ ಮಾಡುತ್ತಾರೆ ಮತ್ತು ಶ್ಲಾಘಿಸುತ್ತಾರೆ.

ಏತತ್ಕಾರ್ತಯುಗಂ ವೃತ್ತಂ ಸರ್ವೇಷಾಮಪಿ ಪಾರ್ಥಿವ ।
ಪ್ರಾಣಿನಾಂ ಧರ್ಮಸಂಗಾನಾಮಪಿ ವೈ ನೀಚಜನ್ಮನಾಂ ॥ ೫ ॥

ತ್ರೀಣಿ ವರ್ಷಸಹಸ್ರಾಣಿ ತ್ರೇತಾಯುಗಮಿಹೋಚ್ಯತೇ ।
ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ಪರಿಕೀರ್ತ್ಯತೇ ॥ ೬ ॥

ದ್ವಾಭ್ಯಾಮಧರ್ಮಃ ಪಾದಾಭ್ಯಾಂ ತ್ರಿಭಿರ್ಧರ್ಮೋ ವ್ಯವಸ್ಥಿತಃ ।
ಯತ್ರ ಸತ್ಯಂ ಚ ಸತ್ತ್ವಂ ಚ ತ್ರೇತಾಧರ್ಮೋ ವಿಧೀಯತೇ ॥ ೭ ॥

ತ್ರೇತಾಯಾಂ ವಿಕೃತಿಂ ಯಾಂತಿ ವರ್ಣಾಸ್ತ್ವೇತೇ ನ ಸಂಶಯಃ ।
ಚಾತುರ್ವರ್ಣ್ಯಸ್ಯ ವೈಕೃತ್ಯಾದ್ಯಾಂತಿ ದೌರ್ಬಲ್ಯಮಾಶ್ರಮಾಃ ॥ ೮ ॥

ಏಷಾ ತ್ರೇತಾಯುಗಗತಿರ್ವಿಚಿತ್ರಾ ದೇವನಿರ್ಮಿತಾ ।
ದ್ವಾಪರಸ್ಯ ತು ಯಾ ಚೇಷ್ಟಾ ತಾಮಪಿ ಶ್ರೋತುಮರ್ಹಸಿ ॥ ೯ ॥

---

೫. ಓ ರಾಜಾ, ಕೃತಯುಗದ ಈ ಸ್ವಭಾವವು ಎಲ್ಲಪ್ರಾಣಿಗಳಿಗೂ ಅನ್ವಯಿಸುವುದು. ಅವು ಧರ್ಮವನ್ನು ನಡೆಸಬಲ್ಲವುಗಳಾಗಲಿ, ನೀಚಜನ್ಮದಲ್ಲಿ ಹುಟ್ಟಿದವುಗಳಾಗಲಿ ವ್ಯತ್ಯಾಸವೇನೂ ಆಗದು.

೬. ತ್ರೇತಾಯುಗದ ಪರಿಮಿತಿ ಮೂರುಸಾವಿರ ವರ್ಷ. ಅದರ ಸಂಧ್ಯಾಕಾಲ ಮತ್ತು ಸಂಧ್ಯಾಂಶಗಳು ಸೇರಿ ಆರುನೂರು ವರ್ಷ ಪರಿಮಾಣವುಳ್ಳವಾಗಿರುವುವು.

೭. ತ್ರೇತಾಯುಗದಲ್ಲಿ ಅಧರ್ಮ ಎರಡುಪಾಲೂ, ಧರ್ಮವು ಮೂರು ಪಾಲೂ ಇರುವುವು. ಸತ್ಯವೂ ಸತ್ತ್ವವೂ ಈ ಯುಗದ ಧರ್ಮಗಳು.

೮. ಬ್ರಾಹ್ಮಣಾದಿ ವರ್ಣಧರ್ಮಗಳು ತ್ರೇತಾಯುಗದಲ್ಲಿ ವ್ಯತ್ಯಾಸವನ್ನು ಹೊಂದುವುವು. ಹೀಗೆ ಚಾತುರ್ವರ್ಣ್ಯದ ವ್ಯತ್ಯಾಸದಿಂದ ಬ್ರಹ್ಮಚರ್ಯಾದ್ಯಾಶ್ರಮ ಧರ್ಮಗಳು ದುರ್ಬಲವಾಗುವುವು.

೯. ಇದೇ ದೈವನಿರ್ಮಿತವಾದ ತ್ರೇತಾಯುಗದ ವಿಚಿತ್ರಗತಿ. ಇನ್ನು ದ್ವಾಪರ ಯುಗದ ಧರ್ಮವನ್ನು ಹೇಳುವೆನು ಕೇಳು.

ದ್ವಾಪರಂ ದ್ವೇ ಸಹಸ್ರೇ ತು ವರ್ಷಾಣಾಂ ರವಿನಂದನ ।
ತಸ್ಯ ತಾವಚ್ಛತೀ ಸಂಧ್ಯಾ ದ್ವಿಗುಣಾ ಯುಗಮುಚ್ಯತೇ ॥೧೦॥

ತತ್ರ ಚಾರ್ಥಪರಾಃ ಸರ್ವೇ ಪ್ರಾಣಿನೋ ರಜಸಾ ಹತಾಃ ।
ಸರ್ವೇ ನೈಷ್ಕೃತಿಕಾಃ ಕ್ಷುದ್ರಾ ಜಾಯಂತೇ ರವಿನಂದನ ॥೧೧॥

ದ್ವಾಭ್ಯಾಂ ಧರ್ಮಃ ಸ್ಥಿತಃ ಪದ್ಭ್ಯಾಮಧರ್ಮಸ್ತ್ರಿಭಿರುತ್ಥಿತಃ ।
ವಿಪರ್ಯಯಾಚ್ಛನೈರ್ಧರ್ಮಃ ಕ್ಷಯಮೇತಿ ಕಲೌ ಯುಗೇ ॥೧೨॥

ಬ್ರಾಹ್ಮಣ್ಯಭಾವಸ್ಯ ತತಸ್ತಥೌತ್ಸುಕ್ಯಂ ವಿಶೀರ್ಯತೇ ।
ವ್ರತೋಪವಾಸಾಸ್ತ್ಯಜ್ಯಂತೇ ದ್ವಾಪರೇ ಯುಗಪರ್ಯಯೇ ॥೧೩॥

ತಥಾ ವರ್ಷಸಹಸ್ರಂ ತು ವರ್ಷಾಣಾಂ ದ್ವೇ ಶತೇ ಅಪಿ ।
ಸಂಧ್ಯಾಯಾ ಸಹ ಸಂಖ್ಯಾತಂ ಕ್ರೂರಂ ಕಲಿಯುಗಂ ಸ್ಮೃತಂ ॥೧೪॥

---

೧೦. ಓ ವೈವಸ್ವತಮನೂ, ದ್ವಾಪರಯುಗವು ಎರಡುಸಾವಿರ ವರ್ಷಗಳ ಕಾಲ ಇರುವುದು. ಆದರ ಸಂಧ್ಯೆಯು ಸಂಧ್ಯಾಂಶ ಸಹಿತವಾಗಿ ನಾಲ್ಕುನೂರು ವರ್ಷಗಳು.

೧೧. ಆ ಯುಗದಲ್ಲಿ ಎಲ್ಲರಿಗೂ ಹಣದ ಆಸೆ ಹೆಚ್ಚು. ಪ್ರಾಣಿಗಳು ರಜೋಗುಣದಿಂದ ತುಂಬಿರುವುವು. ಎಲ್ಲರೂ ಪ್ರತಿಫಲಾಪೇಕ್ಷೆಯಿಂದ ಕಾರ್ಯಮಾಡತಕ್ಕವರೂ ಕ್ಷುದ್ರರೂ ಆಗುವರು.

೧೨. ಆಗ ಧರ್ಮವು ಎರಡುಪಾಲೂ ಅಧರ್ಮವು ಮೂರುಪಾಲೂ ಇರುವುವು. ಈ ವ್ಯತ್ಯಾಸದಿಂದ ಬರಬರುತ್ತ ಕಲಿಯುಗದಲ್ಲಿ ಧರ್ಮವು ಕ್ಷಯಿಸುವುದು.

೧೩. ದ್ವಾಪರಯುಗವು ಮುಗಿಯುವ ವೇಳೆಗೆ ಬ್ರಾಹ್ಮಣರಿಗೆ ಕರ್ಮದಲ್ಲಿ ಆಸಕ್ತಿ ಹೋಗುವುದು. ವ್ರತ, ಉಪವಾಸ ಮುಂತಾದುವುಗಳನ್ನು ಜನರು ಬಿಡುವರು.

೧೪. ಕ್ರೂರವಾದ ಕಲಿಯುಗದ ಪ್ರಮಾಣವು ಸಂಧ್ಯಾ ಮತ್ತು ಸಂಧ್ಯಾಂಶ ಕಾಲಗಳೊಡನೆ ಸೇರಿ ಒಂದುಸಾವಿರದ ಎರಡುನೂರು ವರ್ಷಗಳೆಂದು ಲೆಕ್ಕ ಹಾಕಿರುವರು.

ಯತ್ರಾಧರ್ಮಶ್ಚತುಷ್ಪಾದಃ ಸ್ಯಾದ್ಧರ್ಮಃ ಪಾದವಿಗ್ರಹಃ ।
ಕಾಮಿನಸ್ತಮಸಾಚ್ಛನ್ನಾ ಜಾಯಂತೇ ತತ್ರ ಮಾನವಾಃ ॥೧೫॥

ನೈವಾತಿಸಾತ್ವಿಕಃ ಕಶ್ಚಿನ್ನ ಸಾಧುರ್ನ ಚ ಸತ್ಯವಾಕ್ ।
ನಾಸ್ತಿಕಾ ಬ್ರಹ್ಮಭಕ್ತಾ ವಾ ಜಾಯಂತೇ ತತ್ರ ಮಾನವಾಃ ॥೧೬॥

ಅಹಂಕಾರಗೃಹೀತಾಶ್ಚ ಪ್ರಕ್ಷೀಣಸ್ನೇಹಬಂಧನಾಃ ।
ವಿಪ್ರಾಃ ಶೂದ್ರಸಮಾಚಾರಾಃ ಸಂತಿ ಸರ್ವೇ ಕಲೌ ಯುಗೇ ॥೧೭॥

ಆಶ್ರಮಾಣಾಂ ವಿಪರ್ಯಾಸಃ ಕಲೌ ಸಂಪರಿವರ್ತತೇ ।
ವರ್ಣಾನಾಂ ಚೈವ ಸಂದೇಹೋ ಯುಗಾಂತೇ ರವಿನಂದನ ॥೧೮॥

ವಿದ್ಯಾದ್ದ್ವಾದಶಸಾಹಸ್ರೀಂ ಯುಗಾಖ್ಯಾಂ ಪೂರ್ವನಿರ್ಮಿತಾಂ ।
ಏವಂ ಸಹಸ್ರಪರ್ಯಂತಂ ತದಹರ್ಬ್ರಾಹ್ಮಮುಚ್ಯತೇ ॥೧೯॥

---

೧೫. ಈ ಯುಗದಲ್ಲಿ ಅಧರ್ಮವು ನಾಲ್ಕು ಪಾಲಿರುವುದು. ಧರ್ಮವು ಒಂದುಪಾಲು ಮಾತ್ರ ನಿಲ್ಲುವುದು. ಜನರು ಕಾಮಿಗಳೂ ತಮೋಗುಣಭರಿತರೂ ಆಗುವರು.

೧೬. ಆ ಯುಗದಲ್ಲಿ ಸಹಜವಾಗಿ ಸಾತ್ವಿಕನೂ, ಸಾಧುವೂ ಸತ್ಯವಂತನೂ ಒಬ್ಬನೂ ಇರುವುದಿಲ್ಲ. ಮನುಷ್ಯರು ನಾಸ್ತಿಕರೂ ಭಕ್ತಿರಹಿತರೂ ಆಗುವರು.

೧೭. ಕಲಿಯುಗದಲ್ಲಿ ಮನುಷ್ಯರು ಅಹಂಕಾರದಿಂದ ಆವೃತರಾಗುವರು. ಸ್ನೇಹಭಾವವು ಕ್ಷೀಣವಾಗುವುದು. ಬ್ರಾಹ್ಮಣರೆಲ್ಲರೂ ಶೂದ್ರರಂತೆ ನಡೆದುಕೊಳ್ಳುವರು.

೧೮. ಕಲಿಯುಗದಲ್ಲಿ ಆಶ್ರಮ ಧರ್ಮಗಳೆಲ್ಲ ವ್ಯತ್ಯಾಸವಾಗುವುವು. ಓ ಮನುಚಕ್ರವರ್ತಿ, ಯುಗಾಂತದ ವೇಳೆಗೆ ಬ್ರಾಹ್ಮಣಾದಿ ವರ್ಣಗಳು ಉಳಿಯುವುವೋ ಇಲ್ಲವೋ ಹೇಳುವುದಕ್ಕೆ ಆಗುವುದಿಲ್ಲ.

೧೯. ದೇವಮಾನದ ಈ ಹನ್ನೆರಡುಸಾವಿರ ವರ್ಷಗಳ ಅವಧಿಯನ್ನು ಒಂದು ಚತುರ್ಯುಗವೆಂದು ಪೂರ್ವಿಕರು ಗೊತ್ತುಮಾಡಿರುವರು. ಹೀಗೆ ಸಾವಿರ ಚತುರ್ಯುಗಗಳಾದರೆ ಬ್ರಹ್ಮನಿಗೆ ಒಂದು ಹಗಲೆಂದು ಹೇಳುವರು.

ತತೋಽಹನಿ ಗತೇ ತಸ್ಮಿನ್ಸರ್ವೇಷಾಮೇವ ಜೀವಿನಾಂ ।
ಶರೀರನಿರ್ವೃತಿಂ ದೃಷ್ಟ್ವಾ ಲೋಕಸಂಹಾರಬುದ್ಧಿತಃ ॥೨೦॥

ದೇವತಾನಾಂ ಚ ಸರ್ವಾಸಾಂ ಬ್ರಹ್ಮಾದೀನಾಂ ಮಹೀಪತೇ ।
ದೈತ್ಯಾನಾಂ ದಾನವಾನಾಂ ಚ ಯಕ್ಷರಾಕ್ಷಸಪಕ್ಷಿಣಾಂ ॥೨೧॥

ಗಂಧರ್ವಾಣಾಮಪ್ಸರಸಾಂ ಭುಜಂಗಾನಾಂ ಚ ಪಾರ್ಥಿವ ।
ಪರ್ವತಾನಾಂ ನದೀನಾಂ ಚ ಪಶೂನಾಂ ಚೈವ ಸತ್ತಮ ॥೨೨॥

ತಿರ್ಯಗ್ಯೋನಿಗತಾನಾಂ ಚ ಸತ್ವಾನಾಂ ಕ್ರಿಮಿಣಾಂ ತಥಾ ।
ಮಹಾಭೂತಪತಿಃ ಪಂಚ ಹೃತ್ವಾ ಭೂತಾನಿ ಭೂತಕೃತ್ ।
ಜಗತ್ಸಂಹರಣಾರ್ಥಾಯ ಕುರುತೇ ವೈಶಸಂ ಮಹತ್ ॥೨೩॥

ಭೂತ್ವಾ ಸೂರ್ಯಶ್ಚಕ್ಷುಷೀ ಚಾದದಾನೋ
ಭೂತ್ವಾ ವಾಯುಃ ಪ್ರಾಣಿನಾಂ ಪ್ರಾಣಜಾಲಂ ।
ಭೂತ್ವಾ ವಹ್ನಿರ್ನಿರ್ದಹನ್ಸರ್ವಲೋಕಾನ್
ಭೂತ್ವಾ ಮೇಘೋ ಭೂಯ ಉಗ್ರೋಽಪ್ಯವರ್ಷತ್ ॥೨೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವಪ್ರಾದುರ್ಭಾವೇ
ಪಂಚಷಷ್ಟ್ಯಧಿಕಶತತಮೋಽಧ್ಯಾಯಃ

---

೨೦-೨೩. ಆ ಹಗಲು ಕಳೆದ ಬಳಿಕ ಎಲ್ಲ ಪ್ರಾಣಿಗಳಿಗೂ ಶರೀರ ಬಂಧನವನ್ನು ತೊಲಗಿಸಬೇಕೆಂದು ಸರ್ವೇಶ್ವರನಾದ ಭಗವಂತನು ಲೋಕಗಳನ್ನು ಉಪಸಂಹರಿಸಲು ಮನಸ್ಸುಮಾಡುವನು. ಓ ರಾಜಾ, ಬ್ರಹ್ಮಾದಿಸಕಲದೇವತೆಗಳು, ದೈತ್ಯರು, ದಾನವರು, ಯಕ್ಷರು, ರಾಕ್ಷಸರು, ಪಕ್ಷಿಗಳು, ಗಂಧರ್ವರು, ಅಪ್ಸರಸ್ತ್ರೀಯರು, ಸರ್ಪಗಳು, ಪರ್ವತಗಳು, ನದಿಗಳು, ಪಶುಗಳು, ತಿರ್ಯಕ್ಪ್ರಾಣಿಗಳು, ಕ್ರಿಮಿಗಳು, ಈ ಎಲ್ಲ ಜಂತುಗಳ ಶರೀರಗತವಾದ ಪಂಚಭೂತಗಳನ್ನು ಭೂತಗಳ ಅಧಿಪತಿಯೂ ನಿರ್ಮಾಪಕನೂ ಆದ ಆ ಭಗವಂತನು ಆಕರ್ಷಣ ಮಾಡುವನು. ಪ್ರಪಂಚವನ್ನು ಕೊನೆಗಾಣಿಸಬೇಕೆಂದು ಅವನು ಸಕಲಸಂಹಾರಕ್ಕೆ ತೊಡಗುವನು.

೨೪. ಆ ಪರಮಾತ್ಮನು ಸೂರ್ಯನಾಗಿ ಪ್ರಾಣಿಗಳ ದೃಷ್ಟಿಯನ್ನು ಅಪಹರಿಸುವನು. ವಾಯುವಾಗಿ ಪಂಚಪ್ರಾಣಗಳನ್ನೂ ಎಳೆದುಕೊಳ್ಳುವನು. ಅಗ್ನಿಯಾಗಿ ಸರ್ವಲೋಕಗಳನ್ನೂ ದಹಿಸುವನು. ಮೇಘವಾಗಿ ಅತ್ಯುಗ್ರವಾದ ಮಳೆಯನ್ನು ಸುರಿಸುವನು.

ಅಧ್ಯಾಯ ೧೬೫

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಯುಗಗಳ ಪರಿಮಾಣವನ್ನೂ ಲಕ್ಷಣವನ್ನೂ ಹೇಳಿದೆ.

ಕೃತ, ತ್ರೇತಾ, ದ್ವಾಪರ ಮತ್ತು ಕಲಿಗಳೆಂಬುವು ನಾಲ್ಕು ಯುಗಗಳು. ಇವುಗಳಲ್ಲಿ ಕ್ರಮವಾಗಿ ಧರ್ಮವು ಕ್ಷಯಿಸುತ್ತಲೂ ಅಧರ್ಮವು ಹೆಚ್ಚುತ್ತಲೂ ಬರುವುದು. ಈ ಯುಗಗಳ ಪರಿಮಾಣದ ಮೊತ್ತ ದೇವಮಾನದಲ್ಲಿ ಹನ್ನೆರಡು ಸಾವಿರ ವರ್ಷಗಳು. ಈ ಅವಧಿಗೆ ಒಂದು ಚತುರ್ಯುಗವೆಂದು ಹೆಸರು. ಇಂತಹ ಸಾವಿರ ಚತುರ್ಯುಗಗಳಾದರೆ ಬ್ರಹ್ಮದೇವನಿಗೆ ಒಂದು ಹಗಲು. ಇದು ಮುಗಿದ ಬಳಿಕ ಪ್ರಳಯವಾಗುವುದು. ಸಕಲ ಪ್ರಾಣಿಗಳೂ ಲಯವಾಗುವುವು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವದಲ್ಲಿ
ನೂರ ಅರವತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಷಟ್ಷಷ್ಟ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ಭೂತ್ವಾ ನಾರಾಯಣೋ ಯೋಗೀ ಸತ್ವಮೂರ್ತಿರ್ವಿಭಾವಸುಃ ।
ಗಭಸ್ತಿಭಿಃ ಪ್ರದೀಪ್ತಾಭಿಃ ಸಂಶೋಷಯತಿ ಸಾಗರಾನ್ ॥ ೧ ॥

ತತಃ ಪೀತ್ವಾರ್ಣವಾನ್ ಸರ್ವಾನ್ನದೀಃ ಕೂಪಾಂಶ್ಚ ಸರ್ವಶಃ ।
ಪರ್ವತಾನಾಂ ಚ ಸಲಿಲಂ ಸರ್ವಮಾದಾಯ ರಶ್ಮಿಭಿಃ ॥ ೨ ॥

ಭಿತ್ವಾ ಗಭಸ್ತಿಭಿಶ್ಚೈವ ಮಹೀಂ ಗತ್ವಾ ರಸಾತಲಂ ।
ಪಾತಾಲಜಲಮಾದಾಯ ಪಿಬತೇ ರಸಮುತ್ತಮಂ ॥ ೩ ॥

ಮೂತ್ರಾಸೃಕ್ಕ್ಲೇದಮನ್ಯಚ್ಚ ಯದಸ್ತಿ ಪ್ರಾಣಿಷು ಧ್ರುವಂ ।
ತತ್ಸರ್ವಮರವಿಂದಾಕ್ಷ ಆದತ್ತೇ ಪುರುಷೋತ್ತಮಃ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಯೋಗೀಶ್ವರನೂ ಶುದ್ಧಸತ್ತ್ವಮೂರ್ತಿಯೂ ಆದ ನಾರಾಯಣನು ಸೂರ್ಯನ ರೂಪವನ್ನು ಧರಿಸಿ ಅತಿ ಪ್ರಚಂಡವಾದ ಕಿರಣಗಳಿಂದ ಸಾಗರಗಳನ್ನು ಬತ್ತಿಸುವನು.

೨-೩. ತರುವಾಯ ಎಲ್ಲ ಸಾಗರಗಳಲ್ಲೂ, ನದಿಗಳಲ್ಲೂ, ಬಾವಿಗಳಲ್ಲೂ ಇರುವ ನೀರನ್ನು ಕುಡಿಯುವನು. ತನ್ನ ಕಿರಣಗಳಿಂದ ಪರ್ವತಗಳಲ್ಲಿರುವ ಜಲವನ್ನು ಆಕರ್ಷಿಸುವನು. ನೆಲವನ್ನು ಸೀಳಿ ಪಾತಾಳಕ್ಕೆ ಹೋಗಿ ಅಲ್ಲಿನ ನೀರನ್ನು ತೆಗೆದುಕೊಳ್ಳುವನು. ಉತ್ತಮವಾದ ರಸವನ್ನು ಪಾನಮಾಡುವನು.

೪. ತಾವರೆಯಂತೆ ಕಣ್ಣುಗಳುಳ್ಳ ನಾರಾಯಣನು ಪ್ರಾಣಿಗಳ ದೇಹದಲ್ಲಿರುವ ಮೂತ್ರ, ರಕ್ತ, ಬೆವರು ಮುಂತಾದ ದ್ರವವಸ್ತುಗಳೆಲ್ಲವನ್ನೂ ಆಕರ್ಷಿಸುವನು.

ವಾಯುಶ್ಚ ಭಗವಾನ್ ಭೂತ್ವಾ ವಿಧುನ್ವಾನೋಽಖಿಲಂ ಜಗತ್ ।
ಪ್ರಾಣಾಪಾನಸಮಾನಾದ್ಯಾನ್ವಾಯೂನಾಕರ್ಷತೇ ಹರಿಃ ॥ ೫ ॥

ತತೋ ದೇವಗಣಾಃ ಸರ್ವೇ ಭೂತಾನ್ಯೇವ ಚ ಯಾನಿ ತು ।
ಗಂಧೋ ಘ್ರಾಣಂ ಶರೀರಂ ಚ ಪೃಥಿವೀಂ ಸಂಶ್ರಿತಾ ಗುಣಾಃ ॥ ೬ ॥

ಜಿಹ್ವಾ ರಸಶ್ಚ ಸ್ನೇಹಶ್ಚ ಸಂಶ್ರಿತಾಃ ಸಲಿಲೇ ಗುಣಾಃ ।
ರೂಪಂ ಚಕ್ಷುರ್ವಿಪಾಕಶ್ಚ ಜ್ಯೋತಿರೇವಾಶ್ರಿತಾ ಗುಣಾಃ ॥ ೭ ॥

ಸ್ಪರ್ಶಃ ಪ್ರಾಣಶ್ಚ ಚೇಷ್ಟಾ ಚ ಪವನೇ ಸಂಶ್ರಿತಾ ಗುಣಾಃ ।
ಶಬ್ದಃ ಶ್ರೋತ್ರಂ ಚ ಖಾನ್ಯೇವ ಗಗನೇ ಸಂಶ್ರಿತಾ ಗುಣಾಃ ॥ ೮ ॥

ಲೋಕಮಾಯಾ ಭಗವತಾ ಮುಹೂರ್ತೇನ ವಿನಾಶಿತಾ ।
ಮನೋ ಬುದ್ಧಿಶ್ಚ ಸರ್ವೇಷಾಂ ಕ್ಷೇತ್ರಜ್ಞಶ್ಚೇತಿ ಯಃ ಶ್ರುತಃ ॥ ೯ ॥

---

೫. ಪೂಜ್ಯನಾದ ಆ ಮಹಾವಿಷ್ಣುವು ವಾಯುರೂಪನಾಗಿ ಜಗತ್ತನ್ನೆಲ್ಲ ನಡುಗಿಸುತ್ತ ಪ್ರಾಣ, ಅಪಾನ, ಸಮಾನ ಮೊದಲಾದ ಪ್ರಾಣಗಳನ್ನು ಎಳೆದು ಕೊಳ್ಳುವನು.

೬. ಬಳಿಕ ಎಲ್ಲ ದೇವಗಣಗಳೂ ಪಂಚಭೂತಗಳನ್ನೇ ಸೇರಿದುವು. ಗಂಧ, ಘ್ರಾಣೇಂದ್ರಿಯ, ಶರೀರ ಇವು ಪೃಥಿವಿಯನ್ನು ಆಶ್ರಯಿಸಿದ ಗುಣಗಳು.

೭. ನಾಲಗೆ, ರಸ, ಜಿಡ್ಡು, ಇವು ಜಲವನ್ನು ಆಶ್ರಯಿಸಿದ ಗುಣಗಳು. ರೂಪ, ನೇತ್ರ, ವಿಧವಿಧವಾದ ಪಾಕ ಇವು ತೇಜಸ್ಸಿಗೆ ಸೇರಿದ ಗುಣಗಳು.

೮. ಸ್ಪರ್ಶೇಂದ್ರಿಯ, ಪ್ರಾಣ, ವ್ಯಾಪಾರ ಇವು ವಾಯುವನ್ನು ಆಶ್ರಯಿಸಿದ ಗುಣಗಳು. ಶಬ್ದ, ಶ್ರೋತ್ರೇಂದ್ರಿಯ ಇನ್ನೂ ಉಳಿದ ಕರ್ಮೇಂದ್ರಿಯಗಳು ಇವು ಆಕಾಶಕ್ಕೆ ಸಂಬಂಧಪಟ್ಟ ಗುಣಗಳು.

೯. ಭಗವಂತನು ಪ್ರಕೃತಿಯ ವಿಕಾರರೂಪವಾದ ಜಗತ್ತನ್ನು ಮುಹೂರ್ತ ಕಾಲದೊಳಗೆ ನಾಶಗೊಳಿಸಿದನು. ಎಲ್ಲರ ಮನಸ್ಸೂ ಬುದ್ಧಿಯೂ, ಕ್ಷೇತ್ರಜ್ಞನೆಂದು ಪ್ರಸಿದ್ಧನಾದ ಜೀವಾತ್ಮನೂ ಸ್ತೋತ್ರಾರ್ಹನಾದ ಮಹಾವಿಷ್ಣುವಿನಲ್ಲಿ ಸೇರಿದರು.

ತಂ ವರೇಣ್ಯಂ ಪರಮೇಷ್ಠೀ ಹೃಷೀಕೇಶಮುಪಾಶ್ರಿತಃ ।
ತತೋ ಭಗವತಸ್ತಸ್ಯ ರಶ್ಮಿಭಿಃ ಪರಿವಾರಿತಃ ॥೧೦॥

ವಾಯುನಾಕ್ರಮ್ಯಮಾಣಾಸು ದ್ರುಮಶಾಖಾಸು ಚಾಶ್ರಿತಃ ।
ತೇಷಾಂ ಸಂಘರ್ಷಣೋದ್ಭೂತಃ ಪಾವಕಃ ಶತಧಾ ಜ್ವಲನ್ ॥೧೧॥

ಅದಹಚ್ಚ ತದಾ ಸರ್ವಂ ವೃತಃ ಸಂವರ್ತಕೋಽನಲಃ ।
ಸಪರ್ವತದ್ರುಮಾನ್ ಗುಲ್ಮಾಂಲ್ಲತಾವಲ್ಲೀಸ್ತೃಣಾನಿ ಚ ॥೧೨॥

ವಿಮಾನಾನಿ ಚ ದಿವ್ಯಾನಿ ಪುರಾಣಿ ವಿವಿಧಾನಿ ಚ ।
ಯಾನಿ ಚಾಶ್ರಯಣೀಯಾನಿ ತಾನಿ ಸರ್ವಾಣಿ ಸೋಽದಹತ್ ॥೧೩॥

ಭಸ್ಮೀಕೃತ್ಯ ತತಃ ಸರ್ವಾಂಲ್ಲೋಕಾಂಲ್ಲೋಕಗುರುರ್ಹರಿಃ ।
ಭೂಯೋ ನಿರ್ವಾಪಯಾಮಾಸ ಯುಗಾಂತೇ ತೇನ ಕರ್ಮಣಾ ॥೧೪॥

ಸಹಸ್ರವೃಷ್ಟಿಃ ಶತಧಾ ಭೂತ್ವಾ ಕೃಷ್ಣೋ ಮಹಾಬಲಃ ।
ದಿವ್ಯತೋಯೇನ ಹವಿಷಾ ತರ್ಪಯಾಮಾಸ ಮೇದಿನೀಂ ॥೧೫॥

---

೧೦-೧೧. ತರುವಾಯ ಅತಿ ರಭಸವಾಗಿ ಬೀಸಿದ ಗಾಳಿಯಿಂದ ಮರದ ಕೊಂಬೆಗಳು ಒಂದಕ್ಕೊಂದು ಉಜ್ಜಿ ಅಗ್ನಿಯು ಉತ್ಪನ್ನವಾಯಿತು. ಅದರ ಉರಿ ನೂರಾರು ವಿಧವಾಗಿ ಹರಡಿತು. ಅದರೊಡನೆ ಸೂರ್ಯನಾರಾಯಣನ ಕಿರಣಗಳೂ ಸೇರಿದುವು. ಆ ಪ್ರಳಯಾಗ್ನಿಯು ಎಲ್ಲವನ್ನೂ ದಹಿಸಿತು.

೧೨-೧೩. ಬೆಟ್ಟಗಳು, ಮರಗಳು, ಪೊದೆಗಳು, ಬಳ್ಳಿಗಳು, ಹಬ್ಬುವ ಗಿಡಗಳು, ಹುಲ್ಲುಗಳು, ದಿವ್ಯವಾದ ವಿಮಾನಗಳು, ಬಗೆಬಗೆಯ ಪಟ್ಟಣಗಳು, ಆಶ್ರಯವನ್ನೀವ ಇನ್ನೂ ಇತ್ತರ ವಸ್ತುಗಳು ಇವೆಲ್ಲವನ್ನೂ ಅಗ್ನಿದೇವನು ಸುಟ್ಟನು.

೧೪. ಲೋಕಗುರುವಾದ ಹರಿಯು ಯುಗಾಂತದಲ್ಲಿ ಎಲ್ಲ ಲೋಕಗಳನ್ನೂ ಭಸ್ಮಮಾಡಿ, ಮರಳಿ ಆ ಬೆಂಕಿಯನ್ನು ತನ್ನ ಸಂಕಲ್ಪರೂಪವಾದ ಕರ್ಮದಿಂದ ಆರಿಸಿದನು.

೧೫. ಸರ್ವಶಕ್ತನಾದ ಆ ಭಗವಂತನು ಅಪರಿಮಿತವಾದ ಮಳೆಯ ರೂಪವನ್ನು ತಾಳಿ ದಿವ್ಯಜಲದಿಂದ ಭೂಮಿಯನ್ನು ತೃಪ್ತಿಗೊಳಿಸಿದನು.

ತತಃ ಕ್ಷೀರನಿಕಾಶೇನ ಸ್ವಾದುನಾ ಪರಮಾಂಭಸಾ ।
ಶಿವೇನ ಪುಣ್ಯೇನ ಮಹೀ ನಿರ್ವಾಣಮಗಮತ್ಪರಂ ॥೧೬॥

ತೇನ ರೋಧೇನ ಸಂಛನ್ನಾ ಪಯಸಾಂ ವರ್ಷತೋ ಧರಾ ।
ಏಕಾರ್ಣವಜಲೀಭೂತಾ ಸರ್ವಸತ್ವವಿವರ್ಜಿತಾ ॥೧೭॥

ಮಹಾಸತ್ವಾನ್ಯಪಿ ವಿಭುಂ ಪ್ರವಿಷ್ಟಾನ್ಯಮಿತೌಜಸಂ ।
ನಷ್ಟಾರ್ಕಪವನಾಕಾಶೇ ಸೂಕ್ಷ್ಮೇ ಜಗತಿ ಸಂವೃತೇ ॥೧೮॥

ಸಂಶೋಷಮಾತ್ಮನಾ ಕೃತ್ವಾ ಸಮುದ್ರಾನಪಿ ದೇಹಿನಃ ।
ದಗ್ಧ್ವಾ ಸಂಪ್ಲಾವ್ಯ ಚ ತಥಾ ಸ್ವಪಿತ್ಯೇಕಃ ಸನಾತನಃ ॥೧೯॥

ಪೌರಾಣಂ ರೂಪಮಾಸ್ಥಾಯ ಸ್ವಪಿತ್ಯಮಿತವಿಕ್ರಮಃ ।
ಏಕಾರ್ಣವಜಲವ್ಯಾಪೀ ಯೋಗೀ ಯೋಗಮುಪಾಶ್ರಿತಃ ॥೨೦॥

---

೧೬. ಬಳಿಕ ಹಾಲಿನಂತೆ ಮಧುರವೂ, ಪವಿತ್ರವೂ, ಮಂಗಳಮಯವೂ ಆದ ನೀರಿನಿಂದ ಭೂಮಿಗೆ ಬಹು ಸಂತೃಪ್ತಿಯುಂಟಾಯಿತು.

೧೭. ಎಡೆಬಿಡದೆ ಸುರಿಯುವ ಆ ಮಳೆಯ ನೀರು ಭೂಮಿಯನ್ನೆಲ್ಲ ತುಂಬಿತು. ಮಹಾಸಮುದ್ರದ ಜಲವು ಅಖಂಡವಾಗಿ ಆವರಿಸಿತು. ಪ್ರಾಣಿಗಳಾವುವೂ ಇಲ್ಲದಂತಾದುವು.

೧೮-೧೯. ಅತ್ಯದ್ಭುತಾಕಾರವುಳ್ಳ ಪ್ರಾಣಿಗಳೂ ಸಹ ಬಲಿಷ್ಠನಾದ ಆ ಪರಮಾತ್ಮನಲ್ಲಿ ಅಡಗಿಹೋದುವು. ಹೀಗೆ ಸೂರ್ಯ, ವಾಯು, ಆಕಾಶ ಇವೆಲ್ಲವೂ ಅದೃಶ್ಯವಾಗಲು, ಜಗತ್ತು ಸೂಕ್ಷ್ಮರೂಪವನ್ನು ತಾಳಿ ತನ್ನಲ್ಲಿ ಅಡಗಲು, ಸನಾತನನಾದ ಮಹಾವಿಷ್ಣುವು ಸ್ವಸಂಕಲ್ಪ ಮಾತ್ರದಿಂದಲೇ ಸಮುದ್ರಗಳನ್ನೂ ಪ್ರಾಣಿಗಳನ್ನೂ ಬತ್ತಿಸಿ, ದಹಿಸಿ, ಜಗತ್ತನ್ನು ಜಲಮಯವಾಗಿ ಮಾಡಿ ಏಕಾಕಿಯಾಗಿ ಯೋಗನಿದ್ರೆಯಲ್ಲಿ ತೊಡಗುವನು.

೨೦. ಅಸಮಾನ ಪರಾಕ್ರಮಶಾಲಿಯೂ, ಯೋಗೀಶ್ವರನೂ ಆದ ಭಗವಂತನು ತನ್ನ ಅನಾದಿಯಾದ ರೂಪವನ್ನು ತಾಳಿ, ಆ ಮಹಾಸಾಗರದ ಜಲವೆಲ್ಲವನ್ನೂ ವ್ಯಾಪಿಸಿಕೊಂಡು, ಯೋಗನಿದ್ರೆಯಲ್ಲಿರುವನು.

ಅನೇಕಾನಿ ಸಹಾಸ್ರಾಣಿ ಯುಗಾನ್ಯೇಕಾರ್ಣವಾಂಭಸಿ ।
ನ ಚೈನಂ ಕಶ್ಚಿದವ್ಯಕ್ತಂ ವ್ಯಕ್ತಂ ವೇದಿತುಮರ್ಹತಿ ॥೨೧॥

ಕಶ್ಚೈವ ಪುರುಷೋ ನಾಮ ಕಿಂಯೋಗಃ ಕಶ್ಚ ಯೋಗವಾನ್ ।
ಅಸೌ ಕಿಯಂತಂ ಕಾಲಂ ಚ ಏಕಾರ್ಣವವಿಧಿಂ ಪ್ರಭುಃ ॥
ಕರಿಷ್ಯತೀತಿ ಭಗವಾನಿತಿ ಕಶ್ಚಿನ್ನ ಬುದ್ಧ್ಯತೇ ॥೨೨॥

ನ ದ್ರಷ್ಟಾ ನೈವ ಗಮಿತಾ ನ ಜ್ಞಾತಾ ನೈವ ಪಾರ್ಶ್ವಗಃ ।
ತಸ್ಯ ನ ಜ್ಞಾಯತೇ ಕಿಂಚಿತ್ತನ್ಮೃತೇ ದೇವಸತ್ತಮಂ ॥೨೩॥

ನಭಃ ಕ್ಷಿತಿಂ ಪವನಮಪಃ ಪ್ರಕಾಶಂ
ಪ್ರಜಾಪತಿಂ ಭುವನಧರಂ ಸುರೇಶ್ವರಂ ।
ಪಿತಾಮಹಂ ಶ್ರುತಿನಿಲಯಂ ಮಹಾಮುನಿಂ
ಪ್ರಶಾಮ್ಯ ಭೂಯಃ ಶಯನಂ ಹ್ಯರೋಚಯತ್ ॥೨೪॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವ ಪ್ರಾದುರ್ಭಾವೇ
ಷಟ್ಷಷ್ಟ್ಯಧಿಕಶತತಮೋಽಧ್ಯಾಯಃ

---

೨೧. ಅನೇಕ ಸಹಸ್ರ ಯುಗಗಳ ಕಾಲ ಆ ಮಹಾ ಪ್ರಳಯಸಾಗರದ ಜಲದಲ್ಲಿ ಭಗವಂತನು ಯೋಗನಿರತನಾಗಿರುವನು. ಅವಾಙ್ಮನಸಗೋಚರನಾದ ಆತನನ್ನು ಯಾರೂ ಸ್ಪಷ್ಟವಾಗಿ ಅರಿಯಲಾರರು.

೨೨. ಈ ಪುರುಷನೆಂಬುವನು ಯಾರು? ಇವನು ಆಚರಿಸುವ ಯೋಗವೆಂಥದು? ಯೋಗನಿರತನಾಗಿರುವಾಗ ಈತನ ಸ್ವರೂಪವೆಂತಿರುವುದು? ಈ ಪ್ರಭು ಎಷ್ಟುಕಾಲ ಪ್ರಳಯ ಜಲದಲ್ಲಿ ವಾಸಿಸುವನು? ಇವೇ ಮೊದಲಾದ ವಿಷಯಗಳನ್ನು ಯಾವನೂ ತಿಳಿಯಲಾರನು.

೨೩. ಅವನನ್ನು ನೋಡುವವನಿಲ್ಲ, ಅವನ ಬಳಿಗೆ ಹೋಗುವವನಿಲ್ಲ, ಅವನನ್ನರಿಯುವವನಿಲ್ಲ, ಅವನ ಹತ್ತಿರವಿರತಕ್ಕವನು ಯಾರೂ ಇಲ್ಲ. ದೇವೋತ್ತಮನಾದ ಆತನನ್ನುಳಿದು ಮತ್ತಾರಿಗೂ ಆತನ ವಿಷಯವೇನೂ ತಿಳಿಯದು.

೨೪. ಆ ಪರಮಾತ್ಮನು ಆಕಾಶ, ಭೂಮಿ ವಾಯು ಜಲ, ತೇಜಸ್ಸು, ದಕ್ಷನೇ ಮೊದಲಾದ ಪ್ರಜಾಪತಿಗಳು, ಪರ್ವತ, ದೇವೇಂದ್ರ, ಸಕಲ ವೇದಗಳನ್ನೂ ಬಲ್ಲ ಮಹರ್ಷಿಯಾದ ಬ್ರಹ್ಮ ಇವರೆಲ್ಲರನ್ನೂ ತನ್ನಲ್ಲಿ ಉಪಸಂಹರಿಸಿ ಮತ್ತೆ ಸಮುದ್ರದಲ್ಲಿ ಶಯನಿಸಲು ಮನಸ್ಸು ಮಾಡಿದನು.

ಅಧ್ಯಾಯ ೧೬೬

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಪ್ರಳಯವನ್ನು ವರ್ಣಿಸಿದೆ.

ಪ್ರಳಯಕಾಲದಲ್ಲಿ ನಾರಾಯಣನು ಸೂರ್ಯರೂಪದಿಂದ ಜಗತ್ತಿನ ಜಲಾಂಶವೆಲ್ಲವನ್ನೂ ಆಕರ್ಷಿಸುವನು. ವಾಯುರೂಪದಿಂದ ಎಲ್ಲವನ್ನೂ ಉರುಳಿಸಿ ಪ್ರಾಣಗಳನ್ನು ಅಪಹರಿಸುವನು. ಅನಂತರ ಅತ್ಯುಗ್ರವಾದ ಅಗ್ನಿಯು ಉದ್ಭವಿಸಿ ಎಲ್ಲವನ್ನೂ ಸುಡುವುದು. ಕೊನೆಗೆ ಅತಿ ಪ್ರಚಂಡವಾದ ಮಳೆ ಸುರಿದು ಜಗತ್ತೆಲ್ಲವೂ ಜಲಮಯವಾಗುವುದು. ಆಗ ಪ್ರಾಣಿಯೆಂಬುದರ ಹೆಸರೇ ಇರುವುದಿಲ್ಲ. ಆ ಮಹಾಸಾಗರದ ಜಲದಲ್ಲಿ ಭಗವಂತನು ಏಕಾಕಿಯಾಗಿ ಸಾವಿರಾರು ಯುಗಗಳ ಕಾಲ ಯೋಗನಿದ್ರೆಯಲ್ಲಿ ನಿರತನಾಗುವನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವದಲ್ಲಿ
ನೂರ ಅರವತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ

### ಮತ್ಸ್ಯ ಉವಾಚ

ಏವಮೇಕಾರ್ಣವೀಭೂತೇ ಶೇತೇ ಲೋಕೇ ಮಹಾದ್ಯುತಿಃ ।
ಪ್ರಚ್ಛಾದ್ಯ ಸಲಿಲೇನೋರ್ವೀಂ ಹಂಸೋ ನಾರಾಯಣಸ್ತದಾ ॥ ೧ ॥

ಮಹತೋ ರಜಸೋ ಮಧ್ಯೇ ಮಹಾರ್ಣವಸರಸ್ಸು ವೈ ।
ವಿರಜಸ್ಕಂ ಮಹಾಬಾಹುಮಕ್ಷಯಂ ಬ್ರಹ್ಮ ಯಂ ವಿದುಃ ॥ ೨ ॥

ಆತ್ಮರೂಪಪ್ರಕಾಶೇನ ತಮಸಾ ಸಂವೃತಃ ಪ್ರಭುಃ ।
ಮನಃ ಸಾತ್ವಿಕಮಾಧಾಯ ಯತ್ರ ತತ್ಸತ್ಯಮಾಸತ ॥ ೩ ॥

ಯಾಥಾತಥ್ಯಂ ಪರಂ ಜ್ಞಾನಂ ಯಥಾ ಯದ್ಬ್ರಹ್ಮಣೋ ಮತಂ ।
ರಹಸ್ಯಾರಣ್ಯಕೋದ್ದಿಷ್ಟಂ ಯಚ್ಚೌಪನಿಷದಂ ಸ್ಮೃತಂ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಹೀಗೆ ಲೋಕವೆಲ್ಲವೂ ಮಹಾಜಲಮಯವಾಗಲು, ತೇಜೋರಾಶಿಯೂ ಶುದ್ಧಸತ್ವಮಯನೂ ಆದ ನಾರಾಯಣನು ಭೂಮಿಯನ್ನು ನೀರಿನೊಳಗೆ ಮುಳುಗಿಸಿ ಯೋಗನಿದ್ರೆಯಲ್ಲಿ ನಿರತನಾಗಿರುವನು.

೨. ಮಹಾಸಮುದ್ರವೆಂಬ ಸರೋವರಗಳಲ್ಲಿ ಅಪರಿಮಿತವಾದ ಪುಷ್ಪಧೂಳಿಯ ರಾಶಿಯ ನಡುವೆ ಅದುಶರೀರಕ್ಕೆ ಲೇಪವಾಗದಂತೆ (ರಜೋಗುಣದ ಮಧ್ಯದಲ್ಲಿ ಆ ಗುಣದ ಸಂಬಂಧರಹಿತನಾಗಿ ಎಂದು ಮತ್ತೊಂದು ಅರ್ಥ.) ಮಹಾಬಾಹುವೂ ಅಕ್ಷಯನೂ ಆದ ಆ ನಾರಾಯಣನು ಶಯನಿಸಿರುವನು. ಅವನನ್ನೇ ಪರಬ್ರಹ್ಮನೆನ್ನುವರು.

೩. ಸುತ್ತಲೂ ಕಗ್ಗತ್ತಲು ಕವಿದಿರುವುದು. ಸತ್ಯಮಯನಾದ ಆ ಜಗದೀಶ್ವರನು ತನ್ನ ದಿವ್ಯರೂಪದಿಂದಲೂ ಪ್ರಕಾಶದಿಂದಲೂ ಕೂಡಿ, ಮನಸ್ಸು ಸತ್ವಗುಣಭೂಯಿಷ್ಠವಾಗಿರಲು, ಆ ಮಹಾಜಲದಲ್ಲಿ ಯೋಗನಿದ್ರೆಯಲ್ಲಿರುವನು.

೪. ಆ ಬ್ರಹ್ಮವಿಷಯಕವಾದ ಜ್ಞಾನವೇ ಪರಮಾರ್ಥವಾದುದು; ಉತ್ಕೃಷ್ಟವಾದುದು. ರಹಸ್ಯಾರ್ಥಬೋಧಕಗಳಾದ ಆರಣ್ಯಕಗಳೂ ಉಪನಿಷತ್ತುಗಳೂ ಪ್ರತಿಪಾದಿಸುವ ಜ್ಞಾನವೇ ಅದು.

ಪುರುಷಂ ಬ್ರಹ್ಮ ಇತ್ಯೇತದ್ಯತ್ಪರಂ ಪರಿಕೀರ್ತಿತಂ ।
ಯತ್ರಾನ್ಯಃ ಪುರುಷೋ ನ ಸ್ಯಾತ್ಸ ಏಷ ಪುರುಷೋತ್ತಮಃ ॥ ೫ ॥

ಯೇ ಚ ಯಜ್ಞಕರಾ ವಿಪ್ರಾ ಯೇ ಚತ್ವಿರ್ಜ ಇತಿ ಸ್ಮೃತಾಃ ।
ಅಸ್ಮಾದೇವ ಪುರಾ ಭೂತಾ ಯಜ್ಞೇಭ್ಯಃ ಶ್ರೂಯತಾಂ ತಥಾ ॥ ೬ ॥

ಬ್ರಹ್ಮಾಣಂ ಪ್ರಥಮಂ ವಕ್ತ್ರಾದುದ್ಗಾತಾರಂ ಚ ಸಾಮಗಂ ।
ಹೋತಾರಮಪಿ ಚಾಧ್ವರ್ಯುಂ ಬಾಹುಭ್ಯಾಮಸೃಜತ್ಪ್ರಭುಃ ॥ ೭ ॥

ಬ್ರಹ್ಮಣೋ ಬ್ರಾಹ್ಮಣಾಚ್ಛಂಸಿಂ ಪ್ರಸ್ತೋತಾರಂ ಚ ಸರ್ವಶಃ ।
ತೌ ಮಿತ್ರಾವರುಣೌ ಪೃಷ್ಠಾತ್ಪ್ರತಿಪ್ರಸ್ಥಾರಮೇವ ಚ ॥ ೮ ॥

ಉದರಾತ್ಪ್ರತಿಹರ್ತಾರಂ ಪೋತಾರಂ ಚೈವ ಪಾರ್ಥಿವ ।
ಅಚ್ಛಾವಾಕಮಥೋರುಭ್ಯಾಂ ನೇಷ್ಟಾರಂ ಚೈವ ಪಾರ್ಥಿವ ॥ ೯ ॥

---

೫. ಆ ನಾರಾಯಣನನ್ನು ಬ್ರಹ್ಮವೆಂದೂ ಹೇಳುವರು. ಅವನು ಅತಿ ಶ್ರೇಷ್ಠನಾದವನು. ಆದುದರಿಂದ ಅವನಿಗೆ ಪರಬ್ರಹ್ಮವೆಂದೂ ಹೆಸರು. ಪ್ರಳಯ ಕಾಲದಲ್ಲಿ ಅವನಲ್ಲದೆ ಬೇರೆ ಯಾರೂ ಉಳಿಯುವುದಿಲ್ಲವಾದ ಕಾರಣ ಅವನನ್ನೇ ಪುರುಷೋತ್ತಮನೆಂದೂ ಕರೆಯುವರು.

೬. ಯಜ್ಞವನ್ನು ನಡೆಸತಕ್ಕ ಬ್ರಾಹ್ಮಣರು, ಋತ್ವಿಕ್ಕುಗಳೆಂದು ಪ್ರಸಿದ್ಧರಾದ ಪುರೋಹಿತರು ಇವರೆಲ್ಲ ಯಜ್ಞಗಳ ಸಲುವಾಗಿ ಆದಿ ಕಾಲದಲ್ಲಿ ಈ ಭಗವಂತನಿಂದಲೇ ಉತ್ಪನ್ನರಾದರು. ಇದು ಶ್ರುತಿಸಿದ್ಧವಾದ ವಿಷಯ.

೭. ಸರ್ವೇಶ್ವರನಾದ ಭಗವಂತನು ಮೊದಲು ಮುಖದಿಂದ ಬ್ರಹ್ಮನನ್ನೂ (ಯಜ್ಞಕಾರ್ಯದಲ್ಲಿ ಮುಖ್ಯ ಪಾತ್ರವನ್ನು ವಹಿಸತಕ್ಕವನು.) ಸಾಮವೇದಜ್ಞನಾದ ಉದ್ಗಾತೃವನ್ನೂ ನಿರ್ಮಿಸಿದನು. ಬಾಹುಗಳಿಂದ ಹೋತೃವನ್ನೂ ಅಧ್ವರ್ಯುವನ್ನೂ ಸೃಷ್ಟಿಸಿದನು.

೮. ತನ್ನ ತಪಸ್ಸಿನಿಂದ ಬ್ರಾಹ್ಮಣಾಚ್ಛಂಸಿ ಮತ್ತು ಪ್ರಸ್ತೋತೃಗಳನ್ನೂ ಪೃಷ್ಠದಿಂದ ಮಿತ್ರಾವರುಣ ಮತ್ತು ಪ್ರತಿಪ್ರಸ್ಥಾರರನ್ನೂ ಸೃಷ್ಟಿಸಿದನು.

೯. ಓ ರಾಜಾ, ಉದರದಿಂದ ಪ್ರತಿಹರ್ತೃವನ್ನೂ ಪೋತೃವನ್ನೂ, ತೊಡೆಗಳಿಂದ ಅಚ್ಛಾವಾಕ ಮತ್ತು ನೇಷ್ಟೃಗಳನ್ನೂ ಸೃಜಿಸಿದನು.

**ಪಾಣಿಭ್ಯಾಮಥ ಚಾಗ್ನೀಧ್ರಂ ಸುಬ್ರಹ್ಮಣ್ಯಂ ಚ ಜಾನುತಃ ।**
**ಗ್ರಾವಸ್ತುತಂ ತು ಪಾದಾಭ್ಯಾಮುನ್ನೇತಾರಂ ಚ ಯಾಜುಷಂ ॥೧೦॥**

**ಏವಮೇವೈಷ ಭಗವಾನ್ ಷೋಡಶೈವ ಜಗತ್ಪತಿಃ ।**
**ಪ್ರವಕ್ತ್ರೄನ್ ಸರ್ವಯಜ್ಞಾನಾಮೃತ್ವಿಜೋऽಸೃಜದುತ್ತಮಾನ್ ॥೧೧॥**

**ತದೇಷ ವೈ ವೇದಮಯಃ ಪುರುಷೋ ಯಜ್ಞಸಂಜ್ಞಿತಃ ।**
**ವೇದಾಶ್ಚೈತನ್ಮಯಾಃ ಸರ್ವೇ ಸಾಂಗೋಪನಿಷದಃ ಕ್ರಿಯಾಃ ॥೧೨॥**

**ಸ್ವಪಿತ್ಯೇಕಾರ್ಣವೇ ಚೈವ ಯದಾಶ್ಚರ್ಯಮಭೂತ್ಪುರಾ ।**
**ಶ್ರೂಯತಾಂ ತದ್ಯಥಾ ವಿಪ್ರಾ ಮಾರ್ಕಂಡೇಯಕುತೂಹಲಂ ॥೧೩॥**

**ಗೀರ್ಣೋ ಭಗವತಸ್ತಸ್ಯ ಕುಕ್ಷಾವೇವ ಮಹಾಮುನಿಃ ।**
**ಬಹುವರ್ಷಸಹಸ್ರಾಯುಸ್ತಸ್ಯೈವ ವರತೇಜಸಾ ॥೧೪॥**

---

೧೦-೧೧. ಕೈಗಳಿಂದ ಅಗ್ನೀಧ್ರನನ್ನೂ, ಮೊಣಕಾಲುಗಳಿಂದ ಸುಬ್ರಹ್ಮಣ್ಯ-ನನ್ನೂ ಗ್ರಾವಸ್ತುತನನ್ನೂ, ಯಜುರ್ವೇದಜ್ಞನಾದ ಉನ್ನೇತೃವನ್ನೂ ನಿರ್ಮಾಣ ಮಾಡಿದನು. ಜಗತ್ಪತಿಯಾದ ಭಗವಂತನು ಹೀಗೆ ಸರ್ವಯಜ್ಞಗಳಿಗೂ ಪ್ರವಕ್ತೃ ಗಳಾದ ಹದಿನಾರುಮಂದಿ ಶ್ರೇಷ್ಠರಾದ ಋತ್ವಿಕ್ಕುಗಳನ್ನು ಸೃಷ್ಟಿಸಿದನು.

೧೨. ಆದುದರಿಂದ ವೇದಮಯನಾದ ಈ ಭಗವಂತನಿಗೆ ಯಜ್ಞವೆಂಬ ಹೆಸರೂ ಉಂಟು. ಶಿಕ್ಷಾದಿ ವೇದಾಂಗಗಳು, ಉಪನಿಷತ್ತುಗಳು ಮತ್ತು ಬ್ರಾಹ್ಮಣ ಗಳ ಸಹಿತವಾದ ಸಕಲವೇದಗಳು ಇವೆಲ್ಲ ಭಗವಂತನ ಸ್ವರೂಪವೇ ಆಗಿವೆ.

೧೩. ಅಖಂಡವಾದ ಪ್ರಳಯ ಸಾಗರದಲ್ಲಿ ನಾರಾಯಣನು ಯೋಗ ನಿದ್ರೆಯಿಂದ ಮಲಗಿರುವನೆಂಬುದು ನಿಮಗೆ ಆಶ್ಚರ್ಯಕರವಾಗಿರುವುದಷ್ಟೆ! ಓ ಬ್ರಾಹ್ಮಣರೇ, ಅದು ಹೇಗೆಂಬುದನ್ನೂ ಈ ಸಂದರ್ಭದಲ್ಲಿ ಮಾರ್ಕಂಡೇಯನಿಗಾದ ಕುತೂಹಲವನ್ನೂ ಕೇಳಿರಿ.

೧೪-೧೬. ಅನೇಕ ಸಾವಿರ ವರ್ಷಗಳ ಆಯುಸ್ಸುಳ್ಳ ಮಹಾಮುನಿಯಾದ ಮಾರ್ಕಂಡೇಯನನ್ನು ಪ್ರಳಯ ಸಮಯದಲ್ಲಿ ಭಗವಂತನು ನುಂಗಿಬಿಟ್ಟನು.

ಅಟಂಸ್ತೀರ್ಥಪ್ರಸಂಗೇನ ಪೃಥಿವೀಂ ತೀರ್ಥಗೋಚರಾಂ ।
ಆಶ್ರಮಾಣಿ ಚ ಪುಣ್ಯಾನಿ ದೇವತಾಯತನಾನಿ ಚ ॥೧೫॥

ದೇಶಾನ್ ರಾಷ್ಟ್ರಾಣಿ ಚಿತ್ರಾಣಿ ಪುರಾಣಿ ವಿವಿಧಾನಿ ಚ ।
ಜಪಹೋಮಪರಃ ಶಾಂತಸ್ತಪೋ ಘೋರಂ ಸಮಾಸ್ಥಿತಃ ॥೧೬॥

ಮಾರ್ಕಂಡೇಯಸ್ತತಸ್ತಸ್ಯ ಶನೈರ್ವಕ್ತ್ರಾದ್ವಿನಿಃಸೃತಃ ।
ಸ ನಿಷ್ಕ್ರಾಮನ್ ನ ಚಾತ್ಮಾನಂ ಜಾನೀತೇ ದೇವಮಾಯಯಾ ॥೧೭॥

ನಿಷ್ಕ್ರಮ್ಯಾಸ್ಯಸ್ಯ ವದನಾದೇಕಾರ್ಣವಮಥೋ ಜಗತ್ ।
ಸರ್ವತಸ್ತಮಸಾಚ್ಛನ್ನಂ ಮಾರ್ಕಂಡೇಯೋಽನ್ವವೈಕ್ಷತ ॥೧೮॥

ತಸ್ಯೋತ್ಪನ್ನಂ ಭಯಂ ತೀವ್ರಂ ಸಂಶಯಶ್ಚಾತ್ಮಜೀವಿತೇ ।
ದೇವದರ್ಶನಸಂಹೃಷ್ಟೋ ವಿಸ್ಮಯಂ ಪರಮಂ ಗತಃ ॥೧೯॥

---

ಆತನ ದಿವ್ಯತೇಜಸ್ಸಿನಿಂದ ಆ ಮಹಾಮುನಿಯು ದೇವದೇವನ ಉದರದಲ್ಲೇ ತೀರ್ಥಯಾತ್ರಾ ಪ್ರಸಂಗದಿಂದ ಭೂಮಿಯಲ್ಲೆಲ್ಲ ಸಂಚರಿಸಿದನು. ಪುಣ್ಯಾಶ್ರಮಗಳು, ದೇವಾಲಯಗಳು, ದೇಶಗಳು ವಿಚಿತ್ರವಾದ ರಾಷ್ಟ್ರಗಳು, ಬಗೆಬಗೆಯ ಪಟ್ಟಣಗಳು ಇವುಗಳಲ್ಲೆಲ್ಲ ಓಡಾಡಿದನು. ಜಪವನ್ನೂ ಹೋಮವನ್ನೂ ಆಸಕ್ತಿಯಿಂದ ಮಾಡುತ್ತ, ಶಾಂತನಾಗಿ ಘೋರವಾದ ತಪಸ್ಸಿನಲ್ಲಿ ನಿರತನಾದನು.

೧೭. ಬಳಿಕ ಮಾರ್ಕಂಡೇಯನು ಮೆಲ್ಲಗೆ ನಾರಾಯಣನ ಮುಖದಿಂದ ಹೊರಕ್ಕೆ ಬಂದನು. ಆದರೆ ದೇವಮಾಯೆಯಿಂದ ತಾನು ಹೊರಗೆ ಬಂದುದು ಅವನಿಗೆ ಗೊತ್ತಾಗಲಿಲ್ಲ.

೧೮. ಮಾರ್ಕಂಡೇಯನು ಭಗವಂತನ ಬಾಯಿಯಿಂದ ಹೊರಗೆ ಬಂದು, ಜಗತ್ತೆಲ್ಲವೂ ಅಖಂಡವಾಗಿ ಜಲಮಯವಾಗಿರುವುದನ್ನೂ ಎಲ್ಲಕಡೆಯೂ ಕತ್ತಲೆ ಕವಿದಿರುವುದನ್ನೂ ಕಂಡನು.

೧೯. ಅವನಿಗೆ ಮಿತಿಯಿಲ್ಲದಷ್ಟು ಭಯವಾಯಿತು. ತಾನು ಬದುಕಿರುವುದೇ ಸಂದೇಹವಾಗಿ ತೋರಿತು. ಶ್ರೀಮನ್ನಾರಾಯಣನ ದರ್ಶನದಿಂದ ಸಂತೋಷವೂ ಬಹು ಆಶ್ಚರ್ಯವೂ ಉಂಟಾದುವು.

ಚಿಂತಯನ್ ಜಲಮಧ್ಯಸ್ಥೋ ಮಾರ್ಕಂಡೇಯೋಽನ್ವವೈಕ್ಷತ ।
ಕಿಂ ನು ಸ್ಯಾನ್ಮಮ ಚಿಂತೇಯಂ ಮೋಹಃ ಸ್ವಪ್ನೋಽನುಭೂಯತೇ ॥೨೦॥

ವ್ಯಕ್ತಮನ್ಯತಮೋ ಭಾವಸ್ತೇಷಾಂ ಸಂಭಾವಿತೋ ಮಮ ।
ನಹೀದೃಶಂ ಜಗತ್ಕ್ಲೇಶಮಯುಕ್ತಂ ಸತ್ಯಮರ್ಹತಿ ॥೨೧॥

ನಷ್ಟಚಂದ್ರಾರ್ಕಪವನೇ ನಷ್ಟಪರ್ವತಭೂತಲೇ ।
ಕತಮಃ ಸ್ಯಾದಯಂ ಲೋಕ ಇತಿ ಚಿಂತಾಮವಸ್ಥಿತಃ ॥೨೨॥

ದದರ್ಶ ಚಾಪಿ ಪುರುಷಂ ಸ್ವಪಂತಂ ಪರ್ವತೋಪಮಂ ।
ಸಲಿಲೇಽರ್ಧಮಥೋ ಮಗ್ನಂ ಜೀಮೂತಮಿವ ಸಾಗರೇ ॥೨೩॥

ಜ್ವಲಂತಮಿವ ತೇಜೋಭಿರ್ಗೋಯುಕ್ತಮಿವ ಭಾಸ್ಕರಂ ।
ಶರ್ವರ್ಯಾಂ ಜಾಗ್ರತಮಿವ ಭಾಸಂತಂ ಸ್ವೇನ ತೇಜಸಾ ॥೨೪॥

---

೨೦. ಮಾರ್ಕಂಡೇಯನು ಜಲಮಧ್ಯದಲ್ಲಿ ನಿಂತು ಚಿಂತಿಸುತ್ತ ಸುತ್ತಲೂ ನೋಡಿದನು. ಇದೇನು ಬರಿಯ ಆಲೋಚನೆಯೋ? ಮೋಹವೋ? ಅಥವಾ ಕನಸುಕಾಣುತ್ತಿದ್ದೇನೆಯೋ?

೨೧. ನಾನು ಕಂಡ ಆ ಪದಾರ್ಥಗಳ ಸ್ವಭಾವವು ಈಗ ಬೇರೆಯಾಗಿ ತೋರುತ್ತದೆ. ಜಗತ್ತು ಹೀಗೆ ಕ್ಲೇಶಮಯವಾಗಿರುವುದು ಯುಕ್ತವಲ್ಲ. ಇದನ್ನು ಪರಮಾರ್ಥವೆಂದು ಹೇಳುವುದೂ ಸರಿಯಲ್ಲ.

೨೨. ಚಂದ್ರ, ಸೂರ್ಯ, ವಾಯು, ಬೆಟ್ಟ, ನೆಲ, ಇವಾವುವೂ ಇಲ್ಲ. ಇದು ಯಾವ ಲೋಕವಾಗಿರಬಹುದು? ಎಂದು ಅವನು ಚಿಂತಿಸುತ್ತಿದ್ದನು.

೨೩. ಬಳಿಕ ನೀರಿನಲ್ಲಿ ಅರ್ಧಮುಳುಗಿದ ಮೋಡದಂತೆ ಸಾಗರದಲ್ಲಿ ಯೋಗ ನಿದ್ರಾಸಕ್ತನಾಗಿರುವ ಪರ್ವತಾಕಾರನಾದ ಆದಿಪುರುಷನನ್ನು ಕಂಡನು.

೨೪. ಆ ಪರಮಾತ್ಮನು ಕಿರಣಗಳಿಂದ ಕೂಡಿದ ಸೂರ್ಯನಂತೆ ತನ್ನ ತೇಜಸ್ಸುಗಳಿಂದ ಪ್ರಜ್ವಲಿಸುತ್ತಿದ್ದನು. ರಾತ್ರಿಯಲ್ಲಿ ಎಚ್ಚರದಿಂದಿರುವವನಂತೆ ತನ್ನ ಪ್ರಕಾಶದಿಂದ ಬೆಳಗುತ್ತಿದ್ದನು.

ದೇವಂ ದ್ರಷ್ಟುಮಿಹಾಯಾತಃ ಕೋ ಭವಾನಿತಿ ವಿಸ್ಮಯಾತ್ ।
ತಥೈವ ಸ ಮುನಿಃ ಕುಕ್ಷಿಂ ಪುನರೇವ ಪ್ರವೇಶಿತಃ ॥೨೫॥

ಸಂಪ್ರವಿಷ್ಟಃ ಪುನಃ ಕುಕ್ಷಿಂ ಮಾರ್ಕಂಡೇಯೋಽತಿವಿಸ್ಮಯಂ ।
ತಥೈವ ಚ ಪುನರ್ಭೂಯೋ ವಿಜಾನನ್ ಸ್ವಪ್ನದರ್ಶನಂ ॥೨೬॥

ಸ ತಥೈವ ಯಥಾಪೂರ್ವಂ ಯೋ ಧರಾಮಟಿತೇ ಪುರಾ ।
ಪುಣ್ಯತೀರ್ಥಜಲೋಪೇತಾಂ ವಿವಿಧಾನ್ಯಾಶ್ರಮಾಣಿ ಚ ॥೨೭॥

ಕ್ರತುಭಿರ್ಯಜಮಾನಾಂಶ್ಚ ಸಮಾಪ್ತವರದಕ್ಷಿಣಾನ್ ।
ಅಪಶ್ಯದ್ದೇವಕುಕ್ಷಿಸ್ಥಾನ್ ಯಾಜಕಾಞ್ಛತಶೋ ದ್ವಿಜಾನ್ ॥೨೮॥

ಸದ್ವೃತ್ತಮಾಸ್ಥಿತಾಃ ಸರ್ವೇ ವರ್ಣಾ ಬ್ರಾಹ್ಮಣಪೂರ್ವಕಾಃ ।
ಚತ್ವಾರಶ್ಚಾಶ್ರಮಾಃ ಸಮ್ಯಗ್ಯಥೋದ್ದಿಷ್ಟಾ ಮಯಾ ತವ ॥೨೯॥

---

೨೫. ದೇವನನ್ನು ನೋಡುವುದಕ್ಕಾಗಿ ಇಲ್ಲಿ ಬಂದ ನೀನಾರು ? ಎಂಬ ವಿಸ್ಮಯದಿಂದಲೋ ಎನ್ನುವಂತೆ ಭಗವಂತನು ಆ ಮುನಿಯನ್ನು ಮತ್ತೆ ತನ್ನ ಉದರದೊಳಕ್ಕೆ ಪ್ರವೇಶಮಾಡಿಸಿಬಿಟ್ಟನು.

೨೬. ಮಾರ್ಕಂಡೇಯನು ಪುನಃ ಭಗವಂತನ ಉದರವನ್ನು ಹೊಕ್ಕನು. ಅವನಿಗೆ ಬಹು ಆಶ್ಚರ್ಯವಾಯಿತು. ಮರಳಿ ತಾನು ಕನಸುಕಾಣುತ್ತಿರುವುದಾಗಿ ತಿಳಿದನು.

೨೭-೨೮. ಅವನು ಹಿಂದಿನಂತೆಯೇ ಪುಣ್ಯತೀರ್ಥಗಳಿಂದ ಕೂಡಿದ ಭೂಮಿಯಲ್ಲಿ ತೀರ್ಥಯಾತ್ರೆಗೆ ತೊಡಗಿದನು. ಬಗೆಬಗೆಯ ಆಶ್ರಮಗಳನ್ನೂ, ಯಜ್ಞವನ್ನು ಸಾಂಗವಾಗಿ ಮುಗಿಸಿ ದಕ್ಷಿಣೆಗಳನ್ನು ಕೊಡುತ್ತಿದ್ದ ಯಜಮಾನರನ್ನೂ, ಯಾಗಮಾಡಿಸುತ್ತಿರುವ ನೂರಾರುಜನ ಬ್ರಾಹ್ಮಣರನ್ನೂ ಭಗವಂತನ ಉದರದಲ್ಲಿ ಕಂಡನು.

೨೯. ಬ್ರಾಹ್ಮಣಾದಿ ಸಕಲವರ್ಣದವರೂ ಬ್ರಹ್ಮಚರ್ಯವೇ ಮೊದಲಾದ ನಾಲ್ಕು ಆಶ್ರಮಗಳಲ್ಲಿರುತ್ತ ಹಿಂದೆ ನಿನಗೆ ವಿವರವಾಗಿ ತಿಳಿಸಿರುವ ರೀತಿಯಲ್ಲಿ ಸದಾಚಾರ ನಿಷ್ಠರಾಗಿದ್ದರು.

ಏವಂ ವರ್ಷಶತಂ ಸಾಗ್ರಂ ಮಾರ್ಕಂಡೇಯಸ್ಯ ಧೀಮತಃ ।
ಚರತಃ ಪೃಥಿವೀಂ ಸರ್ವಾಂ ನ ಕುಕ್ಷ್ಯಂತಃ ಸಮೀಕ್ಷಿತಃ ॥೩೦॥

ತತಃ ಕದಾಚಿದಥ ವೈ ಪುನರ್ವಕ್ತ್ರಾದ್ವಿನಿಃಸೃತಃ ।
ಸುಪ್ತಂ ನ್ಯಗ್ರೋಧಶಾಖಾಯಾಂ ಬಾಲಮೇಕಂ ನಿರೈಕ್ಷತ ॥೩೧॥

ತಥೈವೈಕಾರ್ಣವಜಲೇ ನೀಹಾರೇಣಾವೃತಾಂಬರೇ ।
ಅವ್ಯಗ್ರಃ ಕ್ರೀಡತೇ ಲೋಕೇ ಸರ್ವಭೂತವಿವರ್ಜಿತೇ ॥೩೨॥

ಸ ಮುನಿರ್ವಿಸ್ಮಯಾವಿಷ್ಟಃ ಕೌತೂಹಲಸಮನ್ವಿತಃ ।
ಬಾಲಮಾದಿತ್ಯಸಂಕಾಶಂ ನಾಶಕ್ನೋದಭಿವೀಕ್ಷಿತುಂ ॥೩೩॥

ಸ ಚಿಂತಯಂ ಸ್ತಥೈಕಾಂತೇ ಸ್ಥಿತ್ವಾ ಸಲಿಲಸನ್ನಿಧೌ ।
ಪೂರ್ವದೃಷ್ಟಮಿದಂ ಮನ್ಯೇ ಶಂಕಿತೋ ದೇವಮಾಯಯಾ ॥೩೪॥

---

೩೦. ಹೀಗೆ ಪ್ರಾಜ್ಞನಾದ ಆ ಮಾರ್ಕಂಡೇಯನು ಪೂರ್ಣವಾಗಿ ಒಂದು ನೂರು ವರ್ಷಗಳಕಾಲ ಭೂಮಿಯೆಲ್ಲವನ್ನೂ ತಿರುಗಿದನು. ಆದರೆ ಅವನಿಗೆ ಭಗವಂತನ ಆ ಉದರದ ಕೊನೆಯು ಮಾತ್ರ ಕಾಣಿಸಲಿಲ್ಲ.

೩೧. ಬಳಿಕ ಒಂದಾನೊಂದು ದಿನ ಮತ್ತೆ ದೇವದೇವನ ಬಾಯಿಯಿಂದ ಹೊರಗೆ ಬಂದನು. ಆಲದ ಮರದ ಕೊಂಬೆಯೊಂದರಲ್ಲಿ ಮಲಗಿದ್ದ ಒಬ್ಬ ಬಾಲಕನನ್ನು ಕಂಡನು.

೩೨. ಆಕಾಶವು ಮಬ್ಬಿನಿಂದ ತುಂಬಿರಲು, ಎತ್ತೆತ್ತಲೂ ಅಖಂಡವಾದ ಸಾಗರದ ಜಲವು ವ್ಯಾಪಿಸಿರಲು, ಲೋಕವು ಸಕಲ ಜಂತುಶೂನ್ಯವಾಗಿರಲು ಆ ಬಾಲಕನು ನಿಶ್ಚಿಂತನಾಗಿ ಆಡುತ್ತಿದ್ದನು.

೩೩. ಆ ಮುನಿಗೆ ವಿಸ್ಮಯವೂ, ಕುತೂಹಲವೂ ಹುಟ್ಟಿದುವು. ಆದರೆ ಸೂರ್ಯನಂತೆ ಅತಿತೇಜಸ್ವಿಯಾದ ಆ ಬಾಲನನ್ನು ನೋಡುವುದಕ್ಕೆ ಅವನಿಗೆ ಸಾಧ್ಯವಾಗಲಿಲ್ಲ.

೩೪. ಅವನು ಆ ವಿಜನ ಸ್ಥಲದಲ್ಲಿ ನೀರಿನ ಬಳಿ ನಿಂತು ''ಈ ಪ್ರದೇಶವನ್ನು ನಾನು ಹಿಂದೆ ನೋಡಿದ ಹಾಗಿದೆ" ಯೆಂದು ಯೋಚಿಸುತ್ತಿದ್ದನು. ದೇವಮಾಯೆಯಿಂದ ಅವನಿಗೆ ಹಾಗೆ ಸಂದೇಹವು ತಲೆದೋರಿತು.

ಅಗಾಧಸಲಿಲೇ ತಸ್ಮಿನ್ ಮಾರ್ಕಂಡೇಯಃ ಸುವಿಸ್ಮಯಃ ।
ಪ್ಲವಂಸ್ತತ್ರಾರ್ತಿಮಗಮದ್ಭಯಾತ್ಸಂತ್ರಸ್ತಲೋಚನಃ ॥೩೫॥
ಸ ತಸ್ಮೈ ಭಗವಾನಾಹ ಸ್ವಾಗತಂ ಬಾಲಯೋಗವಾನ್ ।
ಬಭಾಷೇ ಮೇಘತುಲ್ಯೇನ ಸ್ವರೇಣ ಪುರುಷೋತ್ತಮಃ ॥೩೬॥
ಮಾ ಭೈರ್ವತ್ಸ ನ ಭೇತವ್ಯ ಮಿಹೈವಾಯಾಹಿ ಮೇಽಂತಿಕಂ ।
ಮಾರ್ಕಂಡೇಯೋ ಮುನಿಸ್ತ್ವಾಹ ಬಾಲಂ ತಂ ಶ್ರಮಪೀಡಿತಃ ॥೩೭॥

॥ ಮಾರ್ಕಂಡೇಯ ಉವಾಚ ॥

ಕೋ ಮಾಂ ನಾಮ್ನಾ ಕೀರ್ತಯತಿ ತಪಃ ಪರಿಭವನ್ಮಮ ।
ದಿವ್ಯಂ ವರ್ಷಸಹಸ್ರಾಖ್ಯಂ ಧರ್ಷಯನ್ನಿವ ಮೇ ವಯಃ ॥೩೮॥
ನ ಹ್ಯೇಷ ವಃ ಸಮಾಚಾರೋ ದೇವೇಷ್ವಪಿ ಮಮೋಚಿತಃ ।
ಮಾಂ ಬ್ರಹ್ಮಾ ಪಿ ಹಿ ದೇವೇಶೋ ದೀರ್ಘಾಯುರಿತಿ ಭಾಷತೇ ॥೩೯॥

---

೩೫. ಬಲು ಆಳವಾದ ಆ ನೀರಿನಲ್ಲಿ ಮಾರ್ಕಂಡೇಯನು ಅತಿ ವಿಸ್ಮಯದಿಂದ ತೇಲುತ್ತಿದ್ದನು. ಅವನಿಗೆ ಬಹಳ ವ್ಯಸನವಾಯಿತು. ಭಯದಿಂದ ಅವನ ಕಣ್ಣುಗಳು ತೊಳಲುತ್ತಿದ್ದುವು.

೩೬. ಬಾಲಕನ ರೂಪದಿಂದಿದ್ದ ಷಡ್ಗುಣಸಂಪೂರ್ಣನಾದ ನಾರಾಯಣನು ಅವನಿಗೆ ಸುಖಾಗಮನವನ್ನು ಕೋರಿ ಮೇಘಸದೃಶವಾದ ಧ್ವನಿಯಿಂದ ಹೀಗೆ ಹೇಳಿದನು.

೩೭. "ಮಗೂ, ಹೆದರಬೇಡ ಹೆದರಬೇಡ ; ನನ್ನ ಹತ್ತಿರಕ್ಕೆ ಇಲ್ಲಿಗೇ ಬಾ." ಇದನ್ನು ಕೇಳಿ ಆಯಾಸಗೊಂಡಿದ್ದ ಮಾರ್ಕಂಡೇಯ ಮುನಿಯು ಆ ಬಾಲಕನಿಗೆ ಹೇಳಿದನು.

೩೮. ಮಾರ್ಕಂಡೇಯನು ಹೇಳಿದನು.—ನನ್ನ ತಪಸ್ಸನ್ನೂ ಲೆಕ್ಕಿಸದೆ, ನನಗೆ ಆಗಿರುವ ದೇವಮಾನದ ಸಾವಿರವರ್ಷ ವಯಸ್ಸನ್ನೂ ಗಣನೆಗೆ ತಂದುಕೊಳ್ಳದೆ ನನ್ನನ್ನು ಹೆಸರು ಹಿಡಿದು ಕೂಗುವಾತನು ಯಾರು ?

೩೯. ನನ್ನ ವಿಷಯದಲ್ಲಿ ನೀನು ತೋರಿಸಿದ ಈ ನಡವಳಿಕೆ ದೇವತೆಗಳಿಗೆ ಸಹ ಉಚಿತವಾದುದಲ್ಲ. ದೇವತೆಗಳ ಅಧಿಪತಿಯಾದ ಬ್ರಹ್ಮನೂ ಕೂಡ ನನ್ನನ್ನು ದೀರ್ಘಾಯುವೆಂದು ಕರೆಯುತ್ತಾನೆ.

ಕಸ್ತನೋ ಘೋರಮಾಸಾದ್ಯ ಮಾಮದ್ಯ ತ್ಯಕ್ತಜೀವಿತಃ ।
ಮಾರ್ಕಂಡೇಯೇತಿ ಮಾಮುಕ್ತ್ವಾ ಮೃತ್ಯುಮೀಕ್ಷಿತುಮರ್ಹತಿ ॥೪೦॥

ಏವಮಾಭಾಷ್ಯ ತಂ ಕ್ರೋಧಾನ್ಮಾರ್ಕಂಡೇಯೋ ಮಹಾಮುನಿಃ ।
ತಥೈವ ಭಗವಾನ್ ಭೂಯೋ ಬಭಾಷೇ ಮಧುಸೂದನಃ ॥೪೧॥

॥ ಶ್ರೀ ಭಗವಾನುವಾಚ ॥

ಅಹಂ ತೇ ಜನಕೋ ವತ್ಸ ಹೃಷೀಕೇಶಃ ಪಿತಾ ಗುರುಃ ।
ಆಯುಷ್ಪ್ರದಾತಾ ಪೌರಾಣಃ ಕಿಂ ಮಾಂ ತ್ವಂ ನೋಪಸರ್ಪಸಿ ॥೪೨॥

ಮಾಂ ಪುತ್ರಕಾಮಃ ಪ್ರಥಮಂ ಪಿತಾ ತೇಽಂಗಿರಸೋ ಮುನಿಃ ।
ಪೂರ್ವಮಾರಾಧಯಾಮಾಸ ತಪಸ್ತೀವ್ರಂ ಸಮಾಶ್ರಿತಃ ॥೪೩॥

ತತಸ್ತ್ವಾಂ ಘೋರತಪಸಾ ಪ್ರಾವೃಣೋದಮಿತೌಜಸಂ ।
ಉಕ್ತವಾನಹಮಾತ್ಮಸ್ಥಂ ಮಹರ್ಷಿಮಮಿತೌಜಸಂ ॥೪೪॥

---

೪೦. ಪ್ರಾಣದ ಮೇಲೆ ಆಸೆಯನ್ನು ತೊರೆದು ಈ ಕಗ್ಗತ್ತಲೆಯಲ್ಲಿ ಬಂದು ನನ್ನನ್ನು ಮಾರ್ಕಂಡೇಯಾ ಎಂದು ಕೂಗುವವನು ಯಾರು? ಅವನಿಗೆ ಮೃತ್ಯು ದರ್ಶನವಾಗುವುದೇ ಸರಿ.

೪೧. ಮಾರ್ಕಂಡೇಯ ಮಹಾಮುನಿಯು ಕೋಪದಿಂದ ಹೀಗೆ ಹೇಳಲು, ಪೂಜ್ಯನಾದ ಮಧುಸೂದನನು ಮತ್ತೆ ಹಿಂದಿನಂತೆಯೇ ಮಾತನಾಡಿದನು.

೪೨. ಭಗವಂತನು ಹೇಳಿದನು.—ಮಗೂ, ನಾನು ನಿನ್ನ ಸೃಷ್ಟಿಕರ್ತ, ಇಂದ್ರಿಯಗಳ ಅಧಿಪತಿ, ತಂದೆ, ಗುರು, ಆಯುಸ್ಸನ್ನು ಕೊಟ್ಟವನು, ಅನಾದಿ ಪುರುಷ. ನನ್ನ ಬಳಿಗೇಕೆ ಬರುವುದಿಲ್ಲ?

೪೩. ಪೂರ್ವದಲ್ಲಿ ನಿನ್ನ ತಂದೆಯಾದ ಅಂಗಿರಸ ಮುನಿಯು ಪುತ್ರಾಭಿಲಾಷೆಯಿಂದ ತೀವ್ರವಾದ ತಪಸ್ಸನ್ನು ಮಾಡಿ ನನ್ನನ್ನು ಆರಾಧಿಸಿದನು.

೪೪. ಘೋರವಾದ ತಪಸ್ಸು ಮಾಡಿ ಬಳಿಕ ಅತಿ ತೇಜಸ್ವಿಯಾದ ನೀನು ಮಗನಾಗುವಂತೆ ವರವನ್ನು ಬೇಡಿದನು. ಆತ್ಮನಿಷ್ಠನೂ ಬಹುತೇಜೋವಂತನೂ ಆದ ಆ ಮಹರ್ಷಿಗೆ ನಾನು ಹಾಗೆಯೇ ಆಗಲೆಂದು ಹೇಳಿದೆನು.

ಕಃ ಸಮುತ್ಸಹತೇ ಚಾನ್ಯೋ ಯೋ ನ ಭೂತಾತ್ಮಕಾತ್ಮಜಃ ।
ದ್ರಷ್ಟುಮೇಕಾರ್ಣವಗತಂ ಕ್ರೀಡಂತಂ ಯೋಗವರ್ತ್ಮನಾ ॥೪೫॥

ತತಃ ಪ್ರಹೃಷ್ಟವದನೋ ವಿಸ್ಮಯೋತ್ಫುಲ್ಲಲೋಚನಃ ।
ಮೂರ್ಧ್ನಿ ಬದ್ಧಾಂಜಲಿಪುಟೋ ಮಾರ್ಕಂಡೇಯೋ ಮಹಾತಪಾಃ ॥೪೬॥

ನಾಮಗೋತ್ರೇ ತತಃ ಪ್ರೋಚ್ಯ ದೀರ್ಘಾಯುರ್ಲೋಕಪೂಜಿತಃ ।
ತಸ್ಮೈ ಭಗವತೇ ಭಕ್ತ್ಯಾ ನಮಸ್ಕಾರಮಥಾಕರೋತ್ ॥೪೭॥

॥ ಮಾರ್ಕಂಡೇಯ ಉವಾಚ ॥

ಇಚ್ಛೇಯಂ ತತ್ವತೋ ಮಾಯಾಮಿಮಾಂ ಜ್ಞಾತುಂ ತವಾನಘ ।
ಯದೇಕಾರ್ಣವಮಧ್ಯಸ್ಥಃ ಶೇಷೇ ತ್ವಂ ಬಾಲರೂಪವಾನ್ ॥೪೮॥

ಕಿಂಸಂಜ್ಞಶ್ಚೈವ ಭಗವಾಂಲ್ಲೋಕೇ ವಿಜ್ಞಾಯಸೇ ಪ್ರಭೋ ।
ತರ್ಕಯೇ ತ್ವಾಂ ಮಹಾತ್ಮಾನಂ ಕೋ ಹ್ಯನ್ಯಃ ಸ್ಥಾತುಮರ್ಹತಿ ॥೪೯॥

---

೪೫. ಸರ್ವಭೂತಾಂತರಾತ್ಮನಾದ ನನ್ನ ಪುತ್ರನನ್ನು ಬಿಟ್ಟರೆ ಮತ್ತಾರಿಗೆ ತಾನೆ ಈ ಪ್ರಳಯಸಾಗರದಲ್ಲಿ ಯೋಗನಿದ್ರೆಯಿಂದ ವಿಹರಿಸುತ್ತಿರುವ ನನ್ನನ್ನು ನೋಡಲು ಸಾಧ್ಯವಾದೀತು?

೪೬-೪೭. ಬಳಿಕ ಮಾರ್ಕಂಡೇಯನ ಮುಖದಲ್ಲಿ ಹರ್ಷವು ಉಕ್ಕಿತು. ಆಶ್ಚರ್ಯದಿಂದ ಅವನ ಕಣ್ಣುಗಳು ಅರಳಿದುವು. ಮಹಾತಪಸ್ವಿಯೂ ಲೋಕಪೂಜಿತನೂ ದೀರ್ಘಾಯುವೂ ಆದ ಆತನು ತಲೆಯ ಮೇಲೆ ಕೈಗಳನ್ನೆತ್ತಿ ಮುಗಿದು, ತನ್ನ ನಾಮ ಗೋತ್ರಗಳನ್ನು ಹೇಳಿ ಆ ಭಗವಂತನಿಗೆ ನಮಸ್ಕಾರಮಾಡಿದನು.

೪೮. ಮಾರ್ಕಂಡೇಯನು ಹೇಳಿದನು.—ದೋಷರಹಿತನಾದ ಓ ಪರಮಾತ್ಮಾ, ಸರ್ವವ್ಯಾಪಿಯಾದ ಈ ಸಾಗರದ ನಡುವೆ ಬಾಲನ ರೂಪವನ್ನು ಧರಿಸಿ ನೀನು ಮಲಗಿರುವೆಯಲ್ಲಾ! ನಿನ್ನ ಈ ಮಾಯೆಯನ್ನು ವಾಸ್ತವವಾಗಿ ಅರಿಯಲಿಚ್ಛಿಸುವೆನು.

೪೯. ಪ್ರಭೂ, ಪೂಜ್ಯನಾದ ನಿನ್ನನ್ನು ಲೋಕದಲ್ಲಿ ಯಾವ ಯಾವ ಹೆಸರಿನಿಂದ ತಿಳಿಯುವರು? ನೀನು ಮಹಾತ್ಮನೆಂದು ಊಹಿಸುತ್ತೇನೆ. ಪ್ರಂಪಚವೆಲ್ಲವೂ ನಾಶವಾಗಿರುವಾಗ ಮತ್ತಾರು ತಾನೆ ಹೀಗೆ ನಿಲ್ಲಬಲ್ಲರು?

|| ಶ್ರೀ ಭಗವಾನುವಾಚ ||

ಅಹಂ ನಾರಾಯಣೋ ಬ್ರಹ್ಮ ಸರ್ವಭೂಸ್ಸರ್ವನಾಶನಃ ।
ಅಹಂ ಸಹಸ್ರಶೀರ್ಷಾಖ್ಯೈರ್ಯಃ ಪದೈರಭಿಸಂಜ್ಞಿತಃ ||೫೦||

ಆದಿತ್ಯವರ್ಣಃ ಪುರುಷೋ ಮಖೇ ಬ್ರಹ್ಮಮಯೋ ಮಖಃ ।
ಅಹಮಗ್ನಿರ್ಹವ್ಯವಾಹೋ ಯಾದಸಾಂ ಪತಿರವ್ಯಯಃ ||೫೧||

ಅಹಮಿಂದ್ರಪದೇ ಶಕ್ರೋ ವರ್ಷಾಣಾಂ ಪರಿವತ್ಸರಃ ।
ಅಹಂ ಯೋಗೀ ಯುಗಾದಿಶ್ಚ ಯುಗಾಂತೋ ವರ್ಷನೇವ ಚ ||೫೨||

ಅಹಂ ಸರ್ವಾಣಿ ಸತ್ವಾನಿ ದೈವತಾನ್ಯಖಿಲಾನಿ ತು ।
ಭುಜಂಗಾನಾಮಹಂ ಶೇಷಸ್ತಾರ್ಕ್ಷ್ಯೋ ವೈ ಸರ್ವಪಕ್ಷಿಣಾಂ ||೫೩||

ಕೃತಾಂತಃ ಸರ್ವಭೂತಾನಾಂ ವಿಶ್ವೇಷಾಂ ಕಾಲಸಂಜ್ಞಿತಃ ।
ಅಹಂ ಧರ್ಮಸ್ತಪಶ್ಚಾಹಂ ಸರ್ವಾಶ್ರಮನಿವಾಸಿನಾಂ ||೫೪||

---

೫೦. ಪೂಜ್ಯನಾದ ಭಗವಂತನು ಹೇಳಿದನು.—ಎಲೈ ಬ್ರಹ್ಮಜ್ಞಾನಿಯೇ, ನಾನು ನಾರಾಯಣ. ಎಲ್ಲವನ್ನೂ ನಿರ್ಮಿಸುವವನು ಮತ್ತು ಎಲ್ಲವನ್ನೂ ನಾಶಗೊಳಿಸುವವನು. ಸಹಸ್ರಶೀರ್ಷಾಪುರುಷಃ ಮೊದಲಾದ ಶ್ರುತಿವಾಕ್ಯಗಳು ನನ್ನನ್ನೇ ಹೇಳುವುವು.

೫೧. ನಾನು ಕೋಟಿಸೂರ್ಯಸದೃಶವಾದ ಕಾಂತಿಯಿಂದ ಕೂಡಿದ ಪುರುಷನು. ಯಾಗದಲ್ಲಿ ತಪೋಮಯವಾದ ಯಾಗ. ದೇವತೆಗಳಿಗೆ ಹವಿಸ್ಸನ್ನು ಕೊಂಡೊಯ್ಯುವ ಅಗ್ನಿ. ಜಲಜಂತುಗಳಲ್ಲಿ ಶ್ರೇಷ್ಠವಾದ ಮೊಸಳೆ.

೫೨. ನಾನು ಪರವೈಶ್ವರ್ಯಪದವಿಯಲ್ಲಿರುವವರಲ್ಲಿ ಇಂದ್ರ. ವರ್ಷಗಳಲ್ಲಿ ಪರಿವತ್ಸರ. ಯೋಗಿ, ಯುಗಾದಿ, ಯುಗಾಂತ, ವರ್ಷ ಎಲ್ಲವೂ ನಾನೇ.

೫೩. ಎಲ್ಲ ಪ್ರಾಣಿಗಳೂ ದೇವತೆಗಳೂ ನಾನೇ. ಸರ್ಪಗಳಲ್ಲಿ ಆದಿಶೇಷನೂ ಪಕ್ಷಿಗಳಲ್ಲೆಲ್ಲ ಗರುಡನೂ ನಾನಾಗಿರುವೆನು.

೫೪. ಸಕಲ ಪ್ರಾಣಿಗಳಿಗೂ ವಿನಾಶವನ್ನು ತರುವ ಯಮನು ನಾನು. ಎಲ್ಲರ ಆಯುರ್ಮಾನ ರೂಪವಾದ ಕಾಲವೂ ನಾನೇ. ಆಶ್ರಮ ವಾಸಿಗಳೆಲ್ಲರ ಧರ್ಮವೂ ತಪಸ್ಸೂ ನಾನೇ.

ಅಹಂ ಚೈವ ಸರಿದ್ದಿವ್ಯಾ ಕ್ಷೀರೋದಶ್ಚ ಮಹಾರ್ಣವಃ ।
ಯತ್ತತ್ಸತ್ಯಂ ಚ ಪರಮಮಹಮೇಕಃ ಪ್ರಜಾಪತಿಃ ॥೫೫॥

ಅಹಂ ಸಾಂಖ್ಯಮಹಂ ಯೋಗೋಽಪ್ಯಹಂ ತತ್ಪರಮಂ ಪದಂ ।
ಅಹಮಿಜ್ಯಾ ಕ್ರಿಯಾ ಚಾಹಮಹಂ ವಿದ್ಯಾಧಿಪಃ ಸ್ಮೃತಃ ॥೫೬॥

ಅಹಂ ಜ್ಯೋತಿರಹಂ ವಾಯುರಹಂ ಭೂಮಿರಹಂ ನಭಃ ।
ಅಹಮಾಪಃ ಸಮುದ್ರಾಶ್ಚ ನಕ್ಷತ್ರಾಣಿ ದಿಶೋ ದಶ ॥೫೭॥

ಅಹಂ ವರ್ಷಮಹಂ ಸೋಮಃ ಪರ್ಜನ್ಯೋಽಹಮಹಂ ರವಿಃ ।
ಕ್ಷೀರೋದಸಾಗರೇ ಚಾಹಂ ಸಮುದ್ರೇ ಬಡವಾಮುಖಃ ॥೫೮॥

ವಹ್ನಿಃ ಸಂವರ್ತಕೋ ಭೂತ್ವಾ ಪಿಬಂಸ್ತೋಯಮಯಂ ಹವಿಃ ।
ಅಹಂ ಪುರಾಣಃ ಪರಮಂ ತಥೈವಾಹಂ ಪರಾಯಣಂ ॥೫೯॥

---

೫೫. ದೇವಗಂಗೆಯೂ ಕ್ಷೀರಸಮುದ್ರವೂ ನಾನೇ. ಅತಿ ಶ್ರೇಷ್ಠವಾದ ಸತ್ಯವೂ ನಾನೇ. ಪ್ರಜಾಪತಿಯೂ ಸಹ ನಾನೊಬ್ಬನೇ.

೫೬. ಸಾಂಖ್ಯವೂ ಯೋಗವೂ ನಾನೇ. ಆ ಪರಮಪದವೂ ಸಹ ನಾನೇ. ದೇವತಾರಾಧನವೂ ಕರ್ಮವೂ ನಾನೇ. ವಿದ್ಯಾಧಿಪತಿಯೂ ನಾನೇ.

೫೭. ತೇಜಸ್ಸು ನಾನು, ವಾಯು ನಾನು, ಭೂಮಿ ನಾನು, ಆಕಾಶವು ನಾನು. ನೀರು, ಸಮುದ್ರಗಳು, ನಕ್ಷತ್ರಗಳು, ಹತ್ತು ದಿಕ್ಕುಗಳು ಇವೆಲ್ಲ ನಾನೇ.

೫೮. ಮಳೆಯು ನಾನು. ಚಂದ್ರನು ನಾನು. ಮಳೆಯ ಒಡೆಯನು ನಾನು. ಸೂರ್ಯನು ನಾನು. ಕ್ಷೀರಸಮುದ್ರದಲ್ಲಿ ನಾನು. ಸಮುದ್ರದಲ್ಲಿ ಬಡಬಾಗ್ನಿಯ ರೂಪದಲ್ಲಿರುವವನು ನಾನೇ.

೫೯. ನಾನು ಪ್ರಳಯಾಗ್ನಿಯಾಗಿ ಜಲರೂಪವಾದ ಹವಿಸ್ಸನ್ನು ಪಾನ ಮಾಡುತ್ತೇನೆ. ನಾನು ಅನಾದಿ. ಹಾಗೆಯೇ ಎಲ್ಲರಿಗೂ ಉತ್ತಮವಾದ ಗತಿಯೂ ನಾನೇ.

ಅಹಂ ಭೂತಸ್ಯ ಭವ್ಯಸ್ಯ ವರ್ತಮಾನಸ್ಯ ಸಂಭವಃ ।
ಯತ್ಕಿಂಚಿತ್ಪಶ್ಯಸೇ ವಿಪ್ರ ಯಚ್ಛೃಣೋಷಿ ಚ ಕಿಂಚನ ॥೬೦॥

ಯಲ್ಲೋಕೇ ಚಾನುಭವಸಿ ತತ್ಸರ್ವಂ ಮಾಮನುಸ್ಮರ ।
ವಿಶ್ವಂ ಸೃಷ್ಟಂ ಮಯಾ ಪೂರ್ವಂ ಸೃಜ್ಯಂ ಚಾದ್ಯಾಪಿ ಪಶ್ಯ ಮಾಂ ॥೬೧॥

ಯುಗೇ ಯುಗೇ ಚ ಸ್ರಕ್ಷ್ಯಾಮಿ ಮಾರ್ಕಂಡೇಯಾಖಿಲಂ ಜಗತ್ ।
ತದೇತದಖಿಲಂ ಸರ್ವಂ ಮಾರ್ಕಂಡೇಯಾವಧಾರಯ ॥೬೨॥

ಶುಶ್ರೂಷುರ್ಮಮ ಧರ್ಮಾಂಶ್ಚ ಕುಕ್ಷೌ ಚರ ಸುಖಂ ಮಮ ।
ಮಮ ಬ್ರಹ್ಮಾ ಶರೀರಸ್ಥೋ ದೇವೈಶ್ಚ ಋಷಿಭಿಃ ಸಹ ॥೬೩॥

ವ್ಯಕ್ತಮವ್ಯಕ್ತಯೋಗಂ ಮಾಮವಗಚ್ಛಾಸುರದ್ವಿಷಂ ।
ಅಹಮೇಕಾಕ್ಷರೋ ಮಂತ್ರಸ್ತ್ರ್ಯಕ್ಷರಶ್ಚೈವ ತಾರಕಃ ॥೬೪॥

---

೬೦. ಹಿಂದಿದ್ದುದು, ಮುಂದೆ ಇರತಕ್ಕುದು, ಈಗ ಇರುವುದು ಇವೆಲ್ಲಕ್ಕೂ ಕಾರಣ ನಾನು. ಓ ವಿಪ್ರಾ, ನೀನು ಏನನ್ನು ನೋಡುತ್ತೀಯೋ, ಏನನು ಕೇಳುತ್ತೀಯೋ, ಏನನ್ನು ಅನುಭವಿಸುತ್ತೀಯೋ ಅದೆಲ್ಲವೂ ನಾನೆಂದು ತಿಳಿ.

೬೧-೬೨. ಹಿಂದೆಯೂ ಈಗಲೂ ನಾನು ಸೃಷ್ಟಿಸಿದ ಜಗತ್ತನ್ನು ನಾನೆಂದೇ ತಿಳಿ. ಓ ಮಾರ್ಕಂಡೇಯಾ, ಪ್ರತಿಯೊಂದು ಯುಗದಲ್ಲೂ ಸಕಲ ಜಗತ್ತನ್ನೂ ಸೃಷ್ಟಿಸುವೆನು. ಎಲ್ಲದರಲ್ಲೂ ನಾನು ಅನುಪ್ರವೇಶ ಮಾಡಿರುವ ಕಾರಣ ಅದೆಲ್ಲವೂ ನಾನೇ ಆಗಿರುವೆನು.

೬೩. ನಾನು ಹೇಳುವ ಧರ್ಮಗಳನ್ನು ಕೇಳುತ್ತ ನನ್ನ ಉದರದಲ್ಲಿ ಸುಖವಾಗಿ ಸಂಚರಿಸುತ್ತಿರು. ದೇವತೆಗಳೊಡನೆಯೂ ಋಷಿಗಳೊಡನೆಯೂ ಕೂಡಿ ಬ್ರಹ್ಮನು ನನ್ನ ಶರೀರದಲ್ಲಿರುವನು.

೬೪. ಭಕ್ತಾದಿಗಳಿಗೆ ನಾನು ವ್ಯಕ್ತನಾದರೂ ನನ್ನ ಮಹಿಮೆ ಯಾರಿಗೂ ಗೋಚರವಾಗತಕ್ಕುದಲ್ಲ. ನಾನು ಅಸುರಶತ್ರುವೆಂದು ತಿಳಿದುಕೋ. ಅಕಾರ ವಾಚ್ಯನೂ ನಾನೇ. ಸಂಸಾರ ಬಂಧನದಿಂದ ಪಾರುಮಾಡುವ ಅಕ್ಷರ ತ್ರಯಾತ್ಮಕ ವಾದ ಪ್ರಣವದಿಂದ ಪ್ರತಿಪಾದ್ಯನೂ ನಾನೆ.

ಪರಸ್ತ್ರಿವರ್ಗಾದೋಂಕಾರ ಸ್ತ್ರಿವರ್ಗಾರ್ಥನಿದರ್ಶನಃ ।
ಏವಮಾದಿ ಪುರಾಣೇಶೋ ವದನ್ನೇವ ಮಹಾಮತಿಃ ॥೬೫॥

ವಕ್ತ್ರಮಾಹೃತವಾನಾಶು ಮಾರ್ಕಂಡೇಯಂ ಮಹಾಮುನಿಂ
ತತೋ ಭಗವತಃ ಕುಕ್ಷಿಂ ಪ್ರವಿಷ್ಟೋ ಮುನಿಸತ್ತಮಃ ।
ಸ ತಸ್ಮಿನ್ ಸುಖಮೇಕಾಂತೇ ಶುಶ್ರೂಷುರ್ಹಂಸಮವ್ಯಯಂ ॥೬೬॥

ಯೋಽಹಮೇವ ವಿವಿಧತನುಂ ಪರಿಶ್ರಿತೋ
  ಮಹಾರ್ಣವೇ ವ್ಯಪಗತಚಂದ್ರಭಾಸ್ಕರೇ ।
ಶನೈಶ್ಚರನ್ ಪ್ರಭುರಪಿ ಹಂಸಸಂಜ್ಞಿತೋಽ
  ಸೃಜಜ್ಜಗದ್ವಿಹರತಿ ಕಾಲಪರ್ಯಯೇ ॥೬೭॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವಪ್ರಾದುರ್ಭಾವೇ
ಸಪ್ತಷಷ್ಟ್ಯಧಿಕಶತತಮೋಽಧ್ಯಾಯಃ

---

೬೫–೬೬. ಧರ್ಮಾರ್ಥಕಾಮಗಳೆಂಬ ಮೂರು ಬಗೆಯ ಪುರುಷಾರ್ಥಗಳಿಗಿಂತ ಮೀರಿದ ಮೋಕ್ಷಫಲವನ್ನು ಕೊಡುವ ಓಂಕಾರಸ್ವರೂಪನು ನಾನು. ಧರ್ಮಾರ್ಥಕಾಮಗಳನ್ನು ಕೊಡುವವನೂ ನಾನೇ. ಇತ್ಯಾದಿಯಾಗಿ ಸರ್ವಜ್ಞನೂ ಪುರಾಣಪುರುಷನೂ ಆದ ಭಗವಂತನು ಮಾರ್ಕಂಡೇಯನಿಗೆ ಹೇಳುತ್ತ ಬೇಗನೆ ತನ್ನ ಬಾಯನ್ನು ತೆರೆದನು. ಆ ಮುನಿವರ್ಯನು ಕೂಡಲೆ ಭಗವಂತನ ಉದರವನ್ನು ಪ್ರವೇಶಿಸಿದನು. ಆ ಏಕಾಂತಸ್ಥಲದಲ್ಲಿ ಸುಖವಾಗಿ ನಿರ್ವಿಕಾರನೂ ಶುದ್ಧ ಸತ್ವಮಯನೂ ಆದ ಭಗವಂತನನ್ನು ಸೇವಿಸುತ್ತಿದ್ದನು.

೬೭. ನಾನೇ ಬಗೆಬಗೆಯ ಶರೀರಗಳನ್ನು ಧರಿಸುವೆನು. ಚಂದ್ರಸೂರ್ಯಾದಿಗಳಿಲ್ಲದ ಮಹಾಸಾಗರದಲ್ಲಿ ಮೆಲ್ಲಗೆ ಸಂಚರಿಸುತ್ತಿರುವೆನು. ಪ್ರಭುವಾಗಿದ್ದರೂ ಹಂಸನೆಂಬ ಸಂಜ್ಞೆಯನ್ನು ತಾಳಿ ಜಗತ್ತನ್ನು ಸೃಷ್ಟಿಸಿದೆನು. ಈ ಪ್ರಳಯಕಾಲದಲ್ಲಿ ವಿಹರಿಸುತ್ತಿರುವೆನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯವು ಭಗವಂತನ ವಿಶ್ವರೂಪವನ್ನು ವರ್ಣಿಸುತ್ತದೆ.

ಭಗವಂತನು ಪ್ರಳಯಸಾಗರದಲ್ಲಿ ಏಕಾಕಿಯಾಗಿ ಯೋಗಾಸಕ್ತನಾಗಿ ಮಲಗಿದ್ದನು. ಚಿರಾಯುವಾದ ಮಾರ್ಕಂಡೇಯ ಮಹಾಮುನಿಯು ಅವನ ಉದರದೊಳಗೆ ನಾನಾಪುಣ್ಯ ತೀರ್ಥಗಳಲ್ಲಿ ಸಂಚರಿಸುತ್ತಿದ್ದನು. ಒಂದುಸಾರಿ ಅವನು ದೇವದೇವನ ಮುಖದಿಂದ ತನಗೇ ತಿಳಿಯದಂತೆ ಹೊರಗೆ ಬಂದನು. ಎಲ್ಲೆಲ್ಲೂ ಕಗ್ಗತ್ತಲೆ ಕವಿದಿರುವುದನ್ನು ಕಂಡು ಇದೇನು ಕನಸೋ ಎಂದು ಭ್ರಾಂತನಾದನು. ನಾರಾಯಣನು ತನ್ನ ಮಾಯೆಯಿಂದ ಅವನನ್ನು ಪುನಃ ತನ್ನ ಜಠರದೊಳಕ್ಕೆ ಪ್ರವೇಶಮಾಡಿಸಿದನು. ಮಾರ್ಕಂಡೇಯನು ಮೊದಲಿನಂತೆ ಅಲ್ಲಿ ಪ್ರಪಂಚವೆಲ್ಲವನ್ನೂ ಕಂಡು ಬೆರಗಾದನು. ಹೀಗೆ ಎಷ್ಟೋ ಕಾಲ ಕಳೆಯಲು ಪುರಾಣಪುರುಷನಾದ ಮಹಾವಿಷ್ಣುವು ಮತ್ತೊಂದು ಸಾರಿ ಅವನನ್ನು ತನ್ನ ಮುಖದಿಂದ ಹೊರಗೆ ಬಿಟ್ಟನು. ಮತ್ತೆ ಅದೇ ಕಗ್ಗತ್ತಲೆ ಕವಿದ ಮಹಾಸಾಗರ; ಮಾರ್ಕಂಡೇಯನಿಗೆ ಬೆಪ್ಪು ಹಿಡಿದಂತಾಯಿತು. ಆಗ ಒಬ್ಬ ಬಾಲಕನು ಆಲದ ಮರದ ಕೊಂಬೆಯ ಮೇಲೆ ಮಲಗಿರುವುದನ್ನು ಅವನು ಕಂಡನು. ಸೂರ್ಯನಿಗಿಂತ ಬಹು ತೇಜೋಯುಕ್ತನಾಗಿದ್ದುದರಿಂದ ಅವನನ್ನು ದಿಟ್ಟಿಸಿ ನೋಡಲು ಮುನಿಗೆ ಆಗದೆ ಹೋಯಿತು. ಭಗವಂತನು ಶಿಶುರೂಪದಿಂದ ಅಲ್ಲಿ ಮಲಗಿದ್ದನೆಂಬುದನ್ನು ತಿಳಿದು ಬಹು ಸಂತೋಷದಿಂದ ಮಾರ್ಕಂಡೇಯನು ನಮಸ್ಕಾರಮಾಡಿದನು. ಆಗ ನಾರಾಯಣನು ತಾನು ಸರ್ವವ್ಯಾಪಿಯೆಂದೂ ಸರ್ವಾಂತರಾತ್ಮನೆಂದೂ ತಿಳಿಸಿ ಜಗತ್ತೆಲ್ಲವೂ ತನ್ನ ವಿಭೂತಿಯೆಂದು ವಿವರಿಸಿದನು. ಬಳಿಕ ಮಾರ್ಕಂಡೇಯ ಮುನಿಯು ದೇವದೇವನ ಅಪ್ಪಣೆಯಂತೆ ಆತನ ಉದರವನ್ನು ಮರಳಿ ಪ್ರವೇಶಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವದಲ್ಲಿ
ನೂರ ಅರವತ್ತೇಳನೆಯ ಅಧ್ಯಾಯವು ಮುಗಿದುದು.

## ಅಥಾಷ್ಟಷಷ್ಟ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಆಪ ಏವ ವಿಭುರ್ಭೂತ್ವಾ ಚಾರಯಾಮಾಸ ವೈ ತಪಃ ।
ಛಾದಯಿತ್ವಾತ್ಮನೋ ದೇಹಂ ಯಾದಸಾಂ ಕುಲಸಂಭವಂ || ೧ ||

ತತೋ ಮಹಾತ್ಮಾತಿಬಲೋ ಮತಿಂ ಲೋಕಸ್ಯ ಸರ್ಜನೇ ।
ಮಹತಾಂ ಪಂಚಭೂತಾನಾಂ ವಿಶ್ವೋ ವಿಶ್ವಮಚಿಂತಯತ್ || ೨ ||

ತಸ್ಯ ಚಿಂತಯಮಾನಸ್ಯ ನಿರ್ವಾತೇ ಸಂಸ್ಥಿತೇಽರ್ಣವೇ ।
ನಿರಾಕಾಶೇ ತೋಯಮಯೇ ಸೂಕ್ಷ್ಮೇ ಜಗತಿ ಗಹ್ವರೇ || ೩ ||

ಈಷತ್ ಸಂಕ್ಷೋಭಯಾಮಾಸ ಸೋಽರ್ಣವಂ ಸಲಿಲಾಶ್ರಯಃ ।
ಅನಂತರೋರ್ಮಿಭಿಃ ಸೂಕ್ಷ್ಮಮಥ ಛಿದ್ರಮಭೂತ್ಪುರಾ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಸರ್ವವ್ಯಾಪಿಯಾದ ಭಗವಂತನು ಜಲಜಂತುಗಳು ಹುಟ್ಟಬೇಕಾದ ಕಡೆಯಲ್ಲಿ ತಾನು ಧರಿಸಿದ ತನ್ನ ಅಪ್ರಾಕೃತ ದೇಹವನ್ನು ಮರೆಮಾಡಿಕೊಂಡು ಜಲಮಯನೇ ಆಗಿ ತಪಸ್ಸನ್ನು ಮಾಡುತ್ತಿದ್ದನು.

೨. ತರುವಾಯ ಮಹಾಮಹಿಮನೂ, ಸರ್ವಶಕ್ತನೂ, ವಿಶ್ವರೂಪಿಯೂ ಆದ ನಾರಾಯಣನು ಲೋಕವನ್ನು ಸೃಷ್ಟಿಸಬೇಕೆಂದು ಮನಸ್ಸು ಮಾಡಿದನು. ಆ ವಿಶ್ವವು ಪಂಚಮಹಾಭೂತಾತ್ಮಕವಾಗಿರಬೇಕೆಂದು ಆಲೋಚಿಸಿದನು.

೩-೪. ವಾಯುವೂ ಆಕಾಶವೂ ಇಲ್ಲದೆ ಜಗತ್ತೆಲ್ಲ ಸೂಕ್ಷ್ಮರೂಪವನ್ನು ತಾಳಿ ಕತ್ತಲೆ ಕವಿದಿರಲು, ಆ ಮಹಾಸಾಗರದಲ್ಲಿ ಪರಮಾತ್ಮನು ಜಗತ್ಸೃಷ್ಟಿಗಾಗಿ ಚಿಂತಿಸುತ್ತಿದ್ದನು. ನೀರಿನಲ್ಲಿಯೇ ಇದ್ದು ಆತನು ಸಾಗರವನ್ನು ಸ್ವಲ್ಪ ಅಲುಗಾಡಿಸಿದನು. ಒತ್ತೊತ್ತಾಗಿದ್ದ ಅಲೆಗಳಲ್ಲಿ ಮೊದಲು ಒಂದು ಬಿರುಕು ಹುಟ್ಟಿತು.

ಶಬ್ದಂ ಪ್ರತಿ ತದೋದ್ಭೂತೋ ಮಾರುತಶ್ಛಿದ್ರಸಂಭವಃ ।
ಸ ಲಬ್ಧ್ವಾಂತರಮಕ್ಷೋಭ್ಯೋ ವ್ಯವರ್ಧತ ಸಮೀರಣಃ ॥ ೫ ॥

ವಿವರ್ಧತಾ ಬಲವತಾ ವೇಗಾದ್ವಿಕ್ಷೋಭಿತೋಽರ್ಣವಃ ।
ತಸ್ಯಾರ್ಣವಸ್ಯ ಕ್ಷುಬ್ಧಸ್ಯ ತಸ್ಮಿನ್ನಂಭಸಿ ಮಂಥಿತೇ ।
ಕೃಷ್ಣವರ್ತ್ಮಾ ಸಮಭವತ್ ಪ್ರಭುರ್ವೈಶ್ವಾನರೋ ಮಹಾನ್ ॥ ೬ ॥

ತತಃ ಸ ಶೋಷಯಾಮಾಸ ಪಾವಕಃ ಸಲಿಲಂ ಬಹು ।
ಕ್ಷಯಾಜ್ಜಲನಿಧೇಶ್ಛಿದ್ರಮಭವದ್ವಿಸ್ತೃತಂ ನಭಃ ॥ ೭ ॥

ಆತ್ಮತೇಜೋದ್ಭವಾಃ ಪುಣ್ಯಾ ಆಪೋಽಮೃತರಸೋಪಮಾಃ ।
ಆಕಾಶಂ ಛಿದ್ರಸಂಭೂತಂ ವಾಯುರಾಕಾಶಸಂಭವಃ ॥ ೮ ॥

ಆಭ್ಯಾಂ ಸಂಘರ್ಷಣೋದ್ಭೂತಂ ಪಾವಕಂ ವಾಯುಸಂಭವಂ ।
ದೃಷ್ಟ್ವಾ ಪ್ರೀತೋ ಮಹಾದೇವೋ ಮಹಾಭೂತವಿಭಾವನಃ ॥ ೯ ॥

---

೫. ಆಗ ದೊಡ್ಡ ಶಬ್ದವಾಗಿ ಆ ಬಿರುಕಿನಲ್ಲಿ ವಾಯುವು ಉತ್ಪನ್ನವಾಯಿತು. ಅದು ಅಪ್ರತಿಹತವಾಗಿ ಬೆಳೆದು ಬಿರುಗಾಳಿಯಾಯಿತು.

೬. ಪ್ರಬಲವಾಗುತ್ತಿದ್ದ ಆ ಗಾಳಿಯ ವೇಗದಿಂದ ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ನೀರನ್ನು ಕಡೆದಂತಾಯಿತು. ಆಗ ಪ್ರಚಂಡವಾದ ಅಗ್ನಿ ಉತ್ಪನ್ನವಾಯಿತು.

೭. ಬಳಿಕ ಆ ಅಗ್ನಿಯು ಅಪಾರವಾದ ಆ ಜಲವನ್ನು ಬತ್ತಿಸಿತು. ಸಮುದ್ರವು ಕ್ಷೀಣವಾಗಲು ಆ ಬಿರುಕೇ ಅಗಲವಾಗಿ ಆಕಾಶವಾಯಿತು.

೮. ಅಮೃತಸಮಾನವೂ ಪುಣ್ಯವೂ ಆದ ನೀರು ಭಗವಂತನ ತೇಜಸ್ಸಿನಿಂದ ಹುಟ್ಟಿತು. ಆಕಾಶವು ಪ್ರಳಯಸಾಗರದ ಛಿದ್ರದಿಂದ ಉತ್ಪನ್ನವಾಯಿತು. ವಾಯು ಆಕಾಶದಿಂದ ಹುಟ್ಟಿತು.

೯. ಇವೆರಡರ ಸಂಘರ್ಷಣದಿಂದ ಅಗ್ನಿ ಹುಟ್ಟಿತು. ಅದನ್ನು ವಾಯುವಿನಿಂದ ಉತ್ಪನ್ನವಾದುದೆಂದು ಹೇಳುತ್ತಾರೆ. ಮಹಾಭೂತಗಳ ಸೃಷ್ಟಿಕರ್ತನಾದ ಭಗವಂತನು ಇದನ್ನು ನೋಡಿ ಪ್ರೀತನಾದನು.

ದೃಷ್ಟ್ವಾ ಭೂತಾನಿ ಭಗವಾಂಲ್ಲೋಕಸೃಷ್ಟ್ಯರ್ಥಮುತ್ತಮಂ ।
ಬ್ರಹ್ಮಣೋ ಜನ್ಮ ಸತತಂ ಬಹುರೂಪೋ ವ್ಯಚಿಂತಯತ್ ॥೧೦॥
ಚತುರ್ಯುಗಾಭಿಸಂಖ್ಯಾತೇ ಸಹಸ್ರಯುಗಪರ್ಯಯೇ ।
ಬಹುಜನ್ಮವಿಶುದ್ಧಾತ್ಮಬ್ರಹ್ಮಣೋಹರ್ನಿರುಚ್ಯತೇ ॥೧೧॥
ಯತ್ಪೃಥಿವ್ಯಾಂ ದ್ವಿಜೇಂದ್ರಾಣಾಂ ತಪಸಾ ಭಾವಿತಾತ್ಮನಾಂ ।
ಜ್ಞಾನಂ ದೃಷ್ಟಂ ತು ವಿಶ್ವಾರ್ಥೇ ಯೋಗಿನಾಂ ಯಾತಿ ಮುಖ್ಯತಾಂ ॥೧೨॥
ತಂ ಯೋಗವಂತಂ ವಿಜ್ಞಾಯ ಸಂಪೂರ್ಣೈರ್ಶ್ವರ್ಯಮುತ್ತಮಂ ।
ಪದೇ ಬ್ರಹ್ಮಣಿ ವಿಶ್ವೇಶಂ ನ್ಯಯೋಜಯತ ಯೋಗವಿತ್ ॥೧೩॥
ತತಸ್ತಸ್ಮಿನ್ ಮಹಾತೋಯೇ ಮಹೀಶೋ ಹರಿರಚ್ಯುತಃ ।
ಸ್ವಯಂ ಕ್ರೀಡಂಶ್ಚ ವಿಧವನ್ಮೋದತೇ ಸರ್ವಲೋಕಕೃತ್ ॥೧೪॥

---

೧೦. ಲೋಕಸೃಷ್ಟಿಗೆ ಆವಶ್ಯಕವಾದ ಮಹಾಭೂತಗಳು ಸೃಷ್ಟವಾದುದನ್ನು ನೋಡಿ ಬಹುರೂಪಿಯಾದ ಭಗವಂತನು ಸೃಷ್ಟಿಕಾರ್ಯಕ್ಕಾಗಿ ಬ್ರಹ್ಮನ ಉತ್ಪತ್ತಿಯನ್ನು ಕುರಿತು ಎಡೆಬಿಡದೆ ಆಲೋಚಿಸಿದನು.

೧೧. ದೇವಮಾನದಲ್ಲಿ ಕೃತಾದಿಚತುರ್ಯುಗಗಳು ಸಾವಿರಸಾರಿ ಮುಗಿದರೆ ಬ್ರಹ್ಮನಿಗೆ ಆ ಕಾಲವು ಒಂದು ದಿನವೆನಿಸಿಕೊಳ್ಳುತ್ತದೆ. ಆ ಪದವಿಗೆ ಬರಬೇಕಾದರೆ ಬ್ರಹ್ಮನು ಎಷ್ಟೋ ಜನ್ಮಗಳಲ್ಲಿ ತಪಸ್ಸುಮಾಡಿ ಶುದ್ಧಾತ್ಮನೆನಿಸಿಕೊಂಡಿರಬೇಕು.

೧೨-೧೩. ತಪಸ್ಸಿನಿಂದ ಪರಿಶುದ್ಧಮನಸ್ಕರಾದ ಬ್ರಾಹ್ಮಣೋತ್ತಮರು ಜಗತ್ತಿನ ಹಿತಕ್ಕೋಸ್ಕರವಾಗಿ ದಿವ್ಯವಾದ ಜ್ಞಾನವನ್ನು ಪಡೆಯುತ್ತಾರಷ್ಟೆ. ಅಂತಹ ಜ್ಞಾನಿಗಳಲ್ಲಿ ಮೊದಲಿಗನೂ ಪರಿಪೂರ್ಣವಾದ ಐಶ್ವರ್ಯದಿಂದ ಕೂಡಿದವನೂ, ಲೋಕದ ಅಧಿಪತಿಯೂ ಆದ ಮಹಾಯೋಗಿಯೇ ಬ್ರಹ್ಮನಾಗಲು ತಕ್ಕವನೆಂದು ಯೋಗೇಶ್ವರನಾದ ಭಗವಂತನು ಆಲೋಚಿಸಿ ಅವನನ್ನು ಬ್ರಹ್ಮನ ಪದವಿಗೆ ಗೊತ್ತುಮಾಡಿದನು.

೧೪. ಬಳಿಕ ಜಗದೀಶ್ವರನೂ, ಸರ್ವಲೋಕಗಳ ಸೃಷ್ಟಿಕರ್ತನೂ, ನಾಶರಹಿತನೂ ಆದ ವಿಷ್ಣುವು ಆ ಮಹಾಜಲದಲ್ಲಿ ತಾನೇ ಕ್ರೀಡಿಸುತ್ತ ಸಂತೋಷದಿಂದಿರುತ್ತಿದ್ದನು.

**ಪದ್ಮಂ ನಾಭ್ಯುದ್ಭವಂ ಚೈಕಂ ಸಮುತ್ಪಾದಿತವಾಂಸ್ತದಾ ।**
**ಸಹಸ್ರವರ್ಣಂ ವಿರಜಂ ಭಾಸ್ಕರಾಭಂ ಹಿರಣ್ಮಯಂ ॥೧೫॥**

**ಹುತಾಶನಜ್ವಲಿತಶಿಖೋಜ್ಜ್ವಲತ್ಪ್ರಭ**
**ಮುಪಸ್ಥಿತಂ ಶರದಮಲಾರ್ಕತೇಜಸಂ ।**
**ವಿರಾಜತೇ ಕಮಲಮುದಾರವರ್ಚಸಂ**
**ಮಹಾತ್ಮನಸ್ತನುರುಹಚಾರುದರ್ಶನಂ ॥೧೬॥**

**ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವ ಪ್ರಾದುರ್ಭಾವೇ ಪದ್ಮೋದ್ಭವೋ ನಾಮಾಷ್ಟಷಷ್ಟ್ಯಧಿಕಶತತಮೋಽಧ್ಯಾಯಃ**

---

೧೫. ಆಗ ತನ್ನ ನಾಭಿಯಿಂದ ಒಂದು ಪದ್ಮವನ್ನು ನಿರ್ಮಿಸಿದನು. ಅದು ಸಾವಿರ ಎಸಳುಗಳಿಂದ ಕೂಡಿ ಸೂರ್ಯನಂತೆ ಪ್ರಕಾಶಿಸುತ್ತ ಸುವರ್ಣಮಯವಾಗಿ ರಜೋರಹಿತವಾಗಿತ್ತು.

೧೬. ಬಹು ತೇಜಸ್ಸಿನಿಂದ ಕೂಡಿದ ಆ ಕಮಲವು ಜ್ವಲಿಸುತ್ತಿರುವ ಅಗ್ನಿಯ ಜ್ವಾಲೆಯಂತೆಯೂ ಶರತ್ಕಾಲದ ನಿರ್ಮಲನಾದ ಸೂರ್ಯನಂತೆಯೂ ಪ್ರಕಾಶಿಸುತ್ತಿತ್ತು. ಮತ್ತು ಮಹಾತ್ಮನಾದ ಆ ಭಗವಂತನ ರೋಮರಾಜಿಯಂತೆ ಸುಂದರವಾಗಿತ್ತು.

## ಅಧ್ಯಾಯದ ಸಾರಾಂಶ

ಭಗವಂತನ ನಾಭಿಯಲ್ಲಿ ಕಮಲವು ಉತ್ಪನ್ನವಾದುದನ್ನು ಈ ಅಧ್ಯಾಯವು ತಿಳಿಸುತ್ತದೆ.

ನಾರಾಯಣನು ಆ ಪ್ರಳಯ ಜಲದಲ್ಲಿಯೇ ತಪಸ್ಸು ಮಾಡುತ್ತಿದ್ದನು. ಕೆಲಕಾಲದ ಬಳಿಕ ಅವನಿಗೆ ಪ್ರಪಂಚವನ್ನು ಸೃಷ್ಟಿಸಬೇಕೆಂದು ತೋರಿತು. ಅದಕ್ಕಾಗಿ ಪಂಚಮಹಾಭೂತಗಳನ್ನು ನಿರ್ಮಿಸಿದನು. ಅವನ ನಾಭಿಯಿಂದ ಸುವರ್ಣಮಯವಾದ ಕಮಲವೊಂದು ಉತ್ಪನ್ನವಾಯಿತು. ಅದು ಬಹು ಪ್ರಕಾಶ ಯುಕ್ತವಾಗಿತ್ತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವದಲ್ಲಿ ಪದ್ಮೋದ್ಭವವೆಂಬ ನೂರ ಅರವತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಷ್ಟೈಕೋನಸಪ್ತತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಅಥ ಯೋಗವತಾಂ ಶ್ರೇಷ್ಠಮಸೃಜದ್ಭೂರಿತೇಜಸಂ ।
ಸ್ರಷ್ಟಾರಂ ಸರ್ವಲೋಕಾನಾಂ ಬ್ರಹ್ಮಾಣಂ ಸರ್ವತೋಮುಖಂ || ೧ ||

ತಸ್ಮಿನ್ ಹಿರಣ್ಮಯೇ ಪದ್ಮೇ ಬಹುಯೋಜನವಿಸ್ತೃತೇ ।
ಸರ್ವತೇಜೋಗುಣಮಯಂ ಪಾರ್ಥಿವೈರ್ಲಕ್ಷಣೈರ್ಯುತಂ || ೨ ||

ತಚ್ಚ ಪದ್ಮಂ ಪುರಾಣಜ್ಞಾಃ ಪೃಥಿವೀರೂಪಮುತ್ತಮಂ ।
ನಾರಾಯಣಸಮುದ್ಭೂತಂ ಪ್ರವದಂತಿ ಮಹರ್ಷಯಃ || ೩ ||

ಯಾ ಪದ್ಮಾ ಸಾ ರಸಾ ದೇವೀ ಪೃಥಿವೀ ಪರಿಚಕ್ಷ್ಯತೇ ।
ಯೇ ಪದ್ಮಸಾರಗುರವಸ್ತಾನ್ ದಿವ್ಯಾನ್ ಪರ್ವತಾನ್ವಿದುಃ || ೪ ||

---

೧-೨. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬಳಿಕ ನಾರಾಯಣನು ಯೋಗಿಗಳಲ್ಲಿ ಶ್ರೇಷ್ಠನೂ, ಅತಿ ತೇಜಸ್ವಿಯೂ, ಸಕಲಲೋಕಗಳ ಸೃಷ್ಟಿಕರ್ತನೂ, ಸಕಲ ತೇಜೋಗುಣಮಯನೂ ಆದ ಬ್ರಹ್ಮನನ್ನು ಬಹುಯೋಜನವಿಸ್ತೃತವೂ ಹಿರಣ್ಮಯವೂ ಆದ ಆ ಕಮಲದಲ್ಲಿ ಸೃಷ್ಟಿಸಿದನು. ಅವನಿಗೆ ನಾಲ್ಕು ಕಡೆಯೂ ಮುಖಗಳಿದ್ದುವು. ಅವನು ರಾಜಲಕ್ಷಣಗಳಿಂದ ಕೂಡಿದ್ದನು.

೩. ನಾರಾಯಣನಿಂದ ಉತ್ಪನ್ನವಾದ ಆ ಶ್ರೇಷ್ಠವಾದ ಪದ್ಮವು ಭೂಮಿಯ ರೂಪವಾದುದೆಂದು ಪುರಾಣಗಳನ್ನು ಬಲ್ಲ ಮಹರ್ಷಿಗಳು ಹೇಳುತ್ತಾರೆ.

೪. ರಸಭರಿತವಾದ ಆ ಪದ್ಮವನ್ನೇ ಪೂಜ್ಯಳಾದ ಪೃಥಿವಿಯೆನ್ನುತ್ತಾರೆ. ಪದ್ಮದಲ್ಲಿ ಗಟ್ಟಿಯಾದ ಉಬ್ಬುಗಳನ್ನು ಪರ್ವತಗಳೆಂದು ಹೇಳುವರು.

ಹಿಮವಂತಂ ಚ ಮೇರುಂ ಚ ನೀಲಂ ನಿಷಧಮೇವ ಚ ।
ಕೈಲಾಸಂ ಮುಂಜವಂತಂ ಚ ತಥಾನ್ಯಂ ಗಂಧಮಾದನಂ ॥ ೫ ॥

ಪುಣ್ಯಂ ತ್ರಿಶಿಖರಂ ಚೈವ ಕಾಂತಂ ಮಂದರಮೇವ ಚ ।
ಉದಯಂ ಪಿಂಜರಂ ಚೈವ ವಿಂಧ್ಯವಂತಂ ಚ ಪರ್ವತಂ ॥ ೬ ॥

ಏತೇ ದೇವಗಣಾನಾಂ ಚ ಸಿದ್ಧಾನಾಂ ಚ ಮಹಾತ್ಮನಾಂ ।
ಆಶ್ರಯಾಃ ಪುಣ್ಯಶೀಲಾನಾಂ ಸರ್ವಕಾಮಫಲಪ್ರದಾಃ ॥ ೭ ॥

ಏತೇಷಾಮಂತರೇ ದೇಶೋ ಜಂಬೂದ್ವೀಪ ಇತಿ ಸ್ಮೃತಃ ।
ಜಂಬೂದ್ವೀಪಸ್ಯ ಸಂಸ್ಥಾನಂ ಯಜ್ಞಿಯಾ ಯತ್ರ ವೈ ಕ್ರಿಯಾಃ ॥ ೮ ॥

ಏಭ್ಯೋ ಯತ್ಸ್ರವತೇ ತೋಯಂ ದಿವ್ಯಾಮೃತರಸೋಪಮಂ ।
ದಿವ್ಯಾಸ್ತೀರ್ಥಶತಾಧಾರಾಃ ಸುರಮ್ಯಾಃ ಸರಿತಃ ಸ್ಮೃತಾಃ ॥ ೯ ॥

---

೫-೬. ಹಿಮವಂತ, ಮೇರು, ನೀಲ, ನಿಷಧ, ಕೈಲಾಸ, ಮುಂಜವಂತ, ಗಂಧಮಾದನ, ಪುಣ್ಯಕರವಾದ ತ್ರಿಶಿಖರ, ಮನೋಹರವಾದ ಮಂದರ, ಉದಯ, ಪಿಂಜರ, ವಿಂಧ್ಯ, ಇವು ಪ್ರಸಿದ್ಧವಾದ ಪರ್ವತಗಳು.

೭. ಇವು ಎಲ್ಲ ಬಗೆಯ ಇಷ್ಟಾರ್ಥಗಳನ್ನೂ ಕೊಡತಕ್ಕವು. ದೇವಗಣ ಗಳಿಗೂ, ಮಹಾತ್ಮರೂ ಪುಣ್ಯಶೀಲರೂ ಆದ ಸಿದ್ಧರಿಗೂ ಆಶ್ರಯವಾಗಿವೆ.

೮. ಇವುಗಳ ನಡುವೆ ಇರುವ ದೇಶಕ್ಕೆ ಜಂಬೂದ್ವೀಪವೆಂದು ಹೆಸರು. ಇಲ್ಲಿ ಯಜ್ಞಸಂಬಂಧವಾದ ಕರ್ಮಗಳು ನಡೆಯುವುವು. ಇದೇ ಜಂಬೂ ದ್ವೀಪದ ಮುಖ್ಯ ಗುರುತು.

೯. ಇವುಗಳಿಂದ ಸ್ರವಿಸುವ ಜಲವು ದಿವ್ಯವಾದ ಅಮೃತರಸದಂತಿರುವುದು. ಆದರಿಂದ ನೂರಾರು ಪುಣ್ಯತೀರ್ಥಗಳಿಗೆ ಆಶ್ರಯವಾದ ಮನೋಹರವಾದ ನದಿಗಳು ಉತ್ಪನ್ನವಾಗಿವೆ.

ಸ್ಮೃತಾನಿ ಯಾನಿ ಪದ್ಮಸ್ಯ ಕೇಸರಾಣಿ ಸಮಂತತಃ ।
ಅಸಂಖ್ಯೇಯಾಃ ಪೃಥಿವ್ಯಾಸ್ತೇ ವಿಶ್ವೇ ವೈ ಧಾತುಪರ್ವತಾಃ ॥೧೦॥

ಯಾನಿ ಪದ್ಮಸ್ಯ ಪರ್ಣಾನಿ ಭೂರೀಣಿ ತು ನರಾಧಿಪ ।
ತೇ ದುರ್ಗಮಾಃ ಶೈಲಚಿತಾ ಮ್ಲೇಚ್ಛದೇಶಾ ವಿಕಲ್ಪಿತಾಃ ॥೧೧॥

ಯಾನ್ಯಧೋಭಾಗಪರ್ಣಾನಿ ತೇ ನಿವಾಸಾಸ್ತು ಭಾಗಶಃ ।
ದೈತ್ಯಾನಾಮುರಗಾಣಾಂ ಚ ಪತಂಗಾನಾಂ ಚ ಪಾರ್ಥಿವ ॥೧೨॥

ತೇಷಾಂ ಮಹಾರ್ಣವೋ ಯತ್ರ ತದ್ರಸೇತ್ಯಭಿಸಂಜ್ಞಿತಂ ।
ಮಹಾಪಾತಕಕರ್ಮಾಣೋ ಮಜ್ಜಂತೇ ಯತ್ರ ಮಾನವಾಃ ॥೧೩॥

ಪದ್ಮಸ್ಯಾಂತರತೋ ಯತ್ತದೇಕಾರ್ಣವಗತಾ ಮಹೀ ।
ಪ್ರೋಕ್ತಾಥ ದಿಕ್ಷು ಸರ್ವಾಸು ಚತ್ವಾರಃ ಸಲಿಲಾಕರಾಃ ॥೧೪॥

---

೧೦. ಪದ್ಮದ ಸುತ್ತಲೂ ಇರುವ ಕೇಸರಗಳೇ ಭೂಮಿಯಲ್ಲಿರುವ ಅಸಂಖ್ಯಾಕವಾದ ಖನಿಜಭರಿತವಾದ ಪರ್ವತಗಳು.

೧೧. ಓ ರಾಜಾ, ಆ ತಾವರೆಯ ಸುತ್ತಲೂ ಲೆಕ್ಕವಿಲ್ಲದಷ್ಟಿರುವ ಎಸಳುಗಳನ್ನು ಸಂಚಾರಕ್ಕೆ ಕಷ್ಟವಾಗಿ ಬೆಟ್ಟ ಕಾಡುಗಳಿಂದ ತುಂಬಿದ ಮ್ಲೇಚ್ಛದೇಶಗಳೆನ್ನುತ್ತಾರೆ.

೧೨. ಕೆಳಭಾಗದ ಎಸಳುಗಳು ದೈತ್ಯರು, ಸರ್ಪಗಳು ಮತ್ತು ಪಕ್ಷಿಗಳು ವಾಸಮಾಡುವ ದೇಶಭಾಗಗಳೆಂದು ತಿಳಿಯಬೇಕು.

೧೩. ಅವುಗಳಲ್ಲಿ ಮಹಾಸಾಗರವು ಇರತಕ್ಕ ಪ್ರದೇಶಕ್ಕೆ ರಸೆಯೆಂದು ಹೆಸರು. ಘೋರಪಾತಕಗಳನ್ನು ಮಾಡಿದ ಮನುಷ್ಯರು ಅಲ್ಲಿ ಮುಳುಗುತ್ತಾರೆ.

೧೪. ಪದ್ಮದ ಒಳಗಡೆ ಅಖಂಡಸಾಗರದಿಂದ ಆವೃತವಾದ ಪ್ರದೇಶಕ್ಕೆ ಮಹಿಯೆಂದು ಹೆಸರು. ಅದರ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಸಮುದ್ರಗಳಿರುವುವು.

ಏವಂ ನಾರಾಯಣಸ್ಯಾರ್ಥೇ ಮಹೀ ಪುಷ್ಕರಸಂಭವಾ ।
ಪ್ರಾದುರ್ಭಾವೋಽಪ್ಯಯಂ ತಸ್ಮಾನ್ನಾಮ್ನಾ ಪುಷ್ಕರಸಂಜ್ಞಿತಃ ॥೧೫॥

ಏತಸ್ಮಾತ್ಕಾರಣಾತ್ತಜ್ಞೈಃ ಪುರಾಣೈಃ ಪರಮರ್ಷಿಭಿಃ ।
ಯಾಜ್ಞಿಕೈರ್ವೇದದೃಷ್ಟಾಂತೈರ್ಯಜ್ಞೇ ಪದ್ಮವಿಧಿಃ ಸ್ಮೃತಃ ॥೧೬॥

ಏವಂ ಭಗವತಾ ತೇನ ವಿಶ್ವೇಷಾಂ ಧಾರಣಾವಿಧಿಃ ।
ಪರ್ವತಾನಾಂ ನದೀನಾಂ ಚ ಹ್ರದಾನಾಂ ಚೈವ ನಿರ್ಮಿತಃ ॥೧೭॥

ವಿಭುಸ್ತಥೈವಾಪ್ರತಿಮಪ್ರಭಾವಃ
ಪ್ರಭಾಕರಾಭೋ ವರುಣಾಸಿತದ್ಯುತಿಃ ।
ಶನೈಃ ಸ್ವಯಂಭೂಃ ಶಯತೇ ಸೃಜಜ್ಜಗ
ಜ್ಜಗನ್ಮಯಃ ಪದ್ಮನಿಧಿರ್ಮಹಾರ್ಣವೇ ॥೧೮॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವ ಪ್ರಾದುರ್ಭಾವೇ
ಏಕೋನಸಪ್ತತ್ಯಧಿಕಶತತಮೋಽಧ್ಯಾಯಃ

---

೧೫. ಹೀಗೆ ಪುಷ್ಕರದಿಂದ ಎಂದರೆ ಕಮಲದಿಂದ ಉತ್ಪನ್ನವಾದ, ಭೂಮಿಯು ನಾರಾಯಣನ ಸಲುವಾಗಿಯೇ ಮೀಸಲಾಗಿರುವುದು. ಆದ ಕಾರಣ ಹೀಗೆ ಹುಟ್ಟಿದ ಈ ಭೂಭಾಗಕ್ಕೂ ಸಹ ಪುಷ್ಕರವೆಂದೇ ಹೆಸರು.

೧೬. ಈ ಕಾರಣದಿಂದ ಪುಷ್ಕರದ ಉತ್ಪತ್ತಿಯನ್ನು ಬಲ್ಲ ಪ್ರಾಚೀನರೂ, ಯಜ್ಞವಿಧಿಯನ್ನು ಬಲ್ಲವರೂ, ವೇದಾರ್ಥವನ್ನರಿತವರೂ ಆದ ಮಹರ್ಷಿಗಳು ಯಜ್ಞದಲ್ಲಿ ಪದ್ಮವಿಧಿಯನ್ನು ಹೇಳಿರುವರು.

೧೭. ಹೀಗೆ ಆ ಭಗವಂತನು ಎಲ್ಲ ಪರ್ವತಗಳೂ, ನದಿಗಳೂ ಮತ್ತು ಜಲಾಶಯಗಳೂ ಭೂಮಿಯಲ್ಲಿ ಸ್ಥಿರವಾಗಿ ನಿಲ್ಲುವ ರೀತಿಯನ್ನು ಏರ್ಪಡಿಸಿದನು.

೧೮. ಸರ್ವವ್ಯಾಪಕನೂ, ಅಸದೃಶಮಹಿಮಶಾಲಿಯೂ, ಸೂರ್ಯನಂತೆ ತೇಜಸ್ವಿಯೂ, ವರುಣನಂತೆ ಶ್ಯಾಮವರ್ಣನೂ ಆದ ನಾರಾಯಣನು ಜಗತ್ತನ್ನು ಸೃಷ್ಟಿಸಿದನು ; ಮತ್ತು ಜಗದ್ರೂಪನೂ ಪದ್ಮದ ಆಶ್ರಯನೂ ಆದ ಆ ಭಗವಂತನು ಮಹಾಸಾಗರದಲ್ಲಿ ಶಯನಿಸಿದನು.

## ಅಧ್ಯಾಯ ೧೬೯

### ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಜಗತ್ತಿನ ಉತ್ಪತ್ತಿವಿಧಾನವನ್ನು ಹೇಳಿದೆ.

ನಾರಾಯಣನ ನಾಭಿಯಲ್ಲಿ ಉತ್ಪನ್ನವಾದ ಆ ಪದ್ಮದಿಂದ ಜಗತ್ತು ಉತ್ಪನ್ನವಾಯಿತು. ಪದ್ಮದ ಬೇರೆಬೇರೆ ಭಾಗಗಳು ಪೃಥ್ವಿಯ ಪರ್ವತ, ಬೆಟ್ಟ, ನದಿ ಮತ್ತು ದೇಶಗಳಾಗಿ ಪರಿಣಮಿಸಿದುವು. ಹೀಗೆ ಜಗತ್ತನ್ನು ನಿರ್ಮಿಸಿ ಭಗವಂತನು ಮಹಾಸಾಗರದಲ್ಲಿ ಶಯನಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವದಲ್ಲಿ
ನೂರ ಅರವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



## ಅಥ ಸಪ್ತತ್ಯಧಿಕಶತತಮೋಽಧ್ಯಾಯಃ

॥ ಮತ್ಸ್ಯ ಉವಾಚ ॥

ವಿಷ್ಣೌ ಸ್ವಪಿತಿ ಸಂಭೂತೋ ಮಧುರ್ನಾಮ ಮಹಾಸುರಃ ।
ತೇನೈವ ಚ ಸಹೋದ್ಭೂತೋ ಹ್ಯಸುರೋ ನಾಮ ಕೈಟಭಃ ॥ ೧ ॥

ತೌ ರಜಸ್ತಮಸೌ ವಿಘ್ನಸಂಭೂತೌ ತಾಮಸೌ ಗಣೌ ।
ಏಕಾರ್ಣವೇ ಜಗತ್ಸರ್ವಂ ಕ್ಷೋಭಯಂತೌ ಮಹಾಬಲೌ ॥ ೨ ॥

ದಿವ್ಯರಕ್ತಾಂಬರಧರೌ ಶ್ವೇತದೀಪ್ತಾಗ್ರದಂಷ್ಟ್ರಿಣೌ ।
ಕಿರೀಟಕುಂಡಲೋದಗ್ರೌ ಕೇಯೂರವಲಯೋಜ್ವಲೌ ॥ ೩ ॥

ಮಹಾವಿಕ್ರಮತಾಮ್ರಾಕ್ಷೌ ಪೀನೋರಸ್ಕೌ ಮಹಾಭುಜೌ ।
ಮಹಾಗಿರೇಃ ಸಂಹನನೌ ಜಂಗಮಾವಿವ ಪರ್ವತೌ ॥ ೪ ॥

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ವಿಷ್ಣುವು ಯೋಗ ನಿದ್ರೆಯಲ್ಲಿರುವಾಗ ಮಧುವೆಂಬ ಮಹಾಸುರನು ಜನಿಸಿದನು. ಅವನೊಡನೆಯೇ ಕೈಟಭನೆಂಬ ಅಸುರನೂ ಉದಿಸಿದನು.

೨. ವಿಘ್ನವನ್ನು ಮಾಡುವುದಕ್ಕೋಸ್ಕರವಾಗಿಯೇ ಉತ್ಪನ್ನರಾದ ಅವರಿಬ್ಬರೂ ರಜೋಗುಣದಿಂದಲೂ ತಮೋಗುಣದಿಂದಲೂ ತುಂಬಿದವರು. ತಾಮಸ ಗಣಗಳಿಗೆ ಸೇರಿದವರು. ಮಹಾಬಲರಾದ ಅವರು ಆ ಮಹಾಸಾಗರದಲ್ಲಿ ಜಗತ್ತೆಲ್ಲವನ್ನೂ ಪೀಡಿಸುತ್ತಿದ್ದರು.

೩-೪. ಅವರು ಸೊಗಸಾದ ಕೆಂಪು ಬಟ್ಟೆಯನ್ನುಟ್ಟಿದ್ದರು. ಅವರ ಕೋರೆ ದಾಡೆಗಳು ಬೆಳ್ಳಗೆ ಮೊನಚಾಗಿದ್ದುವು. ಉತ್ತಮವಾದ ಕಿರೀಟವನ್ನೂ ಕುಂಡಲಗಳನ್ನೂ ಧರಿಸಿ ಅವರು ತೋಳುಬಳೆಗಳಿಂದಲೂ ಕೈಬಳೆಗಳಿಂದಲೂ ಪ್ರಕಾಶಿಸುತ್ತಿದ್ದರು. ಅವರ ಪರಾಕ್ರಮವು ಅಸದೃಶವಾಗಿತ್ತು. ಕಣ್ಣುಗಳು ಕೆಂಪಗಿದ್ದುವು. ಎದೆಯು ಕೊಬ್ಬಿದ್ದಿತು. ತೋಳುಗಳು ಬಲವಾಗಿದ್ದುವು. ಅವರು ಮಹಾಪರ್ವತಾಕಾರದಿಂದ ಕೂಡಿ ಸಂಚರಿಸುತ್ತಿರುವ ಪರ್ವತಗಳೋ ಎಂಬಂತೆ ತೋರುತ್ತಿದ್ದರು.

**ನವಮೇಘಪ್ರತೀಕಾಶಾವಾದಿತ್ಯಸದೃಶಾನನೌ ।**
**ವಿದ್ಯುದಾಭೌ ಗದಾಗ್ರಾಭ್ಯಾಂ ಕರಾಭ್ಯಾಮತಿಭೀಷಣೌ ॥ ೫ ॥**

**ತೌ ಪಾದಯೋಸ್ತು ವಿನ್ಯಾಸಾದುತ್ಕ್ಷಿಪಂತಾವಿವಾರ್ಣವಂ ।**
**ಕಂಪಯಂತಾವಿವ ಹರಿಂ ಶಯಾನಂ ಮಧುಸೂದನಂ ॥ ೬ ॥**

**ತೌ ತತ್ರ ವಿಚರಂತೌ ಸ್ಮ ಪುಷ್ಕರೇ ವಿಶ್ವತೋಮುಖಂ ।**
**ಯೋಗಿನಾಂ ಶ್ರೇಷ್ಠಮಾಸಾದ್ಯ ದೀಪ್ತಂ ದದೃಶತುಸ್ತದಾ ॥ ೭ ॥**

**ನಾರಾಯಣಸಮಾಜ್ಞಾತಂ ಸೃಜಂತಮಖಿಲಾಃ ಪ್ರಜಾಃ ।**
**ದೈವತಾನಿ ಚ ವಿಶ್ವಾನಿ ಮಾನಸಾನಸುರಾನೃಷೀನ್ ॥ ೮ ॥**

**ತತಸ್ತಾವೂಚತುಸ್ತತ್ರ ಬ್ರಹ್ಮಾಣಮಸುರೋತ್ತಮೌ ।**
**ದೀಪ್ತೌ ಮುಮೂರ್ಷೂ ಸಂಕ್ರುದ್ಧೌ ರೋಷವ್ಯಾಕುಲಿತೇಕ್ಷಣೌ ॥ ೯ ॥**

---

೫. ಅವರು ಕರಿಯ ಮೋಡವನ್ನು ಹೋಲುತ್ತಿದ್ದರು. ಅವರ ಮುಖಗಳು ಸೂರ್ಯನಂತಿದ್ದುವು. ಮಿಂಚಿನಂತೆ ಅವರು ಹೊಳೆಯುತ್ತಿದ್ದರು. ಕೈಗಳಲ್ಲಿ ಗದೆಗಳನ್ನು ಹಿಡಿದು ಭಯಂಕರರಾಗಿ ಕಾಣುತ್ತಿದ್ದರು.

೬. ಅವರು ಹೆಜ್ಜೆಯಿಟ್ಟರೆ ಸಮುದ್ರವು ಉಕ್ಕಿ ದಡವನ್ನು ಮೀರುವಂತಿತ್ತು. ನಿದ್ರಾಸಕ್ತನಾಗಿದ್ದ ಮಹಾವಿಷ್ಣುವನ್ನು ಅವರು ನಡುಗಿಸುವರೋ ಎನ್ನುವಂತಿದ್ದರು.

೭-೮. ಅವರು ಆ ಪುಷ್ಕರದಲ್ಲಿ ಸಂಚರಿಸುತ್ತ ಯೋಗಿಗಳಲ್ಲಿ ಶ್ರೇಷ್ಠನೂ ತೇಜಸ್ವಿಯೂ ಆದ ಚತುರ್ಮುಖಬ್ರಹ್ಮನನ್ನು ಕಂಡರು. ಅವನು ನಾರಾಯಣನ ಅಪ್ಪಣೆಯಂತೆ ನಾನಾ ಬಗೆಯ ಪ್ರಜೆಗಳನ್ನೂ, ಮಾನಸಪುತ್ರರನ್ನೂ, ಅಸುರರನ್ನೂ ಋಷಿಗಳನ್ನೂ ಸೃಷ್ಟಿಸುತ್ತಿದ್ದನು.

೯. ಮರಣವು ಸಮೀಪಿಸಿದ್ದ ಆ ದೈತ್ಯೋತ್ತಮರು ಉಗ್ರತೇಜಸ್ಸಿನಿಂದ ಕೂಡಿ, ಕೋಪದಿಂದ ಕಣ್ಣುಗಳು ತೊಳಲುತ್ತಿರಲು, ಬ್ರಹ್ಮನಿಗೆ ಇಂತೆಂದು ಹೇಳಿದರು.

ಕಸ್ತ್ವಂ ಪುಷ್ಕರಮಧ್ಯಸ್ಥಃ ಸಿತೋಷ್ಣೀಷಶ್ಚತುರ್ಭುಜಃ ।
ಆವಾಮಗಣಯನ್ಮೋಹಾದಾಸ್ಸೇ ತ್ವಂ ವಿಗತಜ್ವರಃ ॥೧೦॥

ಏಹ್ಯಾಗಚ್ಛಾವಯೋರ್ಯುದ್ಧಂ ದೇಹಿ ತ್ವಂ ಕಮಲೋದ್ಭವಃ ।
ಆವಾಭ್ಯಾಂ ಪರಮೇಶಾಭ್ಯಾಮಶಕ್ತಸ್ತ್ವಮಿಹಾರ್ಣವೇ ॥೧೧॥

ತತ್ರ ಕಶ್ಚೋದ್ಭವಸ್ತುಭ್ಯಂ ಕೇನ ವಾಸಿ ನಿಯೋಜಿತಃ ।
ಕಃ ಸ್ರಷ್ಟಾ ಕಶ್ಚ ತೇ ಗೋಪ್ತಾ ಕೇನ ನಾಮ್ನಾ ವಿಧೀಯಸೇ ॥೧೨॥

॥ ಬ್ರಹ್ಮೋವಾಚ ॥

ಏಕ ಇತ್ಯುಚ್ಯತೇ ಲೋಕೈರವಿಚಿಂತ್ಯಃ ಸಹಸ್ರದೃಕ್ ।
ತತ್ಸಂಯೋಗೇನ ಭವತೋಃ ಕರ್ಮನಾಮಾವಗಚ್ಛತಾಂ ॥೧೩॥

---

೧೦. ಬಿಳಿಯರುಮಾಲನ್ನು ಹಾಕಿಕೊಂಡು ಪುಷ್ಕರದ ನಡುವೆ ನಾಲ್ಕು ಕೈಗಳಿಂದ ಮೆರೆಯುತ್ತಿರುವ ನೀನು ಯಾರು? ಮೋಹದಿಂದ ನಮ್ಮನ್ನು ಲೆಕ್ಕಿಸದೆ ಚಿಂತೆಯೇ ಇಲ್ಲದೆ ಕುಳಿತಿರುವೆ.

೧೧. ತಾವರೆಯಲ್ಲಿ ಹುಟ್ಟಿದ ನೀನು ನಮ್ಮೊಡನೆ ಯುದ್ಧವನ್ನು ಮಾಡು ಬಾ. ಆದರೆ ಸಮರ್ಥರಾದ ನಮ್ಮಿಬ್ಬರೊಡನೆ ಈ ಸಾಗರದಲ್ಲಿ ಯುದ್ಧಮಾಡಲು ನಿನ್ನೊಬ್ಬನಿಗೆ ಶಕ್ತಿ ಸಾಲದು.

೧೨. ಈ ಕಮಲದಲ್ಲಿ ನಿನ್ನ ಉತ್ಪತ್ತಿಯೆಂತು? ನಿನ್ನನ್ನು ಇಲ್ಲಿ ನಿಯಮಿಸಿದವರು ಯಾರು? ನಿನ್ನನ್ನು ಯಾರು ಸೃಷ್ಟಿಸಿದವರು? ನಿನ್ನ ರಕ್ಷಕರು ಯಾರು?

೧೩. ಬ್ರಹ್ಮನು ಹೇಳಿದನು.—ಎಲ್ಲರಿಂದಲೂ ಅದ್ವಿತೀಯನೆಂದು ಹೇಳಿಸಿಕೊಳ್ಳುತ್ತ ಊಹೆಗೆ ಮೀರಿದವನೂ, ಸರ್ವತೋಮುಖವಾದ ಜ್ಞಾನವುಳ್ಳವನೂ ಆದ ಭಗವಂತನ ಬಳಿಗೆ ಹೋಗಿ ನಿಮಗೆ ಬೇಕಾದ ಕೆಲಸವನ್ನೂ ಹೆಸರನ್ನೂ ತಿಳಿದುಕೊಳ್ಳಿರಿ.

|| ಮಧುಕೈಟಭಾವೂಚತುಃ ||

ನಾವಯೋಃ ಪರಮಂ ಲೋಕೇ ಕಿಂಚಿದಸ್ತಿ ಮಹಾಮತೇ ।
ಆವಾಭ್ಯಾಂ ಛಾದ್ಯತೇ ವಿಶ್ವಂ ತಮಸಾ ರಜಸಾಥ ವೈ ||೧೪||

ರಜಸ್ತಮೋಮಯಾವಾವಾಮೃಷೀಣಾಮವಲಂಘಿತೌ ।
ಛಾದ್ಯಮಾನೌ ಧರ್ಮಶೀಲೌ ದುಸ್ತರೌ ಸರ್ವದೇಹಿನಾಂ ||೧೫||

ಆವಾಭ್ಯಾಮುಹ್ಯತೇ ಲೋಕೋ ದುಷ್ಕರಾಭ್ಯಾಂ ಯುಗೇ ಯುಗೇ ।
ಆವಾಮರ್ಥಶ್ಚ ಕಾಮಶ್ಚ ಯಜ್ಞಃ ಸ್ವರ್ಗಪರಿಗ್ರಹಃ ||೧೬||

ಸುಖಂ ಯತ್ರ ಮುದಾ ಯುಕ್ತಂ ಯತ್ರ ಶ್ರೀಃ ಕೀರ್ತಿರೇವ ಚ ।
ಯೇಷಾಂ ಯತ್ಕಾಂಕ್ಷಿತಂ ಚೈವ ತತ್ತದಾವಾಂ ವಿಚಿಂತಯ ||೧೭||

---

೧೪. ಮಧು ಕೈಟಭರು ಹೇಳಿದರು.—ಎಲೈ ಮಹಾಪ್ರಾಜ್ಞನೇ, ನಮಗಿಂತ ಮೇಲಾದುದು ಲೋಕದಲ್ಲಿ ಯಾವುದೂ ಇಲ್ಲ. ನಾವು ರಜೋಗುಣದಿಂದಲೂ ತಮೋಗುಣದಿಂದಲೂ ಜಗತ್ತನ್ನು ಆವರಿಸುತ್ತೇವೆ.

೧೫. ನಾವು ರಜೋಗುಣ ತಮೋಗುಣದಿಂದಲೇ ನಿರ್ಮಿತರಾದವರು. ಋಷಿಗಳನ್ನೂ ಸಹ ಮೆಟ್ಟಿದ್ದೇವೆ. ಎಲ್ಲರ ಅಂತರಂಗದಲ್ಲಿಯೂ ಅಡಗಿದ್ದೇವೆ. ನಾವು ಧರ್ಮಶೀಲರು. ಯಾವ ಪ್ರಾಣಿಗೂ ನಮ್ಮನ್ನು ಮೀರಿ ಹೋಗುವುದು ಅಸಾಧ್ಯ.

೧೬. ಅಸಾಧ್ಯವಾದ ಕಾರ್ಯವನ್ನು ನೆರವೇರಿಸಬಲ್ಲ ನಾವು ಪ್ರತಿಯೊಂದು ಯುಗದಲ್ಲೂ ಲೋಕವನ್ನು ನಡೆಸುತ್ತೇವೆ. ಅರ್ಥ, ಕಾಮ, ಸ್ವರ್ಗವನ್ನು ಕೊಡುವ ಯಜ್ಞ ಇವೆಲ್ಲ ನಡೆಯುವುದು ನಮ್ಮಿಂದ.

೧೭. ಎಲ್ಲಿ ಸುಖವುಂಟೋ, ಎಲ್ಲಿ ಹರ್ಷವುಂಟೋ, ಎಲ್ಲಿ ಸಂಪತ್ತುಂಟೋ, ಎಲ್ಲಿ ವಿಷಯಾಭಿಲಾಷೆಯುಂಟೋ ಆ ಎಡೆಗಳಲ್ಲೆಲ್ಲ ನಾವಿರುವೆವು. ಆಯಾ ಪದಾರ್ಥಗಳೂ ನಾವೇ ಎಂದು ತಿಳಿದುಕೋ.

|| ಬ್ರಹ್ಮೋವಾಚ ||

ಯತ್ಪ್ರಾದ್ಯೋಗವತೋ ದೃಷ್ಟ್ವಾ ಯೋಗಃ ಪ್ರೂರ್ವಂ ಮಯಾರ್ಜಿತಃ |
ತಂ ಸಮಾಧಾಯ ಗುಣವತ್ಸತ್ತ್ವಂ ಚಾಸ್ಮಿ ಸಮಾಶ್ರಿತಃ ||೧೮||

ಯಃ ಪರೋ ಯೋಗಮತಿಮಾನ್ಯೋಗಾಖ್ಯಃ ಸತ್ತ್ವಮೇವ ಚ |
ರಜಸಸ್ತಮಸಶ್ಚೈವ ಯಃ ಸ್ರಷ್ಟಾ ವಿಶ್ವಸಂಭವಃ ||೧೯||

ತತೋ ಭೂತಾನಿ ಜಾಯಂತೇ ಸಾತ್ತ್ವಿಕಾನೀತರಾಣಿ ಚ |
ಸ ಏವ ಹಿ ಯುವಾಂ ನಾಶೇ ವಶೀ ದೇವೋ ಹನಿಷ್ಯತಿ ||೨೦||

ಸ್ವಪನ್ನೇವ ತತಃ ಶ್ರೀಮಾನ್ ಬಹುಯೋಜನವಿಸ್ತೃತಂ |
ಬಾಹುಂ ನಾರಾಯಣೋ ಬ್ರಹ್ಮ ಕೃತವಾನಾತ್ಮಮಾಯಯಾ ||೨೧||

ಕೃಷ್ಯಮಾಣೌ ತತಸ್ತಸ್ಯ ಬಾಹುನಾ ಬಾಹುಶಾಲಿನಃ |
ಚೇರತುಸ್ತೌ ವಿಗಲಿತೌ ಶಕುನಾವಿವ ಪೀವರೌ ||೨೨||

---

೧೮. ಬ್ರಹ್ಮನು ಹೇಳಿದನು.—ಯೋಗೀಶ್ವರನಾದ ಆ ಭಗವಂತನ ಕೃಪಾ ಕಟಾಕ್ಷದಿಂದ ನಾನು ಪ್ರಯತ್ನಪಟ್ಟು ಯೋಗಸಾಮರ್ಥ್ಯವನ್ನು ಸಂಪಾದಿಸಿದೆನು. ಅವನನ್ನೇ ನನ್ನ ಹೃದಯದಲ್ಲಿ ನೆಲೆಗೊಳಿಸಿರುವೆನು. ಕಲ್ಯಾಣಗುಣ ಸಂಪನ್ನನೆನಿಸಿ ಶುದ್ಧ ಸತ್ವಮಯನಾದ ಆತನನ್ನು ಆಶ್ರಯಿಸಿರುವೆನು.

೧೯. ಯೋಗಿಗಳಲ್ಲೆಲ್ಲ ಅವನೇ ಶ್ರೇಷ್ಠ. ಅವನನ್ನೇ ಯೋಗವೆಂದೂ ಸತ್ತ್ವ ಗುಣವೆಂದೂ ಕರೆಯುತ್ತಾರೆ. ಜಗತ್ಕಾರಣನಾದ ಅವನು ರಜೋಗುಣವನ್ನೂ ತಮೋಗುಣವನ್ನೂ ಸೃಷ್ಟಿಸಿದನು.

೨೦. ಸತ್ತ್ವಗುಣದಿಂದಲೂ ರಜೋಗುಣ ತಮೋಗುಣಗಳಿಂದಲೂ ಕೂಡಿದ ಪ್ರಾಣಿಗಳು ಆತನಿಂದಲೇ ಹುಟ್ಟುತ್ತವೆ. ನಿಮ್ಮನ್ನು ನಾಶಮಾಡಲು ಅವನೇ ಸಮರ್ಥನು. ಆ ದೇವನು ನಿಮ್ಮನ್ನು ಕೊಲ್ಲುವನು.

೨೧. ಬಳಿಕ ಪರಬ್ರಹ್ಮನಾದ ಶ್ರೀಮನ್ನಾರಾಯಣನು ಮಲಗಿದ್ದ ಹಾಗೆಯೇ ತನ್ನ ಮಾಯೆಯಿಂದ ಹಲವು ಯೋಜನಗಳ ದೂರ ತನ್ನ ತೋಳನ್ನು ನೀಡಿದನು.

೨೨. ಮಹಾಬಲಶಾಲಿಯಾದ ವಿಷ್ಣುವಿನ ತೋಳಿನ ಸೆಳೆತಕ್ಕೆ ಸಿಕ್ಕಿ ಅವರಿಬ್ಬರೂ ಚೆನ್ನಾಗಿ ಕೊಬ್ಬಿದ ಪಕ್ಷಿಗಳಂತೆ ಪರವಶರಾಗಿ ಚಲಿಸಿದರು.

ತತಸ್ತಾವಾಹತುರ್ಗತ್ವಾ ತದಾ ದೇವಂ ಸನಾತನಂ ।
ಪದ್ಮನಾಭಂ ಹೃಷೀಕೇಶಂ ಪ್ರಣಿಪತ್ಯ ಸ್ಥಿತಾವುಭೌ ॥೨೩॥
ಜಾನೀವಸ್ತ್ವಾಂ ವಿಶ್ವಯೋನಿಂ ತ್ವಾಮೇಕಂ ಪುರುಷೋತ್ತಮಂ ।
ತ್ವಾಮಾವಾಂ ಪಾಹಿ ಹೇತ್ವರ್ಥಮಿದಂ ನೌ ಶುದ್ಧಿಕಾರಣಂ ॥೨೪॥
ಅಮೋಘದರ್ಶನಃ ಸ ತ್ವಂ ಯತಸ್ತ್ವಾಂ ವಿದ್ವ ಶಾಶ್ವತಂ ।
ತತಸ್ತ್ವಾಮಾಗತಾವಾವಾಮಭಿತಃ ಪ್ರಸಮೀಕ್ಷಿತುಂ ॥೨೫॥
ತದಿಚ್ಛಾವೋ ವರಂ ದೇವ ತ್ವತ್ತೋಽದ್ಭುತಮರಿಂದಮ ।
ಅಮೋಘದರ್ಶನೋಽಸಿ ತ್ವಂ ನಮಸ್ತೇ ಸಮಿತಿಂಜಯ ॥೨೬॥

॥ ಶ್ರೀ ಭಗವಾನುವಾಚ ॥

ಕಿಮರ್ಥಂ ಹಿ ದ್ರುತಂ ಬ್ರೂತಂ ವರಂ ಹ್ಯಸುರಸತ್ತಮೌ ।
ದತ್ತಾಯುಷ್ಕೌ ಪುನರ್ಭೂಯೋ ರಹೋ ಜೀವಿತುಮಿಚ್ಛತಃ ॥೨೭॥

---

೨೩. ಬಳಿಕ ಅವರಿಬ್ಬರೂ ಶಾಶ್ವತನೂ ಇಂದ್ರಿಯಗಳ ಅಧಿಪತಿಯೂ ಆದ ಪದ್ಮನಾಭನ ಬಳಿಗೆ ಹೋಗಿ ನಮಸ್ಕರಿಸಿ ನಿಂತುಕೊಂಡು ಇಂತೆಂದರು.

೨೪. ದೇವಾ, ನೀನೇ ಜಗತ್ಕಾರಣ, ಅದ್ವಿತೀಯ, ಪುರುಷೋತ್ತಮ. ಇದು ನಮಗೆ ಗೊತ್ತು. ನೀನು ನಮ್ಮನ್ನು ಕಾರ್ಯೋದ್ದೇಶದಿಂದ ಸಲಹು· ಇದು ನಮ್ಮ ಶುದ್ಧಿಗೆ ಕಾರಣವಾಗುವುದು.

೨೫. ಅಂತಹ ಮಹಿಮಾಶಾಲಿಯಾದ ನಿನ್ನ ದರ್ಶನವು ವ್ಯರ್ಥವಾಗದು. ನೀನು ಶಾಶ್ವತನೆಂದು ನಾವು ತಿಳಿದಿರುವ ಕಾರಣ ನಿನ್ನ ದರ್ಶನವನ್ನು ಸರಿಯಾಗಿ ಮಾಡಬೇಕೆಂದು ಬಂದಿದ್ದೇವೆ.

೨೬. ಶತ್ರುನಾಶಕನಾದ ಓ ದೇವಾ, ನಿನ್ನಿಂದ ಅದ್ಭುತವಾದ ವರವನ್ನು ಅಪೇಕ್ಷಿಸುತ್ತೇವೆ. ನಿನ್ನ ದರ್ಶನವು ಸಾರ್ಥಕವಾಗತಕ್ಕುದು. ರಣಧೀರನಾದ ನಿನಗೆ ನಮಸ್ಕಾರ.

೨೭. ಭಗವಂತನು ಹೇಳಿದನು.—ಅಸುರೋತ್ತಮರೇ, ನಿಮಗೆ ವರವೇತಕ್ಕೆ ? ಬೇಗನೆ ಹೇಳಿರಿ. ನಿಮಗೆ ಬೇಕಾದಷ್ಟು ಆಯುಸ್ಸನ್ನು ಕೊಟ್ಟಿದ್ದೇನೆ. ಮರಳಿ ರಹಸ್ಯವಾಗಿ ಜೀವಿಸುವುದಕ್ಕೆ ಏಕೆ ಅಪೇಕ್ಷಿಸುತ್ತೀರಿ ?

॥ ಮಧುಕೈಟಭಾವೂಚತುಃ ॥

ಯಸ್ಮಿನ್ನ ಕಶ್ಚಿನ್ಮೃತವಾ೯ ದೇವ ತಸ್ಮಿ೯ ಪ್ರಭೋ ವಧಂ ।
ತಮಿಚ್ಛಾವೋ ವಧಶ್ಚೈವ ತ್ವತ್ತೋ ನೋಽಸ್ತು ಮಹಾವ್ರತ ॥೨೮॥

॥ ಶ್ರೀ ಭಗವಾನುವಾಚ ॥

ಬಾಢಂ ಯುವಾಂ ತು ಪ್ರವರೌ ಭವಿಷ್ಯತ್ಕಾಲಸಂಭವೇ ।
ಭವಿಷ್ಯತೋ ನ ಸಂದೇಹಃ ಸತ್ಯಮೇತದ್ಬ್ರವೀಮಿ ವಾಂ ॥೨೯॥

ವರಂ ಪ್ರದಾಯಾಥ ಮಹಾಸುರಾಭ್ಯಾಂ
ಸನಾತನೋ ವಿಶ್ವವರಃ ಸುರೋತ್ತಮಃ ।
ರಜಸ್ತಮೋವರ್ಗಭವಾಯುನೌ ಯಮೌ
ಮಮಂಥ ತಾವೂರುತಲೇನ ವೈ ಪ್ರಭುಃ ॥೩೦॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವ ಪ್ರಾದುರ್ಭಾವೇ
ಮಧುಕೈಟಭವಧೇ ಸಪ್ತತ್ಯಧಿಕಶತತಮೋಽಧ್ಯಾಯಃ

---

೨೮. ಮಧು ಕೈಟಭರು ಹೇಳಿದರು.—ಸರ್ವೇಶ್ವರನಾದ ಓ ದೇವಾ, ಎಲ್ಲಿ ಯಾವನೂ ಸತ್ತಿಲ್ಲವೋ ಅಂತಹ ಸ್ಥಳದಲ್ಲಿ ನಮ್ಮ ವಧವಾಗಲಿ. ಓ ಮಹಾವ್ರತಾ, ನೀನೇ ನಮ್ಮನ್ನು ವಧಿಸಬೇಕು.

೨೯. ಭಗವಂತನು ಹೇಳಿದನು.—ಹಾಗೆಯೇ ಆಗಲಿ. ಮುಂದೆ ಬರುವ ಕಾಲದಲ್ಲಿ ನೀವು ಪ್ರಸಿದ್ಧರಾಗುವಿರಿ; ಸಂದೇಹವಿಲ್ಲ. ನಾನು ಹೇಳುವುದು ಸತ್ಯ.

೩೦. ಶಾಶ್ವತನೂ, ಜಗತ್ತಿನಲ್ಲಿ ಶ್ರೇಷ್ಠನೂ, ದೇವೋತ್ತಮನೂ ಆದ ಭಗವಂತನು ಮಹಾಸುರರಿಬ್ಬರಿಗೂ ವರವನ್ನು ಕೊಟ್ಟು ರಜಸ್ತಮೋಗುಣಗಳಿಗೆ ನೆಲೆಯೆನಿಸಿದ ಆ ಯಮಳರನ್ನು ತನ್ನ ತೊಡೆಯ ಮೇಲೆ ಸಂಹರಿಸಿದನು.

ಅಧ್ಯಾಯ ೧೭೦

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಮಧು ಕೈಟಭರೆಂಬ ಅಸುರರ ಸಂಹಾರವನ್ನು ವರ್ಣಿಸಿದೆ.

ನಾರಾಯಣನಿಂದ ಆಜ್ಞಪ್ತನಾದ ಬ್ರಹ್ಮನು ಜಗತ್ಸೃಷ್ಟಿಯಲ್ಲಿ ತೊಡಗಿದ್ದನು. ರಜೋಗುಣತಮೋಗುಣಮಯರಾದ ಮಧುಕೈಟಭರೆಂಬ ಅಸುರರಿಬ್ಬರು ಅವನ ಬಳಿಗೆ ಹೋಗಿ ಅವನನ್ನು ಯುದ್ಧಕ್ಕೆ ಕರೆದರು. ಸರ್ವಕಾರಣನಾದ ವಿಷ್ಣುವಿನ ಬಳಿಗೆ ಹೋಗುವಂತೆ ಅವನು ಅವರಿಗೆ ಉತ್ತರವಿತ್ತನು. ಯೋಗಶಯನದಲ್ಲಿದ್ದ ನಾರಾಯಣನು ಹಾಗೆಯೇ ತನ್ನ ಕೈಯನ್ನು ಚಾಚಿ ಅವರಿಬ್ಬರನ್ನೂ ತನ್ನ ಬಳಿಗೆ ಎಳೆದುಕೊಂಡನು. ಅಸುರರಿಬ್ಬರೂ ಆತನ ಮಹಿಮೆಯನ್ನು ಕೊಂಡಾಡಿ ಅವನಿಗೆ ನಮಸ್ಕಾರ ಮಾಡಿದರು. ಮತ್ತು ಅದ್ಭುತವಾದ ವರವೊಂದನ್ನು ಕರುಣಿಸಬೇಕೆಂದೂ ಯಾರೂ ಸತ್ತಿಲ್ಲದ ಸ್ಥಳದಲ್ಲಿ ಆ ಭಗವಂತನಿಂದಲೇ ತಮ್ಮ ವಧವಾಗಬೇಕೆಂದೂ ಬೇಡಿದರು. ಮುಂದೆ ಅವರು ಪ್ರಖ್ಯಾತರಾಗುವರೆಂದು ಹೇಳಿ ಅಸುರಾಂತಕನು ಅವರಿಬ್ಬರನ್ನೂ ತನ್ನ ತೊಡೆಯ ಮೇಲೆ ಸಂಹರಿಸಿದನು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವಪ್ರಕರಣದಲ್ಲಿ ಮಧುಕೈಟಭವಧವೆಂಬ ನೂರ ಎಪ್ಪತ್ತನೆಯ ಅಧ್ಯಾಯವು ಮುಗಿದುದು.

# ಅಥೈಕಸಪ್ತತ್ಯಧಿಕಶತತಮೋಽಧ್ಯಾಯಃ

|| ಮತ್ಸ್ಯ ಉವಾಚ ||

ಸ್ಥಿತ್ವಾ ಚ ತಸ್ಮಿನ್ ಕಮಲೇ ಬ್ರಹ್ಮಾ ಬ್ರಹ್ಮವಿದಾಂ ವರಃ |
ಊರ್ಧ್ವಬಾಹುರ್ಮಹಾತೇಜಾಸ್ತಪೋ ಘೋರಂ ಸಮಾಶ್ರಿತಃ || ೧ ||

ಪ್ರಜ್ವಲನ್ನಿವ ತೇಜೋಭಿರ್ಭಾಭಿಃ ಸ್ವಾಭಿಸ್ತಮೋನುದಃ |
ಬಭಾಸೇ ಸರ್ವಧರ್ಮಸ್ಥಃ ಸಹಸ್ರಾಂಶುರಿವಾಂಶುಭಿಃ || ೨ ||

ಅಥಾನ್ಯದ್ರೂಪಮಾಸ್ಥಾಯ ಸ್ರಷ್ಟಾ ನಾರಾಯಣೋಽವ್ಯಯಃ |
ಆಜಗಾಮ ಮಹಾತೇಜಾ ಯೋಗಾಚಾರ್ಯೋ ಮಹಾಯಶಾಃ || ೩ ||

ಸಾಂಖ್ಯಾಚಾರ್ಯೋ ಹಿ ಮತಿಮಾನ್ ಕಪಿಲೋ ಬ್ರಾಹ್ಮಣೋ ವರಃ |
ಉಭಾವಪಿ ಮಹಾತ್ಮಾನೌ ಸ್ತುವಂತೌ ಕ್ಷೇತ್ರತತ್ಪರೌ || ೪ ||

---

೧. ಮತ್ಸ್ಯರೂಪನಾದ ಭಗವಂತನು ಹೇಳಿದನು.—ಬ್ರಹ್ಮಜ್ಞಾನಿಗಳಲ್ಲಿ ಅಗ್ರೇಸರನೂ, ಅತಿ ತೇಜಸ್ವಿಯೂ ಆದ ಬ್ರಹ್ಮನು ಆ ಕಮಲದಲ್ಲಿ ನಿಂತು ಬಾಹುಗಳನ್ನು ಮೇಲೆತ್ತಿಕೊಂಡು ಘೋರವಾದ ತಪಸ್ಸಿಗೆ ತೊಡಗಿದನು.

೨. ತನ್ನ ತೇಜಸ್ಸುಗಳಿಂದ ಜ್ವಲಿಸುತ್ತಿರುವನೋ ಎಂಬಂತೆ ಕಾಂತಿಯಿಂದ ಕತ್ತಲೆಯನ್ನು ದೂರಮಾಡುತ್ತ, ಸಕಲಧರ್ಮಗಳನ್ನೂ ಅನುಸರಿಸುತ್ತ ಆ ಬ್ರಹ್ಮನು ಕಿರಣಗಳಿಂದ ಕೂಡಿದ ಸೂರ್ಯನಂತೆ ಶೋಭಿಸುತ್ತಿದ್ದನು.

೩. ಬಳಿಕ ಅಪರಿಮಿತ ತೇಜೋವಂತನೂ, ಯೋಗಾಚಾರ್ಯನೂ, ಬಹುಕೀರ್ತಿವಂತನೂ, ನಿರ್ವಿಕಾರನೂ, ಜಗತ್ಸೃಷ್ಟಿಕರ್ತನೂ ಆದ ನಾರಾಯಣನು ಬೇರೆ ರೂಪವನ್ನು ತಾಳಿ ಅಲ್ಲಿಗೆ ಬಂದನು.

೪. ಸಾಂಖ್ಯದರ್ಶನದ ಆಚಾರ್ಯನೂ, ಮಹಾಪ್ರಾಜ್ಞನೂ, ಬ್ರಾಹ್ಮಣೋತ್ತಮನೂ ಆದ ಕಪಿಲಮಹರ್ಷಿಯೂ ಸಹ ಆತನ ಜೊತೆಯಲ್ಲಿದ್ದನು. ಆ ಮಹಾತ್ಮರಿಬ್ಬರೂ ಬ್ರಹ್ಮನು ತಪಸ್ಸುಮಾಡುತ್ತಿದ್ದ ಕ್ಷೇತ್ರಾಭಿಮುಖರಾಗಿ ಅವನನ್ನು ಶ್ಲಾಘಿಸುತ್ತ ಬಂದರು.

ತೌ ಪ್ರಾಪ್ತಾವೂಚತುಸ್ತತ್ರ ಬ್ರಹ್ಮಾಣಮಮಿತೌಜಸಂ ।
ಪರಾವರವಿಶೇಷಜ್ಞೌ ಪೂಜಿತೌ ಚ ಮಹರ್ಷಿಭಿಃ ॥ ೫ ॥

ಬ್ರಹ್ಮಾತ್ಮಾ ದೃಢಬಂಧಶ್ಚ ವಿಶಾಲೋ ಜಗದಾಸ್ಥಿತಃ ।
ಗ್ರಾಮಣೀಃ ಸರ್ವಭೂತಾನಾಂ ಬ್ರಹ್ಮಾ ತ್ರೈಲೋಕ್ಯಪೂಜಿತಃ ॥ ೬ ॥

ತಯೋಸ್ತದ್ವಚನಂ ಶ್ರುತ್ವಾ ಬ್ರಹ್ಮಾಭ್ಯಾಹೃತಯೋಗವಿತ್ ।
ತ್ರೀನಿಮಾನ್ಕೃತವಾಂಲ್ಲೋಕಾನ್ಯಥೇಯಂ ಬ್ರಹ್ಮಣಃ ಶ್ರುತಿಃ ॥ ೭ ॥

ಪುತ್ರಂ ಸ್ವಾಯಂಭುವಂ ಚೈವಮುತ್ಪಾದಯಿತವಾನೃಷಿಃ ।
ತಸ್ಯಾಗ್ರೇ ವಾಗ್ಯತಸ್ತಸ್ಥೌ ಬ್ರಹ್ಮಾಣಮಜಮವ್ಯಯಂ ॥ ೮ ॥

ಸೋತ್ಪನ್ನಮಾತ್ರೋ ಬ್ರಹ್ಮಾಣಮುಕ್ತವಾನ್ ಮಾನಸಃ ಸುತಃ ।
ಕಿಂ ಕುರ್ವನ್ತವ ಸಾಹಾಯ್ಯಂ ಬ್ರವೀತು ಭಗವಾನೃಷಿಃ ॥ ೯ ॥

---

೫. ಪರತತ್ವದ ಮತ್ತು ಅವರತತ್ವದ ಲಕ್ಷಣವನ್ನು ಅರಿತು ಮಹರ್ಷಿಗಳಿಂದ ಪೂಜಿತರಾದ ಅವರಿಬ್ಬರೂ ಅಪರಿಮಿತವಾದ ತೇಜಸ್ಸಿನಿಂದ ಕೂಡಿದ ಬ್ರಹ್ಮನ ಬಳಿಗೆ ಬಂದು ಇಂತೆಂದರು.

೬. "ಮೂರುಲೋಕಗಳಿಂದಲೂ ಪೂಜಿತನಾದ ಬ್ರಹ್ಮನು ಪರಬ್ರಹ್ಮನಲ್ಲಿ ತನ್ನ ಮನಸ್ಸನ್ನು ದೃಢವಾಗಿ ನಿಲ್ಲಿಸಿರುವನು. ವಿಶಾಲವಾದ ಮನೋಭಾವವುಳ್ಳವನಾಗಿ ಜಗತ್ಸೃಷ್ಟಿಯಲ್ಲಿ ತೊಡಗಿರುವನು. ಸಕಲ ಪ್ರಾಣಿಗಳ ನಾಯಕನಾಗಿರುವನು" ಎಂದು ಹೇಳಿದರು.

೭. ಬ್ರಹ್ಮನು ಅವರಿಬ್ಬರು ಹೇಳಿದ ಆ ಮಾತನ್ನು ಕೇಳಿ ಅವರಿಂದ ಯೋಗವನ್ನು ತಿಳಿದುಕೊಂಡು ವೇದಗಳಲ್ಲಿ ಹೇಳಿರುವಂತೆ ಈ ಮೂರು ಲೋಕಗಳನ್ನೂ ನಿರ್ಮಿಸಿದನು.

೮. ಋಷಿ ಶ್ರೇಷ್ಠನಾದ ಬ್ರಹ್ಮನು ಸ್ವಾಯಂಭುವನೆಂಬ ಪುತ್ರನನ್ನು ಸೃಷ್ಟಿಸಿದನು. ಅವನು ಸ್ವಯಂಭುವೂ ನಿರ್ವಿಕಾರನೂ ಆದ ಬ್ರಹ್ಮನ ಮುಂದೆ ಮೌನದಿಂದ ನಿಂತಿದ್ದನು.

೯. ಹುಟ್ಟಿದ ಕೂಡಲೇ ಆ ಮಾನಸ ಪುತ್ರನು ಬ್ರಹ್ಮನಿಗೆ ಹೇಳಿದನು. "ಪೂಜ್ಯನಾದ ಎಲೈ ಋಷಿಯೇ, ನಿನಗೆ ನಾನೇನು ಸಹಾಯಮಾಡಲಿ ಹೇಳು."

|| ಬ್ರಹ್ಮೋವಾಚ ||

ಯ ಏಷ ಕಪಿಲೋ ಬ್ರಹ್ಮಾ ನಾರಾಯಣಮಯಸ್ತಥಾ ।
ವದತೇ ಭವತಸ್ತತ್ತ್ವಂ ತತ್ಕುರುಷ್ವ ಮಹಾಮತೇ ||೧೦||

ಬ್ರಹ್ಮಣಸ್ತು ತದರ್ಥಂ ತು ತದಾ ಭೂಯಃ ಸಮುತ್ಥಿತಃ ।
ಶುಶ್ರೂಷುರಸ್ಮಿ ಯುವಯೋಃ ಕಿಂ ಕರೋಮಿ ಕೃತಾಂಜಲಿಃ ||೧೧||

|| ಶ್ರೀ ಭಗವಾನುವಾಚ ||

ಯತ್ಸತ್ಯಮಕ್ಷರಂ ಬ್ರಹ್ಮನ್ನಷ್ಟಾದಶವಿಧಂ ತು ತತ್ ।
ಯತ್ಸತ್ಯಂ ಯದೃತಂ ತತ್ತು ಪರಂ ಪದಮನುಸ್ಮರ ||೧೨||

ಏತದ್ವಚೋ ನಿಶಮ್ಯೈವ ಯಯೌ ಸ ದಿಶಮುತ್ತರಾಂ ।
ಗತ್ವಾ ಚ ತತ್ರ ಬ್ರಹ್ಮತ್ವಮಗಮಜ್ಜ್ಞಾನತೇಜಸಾ ||೧೩||

---

೧೦. ಬ್ರಹ್ಮನು ಹೇಳಿದನು.—ಎಲೈ ಪ್ರಾಜ್ಞನೇ, ನಾರಾಯಣರೂಪನೂ ಬ್ರಹ್ಮಜ್ಞಾನಿಯೂ ಆದ ಈ ಕಪಿಲ ಮುನಿಯು ನಿನಗೆ ಯಾವ ತತ್ತ್ವವನ್ನು ಹೇಳುತ್ತಾನೋ ಅದನ್ನು ನಡೆಸು.

೧೧. ಬ್ರಹ್ಮನು ಹೇಳಿದಂತೆ ತತ್ತ್ವವನ್ನರಿಯುವುದಕ್ಕಾಗಿ ಸ್ವಾಯಂಭುವ ಮನುವು ಕಪಿಲ ಮತ್ತು ನಾರಾಯಣರ ಬಳಿಗೆ ಹೋಗಿ "ನಿಮ್ಮ ಸೇವೆಮಾಡಲು ಬಯಸುತ್ತೇನೆ· ನಿಮಗಾಗಿ ಏನು ಮಾಡಲಿ? ಇದೋ ಕೈ ಮುಗಿದುಕೊಂಡು ಸಿದ್ಧನಾಗಿದ್ದೇನೆ" ಎಂದನು.

೧೨. ಭಗವಂತನು ಹೇಳಿದನು. ಎಲೈ ತತ್ವಜ್ಞಾನಾಭಿಲಾಷಿಯೇ, ಸತ್ಯವೂ ಅಕ್ಷರವೂ ಎನಿಸಿದ ಪ್ರಕೃತಿ ತತ್ವವು ಪ್ರಕೃತಿ, ಮಹತ್ತು ಅಹಂಕಾರ, ಪಂಚ ತನ್ಮಾತ್ರಗಳು, ಪಂಚಭೂತಗಳು, ಮತ್ತು ಪಂಚೇಂದ್ರಿಯಗಳೆಂಬ ಹದಿನೆಂಟು ವಿಧವಾಗಿರುವುದು. ಪುರುಷ ತತ್ತ್ವವನ್ನೂ ಸಹ ಸತ್ಯವೆಂದೂ ಋತವೆಂದೂ ಹೇಳುವರು. ಆ ಪುರುಷನ ಶ್ರೇಷ್ಠವಾದ ಈ ಸ್ವಸ್ವರೂಪಸ್ಥಿತಿಯನ್ನು ನೀನು ಚಿಂತಿಸು.

೧೩. ಈ ಮಾತನ್ನು ಕೇಳಿದ ಕೂಡಲೇ ಸ್ವಾಯಂಭುವಮನು ಉತ್ತರ ದಿಕ್ಕಿಗೆ ಹೋಗಿ, ಜ್ಞಾನವನ್ನಾರ್ಜಿಸಿ, ಅದರ ತೇಜೋಬಲದಿಂದ ಬ್ರಹ್ಮಸಾಯುಜ್ಯವನ್ನು ಪಡೆದನು.

ತತೋ ಬ್ರಹ್ಮಾ ಭುವಂ ನಾಮ ದ್ವಿತೀಯಮಸೃಜತ್ಪ್ರಭುಃ ।
ಸಂಕಲ್ಪಯಿತ್ವಾ ಮನಸಾ ತನೋೇವ ಚ ಮಹಾಮನಾಃ ॥೧೪॥

ತತಃ ಸೋಽಥಾಬ್ರವೀದ್ವಾಕ್ಯಂ ಕಿಂ ಕರೋಮಿ ಪಿತಾಮಹ ।
ಪಿತಾಮಹಸಮಾಜ್ಞಾತೋ ಬ್ರಹ್ಮಾಣಂ ಸಮುಪಸ್ಥಿತಃ ॥೧೫॥

ಬ್ರಹ್ಮಾಭ್ಯಾಸಂ ತು ಕೃತವಾನ್ಭುವಶ್ಚ ಪೃಥಿವೀಂ ಗತಃ ।
ಪ್ರಾಪ್ತಂ ಚ ಪರಮಂ ಸ್ಥಾನಂ ಸ ತಯೋಃ ಪಾರ್ಶ್ವಮಾಗತಃ ॥೧೬॥

ತಸ್ಮಿನ್ನಪಿ ಗತೇ ಪುತ್ರೇ ತೃತೀಯಮಸೃಜತ್ಪ್ರಭುಃ ।
ಸಾಂಖ್ಯಪ್ರವೃದ್ಧಿಕುಶಲಂ ಭೂರ್ಭುವಂ ನಾಮತೋ ವಿಭುಂ ॥೧೭॥

ಗೋಪತಿತ್ವಂ ಸಮಾಸಾದ್ಯ ತಯೋರೇವಾಗಮದ್ಗತಿಂ ।
ಏವಂ ಪುತ್ರಾಸ್ತ್ರಯೋಪ್ಯೇತೇ ಉಕ್ತಾಃ ಶಂಭೋರ್ಮಹಾತ್ಮನಃ ॥೧೮॥

---

೧೪. ಬಳಿಕ ಜಗತ್ಪ್ರಭುವೂ ಶ್ರೇಷ್ಠವಾದ ಮನಸ್ಸುಳ್ಳವನೂ ಆದ ಬ್ರಹ್ಮನು ತನ್ನ ಮನಸ್ಸಿನ ಸಂಕಲ್ಪದಿಂದ ಭುವನೆಂಬ ಎರಡನೆಯ ಮಗನನ್ನು ಸೃಷ್ಟಿಸಿದನು.

೧೫. ಬಳಿಕ ಅವನು, "ಓ ಪಿತಾಮಹಾ, ನಾನೇನು ಮಾಡಲಿ" ಎಂದು ಕೇಳಿ ಬ್ರಹ್ಮನ ಆಜ್ಞೆಯಂತೆ ಕಪಿಲ ಮಹರ್ಷಿಯ ಬಳಿಗೆ ಹೋದನು.

೧೬. ಆ ಭುವನೂ ಸಹ ನಾರಾಯಣ ಮತ್ತು ಕಪಿಲರ ಬಳಿಗೆ ಹೋಗಿ ವೇದಾಭ್ಯಾಸವನ್ನು ಮಾಡಿ ತಪಸ್ಸಿಗಾಗಿ ಭೂಲೋಕಕ್ಕೆ ಹೋದನು. ಅದರ ಫಲವಾಗಿ ಉತ್ತಮ ಸ್ಥಾನವನ್ನು ಪಡೆದನು.

೧೭. ಆ ಮಗನೂ ಹೊರಟುಹೋದ ಮೇಲೆ ಜಗತ್ಪ್ರಭುವಾದ ಬ್ರಹ್ಮನು ಮೂರನೆಯವನನ್ನು ಸೃಷ್ಟಿಸಿದನು. ಆ ವಿಭು ಸಾಂಖ್ಯಶಾಸ್ತ್ರದಲ್ಲಿ ನಿಪುಣ. ಅವನಿಗೆ ಭೂರ್ಭುವನೆಂದು ಹೆಸರು.

೧೮. ಅವನು ವೃಷಭಧರ್ಮವನ್ನು ಆಶ್ರಯಿಸಿ ಅವರಿಬ್ಬರ ದಾರಿಯನ್ನೇ ಹಿಡಿದನು. ಹೀಗೆ ಮಹಾತ್ಮನಾದ ಬ್ರಹ್ಮನ ಮೂವರು ಮಕ್ಕಳ ವಿಷಯವನ್ನೂ ಹೇಳಿದುದಾಯಿತು.

ತಾನ್ ಗೃಹೀತ್ವಾ ಸುತಾಂಸ್ತಸ್ಯ ಪ್ರಯಾತಃ ಸ್ವಾರ್ಜಿತಾಂ ಗತಿಂ।
ನಾರಾಯಣಶ್ಚ ಭಗವಾನ್ ಕಪಿಲಶ್ಚ ಯತೀಶ್ವರಃ ॥೧೯॥

ಯಂ ಕಾಲಂ ತೌ ಗತೌ ಮುಕ್ತೌ ಬ್ರಹ್ಮಾ ತಂ ಕಾಲಮೇವ ಹಿ।
ತತೋ ಘೋರತಮಂ ಭೂಯಃ ಸಂಶ್ರಿತಃ ಪರಮಂ ವ್ರತಂ ॥೨೦॥

ನ ರೇಮೇಽಥ ತತೋ ಬ್ರಹ್ಮಾ ಪ್ರಭುರೇಕಸ್ತಪಶ್ಚರನ್।
ಶರೀರಾತ್ತಾಂ ತತೋ ಭಾರ್ಯಾಂ ಸಮುತ್ಪಾದಿತವಾಞ್ಶುಭಾಂ ॥೨೧॥

ತಪಸಾ ತೇಜಸಾ ಚೈವ ವರ್ಚಸಾ ನಿಯಮೇನ ಚ।
ಸದೃಶೀಮಾತ್ಮನೋ ದೇವೀಂ ಸಮರ್ಥಾಂ ಲೋಕಸರ್ಜನೇ ॥೨೨॥

ತಯಾ ಸಮಾಹಿತಸ್ತತ್ರ ರೇಮೇ ಬ್ರಹ್ಮಾ ತಪಶ್ಚರನ್ ।
ತತೋ ಜಗಾದ ತ್ರಿಪದಾಂ ಗಾಯತ್ರೀಂ ವೇದಪೂಜಿತಾಂ ॥೨೩॥

---

೧೯. ಬ್ರಹ್ಮನ್! ಆ ಮೂವರು ಮಕ್ಕಳನ್ನೂ ಕರೆದುಕೊಂಡು ಯತೀಶ್ವರನಾದ ಕಪಿಲಮುನಿಯು ತನ್ನ ತಪಸ್ಸಿನಿಂದ ಸಂಪಾದಿಸಿದ ಉತ್ತಮಗತಿಗೆ ಹೋದನು. ಭಗವಂತನಾದ ನಾರಾಯಣನೂ ಸಹ ತೆರಳಿದನು.

೨೦. ತನ್ನನ್ನು ಬೀಳ್ಕೊಂಡು ಅವರಿಬ್ಬರೂ ತೆರಳಿದ ಬಳಿಕ ಬ್ರಹ್ಮನು ಅತ್ಯುಗ್ರವಾದ ನಿಯಮವನ್ನು ಕೈಕೊಂಡು ಮರಳಿ ತಪಸ್ಸಿಗೆ ಕುಳಿತನು.

೨೧-೨೨. ಬಳಿಕ ಬ್ರಹ್ಮದೇವನಿಗೆ ಒಬ್ಬನೇ ತಪಸ್ಸುಮಾಡುತ್ತ ಕುಳಿತಿರುವುದು ಬೇಸರವಾಗಿ ಕಂಡಿತು. ಆದಕಾರಣ ತನ್ನ ಶರೀರದಿಂದ ಮಂಗಳಮಯಳಾದ ಪತ್ನಿಯೊಬ್ಬಳನ್ನು ಸೃಷ್ಟಿಸಿದನು. ಆ ದೇವಿಯು ತಪಸ್ಸು, ತೇಜಸ್ಸು, ವರ್ಚಸ್ಸು, ನಿಯಮ, ಇವುಗಳಲ್ಲಿ ಅವನಿಗೆ ಅನುರೂಪಳಾಗಿದ್ದಳು. ಲೋಕಸೃಷ್ಟಿಯಲ್ಲಿ ಸಮರ್ಥಳೆನಿಸಿದ್ದಳು.

೨೩-೨೪. ಏಕಾಗ್ರಚಿತ್ತದಿಂದ ತಪಸ್ಸಿನಲ್ಲಿ ನಿರತನಾಗಿ ಬ್ರಹ್ಮನು ಅವಳೊಡನೆ ಸಂತೋಷದಿಂದಿದ್ದನು. ಬಳಿಕ ಮೂರು ಪದಗಳಿಂದ ಕೂಡಿ ವೇದಗಳ ಸಾರವೆನಿಸಿದ

ಸೃಜಽ ಪ್ರಜಾನಾಂ ಪತಯಃ ಸಾಗರಾಂಶ್ಚಾ ಸೃಜದ್ವಿಭುಃ ।
ಅಪರಾಂಶ್ಚೈವ ಚತುರೋ ವೇದಾಽ ಗಾಯತ್ರಿಸಂಭವಾಽ ॥೨೪॥

ಆತ್ಮನಃ ಸದೃಶಾಽ ಪುತ್ರಾನಸೃಜದ್ವೈ ಪಿತಾಮಹಃ ।
ವಿಶ್ವೇ ಪ್ರಜಾನಾಂ ಪತಯೋ ಯೇಭ್ಯೋ ಲೋಕಾ ವಿನಿಃಸೃತಾಃ ॥೨೫॥

ವಿಶ್ವೇಶಂ ಪ್ರಥಮಂ ತಾವನ್ಮಹಾತಾಪಸಮಾತ್ಮಜಂ ।
ಸರ್ವಮಂತ್ರಹಿತಂ ಪುಣ್ಯಂ ನಾಮ್ನಾ ಧರ್ಮಂ ಸ ಸೃಷ್ಟವಾಽ ॥೨೬॥

ದಕ್ಷಂ ಮರೀಚಿಮತ್ರಿಂ ಚ ಪುಲಸ್ತ್ಯಂ ಪುಲಹಂ ಕ್ರತುಂ ।
ವಸಿಷ್ಠಂ ಗೌತಮಂ ಚೈವ ಭೃಗುಮಂಗಿರಸಂ ಮನುಂ ॥೨೭॥

ಅಥೈವಾದ್ಭುತಮಿತ್ಯೇತೇ ಜ್ಞೇಯಾಃ ಪೈತಾಮಹರ್ಷಯಃ ।
ತ್ರಯೋದಶಗುಣಾರಂಭಾ ಯೇ ವಂಶಾಸ್ತು ಮಹರ್ಷಿಣಾಂ ॥೨೮॥

---

ಗಾಯತ್ರಿಯನ್ನು ಉಚ್ಚರಿಸಿದನು. ಅವನು ಪ್ರಜಾಪತಿಗಳನ್ನೂ ಸಾಗರಗಳನ್ನೂ ಗಾಯತ್ರಿಯಿಂದ ಉತ್ಪನ್ನವಾದ ನಾಲ್ಕು ವೇದಗಳನ್ನೂ ಸೃಷ್ಟಿಸಿದನು.

೨೫. ಚತುರ್ಮುಖಬ್ರಹ್ಮನು ತನಗೆ ಅನುರೂಪರಾದ ಪುತ್ರರನ್ನು ಸೃಜಿಸಿದನು. ಅವರೆಲ್ಲರೂ ಪ್ರಜಾಪತಿಗಳು. ಅವರಿಂದಲೇ ಲೋಕಗಳೆಲ್ಲ ನಿರ್ಮಿತವಾದುವು.

೨೬. ಮೊತ್ತಮೊದಲು ಜಗತ್ತಿನ ಅಧಿಪತಿಯೂ ಮಹಾತಪಸ್ವಿಯೂ ಆದ ಧರ್ಮನೆಂಬ ಮಗನನ್ನು ಸೃಷ್ಟಿಸಿದನು. ಆತನು ಎಲ್ಲ ಮಂತ್ರದೇವತೆಗಳಿಗೂ ಆಪ್ತ ; ಮತ್ತು ಬಹು ಪರಿಶುದ್ಧ.

೨೭-೨೮. ದಕ್ಷ, ಮರೀಚಿ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ, ಗೌತಮ, ಭೃಗು, ಅದ್ಭುತಮಹಿಮೆಯುಳ್ಳ ಅಂಗಿರಸಮುನಿ ಎಂಬ ಮಕ್ಕಳನ್ನು ಬ್ರಹ್ಮನು ಸೃಷ್ಟಿಸಿದನು. ಇವರಿಗೆ ಬ್ರಹ್ಮರ್ಷಿಗಳೆಂದು ಹೆಸರು. ಗುಣಭರಿತರಾದ ಹದಿಮೂರು ಜನ ಮಹರ್ಷಿಗಳ ವಂಶಗಳು ಇವರಿಂದ ಹುಟ್ಟಿದುವು.

ಅದಿತಿರ್ದಿತಿರ್ದನುಃಕಾಲಾ ಅನಾಯುಃ ಸಿಂಹಿಕಾ ಮುನಿಃ ।
ತಾಮ್ರಾ ಕ್ರೋಧಾಥ ಸುರಸಾ ವಿನತಾ ಕದ್ರುರೇವ ಚ ॥೨೯॥

ದಕ್ಷಾಸ್ಯಾಪತ್ಯಮೇತಾ ವೈ ಕನ್ಯಾ ದ್ವಾದಶ ಪಾರ್ಥಿವ ।
ಮರೀಚೇಃ ಕಶ್ಯಪಃ ಪುತ್ರಸ್ತಪಸಾ ನಿರ್ಮಿತಃ ಕಿಲ ॥೩೦॥

ತಸ್ಮೈ ಕನ್ಯಾ ದ್ವಾದಶಾನ್ಯಾ ದಕ್ಷಸ್ತಾಃ ಪ್ರದದೌ ತದಾ ।
ನಕ್ಷತ್ರಾಣಿ ಚ ಸೋಮಾಯ ತದಾ ವೈ ದತ್ತವಾನೃಷಿಃ ॥೩೧॥

ರೋಹಿಣ್ಯಾದೀನಿ ಸರ್ವಾಣಿ ಪುಣ್ಯಾನಿ ರವಿನಂದನ ।
ಲಕ್ಷ್ಮೀರ್ಮರುತ್ವತೀ ಸಾಧ್ಯಾ ವಿಶ್ವೇಶಾ ಚ ಮತಾ ಶುಭಾ ॥೩೨॥

ದೇವೀ ಸರಸ್ವತೀ ಚೈವ ಬ್ರಹ್ಮಣಾ ನಿರ್ಮಿತಾಃ ಪುರಾ ।
ಏತಾಃ ಪಂಚ ವರಿಷ್ಠಾ ವೈ ಸುರಶ್ರೇಷ್ಠಾಯ ಪಾರ್ಥಿವ ॥೩೩॥

---

೨೯. ಎಲೈ ರಾಜನೇ, ಅದಿತಿ, ದಿತಿ, ದನು, ಕಾಲೆ, ಅನಾಯು, ಸಿಂಹಿಕೆ, ಮುನಿ, ತಾಮ್ರೆ, ಕ್ರೋಧೆ, ಸುರಸೆ, ವಿನತೆ, ಕದ್ರು ಈ ಹನ್ನೆರಡು ಜನರೂ ದಕ್ಷನ ಕನ್ಯೆಯರು.

೩೦. ಮರೀಚಿಯು ತನ್ನ ತಪಸ್ಸಿನ ಬಲದಿಂದ ಕಶ್ಯಪನನ್ನು ನಿರ್ಮಿಸಿದ್ದನಷ್ಟೆ. ದಕ್ಷನು ತನ್ನ ಹನ್ನೆರಡು ಮಂದಿ ಕನ್ಯೆಯರನ್ನೂ ಅವನಿಗೆ ಕೊಟ್ಟು ಮದುವೆ ಮಾಡಿದನು.

೩೧. ಎಲೈ ವೈವಸ್ವತ ಮನುಚಕ್ರವರ್ತಿಯೇ, ದಕ್ಷಬ್ರಹ್ಮನು ರೋಹಿಣಿ ಮೊದಲಾದ ಇಪ್ಪತ್ತೇಳುಜನ ನಕ್ಷತ್ರಾಭಿಮಾನದೇವಿಯರನ್ನು ಚಂದ್ರನಿಗೆ ಕೊಟ್ಟನು. ಅವರೆಲ್ಲ ಪುಣ್ಯವತಿಯರು.

೩೨-೩೩. ಲಕ್ಷ್ಮಿ, ಮರುತ್ವತಿ, ಸಾಧ್ಯೆ, ಮಂಗಳಕರಳಾದ ವಿಶ್ವೇಶೆ ಮತ್ತು ಸರಸ್ವತೀದೇವಿ ಎಂಬ ಶ್ರೇಷ್ಠರಾದ ಈ ಐವರನ್ನೂ ಪೂರ್ವದಲ್ಲಿ ಬ್ರಹ್ಮನು ಸೃಷ್ಟಿಸಿದನು. ಕರ್ಮಗತಿಯನ್ನರಿತ ಆತನು ಇವರನ್ನು ಗುಣವಂತನಾದ ಧರ್ಮನಿಗೆ ಪಾಣಿಗ್ರಹಣಮಾಡಿಕೊಟ್ಟನು.

ದತ್ತಾ ಭದ್ರಾಯ ಧರ್ಮಾಯ ಬ್ರಹ್ಮಣಾ ದೃಷ್ಟಕರ್ಮಣಾ ।
ಯಾ ರೂಪಾರ್ಥವತೀ ಪತ್ನೀ ಬ್ರಹ್ಮಣಃ ಕಾಮರೂಪಿಣೀ ॥೩೪॥

ಸುರಭಿಃ ಸಾ ಹಿತಾ ಭೂತ್ವಾ ಬ್ರಹ್ಮಾಣಂ ಸಮುಪಸ್ಥಿತಾ ।
ತತಸ್ತಾಮಗಮದ್ಬ್ರಹ್ಮಾ ಮೈಥುನಂ ಲೋಕಪೂಜಿತಃ ॥೩೫॥

ಲೋಕಸರ್ಜನಹೇತುಜ್ಞೋ ಗವಾಮರ್ಥಾಯ ಸತ್ತಮಃ ।
ಜಜ್ಞಿರೇ ಚ ಸುತಾಸ್ತಸ್ಯಾಂ ವಿಪುಲಾ ಧೂಮಸನ್ನಿಭಾಃ ॥೩೬॥

ನಕ್ತಸಂಧ್ಯಾಭ್ರಸಂಕಾಶಾಃ ಪ್ರಾದಹಂಸ್ತಿಗ್ಮತೇಜಸಃ ।
ತೇ ರುದಂತೋ ದ್ರವಂತಶ್ಚ ಗರ್ಹಯಂತಃ ಪಿತಾಮಹಂ ॥೩೭॥

ರೋದನಾದ್ದ್ರವಣಾಚ್ಚೈವ ರುದ್ರಾ ಇತಿ ತತಃ ಸ್ಮೃತಾಃ ।
ನಿರ್ಋತಿಶ್ಚೈವ ಶಂಭುರ್ವೈ ತೃತೀಯಶ್ಚಾಪರಾಜಿತಃ ॥೩೮॥

ಮೃಗವ್ಯಾಧಃ ಕಪರ್ದೀ ಚ ದಹನೋಥ ಖರಶ್ಚ ವೈ ।
ಅಹಿರ್ಬುಧ್ನ್ಯಶ್ಚ ಭಗವಾನ್ ಕಪಾಲೀ ಚಾಪಿ ಪಿಂಗಲಃ ॥೩೯॥

---

೩೪-೩೫. ಸ್ವೇಚ್ಛಾರೂಪವನ್ನು ಧರಿಸಬಲ್ಲ ಬ್ರಹ್ಮನ ಅರ್ಧಾಂಗಿಯೆನಿಸಿದ ಸರಸ್ವತಿಯು ಮನೋಜ್ಞವಾದ ಸುರಭಿಯ ರೂಪದಿಂದ ತನ್ನ ಪತಿಯ ಬಳಿಗೆ ಹೋದಳು. ಬಳಿಕ ಲೋಕಪೂಜಿತನೂ ಜಗತ್ಸೃಷ್ಟಿಯ ಕಾರಣವನ್ನು ಅರಿತವನೂ ಆದ ಬ್ರಹ್ಮನು ಗೋಗಳ ಪ್ರಯೋಜನವನ್ನುದ್ದೇಶಿಸಿ ಅವಳೊಡನೆ ಕೂಡಿದನು.

೩೬. ಆಕೆಯಲ್ಲಿ ಹೊಗೆಯಂತೆ, ರಾತ್ರಿಯಂತೆ, ಸಂಧ್ಯಾಕಾಲದ ಮೋಡದಂತೆ ಮೈಬಣ್ಣವುಳ್ಳ ಹಲವರು ಮಕ್ಕಳು ಹುಟ್ಟಿದರು. ಅವರು ತೀಕ್ಷ್ಣವಾದ ತೇಜಸ್ಸಿನಿಂದ ಎಲ್ಲವನ್ನೂ ದಹಿಸುತ್ತಿದ್ದರು.

೩೭. ಅವರು ಅಳುತ್ತಲೂ, ಓಡುತ್ತಲೂ, ಬ್ರಹ್ಮನನ್ನು ಜರೆಯುತ್ತಲೂ ಇದ್ದರು. ರೋದನದಿಂದಲೂ ದ್ರಾವಣದಿಂದಲೂ (ಓಡುತ್ತಿದ್ದುದರಿಂದಲೂ) ಅವರಿಗೆ ರುದ್ರರೆಂಬ ಹೆಸರು ಬಂದಿತು.

೩೮-೩೯. ನಿರ್ಋತಿ, ಶಂಭು, ಅಪರಾಜಿತ, ಮೃಗವ್ಯಾಧ, ಕಪರ್ದಿ, ದಹನ, ಖರ, ಅಹಿರ್ಬುಧ್ನ್ಯ, ಕಪಾಲಿ, ಪಿಂಗಲ, ಮಹಾತೇಜಸ್ವಿಯಾದ ಸೇನಾನಿ ಈ ಹನ್ನೊಂದು ಜನರಿಗೆ ಏಕಾದಶ ರುದ್ರರೆಂದು ಹೆಸರು.

ಸೇನಾನೀಶ್ಚ ಮಹಾತೇಜಾ ರುದ್ರಾಸ್ತ್ವೇಕಾದಶ ಸ್ಮೃತಾಃ ।
ತಸ್ಯಾಮೇವ ಸುರಭ್ಯಾಂ ಚ ಗಾವೋ ಯಜ್ಞೇಶ್ವರಾಶ್ಚ ವೈ ॥೪೦॥

ಪ್ರಕೃಷ್ಟಾಶ್ಚ ತಥಾ ಮಾಯಾಃ ಸುರಭ್ಯಾಃ ಪಶವೋಽಕ್ಷರಾಃ ।
ಅಜಾಶ್ಚೈವ ತು ಹಂಸಾಶ್ಚ ತಥೈವಾಮೃತಮುತ್ತಮಂ ॥೪೧॥

ಓಷಧ್ಯಃ ಪ್ರವರಾಯಾಶ್ಚ ಸುರಭ್ಯಾಸ್ತಾಸ್ಸಮುತ್ಥಿತಾಃ ।
ಧರ್ಮಾಲ್ಲಕ್ಷ್ಮೀಸ್ತಥಾ ಕಾಮಂ ಸಾಧ್ಯಾ ಸಾಧ್ಯಾನ್ವ್ಯಜಾಯತ ॥೪೨॥

ಭವಂ ಚ ಪ್ರಭವಂ ಚೈವ ಹೀಶಂ ಚಾಽಽಸುರಹಂ ತಥಾ ।
ಅರುಣಂ ಚಾರುಣಿಂ ಚೈವ ವಿಶ್ವಾವಸುಬಲಧ್ರುವೌ ॥೪೩॥

ಹವಿಷ್ಯಂ ಚ ವಿತಾನಂ ಚ ವಿಧಾನಶಮಿತಾವಪಿ ।
ವತ್ಸರಂ ಚೈವ ಭೂತಿಂ ಚ ಸರ್ವಾಸುರನಿಷೂದನಂ ॥೪೪॥

ಸುಪರ್ವಾಣಂ ಬೃಹತ್ಕಾಂತಿಂ ಸಾಧ್ಯಾ ಲೋಕನಮಸ್ಕೃತಾ ।
ತಮೇವಾನುಗತಾ ದೇವೀ ಜನಯಾಮಾಸ ವೈ ಸುರಾ ॥೪೫॥

---

೪೦-೪೧. ಆ ಸುರಭಿಯ ಉದರದಲ್ಲೇ ಹಸುಗಳು, ಯಜ್ಞಾಧಿಪತಿಗಳು, ಶ್ರೇಷ್ಠವಾದ ಮಾಯೆಗಳು, ಶಾಶ್ವತವೆನಿಸಿದ ಪಶುಗಳು, ಆಡುಗಳು, ಹಂಸಗಳು ಉತ್ತಮವಾದ ಅಮೃತ, ಪ್ರಶಸ್ತವಾದ ಓಷಧಿಗಳು ಇವೆಲ್ಲವೂ ಉತ್ಪನ್ನವಾದುವು.

೪೨-೪೪. ಧರ್ಮನಿಂದ ಲಕ್ಷ್ಮಿಯು ಕಾಮನನ್ನು ಪಡೆದಳು. ಸಾಧ್ಯರು, ಭವ, ಪ್ರಭವ, ಅಸುರನಾಶಕನಾದ ಈಶ, ಅರುಣ, ಆರುಣಿ, ವಿಶ್ವಾವಸು, ಬಲ, ಧ್ರುವ, ಹವಿಷ್ಯ, ವಿತಾನ, ವಿಧಾನ, ಶಮಿತ, ವತ್ಸರ, ಅಸುರರೆಲ್ಲರನ್ನೂ ಸಂಹರಿಸಿದ ಭೂತಿ, ಸುಪರ್ವ ಇವರು ವಿಶೇಷವಾದ ಕಾಂತಿಯಿಂದ ಬೆಳಗುವ ಲೋಕಪೂಜಿತೆಯಾದ ಸಾಧ್ಯೆಯಲ್ಲಿ ಜನಿಸಿದರು.

೪೫-೪೭. ಪೂಜ್ಯಳಾದ ಸರಸ್ವತಿ ಅಥವಾ ಸುರಭಿಯು ಧರ್ಮನನ್ನೇ ಆಶ್ರಯಿಸಿ ದೇವತೆಗಳನ್ನು ಹೆತ್ತಳು. ಮೊದಲನೆಯವನು ವರ, ಎರಡನೆಯವನು

ವರಂ ವೈ ಪ್ರಥಮಂ ದೇವಂ ದ್ವಿತೀಯಂ ಧ್ರುವಮವ್ಯಯಂ ।
ವಿಶ್ವಾವಸುಂ ತೃತೀಯಂ ಚ ಚತುರ್ಥಂ ಸೋಮಮೀಶ್ವರಂ ॥೪೬॥

ತತೋಽನುರೂಪಮಾಯಂ ಚ ಯಮಂ ತಸ್ಮಾದನಂತರಂ ।
ಸಪ್ತಮಂ ಚ ತಥಾ ವಾಯುಮಷ್ಟಮಂ ನಿರೃತಿಂ ವಸುಂ ॥೪೭॥

ಧರ್ಮಸ್ಯಾಪತ್ಯಮೇತದ್ವೈ ಸುರಭ್ಯಾಂ ಸಮಜಾಯತ ।
ವಿಶ್ವೇ ದೇವಾಶ್ಚ ವಿಶ್ವಾಯಾಂ ಧರ್ಮಾಜ್ಜಾತಾ ಇತಿ ಶ್ರುತಿಃ ॥೪೮॥

ದಕ್ಷಶ್ಚೈವ ಮಹಾಬಾಹುಃ ಪುಷ್ಕರಸ್ವನ ಏವ ಚ ।
ಚಾಕ್ಷುಷಶ್ಚ ಮನುಶ್ಚೈವ ತಥಾ ಮಧುಮಹೋರಗೌ ॥೪೯॥

ವಿಶ್ವಾಂತಶ್ಚ ವಸುರ್ಬಾಲೋ ವಿಷ್ಕಂಭಶ್ಚ ಮಹಾಯಶಾಃ ।
ಗರುಡಶ್ಚಾತಿಸತ್ತ್ವೌಜಾ ಭಾಸ್ಕರಪ್ರತಿಮದ್ಯುತಿಃ ॥೫೦॥

ವಿಶ್ವಾನ್ ದೇವಾನ್ ದೇವಮಾತಾ ವಿಶ್ವೇಶಾಽಜನಯತ್ಸುತಾನ್ ।
ಮರುತ್ವತೀ ಮರುತ್ವತೋ ದೇವಾನಜನಯತ್ಸುತಾನ್ ॥೫೧॥

---

ಶಾಶ್ವತನಾದ ಧ್ರುವ, ಮೂರನೆಯವನು ವಿಶ್ವಾವಸು, ನಾಲ್ಕನೆಯವನು ಪ್ರಭುವಾದ ಸೋಮ, ಮುಂದಿನವನು ಆಯ, ಅವನ ತರುವಾಯ ಯಮ, ಏಳನೆಯವನು ವಾಯು, ಎಂಟನೆಯವನು ವಸು. ಇವರೆಲ್ಲರೂ ಸುರಭಿಯಲ್ಲಿ ಜನಿಸಿದ ಧರ್ಮನ ಮಕ್ಕಳು.

೪೮. ಧರ್ಮನಿಂದ ವಿಶ್ವೆಯಲ್ಲಿ ವಿಶ್ವೇದೇವರು ಹುಟ್ಟಿದರೆಂದು ಕೇಳಿದ್ದೇವೆ.

೪೯-೫೦. ಮಹಾಬಲನಾದ ದಕ್ಷ, ಪುಷ್ಕರಸ್ವನ, ಚಾಕ್ಷುಷಮನು, ಮಧು, ಮಹೋರಗ, ವಿಶ್ವಾಂತ, ವಸು, ಬಾಲ, ಬಹು ಕೀರ್ತಿವಂತನಾದ ವಿಷ್ಕಂಭ, ಬಹು ಶಕ್ತಿಸಾಹಸಗಳುಳ್ಳವನೂ, ಸೂರ್ಯನಂತೆ ಪ್ರಕಾಶಿಸುವವನೂ ಆದ ಗರುಡ ಮೊದಲಾದ ಸಕಲ ದೇವತೆಗಳನ್ನೂ ದೇವಮಾತೆಯೆನಿಸಿದ ವಿಶ್ವೇಶೆಯು ಪಡೆದಳು.

೫೧-೫೪. ಮರುತ್ವತಿಗೆ ಮರುತ್ವಂತರೆಂಬ ದೇವತೆಗಳು ಸುತರಾದರು. ಅಗ್ನಿ, ಚಕ್ಷು, ರವಿ, ಜ್ಯೋತಿ, ಸಾವಿತ್ರ, ಮಿತ್ರ, ಅಮರ, ಶರವೃಷ್ಟಿ, ಬಹು ಬಲ

ಅಗ್ನಿಂ ಚಕ್ಷುಂ ರವಿಜ್ಯೋತಿಃ ಸಾವಿತ್ರಂ ಮಿತ್ರಮೇವ ಚ ।
ಅಮರಂ ಶರವೃಷ್ಟಿಂ ಚ ಸುಕರ್ಷಂ ಚ ಮಹಾಭುಜಂ ||೩೨||

ವಿರಾಜಂ ಚೈವ ವಾಚಂ ಚ ವಿಶ್ವಾವಸುಮತಿಂ ತಥಾ ।
ಅಶ್ವಮಿತ್ರಂ ಚಿತ್ರರಶ್ಮಿಂ ತಥಾ ನಿಷಧನಂ ನೃಪ ||೩೩||

ಹೂಯಂತಂ ವಾಡವಂ ಚೈವ ಚಾರಿತ್ರಂ ಮಂದಪನ್ನಗಂ ।
ಬೃಹಂತಂ ವೈ ಬೃಹದ್ರೂಪಂ ತಥಾ ವೈ ಪೂತನಾನುಗಂ ||೩೪||

ಮರುತ್ವತೀ ಪುರಾ ಜಜ್ಞೇ ಏತಾನ್ವೈ ಮರುತಾಂ ಗಣಾ ।
ಅದಿತಿಃ ಕಶ್ಯಪಾಜ್ಜಜ್ಞೇ ಆದಿತ್ಯಾ ದ್ವಾದಶೈವ ಹಿ ||೩೫||

ಇಂದ್ರೋ ವಿಷ್ಣುರ್ಭಗಸ್ತ್ವಷ್ಟಾ ವರುಣೋ ಹ್ಯರ್ಯಮಾ ರವಿಃ ।
ಪೂಷಾ ಮಿತ್ರಶ್ಚ ಧನದೋ ಧಾತಾ ಪರ್ಜನ್ಯ ಏವ ಚ ||೩೬||

ಇತ್ಯೇತೇ ದ್ವಾದಶಾದಿತ್ಯಾ ವರಿಷ್ಠಾಸ್ತ್ರಿದಿವೌಕಸಃ ।
ಆದಿತ್ಯಸ್ಯ ಸರಸ್ವತ್ಯಾಂ ಜಜ್ಞಾತೇ ದ್ವೌ ಸುತೌ ವರೌ ||೩೭||

---

ಶಾಲಿಯಾದ ಸುಕರ್ಷ ವಿರಾಜ, ವಾಚ, ವಿಶ್ವಾವಸು, ಮತಿ, ಅಶ್ವಮಿತ್ರ, ಚಿತ್ರ ರಶ್ಮಿ, ನಿಷಧನ, ಹೂಯಂತ, ವಾಡವ, ಚಾರಿತ್ರ, ಮಂದಪನ್ನಗ, ದೊಡ್ಡ ಆಕಾರವುಳ್ಳ ಬೃಹಂತ, ಪೂತನಾನುಗ ಈ ದೇವಗಣಗಳನ್ನು ಮರುತ್ವತಿಯು ಪಡೆದಳು.

೩೫-೩೬. ಅದಿತಿಗೆ ಕಶ್ಯಪರಿಂದ ದ್ವಾದಶಾದಿತ್ಯರು ಜನಿಸಿದರು. ಇಂದ್ರ, ವಿಷ್ಣು, ಭಗ, ತ್ವಷ್ಟ, ವರುಣ, ಅರ್ಯಮ, ರವಿ, ಪೂಷ, ಮಿತ್ರ, ಧನದ, ಧಾತ, ಪರ್ಜನ್ಯ ಇವರೇ ದೇವತೆಗಳಲ್ಲಿ ಶ್ರೇಷ್ಠರಾದ ದ್ವಾದಶಾದಿತ್ಯರೆಂಬುವರು.

೩೭. ಆದಿತ್ಯನಿಗೆ ಸರಸ್ವತಿಯಲ್ಲಿ ಪ್ರಸಿದ್ಧರಾದ ಪುತ್ರರಿಬ್ಬರು ಜನಿಸಿದರು. ಅವರು ತಪಸ್ಸಿನಲ್ಲಿ ಶ್ರೇಷ್ಠರು. ಗುಣಶಾಲಿಗಳಲ್ಲಿ ಉತ್ತಮರು. ದೇವಲೋಕದಲ್ಲಿ ಎಲ್ಲರ ಮೆಚ್ಚಿಕೆಗೂ ಪಾತ್ರರಾದವರು.

ತಪಃ ಶ್ರೇಷ್ಠೌ ಗುಣಶ್ರೇಷ್ಠೌ ತ್ರಿದಿವಸ್ಯಾಪಿ ಸಮ್ಮತೌ ।
ದನುಸ್ತು ದಾನವಾಞ್ಜಜ್ಞೇ ದಿತಿರ್ದೈತ್ಯಾನ್ಪ್ರಜಾಯತ ॥೫೮॥
ಕಾಲಾ ತು ವೈ ಕಾಲಕೇಯಾನಸುರಾನ್ರಾಕ್ಷಸಾಂಸ್ತು ವೈ ।
ಅನಾಯುಷಾಯಾಸ್ತನಯಾ ವ್ಯಾಧಯಃ ಸುಮಹಾಬಲಾಃ ॥೫೯॥
ಸಿಂಹಿಕಾ ಗ್ರಹಮಾತಾ ವೈ ಗಂಧರ್ವಜನನೀ ಮುನಿಃ ।
ತಾಮ್ರಾ ತ್ವಪ್ಸರಸಾಂ ಮಾತಾ ಪುಣ್ಯಾನಾಂ ಭಾರತೋದ್ಭವ ॥೬೦॥
ಕ್ರೋಧಾಯಾಃ ಸರ್ವಭೂತಾನಿ ಪಿಶಾಚಾಶ್ಚೈವ ಪಾರ್ಥಿವ ।
ಜಜ್ಞೇ ಯಕ್ಷಗಣಾಂಶ್ಚೈವ ರಾಕ್ಷಸಾಂಶ್ಚ ವಿಶಾಂಪತೇ ॥೬೧॥
ಚತುಷ್ಪದಾನಿ ಸತ್ವಾನಿ ತಥಾ ಗಾವಸ್ತು ಸೌರಭಾಃ ।
ಸುಪರ್ಣಾಃ ಪಕ್ಷಿಣಶ್ಚೈವ ವಿನತಾ ಚಾಪ್ಯಜಾಯತ ॥೬೨॥
ಮಹೀಧರಾಃ ಸರ್ವನಾಗಾಃ ದೇವೀ ಕದ್ರೂರ್ವ್ಯಜಾಯತ ।
ಏವಂ ವೃದ್ಧಿಂ ಸಮಗಮನ್ವಿಶ್ವೇ ಲೋಕಾಃ ಪರಂತಪ ॥೬೩॥

---

೫೮-೫೯. ದನುವು ದಾನವರನ್ನೂ, ದಿತಿಯು ದೈತ್ಯರನ್ನೂ, ಕಾಲೆಯು ಕಾಲಕೇಯರೆಂಬ ಅಸುರರನ್ನೂ ರಾಕ್ಷಸರನ್ನೂ ಪ್ರಸವಿಸಿದಳು. ಬಹು ಪ್ರಬಲವಾದ ವ್ಯಾಧಿಗಳು ಅನಾಯುಷೆಯು ಪುತ್ರರಾಗಿ ಜನಿಸಿದುವು.

೬೦. ಸಿಂಹಿಕೆ ಗ್ರಹಗಳ ತಾಯಿ. ಮುನಿಯು ಗಂಧರ್ವರ ಮಾತೆ. ಓ ವೈವಸ್ವತ ಮನುಚಕ್ರವರ್ತೀ, ತಾಮ್ರೆಯಲ್ಲಿ ಪುಣ್ಯವಂತೆಯರಾದ ಅಪ್ಸರಸ್ತ್ರೀಯರು ಜನಿಸಿದರು.

೬೧. ರಾಜಾ, ಸಕಲ ಭೂತಗಳೂ ಪಿಶಾಚಗಳೂ ಕ್ರೋಧೆಯಿಂದ ಹುಟ್ಟಿದುವು. ಯಕ್ಷಗಣಗಳನ್ನೂ ರಾಕ್ಷಸರನ್ನೂ ಆಕೆಯೇ ಪ್ರಸವಿಸಿದಳು.

೬೨. ನಾಲ್ಕು ಕಾಲಿನ ಪ್ರಾಣಿಗಳೂ ಹಸುಗಳೂ ಸುರಭಿಯಿಂದ ಉತ್ಪನ್ನವಾದುವು. ಗರುಡಪಕ್ಷಿಗಳನ್ನೂ ಮಿಕ್ಕ ಪಕ್ಷಿಗಳನ್ನೂ ವಿನತೆಯು ಹೆತ್ತಳು.

೬೩. ಪರ್ವತಗಳನ್ನೂ ಎಲ್ಲ ಬಗೆಯ ಸರ್ಪಗಳನ್ನೂ ಪೂಜ್ಯಳಾದ ಕದ್ರುವು ಹಡೆದಳು. ಶತ್ರುನಾಶಕನಾದ ಓ ರಾಜಾ, ಹೀಗೆ ಲೋಕಗಳೆಲ್ಲ ವೃದ್ಧಿಗೆ ಬಂದುವು.

ತದಾ ವೈ ಪೌಷ್ಕರೋ ರಾಜನ್ ಪ್ರಾದುರ್ಭಾವೋ ಮಹಾತ್ಮನಃ ।
ಪ್ರಾದುರ್ಭಾವಃ ಪೌಷ್ಕರಸ್ತೇ ಮಯಾ ದ್ವೈಪಾಯನೇರಿತಃ ॥೬೪॥

ಪುರಾಣಃ ಪುರುಷಶ್ಚೈವ ಮಯಾ ವಿಷ್ಣುರ್ಹರಿಃ ಪ್ರಭುಃ ।
ಕಥಿತಸ್ತೇಽನುಪೂರ್ವ್ಯೇಣ ಸಂಸ್ತುತಃ ಪರಮರ್ಷಿಭಿಃ ॥೬೫॥

ಯಶ್ಚೇದಮಗ್ರ್ಯಂ ಶೃಣುಯಾತ್ಪುರಾಣಂ
ಸದಾ ನರಃ ಪರ್ವಸು ಗೌರವೇಣ ।
ಅವಾಪ್ಯ ಲೋಕಾನ್ಸ ಹಿ ವೀತರಾಗಃ
ಪರತ್ರ ಚ ಸ್ವರ್ಗಫಲಾನಿ ಭುಙ್ಕ್ತೇ ॥೬೬॥

ಚಕ್ಷುಷಾ ಮನಸಾ ವಾಚಾ ಕರ್ಮಣಾ ಚ ಚತುರ್ವಿಧಂ ।
ಪ್ರಸಾದಯತಿ ಯಃ ಕೃಷ್ಣಂ ತಂ ಕೃಷ್ಣೋಽನುಪ್ರಸೀದತಿ ॥೬೭॥

ರಾಜಾ ಚ ಲಭತೇ ರಾಜ್ಯಮಧನಶ್ಚೋತ್ತಮಂ ಧನಂ ।
ಕ್ಷೀಣಾಯುರ್ಲಭತೇ ಚಾಯುಃ ಪುತ್ರಕಾಮಃ ಸುತಂ ತಥಾ ॥೬೮॥

---

೬೪-೬೫. ರಾಜಾ, ಸೃಷ್ಟಿಯ ಆ ಪ್ರಾರಂಭದಲ್ಲಿ ಮಹಾತ್ಮನಾದ ಬ್ರಹ್ಮನು ನಾರಾಯಣನ ನಾಭಿಕಮಲದಲ್ಲಿ ಹೀಗೆ ಉತ್ಪನ್ನನಾದನು. ದ್ವೈಪಾಯನಮುನಿಯು ಹೇಳಿದ ರೀತಿಯಲ್ಲಿ ವಿಷ್ಣುವಿನ ನಾಭಿಕಮಲದ ಉತ್ಪತ್ತಿಯ ರೀತಿಯನ್ನು ತಿಳಿಸಿದೆನು. ಪರಮರ್ಷಿಗಳಿಂದ ಸ್ತುತಿಗೊಂಡವನೂ, ಪುರಾಣಪುರುಷನೂ, ಜಗತ್ಪ್ರಭುವೂ ಆದ ನಾರಾಯಣನ ಮಹಿಮೆಯನ್ನು ನಿನಗೆ ವಿಸ್ತಾರವಾಗಿ ಹೇಳಿದೆನು.

೬೬. ಶ್ರೇಷ್ಠವಾದ ಈ ಪುರಾಣಕಥೆಯನ್ನು ಪರ್ವಕಾಲಗಳಲ್ಲಿ ಗೌರವದಿಂದ ಯಾವ ಮನುಷ್ಯನು ಕೇಳುತ್ತಾನೋ ಅವನು ಜಿತೇಂದ್ರಿಯನಾಗಿ ಉತ್ತಮ ಲೋಕಗಳನ್ನು ಸೇರುವನು. ಮತ್ತು ಸ್ವರ್ಗಾದಿ ಸುಖಗಳನ್ನು ಅನುಭವಿಸುವನು.

೬೭. ಕಣ್ಣಿನಿಂದ, ಮನಸ್ಸಿನಿಂದ, ಮಾತಿನಿಂದ ಮತ್ತು ಕಾರ್ಯದಿಂದ ಈ ನಾಲ್ಕು ಬಗೆಯಾಗಿ ಕೃಷ್ಣನನ್ನು ಸೇವಿಸಿ ಮೆಚ್ಚಿಸುವಾತನ ಮೇಲೆ ಕೃಷ್ಣನೂ ಅನುಗ್ರಹವನ್ನು ತೋರುತ್ತಾನೆ.

೬೮. ರಾಜನಿಗೆ ರಾಜ್ಯ ಸಿಕ್ಕುತ್ತದೆ. ಬಡವನಿಗೆ ಹಣ ದೊರೆಯುತ್ತದೆ. ಆಯುಸ್ಸು ಕ್ಷಯಿಸಿದವನು ಹೆಚ್ಚುಕಾಲ ಬದುಕುತ್ತಾನೆ. ಮಗನಿಲ್ಲದವನಿಗೆ ಮಗನು ಹುಟ್ಟುತ್ತಾನೆ.

ಯಜ್ಞಾ ವೇದಾಸ್ತಥಾ ಕಾಮಾಸ್ತಪಾಂಸಿ ವಿವಿಧಾನಿ ಚ ।
ಪ್ರಾಪ್ನೋತಿ ವಿವಿಧಂ ಪುಣ್ಯಂ ವಿಷ್ಣುಭಕ್ತೋ ಧನಾನಿ ಚ ॥೭೯॥

ಯದ್ಯತ್ಕಾಮಯತೇ ಕಿಂಚಿತ್ತತ್ತಲ್ಲೋಕೇಶ್ವರಾದ್ಭವೇತ್ ।
ಸರ್ವಂ ವಿಹಾಯ ಯ ಇಮಂ ಪಠೇತ್ಪೌಷ್ಕರಕಂ ಹರೇಃ ॥೭೦॥

ಪ್ರಾದುರ್ಭಾವಂ ನೃಪಶ್ರೇಷ್ಠ ನ ತಸ್ಯ ಹ್ಯಶುಭಂ ಭವೇತ್ ।
ಏಷ ಪೌಷ್ಕರಕೋ ನಾಮ ಪ್ರಾದುರ್ಭಾವೋ ಮಹಾತ್ಮನಃ ।
ಕೀರ್ತಿತಸ್ತೇ ಮಹಾಭಾಗ ವ್ಯಾಸಶ್ರುತಿನಿದರ್ಶನಾತ್ ॥೭೧॥

ಇತಿ ಶ್ರೀಮಾತ್ಸ್ಯೇ ಮಹಾಪುರಾಣೇ ಪದ್ಮೋದ್ಭವ ಪ್ರಾದುರ್ಭಾವೋ
ನಾಮೈಕಸಪ್ತತ್ಯಧಿಕಶತತಮೋಽಧ್ಯಾಯಃ

---

೬೯. ವಿಷ್ಣುಭಕ್ತನಿಗೆ ಯಜ್ಞಗಳು, ವೇದಗಳು, ಬಗೆಬಗೆಯ ತಪಸ್ಸುಗಳು, ಇವುಗಳಿಂದ ಲಭಿಸುವ ಪುಣ್ಯವು ಬರುವುದು. ಅವನ ಇಷ್ಟಾರ್ಥಗಳು ಕೈಗೂಡುವುವು. ಅವನು ಧನವಂತನಾಗುವನು.

೭೦. ರಾಜೋತ್ತಮಾ, ಉಳಿದ ವಿಷಯಗಳೆಲ್ಲ ಇರಲಿ. ಹರಿಯ ಈ ಪುಷ್ಕರಪ್ರಾದುರ್ಭಾವ ವೃತ್ತಾಂತವನ್ನು ಓದುವಾತನು ಯಾವ ಇಷ್ಟಾರ್ಥವನ್ನು ಬಯಸಲಿ ಅದೆಲ್ಲವೂ ಲೋಕೇಶ್ವರನಾದ ವಿಷ್ಣುವಿನ ಅನುಗ್ರಹದಿಂದ ದೊರಕುವುದು. ಅವನಿಗೆ ಅಮಂಗಳವು ಉಂಟಾಗದು.

೭೧. ಮಹಾಮಹಿಮನಾದ ಎಲೈ ಮನುಚಕ್ರವರ್ತೀ, ಮಹಾತ್ಮನಾದ ಶ್ರೀಮನ್ನಾರಾಯಣನಿಂದ ನಾಭಿಕಮಲವು ಉತ್ಪನ್ನವಾದ ಈ ಪುಷ್ಕರ ಪ್ರಾದುರ್ಭಾವವೆಂಬ ವೃತ್ತಾಂತವನ್ನು ವ್ಯಾಸಮಹಾಮುನಿಯು ಯಾವ ರೀತಿಯಲ್ಲಿ ಹೇಳಿದನೋ ಅದೇ ರೀತಿಯಲ್ಲಿ ನಿನಗೆ ತಿಳಿಸಿರುವೆನು.

## ಅಧ್ಯಾಯದ ಸಾರಾಂಶ

ಈ ಅಧ್ಯಾಯದಲ್ಲಿ ಬಗೆಬಗೆಯ ಜೀವರಾಶಿಗಳ ಉತ್ಪತ್ತಿಯನ್ನು ವರ್ಣಿಸಿದೆ.

ಚತುರ್ಮುಖಬ್ರಹ್ಮನು ತಪೋನಿಷ್ಠನಾಗಿದ್ದನು. ಸಾಂಖ್ಯಾಚಾರ್ಯನಾದ ಕಪಿಲ ಮುನಿಯೂ ಶ್ರೀಮನ್ನಾರಾಯಣನೂ ಅಲ್ಲಿಗೆ ಬಂದು ಅವನನ್ನು ಶ್ಲಾಘಿಸಿದರು. ಬ್ರಹ್ಮನು ಅವರಿಂದ ಯೋಗವನ್ನರಿತು ಮೂರು ಲೋಕಗಳನ್ನೂ ಸೃಷ್ಟಿಸಿದನು. ದಕ್ಷ, ಮರೀಚಿ, ಅತ್ರಿ ಮೊದಲಾದ ಪ್ರಜಾಪತಿಗಳು ಇವನ ಮಾನಸಪುತ್ರರು. ದಕ್ಷಬ್ರಹ್ಮನ ಹೆಣ್ಣುಮಕ್ಕಳಾದ ದಿತಿ, ಅದಿತಿ ಮೊದಲಾದ ಹನ್ನೆರಡು ಮಂದಿಯನ್ನು ಮರೀಚಿಪುತ್ರನಾದ ಕಶ್ಯಪನು ಮದುವೆಯಾದನು. ಅವರಿಂದ ದೇವ ಮನುಷ್ಯಾದಿ ಸಕಲ ಚರಾಚರಪ್ರಪಂಚವೂ ಉತ್ಪನ್ನವಾಯಿತು.

ಶ್ರೀಮತ್ಸ್ಯಮಹಾಪುರಾಣದಲ್ಲಿ ಪದ್ಮೋದ್ಭವಪ್ರಾದುರ್ಭಾವವೆಂಬ
ನೂರ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



ಶ್ರೀನಿವಾಸ್ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.